॥ ಓಂ ॥

ಶ್ರೀ ನಿಜಗುಣ ಶಿವಯೋಗಿ

ವಿ ರ ಚಿ ತ

# ವೇದಾಂತ ಗ್ರಂಥಾವಳಿ

ಇಂತು ನಿಜಗುಣಯೋಗಿ ಸಂತಸದೊಳೊರೆದಿದನ।
ಸಂತ ಮಹಿಮಾಂಬು. ನಿಧಿ ಶಂಭುತಾನೊಪ್ಪಿ ।
ಸಂತರಿಂಪಾಡಿ ಸುತಮಿರ್ಕೆ ॥





[illegible]ಾದ ಶ್ರೀ ಸಿಧ್ಧಾರೂಢಸ್ವಾಮಿ ಶಿಷ್ಯ
[illegible]–ಶಾಂತಾನಂದ ಸ್ವಾಮಿ ಬಳಿಯಲ್ಲಿ
[illegible] ಮತ್ತು ಆದಿನಾರಯಣ ನವರಿಂದ ತಮ್ಮ
[illegible]ೀ ಪಾರ್ವತಮ್ಮ ಅವರ ಅಪೇಕ್ಷೆಯಂತೆ
ಪ್ರಕಾಶಿತವಾಗಿದೆ.



(ಒಟ್ಟಿಗೆ 5 ಗ್ರಂಥಗಳನ್ನು ಕೊಂಡರೆ 1 ಗ್ರಂಥ ಉಚಿತ)

ಶಾಂತಾನಂದಸ್ವಾಮಿ
ಸಿದ್ಧವಿಲಾಸ 165 ಗಾಂಧೀನಗರ, 6ನೇ ಕ್ರಾಸ್ ಬೆಂಗಳೂರು–9

ಬೆಲೆ 4–50 ೧೯೬೭ ಅಂಚೆವೆಚ್ಚ ಬೇರೆ

॥ ಓಂ ॥

ಶ್ರೀ ನಿಜಗುಣ ಶಿವಯೋಗಿ

ವಿ ರ ಚಿ ತ

# ವೇದಾಂತ ಗ್ರಂಥಾವಳಿ

ಇಂತು ನಿಜಗುಣಯೋಗಿ ಸಂತಸದೊಳೊರೆದಿದನ।
ಸಂತ ಮಹಿಮಾಂಬು. ನಿಧಿ ಶಂಭುತಾನೊಪ್ಪಿ ।
ಸಂತರಿಂಪಾಡಿ ಸುತಮಿರ್ಕೆ ॥



ಘನಮಹಿಮರಾದ ಶ್ರೀ ಸಿಧ್ಧಾರೂಢಸ್ವಾಮಿ ಶಿಷ್ಯ
ಶ್ರೀ ಸೀತಾರಾಮ–ಶಾಂತಾನಂದ ಸ್ವಾಮಿ ಬಳಿಯಲ್ಲಿ
ನಾರಾಯಣ ಪ್ರಸಾದ್ ಮತ್ತು ಆದಿನಾರಯಣ ನವರಿಂದ ತಮ್ಮ
ಮತೋಶ್ರೀ ಪಾರ್ವತಮ್ಮ ಅವರ ಅಪೇಕ್ಷೆಯಂತೆ
ಪ್ರಕಾಶಿತವಾಗಿದೆ.



(ಒಟ್ಟಿಗೆ 5 ಗ್ರಂಥಗಳನ್ನು ಕೊಂಡರೆ 1 ಗ್ರಂಥ ಉಚಿತ)

ಶಾಂತಾನಂದಸ್ವಾಮಿ
ಸಿದ್ಧವಿಲಾಸ 165 ಗಾಂಧೀನಗರ, 6ನೇ ಕ್ರಾಸ್ ಬೆಂಗಳೂರು–9

ಬೆಲೆ 4–50 ೧೯೬೭ ಅಂಚೆವೆಚ್ಚ ಬೇರೆ

# ಪ್ರಕಾಶಕನ ನಿವೇದನ

ಶ್ರೀ ನಿಜಗುಣ ಶಿವಯೋಗಿ ವಿರಚಿತವಾದ ಗ್ರಂಥಜಾತವನ್ನು, ದಕ್ಷಿಣ ಹಿಂದೂಸ್ಥಾನದಲ್ಲಿ ಪ್ರಸಿದ್ಧಿಗೊಂಡು ತಮ್ಮ ಅನುಪಮವಾದ ಅನುಭವದಿಂದ ಬೋಧಿಸಿ ವೇದಾಂತ ದುಂದುಭಿಯನ್ನು ಮೊಳಗಿಸಿ ಸಾಕ್ಷಾತ್ ನಿಜಗುಣನೆನಿಸಿದ ಶ್ರೀಮನಿತ್ಯ ನಿರಂಜನ ಸ್ವರೂಪ ಅಸ್ಮದ್ಗುರು ಶ್ರೀ ಸಿದ್ಧಾರೂಢ ಸ್ವಾಮಿಗಳ ಶ್ರೀ ಪಾದದಲ್ಲಿ ನನ್ನ ಈ ಸೇವೆಯನ್ನು ಅರ್ಪಿಸಿರುತ್ತೇನೆ, ಮತ್ತು ಅವರ ಕರಕಮಲ ಸಂಜಾತ ಕೈವಲ್ಯವನ್ನು ಹೊಂದಿದ ನಿಶ್ಶಬ್ದ ಪರಬ್ರಹ್ಮ ಸ್ವರೂಪಿ ಶ್ರೀ ಗುರುನಾಥ ಆರೂಢ ಸ್ವಾಮಿಗಳವರಿಗೂ, ಸುಖಪೂರ್ಣ ಸ್ವರೂಪದರ್ಶನಕ್ಕೆ ಸುಲಭ ಸಾಧನವಾದ ಈ ಗ್ರಂಥರತ್ನದೊಲುಮೆಯಿಂ ನಲಿದಾಡಿ ವಿದೇಹಿಯಾದ ಅನಂತಾಶ್ರಮದ ಶ್ರೀ ಹರಿಹರಾನಂದ ಭಾರತಿ ಸ್ವಾಮಿಗಳಿಗೂ, ಇದನ್ನುಪದೇಶಮಾಡುತ್ತಿರುವ ಸಿದ್ಧಾಶ್ರಮದ ಶ್ರೀ ಮಹಾದೇವ ಚೈತನ್ಯಸ್ವಾಮಿಗಳವರಿಗೂ ಮತ್ತು ಸಕಲ ಮುನಿಕುಲ ಮಹಾತ್ಮರಿಗೂ, ನನ್ನ ಕೃತಜ್ಞತೆಯ ವಂದನೆಗಳು,

ಸೀತಾರಾಮ ಶಾಂತಾನಂದ.

14

ಓಂ

# ಪ್ರಸ್ತಾವನೆ

ಸರ್ವೇಶ್ವರನಿಂದ ಸೃಷ್ಟಿಸಲ್ಪಟ್ಟ ಸಕಲ ಜಂತು ಜಾಲಗಳಲ್ಲಿ ಮನುಷ್ಯನು ಎಲ್ಲಾ ವಿಧದಿಂದಲೂ ಶ್ರೇಷ್ಠನು. ಸುಖದುಃಖಗಳ ತಿಳುವಳಿಕೆಯು, ಧರ್ಮಾ ಧರ್ಮಗಳ ವಿವೇಕವು, ತನಗೆ ಒಳ್ಳೆಯದಾಗುವುದನ್ನು ಸ್ವೀಕರಿಸುವದಕ್ಕೂ ಕೆಟ್ಟದ್ದಾಗುವದನ್ನು ಬಿಡುವದಕ್ಕೂ ತಕ್ಕ ಜ್ಞಾನಶಕ್ತಿಗಳು ಈ ಮನುಷ್ಯನ ದೇಹದಲ್ಲಿ ಉಂಟಾಗುವಂತೆ ಇನ್ನು ಯಾವ ದೇಹಗಳಲ್ಲೂ ಆಗುವದಿಲ್ಲ. ಪರಮ ಕಾರುಣ್ಯ ನಿಧಿಯಾದ ಪರಮಾತ್ಮದೇವನು, ಈ ಮನುಷ್ಯನು ತನ್ನನ್ನು ಆರಾಧಿಸಿ, ಸರ್ವಕ್ಕೂ ಆತ್ಮವಾದ ತನ್ನನ್ನು ತಿಳಿದು ಪರಮಾನಂದವನ್ನು ಪಡೆ ಯಲು ಇವನಿಗೆ ಕರ್ಮಜ್ಞಾನೇಂದ್ರಿಯ ವರ್ಗದಿಂದಲೂ ವಿವೇಕ ಯುಕ್ತ ವಾದ ಅಂತಃಕರಣ ಪರಿಕರದಿಂದಲೂ ಕೂಡಿದ ಈ ಉತ್ಕೃಷ್ಟ ಶರೀರವನ್ನು ಕೊಟ್ಟಿರುವನು. ಇಂಥ ಶರೀರವನ್ನು ಪಡೆದ ಜೀವನು ಪುನರ್ಜನ್ಮರ ಹಿತವಾದ ಮೋಕ್ಷರೂಪ ನಿತ್ಯಾತ್ಮ ಸ್ಥಿತಿಯನ್ನು ಪಡೆಯುವದು ಶ್ರೇಯಸ್ಕರವು. ಆ ನಿತ್ಯಾತ್ಮಪ್ರಾಪ್ತಿಯು ಶಾಸ್ತ್ರಗಳ ಉಪದೇಶದಿಂದಲೇ ಆಗಬೇಕಾದ್ದಲ್ಲದೆ ಇನ್ನು ಯಾವ ಉಪಾಯಗಳಿಂದಲೂ ಆಗುವುದಿಲ್ಲವೆಂದು ಅರಿತ ಸರ್ವಜ್ಞ ಚಿತ್ತನಾದ ಪರಮೇಶ್ವರನಿಂದ ಈ ಜೀವನ ಹಿತಕ್ಕಾಗಿಯೇ ಜಗತ್ಸೃಷ್ಟಿಗಿಂತ ಮುನ್ನ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ ವೇದಗಳು ವಿಕಾಸಗೊಂಡವು. ಪ್ರತ್ಯಕ್ಷ, ಅನುಮಾನ ಪ್ರಮಾಣಗಳಿಂದ ತಿಳಿಯಲು ಶಕ್ಯವಲ್ಲದ ಅತೀಂದ್ರಿಯ ವಿಷಯುಗಳನ್ನು ತಿಳಿಸುವ ಗ್ರಂಥ ಸಮುದಾಯವು ವೇದವೆಂದು ಹೇಳಲ್ಪಡುತ್ತದೆ. ಜಗದೀಶನ ಉಚ್ಛ್ವಾಸ ನಿಶ್ವಾಸ ರೂಪ ಗಳಾದ ವೇದಗಳು ಪರಮ ಪವಿತ್ರವಾದವುಗಳು. ಇಂಥಾ ವೇದಗಳು ಕರ್ಮ, ಉಪಾಸನಾ, ಜ್ಞಾನಗಳೆಂಬ ಕಾಂಡತ್ರಯಾತ್ಮಕವಾಗಿ ಶೋಭಿಸುತ್ತಿರುವುವು. ಉಪಾಸನವನ್ನು ಜ್ಞಾನವನ್ನು ಬೋಧಿಸುವಂಥ ವೇದಭಾಗಕ್ಕೆ ಉಪನಿ ಷತ್ತೆಂಬ ನಾಮವು ಸುಪ್ರಸಿದ್ಧವಾಗಿದೆ. ಈ ಉಪನಿಷತ್ತುಗಳು ನೂರೆಂಟು ಎಂದು ಶಿಷ್ಟರು ಅಂಗೀಕರಿಸಿದ್ದಾರೆ. ಈ ನೂರೆಂಟು ಉಪನಿಷತ್ತುಗಳಲ್ಲಿ ಮೊದಲಿನ ಹತ್ತು ದಶೋಪನಿಷತ್ತುಗಳಾಗಿವೆ. ಈ ಉಪನಿಷತ್ತುಗಳು ಓಂ ಶಂನೋಮಿತ್ರಃ, ಓಂ ಭದ್ರಂಕರ್ಣೇಭಿಃ, ಓಂ ಸಹನಾವವತು, ಓಂ ಪೂರ್ಣ ಮದಃ, ಇತ್ಯಾದಿ ಶಾಂತಿಪಾಠಗಳ ಸಮೇತವಾಗಿ ಪ್ರಾರಂಭಿಸಲ್ಪಟ್ಟು ಮೋಕ್ಷ

ಸಾಧನವಾದ ಅದ್ವಯ ಜ್ಞಾನವನ್ನೂ, ಅದರ ಸಂಪಾದನೆಗೆ ಬೇಕಾದ ಶಾಂತಿ ದಾಂತಿ ವಿವೇಕ ವೈರಾಗ್ಯಾದಿ ಸಾಧನಗಳನ್ನೂ ಪ್ರಣವಾರ್ಥರೂಪನಾದ ದೇವತಾಗುರು ಅನುಗ್ರಹದಿಂದಲೇ ಪಡೆಯತಕ್ಕದ್ದೆಂದು ಮಹೋನ್ನತವಾದ ರಾಜಮಾರ್ಗವನ್ನು ಸೂಚಿಸುತ್ತಾ ಅತ್ಯಂತ ಪೂಜ್ಯನೀಯವಾದವುಗಳಾಗಿವೆ. ಇಂಥಾ ವೇದಗಳು ಪರಮಪೂಜ್ಯರೂ ಜನ್ಮ ಜರಾಮರಣ ಶೂನ್ಯರೂ ಆದ ಮಹರ್ಷಿ ಶ್ರೇಷ್ಠರಿಂದ ತಮ್ಮ ತಮ್ಮ ತಪಸ್ಸಾಮರ್ಥ್ಯದ ಮೂಲಕವಾಗಿಯೂ ಪರಶಿವ, ಹರಿಬ್ರಹ್ಮ, ಪ್ರಜಾಪತಿ, ಮನುವಾದಿ ಮಹಾಗುರುಪರಂಪರಾ ಮೂಲಕ ವಾಗಿಯೂ ಗ್ರಹಿಸಲ್ಪಟ್ಟು ಲೋಕೋಪಕಾರಾರ್ಥವಾಗಿ ಶಿಷ್ಯಪ್ರಶಿಷ್ಯ ಸಾಂಪ್ರದಾಯದಿಂದ ಲೋಕದಲ್ಲಿ ವ್ಯಾಪಿಸಲ್ಪಟ್ಟಿರುವವು. ವೇದಾಂತ ರೂಪ ಉಪನಿಷತ್ತುಗಳಿಗೆ ಪ್ರಾಚೀನ ಆಚಾರ್ಯ ಮುನಿ ಮಹರ್ಷಿಗಳು ಭಾಷ್ಯ ಗಳನ್ನು ಸಂಸ್ಕೃತದಲ್ಲಿ ರಚಿಸಿರುವರು. ಅಲ್ಲದೆ ಇಡೀ ಭರತಖಂಡದ ಪಂಡಿತ ಮಹಾಶಯರು ಪ್ರಾಕೃತ ಹಿಂದೀ ಮುಂತಾದ ಭಾಷೆಗಳಲ್ಲಿ ವೇದಾಂತ ಗ್ರಂಥಗಳನ್ನು ರಚಿಸಿ ಪ್ರಚಾರಕ್ಕೆ ತಂದು ದೇಶದ ಮಹೋಪಕಾರಿಗಳಾದರು.

ಹೀಗಿರುವಲ್ಲಿ ಮಹಾಕವಿಯೂ, ಮಹಾ ವಿದ್ವಾಂಸನೂ ಆದ ಶ್ರೀ ನಿಜಗುಣ ಶಿವಯೋಗಿಯು ಸಂಸ್ಕೃತವನ್ನರಿಯದ ಕನ್ನಡಿಗರಿಗೆ ಶೃತಿ ಸ್ಮೃತಿ ಪುರಾಣ, ಇತಿಹಾಸಗಳ ಸಾರವಾದ ಭಕ್ತಿ, ನೀತಿ, ಜ್ಞಾನಗಳು ಸುಲಭವಾಗಿ ತಿಳಿಯುವಂತೆ ಅಲ್ಲಲ್ಲಿ ಮೂಲಶೃತಿವಾಕ್ಯಗಳ ಸಮೇತ ಗದ್ಯ ಪದ್ಯರೂಪದಲ್ಲಿ ಅರವತ್ತುಮೂರು ಮಂದಿ ಪುರಾತನರ ಸ್ತೋತ್ರ, ಕೈವಲ್ಯಪದ್ಧತಿ, ಪರ ಮಾನುಭವಬೋಧೆ, ಪರಮಾರ್ಥಗೀತೆ, ಅನುಭವಸಾರ, ವಿವೇಕಚಿಂತಾ ಮಣಿ, ಪಾರಮಾರ್ಥಪ್ರಕಾಶಿಕೆ ಎಂಬ ಕನ್ನಡ ಗ್ರಂಥಗಳನ್ನು ರಚಿಸಿರುವನು. ಸಂಸ್ಕೃತದಲ್ಲಿ ದರ್ಶನಸಾರ, ಆತ್ಮತರ್ಕಚಿಂತಾಮಣಿಯೆಂಬ ಗ್ರಂಥಗಳನ್ನು ಬರೆ ದಂತೆ ವದಂತಿಯಿದೆ. ಆದರೆ ಆ ಸಂಸ್ಕೃತ ಗ್ರಂಥಗಳು ಪ್ರಕಾಶಕ್ಕೆ ಬಂದಿರುವು ದಿಲ್ಲ. ಕನ್ನಡ ಗ್ರಂಥಗಳ ಪೈಕಿ ಪಾರಮಾರ್ಥಪ್ರಕಾಶಿಕೆ ಮತ್ತು ವಿವೇಕಚಿಂತಾ ಮಣಿಯ ಕೆಲವು ಭಾಗಗಳನ್ನು ಬಿಟ್ಟು ಮಿಕ್ಕವುಗಳನ್ನುಸೇರಿಸಿ, ಶೃತಿಗಳು,ಪೂರ್ವ ಕಥೆಗಳು ಮತ್ತು ಕಠಿಣ ಶಬ್ದಾರ್ಥಗಳೊಡನೆ ಹಿಂದಿನಂತೆ "ವೇದಾಂತ ಗ್ರಂಥಾ ವಳಿ" ಎಂಬ ನಾಮದಿಂದ ಈ ಗ್ರಂಥವನ್ನು ಪ್ರಚಾರಕ್ಕೆ ತಂದಿರಲಾಗಿದೆ. ಇದನ್ನು ಓದಿ ಕೇಳುವ ಸಮಸ್ತರಿಗೂ ಸತ್ಯ, ಶಾಂತಿ, ದಾಂತಿ, ತಪಸ್ಸು ಮುಂತಾದ ಸದ್ಗುಣರೂಪ ವಿಶಿಷ್ಟ ಪುಣ್ಯ ಪರಿಪಾಕ, ಮುಮುಕ್ಷುತ್ವ, ಗುರೂಪಾಸನೆ,

ಆತ್ಮಾನಾತ್ಮ ವಿವೇಕ, ಅಜ್ಞಾನ ನಿವೃತ್ತಿ, ಆತ್ಮ ಸಾಕ್ಷಾತ್ಕಾರ, ನಿಜಾನಂದಾ ವಿರ್ಭಾವಗಳುಂಟಾಗುವುವು. ಆದ್ದರಿಂದ ಮುಮುಕ್ಷ್ವಾದಿ ಸರ್ವರಿಗೂ ಇದು ಸೇವ್ಯವಾಗಿರುವುದು. ಇದರಲ್ಲಿ ಗಂಭೀರವಾದ ಅರ್ಥವೂ, ಪ್ರಾಸಾದಿಕ ವಾಕ್ಯ ಸಮೂಹವೂ ಇರುವುದರಿಂದ ಸರ್ವ ವಿದ್ಯಾ ಸಂಪನ್ನರಾದ ಅನೇಕ ಮಹಾನು ಭಾವಿಗಳ ಸ್ತೋತ್ರಕ್ಕೆ ಅರ್ಹವಾಗಿರುವುದು. ಭಗವಾನ್ ಶಂಕರಾಚಾರ್ಯ ರಿಂದ ರಚಿತವಾದ ಸಂಸ್ಕೃತ ಅದ್ವೈತ ಪ್ರಸಿದ್ಧ ಗ್ರಂಥಸಮುದಾಯಕ್ಕಿಂತ ಮಹರ್ಷಿ ನಿಜಗುಣನ ಈ ಗ್ರಂಥವು ಯಾವರೀತಿಯಿಂದಲೂ ಕಡಿಮೆಯಿಲ್ಲ ವೆಂದು ಹೇಳುವದು ಅತಿಶಯೋಕ್ತಿಯಾಗಲಾರದು.

ಭರತಖಂಡದ ವಿಭೂತಿ ಪುರುಷರಲ್ಲಿ ಒಬ್ಬನಾಗಿದ್ದ ಈ ದಾರ್ಶನಿಕ ನಿಜಗುಣ ಶಿವಯೋಗಿಯು ಮೈಸೂರು ದೇಶದ ಎಲ್ಲೆಯ ಶ್ರೀ ಶಂಭುಲಿಂಗನ ಬೆಟ್ಟದ ಅಕ್ಕಪಕ್ಕದ ನಾಡುಗಳಿಗೆ ಅರಸನಾಗಿದ್ದು, ಗೃಹಸ್ಥಾಶ್ರಮದಲ್ಲಿಯೇ ಸದ್ಗುರು ಮುಖೇಣ ಜ್ಞಾನೋಪದೇಶವನ್ನು ಹೊಂದಿ, ಜನಕರಾಜನಂತೆ ವಿದ್ಯಾ, ಲಕ್ಷ್ಮಿ, ತೇಜಸ್ಸು ಮುಂತಾದ ಸಂಪತ್ತುಗಳಿಂದ ಕೂಡಿ ಯಶೋ ವಂತನಾಗಿದ್ದನು. ಕೆಲವು ಕಾಲಾನಂತರ ಈತನು ವಿದ್ವತ್ ಸನ್ಯಾಸವನ್ನು ಸ್ವೀಕರಿಸಿ ಯಾಜ್ಞವಲ್ಕ್ಯರಂತೆ ಜೀವನ್ಮುಕ್ತಿಯ ವಿಲಕ್ಷಣ ಆನಂದವನ್ನು ಹೊಂದಿ, ಶುಕವಾಮದೇವರಂತೆ ಉಪರತಿ ಸ್ಥಿತಿಯಲ್ಲಿರುತ್ತಿದ್ದನು. ಶಿವ ಚೈತನ್ಯರೂಪನಾಗಿಯೂ, ಪರಮ ದಯಾಮಯನಾಗಿಯೂ ಇದ್ದ ಈ ಮಹಾ ತ್ಮನು ಕನ್ನಡನಾಡಿನ ಸದ್ಭಾವಿಗಳ ಪುಣ್ಯಾನುಸಾರವಾಗಿ ಅಂತ್ಯದಲ್ಲಿ ಲೋಕೋದ್ಧಾರ ಮಾಡುವ ಇಚ್ಛೆಯಿಂದ ಮೇಲ್ಕಂಡ ಪವಿತ್ರ ಗ್ರಂಥಗಳನ್ನು ರಚಿಸಿದವನಾದನು. ಈ ಗ್ರಂಥಗಳು ಪಂಡಿತ, ಪಾಮರ, ಸ್ತ್ರೀ, ಪುರುಷರಾದಿ ಯವರಿಗೆ ಹಿತಕರವಾಗಿ ಮೃದು ಮಾಧುರ್ಯ ಸುಂದರ ಸರಳ ಶೈಲಿಯಿಂದ ಕೂಡಿದ್ದು ಮನೋಹರಗಳಾಗಿವೆ.

ಈಚಿಗೆ ಕರ್ಣಾಟಕ ದೇಶದಲ್ಲಿ ಅವತರಿಸಿ, ವೇದಾಂತ ದುಂದುಭಿ ಯನ್ನು ಮೊಳಗಿಸಿ, ಪ್ರಖ್ಯಾತರೆನಿಸಿದ್ದ ಹುಬ್ಬಳ್ಳಿ ಶ್ರೀ ಸಿದ್ಧಾರೂಢಸ್ವಾಮಿ ಯವರು, ತಮ್ಮ ಅಮೋಘವಾದ ಅನುಭವದಿಂದ ವೇದಾಂತ ಜ್ಞಾನಖಣಿ ಯಾದ ಈ ಗ್ರಂಥಗಳನ್ನು ಮುಮುಕ್ಷುಗಳಿಗೆ ಬೋಧಿಸಿ ವಿರಾಜಿಸಿದರು. ಆದರಿಂದ ಎಲ್ಲಾ ಸಮಾಜದವರೂ, ಆಶ್ರಮ ಮಠದವರೂ, ಸಾಹಿತಿಗಳೂ, ಕವಿ, ಮುಮುಕ್ಷುಗಳು ಮುಂತಾದವರಿಂದ ಸ್ವೀಕರಿಸಲ್ಪಟ್ಟು ವಿಶೇಷರೂಪ

ದಿಂದ ಪ್ರಸಿದ್ಧಿಗೊಂಡಿವೆ. ಪ್ರಾಂತ್ಯದ ಪುಸ್ತಕ ಭಂಡಾರಗಳಲ್ಲಿ ಅಲಂಕೃತ ವಾಗಿದೆ, ನಿತ್ಯ ಪುರಾಣ ಶ್ರವಣಾದಿಗಳು ನಡೆಯುತ್ತ ಅನೇಕರಿಗೆ ಮುಖ್ಯ ಉಪಾಸನಾ ಗ್ರಂಥಗಳಾಗಿವೆ. ವಿದ್ಯಾಭ್ಯಾಸದ ಇಲಾಖೆಯವರು ಇವುಗಳಲ್ಲಿನ ಕೆಲವು ಪದ್ಯಗಳನ್ನು ಆರಿಸಿಕೊಂಡು ವಿದ್ಯಾಶಾಲೆಗಳಲ್ಲಿ ಪಾಠಕ್ರಮದಲ್ಲಿರಿ ಸಿರುವರು, ವಿವೇಕ ಚಿಂತಾಮಣಿಯೆಂಬ ಗ್ರಂಥವು ಸಂಸ್ಕೃತ, ತೆಲುಗು, ಮರಾಠಿ, ತಮಿಳುಗಳಲ್ಲಿ ಭಾಷಾಂತರಕ್ಕೆ ಬಂದಿರುವುದು ಈ ನಾಡಿಗೆ ಕೀರ್ತಿ ದಾಯಕವಾಗಿದೆ.

ಗುರುಬೋಧೆಯಿಂಪರಾ ತ್ಪರವಪ್ಪ ಚಿತ್ತುತನ್ನಿರವಂದು ನಿಜವನರಿದ ಈ ನಿಜಗುಣ ಯೋಗಿಯು ಯಾವ ಕಾಲದಲ್ಲಿದ್ದ ನೆಂಬುವುದು ನಿಶ್ಚಿತವಿಲ್ಲ. ಈತನಿಂದ ರಚಿತವಾಗಿರುವ ವಿವೇಕ ಚಿಂತಾಮಣಿಯಲ್ಲಿ ಪಂಚದಶಿಯ ವಿಷಯ ಗಳು ಕಂಡುಬರುವುದರಿಂದ ಈತನು ವಿದ್ಯಾರಣ್ಯರ ಕಾಲದ ಈಚಿನವನೆಂದು ಗೊತ್ತಾಗುತ್ತದೆ. ಕ್ರಿ.ಶ. 1655 ರಲ್ಲಿ ಷಡಕ್ಷರ ಕವಿಗಳು ಕನ್ನಡ ರಾಜಶೇಖರ ವಿಳಾಸದಲ್ಲಿ ನಿಜಗುಣ ಶಿವಯೋಗಿಯನ್ನು ಸ್ತುತಿಸಿರುವುದರಿಂದಇವರಿಗಿಂತಮೊದ ಲನೆಯವನೆಂದು ವ್ಯಕ್ತವಾಗುತ್ತದೆ. ಉಭಯ ಕವಿತಾ ವಿಶಾರದರಾದ ಷಡಕ್ಷರ ಕವಿಗಳಿಗಿಂತ ನೂರು ವರ್ಷ ಮೊದಲಿಗಿದ್ದ ಮುಪ್ಪಿನ ಷಡಕ್ಷರಿ ದೇವರು ಮತ್ತು ನಿಜಗುಣನು ಸಮಕಾಲದವರೆಂಬು ವಾರ್ತೆಯಿದೆ. ಇದಕ್ಕೆ ಶಂಭುಲಿಂಗನ ಬೆಟ್ಟ ದಲ್ಲಿ ಷಡಕ್ಷರ ಗವಿ, ನಿಜಗುಣನ ಗವಿಗಳು ಅಕ್ಕಪಕ್ಕದಲ್ಲಿರುವದೇ ನಿದರ್ಶನ. ಇದರಿಂದ ಈ ಗ್ರಂಥಕರ್ತನಾದ ನಿಜಗುಣ ಶಿವಯೋಗಿಯು ಕ್ರಿ. ಶ. 1500 ವರ್ಷಗಳ ಹಿಂದೆ ಇದ್ದವನೆಂದು ಊಹಿಸಲಾಗಿದೆ. ಹುಬ್ಬಳ್ಳಿ ರುದ್ರಾಕ್ಷಿ ಮಠ ಶ್ರೀ ನಿ. ಪ್ರ. ರುದ್ರಸ್ವಾಮಿಗಳ ಸನ್ನಿಧಿಯಲ್ಲಿ ಹದಿನೆಂಟು ವರ್ಷಗಳಿಂದ ನಡೆ ಯುತ್ತಿರುವಂತೆ ನಾಡಿನ ಮಹಾಶಯರಿಂದ ಮಹೋಪಕಾರಿಯಾದ ಈ ಮಹಾ ತ್ಮನ ಸ್ಮಾರಕೋತ್ಸವಗಳು ಅಲ್ಲಲ್ಲಿ ನಡೆಸಲ್ಪಡುವ ಸುಯೋಗವು ಶೀಘ್ರ ದಲ್ಲಿಯೇ ಒದಗಿಬರುವುದು ಅತ್ಯಂತ ಶ್ರೇಯಸ್ಕರವು.

ಇತಿ,

೧೯೩೭ ಪ್ರಕಾಶಕ

ಸೀತಾರಾಮ ಶಾಂತಾನಂದ ಸ್ವಾಮಿ

॥ ಶ್ರೀಗುರು ಸಿದ್ಧಾರೂಢಸ್ವಾಮಿ ಪ್ರಸನ್ನ ॥

ವೃತ್ತ॥ ಸ್ವಾಮಿನ್ ಸದ್ಗುರು ಸಿದ್ಧ ಪರಮಚರಿತಾ ಆನಂದಪೂರ್ಣಾತ್ಮನೆ। ಕಾಮಿತ್ಯಜ್ಞನ ಸೌಖ್ಯಶಾಂತಿವರದಾ ಕಾಮಾರಿಕಾಲಾಂತಕ ॥ತಾಮಸ್ಸೂದ್ರಪರಾತ್ಮ ಪಾವನಮಯ ಪಾಪಾದ್ರಿ ವಜ್ರಾಯುಧ। ನೇಮಿಸ್ಸಿಷ್ಟವನೀವುದ್ಯೆ ಯೆನಗೆ ನೀಂನಿರ್ವಿಘ್ನವಾಗ್ವಂದದಿಂ ॥ ೧ ॥ ಕರುಣಾಗಾರ ಪರಾವತಾರ ಮಹಿಮಾಂ ಬೋರಾಶಿ ಗುಣಸಿಂಧುವೆ। ಮರಣಾವರ್ಜಿತ ಶರಣರಕ್ಷಕ ವಿಭೋ ವಿದ್ಯಾಧಿ ಪತಿಮೂರ್ತಿಯೆ ॥ ತರುಣಾದಿತ್ಯಪ್ರಭಾವ ಶಾಂತಿಕಿರಣಾ ವರ್ಣಾದಿಗತಿದೂರನೆ। ಹರಣಾಮಾಡೆಲೋ ಕರಣಮರವೆದಯದಿಂ ನೀನೆನ್ನ ಗುರುಸಿದ್ಧನೆ ॥೨॥ ಪಾವ ನ್ಮೂರ್ತಿ ಪರೇಶ ಪರಮಗುರುವೇ ಕಾಯೆನ್ನನೊಲವಿಂದಲೀ। ಜೀವನ್ಮುಕ್ತಿಯ ಸೌಖ್ಯನೀವುತಲಿ ನೀಂಸ್ವಚ್ಛಂದ ಸಚ್ಛೀಲನೆ ॥ ತಾವನ್ಮಾತ್ರಜರಾದಿದುಃಖವಳಿದು ದಿವ್ಯಸ್ಸ್ವರೂಪತ್ವವುಂ। ತೀವೆನ್ಮಾನಸ ಚಲನೆನಿಂದು ಸುಖಿಪೇಂ ಶ್ರೀ ಸಿದ್ಧ ಗುರುವರ್ಯನೆ ॥೩॥ ಚಿತ್‌ಸ್ಫೂರ್ತೆಂದು ಚಿದಾತ್ಮನೆಂದು ಚಿಜ್ಯೋತೆಂತೆಂದು ನಾಂ ಪೊಗಳ್ವೆನ್ನೆ। ತತ್ತ್ವಂಅಸ್ಸೆನಿಸಿಪ್ಪ ವಾಕ್ಯವೊಲಗಿಸಿ ನಿನ್ನೇಕತ್ವವೆನಗ್ಗೇ ಳ್ವುದು ॥ ಸತ್ಸ್ವಾಭಾವದಿ ಭಿನ್ನವಾನೆನಿಸದೆ ನೀನೇವೆನಾನಾಗೆ ಆ। ಮತ್ತ್ಯಾ ವಸ್ತುತಿಮಾಳ್ಪ ಕಾರಣವೆಲ್ಮೈ ಶ್ರೀಸಿದ್ಧಚಿದ್ದೀಪನೆ ॥೪॥ ನಿತ್ಯಂಮಂಗಲ ನಿಶ್ಚಲ ಪ್ರತಿಹತಾ ನಿರ್ಭೇದ್ಯ ನಿರ್ಮಾಯನೆ। ಸತ್ಯಂಸಂವಿತುರೂಪ ಸರ್ವಮಯನೆ ಸರ್ವಾರ್ಥಪದರೂಪನೆ ॥ ಮತ್ತೆನ್ನಪ್ಪ ಮಲಾಪಹಾರ ಗುರುವೆ ಸಸ್ವಾದಿಗುಣ ಸೂತ್ರಸೆ। ಭೃತ್ಯನ್ನಿವನನು ಕಾಯ್ವುದೆಂಬ ಬಿರುದಂ ಬಿತ್ತರಿಸು ಜಗದೊಲಯ ದೋಳ್ ॥೫॥ ಆನಂದಾಮೃತಸಿಂಧು ವಾರ್ಯತನದಿಂ ನೀನೆನ್ನನುಪದೇಶಿಸಲ್। ಕಾನಂದಾಮೃತನಾಗಿ ಸಾರಸುಖದಿಂ ಮೈಮರೆದು ನಿಂತಾಗಳಾ ॥ ಆನಂದಂ ಬುವದಾರು ಪೇಳ್ವರಿರುವರ್ ಯಿಲ್ಲೆಂಬುದರಿದಿರ್ದನೆ। ಸ್ವಾನಂದೋದಯ ದಿಂದೆ ಬೆಳಗಿಹೊಳವ ಚಿತ್ಕಾಂತಿಯವಧೂತನೆ ॥೬॥ ಆರೂಢೆಂಬವಧೂತನೆಂಬ ಹೆಸರುಂ ಮತ್ತೇನಿರಾಭಾರಿಯೆಂ। ಬಾರೂಢಿಯೋಳ್ ಹೆಚ್ಚಿನಿಂದಮೆರೆವ ಮತ್ತೆಮಹಾ ಬ್ರಾಹ್ಮಣಂ ॥ ಬಾರೂಢತ್ವದಿ ಮತ್ತೆಜಂಗಮ ಶಿವಜ್ಞಾನೆಂಬ ಶಿವಯೋಗಿಯೆಂ। ದಾರೂಢಿರ್ಪಕೆನೀನೆ ಅರ್ಹವೆಂದು ಮೋಕ್ಷಾರ್ಥಿಗಳ್ವಪ್ಪ ಜಿಪರ್ ॥೭॥ ವರವೇದಾಗಮ ಶಾಸ್ತ್ರವುಂ ಸ್ಮೃತಿಪುರಾಣಂಗಳ್ಪೊಗಳ್ವಾರವೆಂ। ಬುರುತೇಜೋನ್ನತ ದೇಹಕಾಂತಿನೇತ್ರಂಗಳ್ಕಾಂತಿ ನಿನ್ನಾತ್ಮತೇ ॥ ಜುರುಪಾವನ ಕೀರ್ತಿತೇಜವನುನಾಂ ಏನೆಂದು ಪೊಗಳ್ವೇಂಮಹಾ। ಪುರುಷಾರೂಢ ವರಪ್ರ ಸಿದ್ಧಗುರುವೇ ದಯದಿಂದನೋಡೆನ್ನನು ॥೮॥

॥ ಓಂ ॥



ಶ್ರೀಮತಿ ಪಾರ್ವತಮ್ಮನವರ ಅಭಿಪ್ರಾಯದಂತೆ

ಈ ಗ್ರಂಥದ ನಾಲ್ಕನೆಯ ಮುದ್ರಣ

ರವಿ ಪ್ರಿಂಟರ್ಸ್, ಪೋಲೀಸ್ ರೋಡ್ ಬೆಂಗಳೂರು–2

# ವಿಷಯಾನುಕ್ರಮಣಿಕೆ

## ಮೂರನೇ ಸಂಧಿ



## ನಾಲ್ಕನೇ ಸಂಧಿ

# ವಿಷಯಾನುಕ್ರಮಣಿಕೆ

# ವಿಷಯಾನುಕ್ರಮಣಿಕೆ

# ವಿಷಯಾನುಕ್ರಮಣಿಕೆ

# ವಿಷಯಾನುಕ್ರಮಣಿಕೆ



## ಸಮಷ್ಟಿ ಪ್ರಕರಣ ಅಂಶ

॥ಓಂ॥

ಶ್ರೀಗುರು ಶಂಭುಲಿಂಗಾಯನಮಃ

# ಅರುವತ್ತುಮೂರುನುಂದಿ ಪುರಾತನರ ಸ್ತೋತ್ರ

—:o:—

ಶ್ರೀಗುರುವೆ ನಿಜಸುಖದ ಸಾಗರವೆ ತೆರೆಮಸಗು । ತಾಗಳುಂ ಬೆಳಗು: ತಿಹ ನಿನ್ನ ಕಡೆಗಣ್ಣ । ಳೀಗೆ ಸಂತಸವ ನಖಿಳರ್ಗೆ ॥೧॥ ಶರಣಜನ ಸಹಿತಂಗೆ ಕರುಣರಸ ಭರಿತಂಗೆ । ದುರಿತ ದೂರಂಗೆ. ಗಿರಿಸುತೆಯ ರಮಣಂಗೆ । ಗುರು ಶಂಭುವಿಂಗೆ ನತನಪ್ಪೆಂ ॥೨॥ ಇಂಗಡಲೊಳಿಂಪು ಬೆಳದಿಂಗಳೊಳು ತಂಪು ಕುಸು । ಮಂಗಳೊಳು ಕಂಪು. ಬೆರೆದಂತೆ ಪರಮನೊಳು । ಪಿಂಗದಗಸುತೆಗೆ ನತನಪ್ಪೆಂ ॥೩॥ ಮಿಸುನಿ ಕೊಡವೆನಿಸಿ ಬಹುಪೆಸರು ದಳೆದಂತೆ ಭಾ । ವಿಸಿ ನೋಡಲಭವ. ನಖಿಳರೆಂದೆನಿಪ ಗಣ । ವಿಸರವೆಲ್ಲಕ್ಕೆ ನತನಪ್ಪೆಂ ॥೪॥ ಉತ್ತಮ ಗಣೇಶ್ವರರ ಮೊತ್ತದೊಳು ನಿಜಕೀರ್ತಿ । ವೆತ್ತ ಮಹಿಮೆಗಳ. ನೊಳ ಕೊಂಡ ಶರಣ ರರು । ವತ್ತುಮೂವರನೆ ಪೊಗಳುವೆನು ॥೫॥ ಶರಣರಂ ಪಾರ್ವತೀಶ್ವರನಿಗಿಂತಧಿಕವೆಂ । ದೊರೆವಾಗಮವನು. ತಿಳಿದು ನಾನವರ ಪದ । ಸರಸಿಜಂಗಳನೆ ನುತಿಗೈವೆ ॥೬॥ ಶ್ರುತಿಯೊಳೀಶಾರ್ಚನೆಗೆ ನುತಿ ಕೋಟಿಮಿಗಿಲೆಂದು । ಪತಿಕರಿಸಿ ಪೊಗಳು. ತಿಹುದಾಗಿ ಶರಣ ಸಂ । ತತಿಯನ್ನೆ ಹಾಡಿ ಹರಸುವೆನು ॥೭॥ ಹರಗಣೆಯ ಕಳವಳದೊ ಳಿರುತಲಳಿದೋರ್ವಂಗೆ । ಪರಲೋಕವಾದು. ದದರಿಂದೆ ನುತಿಪೆನೀ । ಶ್ವರಗಣಕುಲವಾ ನೊಲಿದಿಂತು ॥೮॥ ಮುದವಲರೆ ಹೃದಯಾಂಬುಜದೊಳು ಶಿವಭಕ್ತಿಯಿಂ । ಸದಮಲಾನಂದ. ರಸವಾದ ಶರಣಾಳಿ । ಪದವ ಮನವೊಲಿದು ನುತಿಸುವೆನು ॥೯॥ ಶಿವನಾಣೆ ಯಿಡೆ ತನ್ನ ಯುವತಿಯನು ತೊರೆದು ಶಂ । ಭುವಿನ ಕೃಪೆವಡೆದ. ತಿರುನೀಲ ಕಂಠರ್ಗೆ । ಸವೆಯದೊಲವಿಂದೆ ಶರಣೆಂಬೆ ॥೧೦॥ ಮಡದಿಯನುಮೇಶಂಗೆ

ಕೊಡಲೊಯ್ಯುತಿರೆ ಕಂಡು । ತಡೆಯೆ ಬಂಧುಗಳ. ನಿರಿದಿಹಃಪಗೆಯಾಂಡ । ರಡಿಗ ಳೆನಗೀಗೆ ಮುಕ್ತಿಯನು ॥೧೧॥ ಬಲುಬರಂ ದೋರಲದರೊಳು ಭಕ್ತರರ್ಥವಮಂ । ನಲಿಸುಂತ ಬಂಧು.ಗಳ ನಿಕ್ಕಿ ಮಿಕ್ಕ ಕೋಲ್ । ಪುಲಿ ಯಾಂಡರೆನ್ನ ಪೊರೆಯುವದು ॥೧೨॥ ಪಿತನೊವ್ಮೆ ಪಾರ್ವತಿಯ ಪತಿಯಂ ನಿರಾಕರಿಸೆ । ಶ್ರುತಿ ವಿಧಿಗಳುಕ. ದವನಿರಿದ ಚಂಡೇಶ । ಸತಿಭಕ್ತಿ ಸೌಖ್ಯವೆನಗಕ್ಕು ॥೧೩॥ ವರಕುಮಾರನ ಶಿರವನರಿದಟ್ಟು ಸವಿಮಾಡಿ । ಹರನಿ ಗುಣಲಿಟ್ಟ. ಚಿರುತೊಂಡರಣುಗನಾ । ಗಿರುತಿರ್ಪೆನಚ್ಚ ಸುಖಿಯಾಗಿ ॥೧೪॥ ಗಿರಿಶನರ್ಚನೆಗೆ ತರುವಲರನೀಡಾಡೆ ಮಡ । ಕರಿಯನಪ್ಪಳಿಸಿ.ದಿರಿಭಕ್ತರೆನ್ನನು । ದ್ಧರಿಸಲೀಭವದಿ ನಲವಿಂದೆ ॥೧೫॥ ಫಣಿಧರನ ಬಲಿಯಲರ ನೆಣಿಸ ದರಸಿನ ರಾಣಿ।ಮಣಿದೆತ್ತಿ ವಾಸಿ. ಸಲು ಮೂಗನರಿದ ಚಿರು। ತೊಣೆಯಾಂಡರಡಿವಿ ಡಿದು ಬಾಳ್ವೆ ॥೧೬॥ ಮಲಹರನ ಸಿರಿಮುಡಿಗೆ ಸಲುವಲರ ದೆಗೆದ ನಿಜ ! ಲಲನೆಯ ಸುಪಾಣಿ.ಯನು ತುಂಡಿಸಿದ ಮಹಾ । ಕುಳಚಂಗರೆನ್ನ ಕರುಣಿಪುದು ॥೧೭॥ ಚರವೇಷನುಂತಳೆದ ಚರನ ಚರಣವತೊಳೆಯ । ದಿರೆ ತನ್ನ ಸತಿಯ. ಕರವರಿದ ಕಲಿಕಂಬ । ರಿರಿಸಲೆನ್ನವನೆ ಸುಖದಲ್ಲಿ ॥೧೮॥ ಧರೆನೋಡೆ ಹಸೆ ನಿಂದ ವರಸುತೆಯಮುಡಿಯನು । ತ್ತರಿಸಿ ಭವನಂಘ್ರಿ. ಗೊಲಿದಿತ್ತ ಮಾನಕಂ । ಜರನೊಪ್ಪಿ ಸಲಹು ತಿರಲೆನ್ನ ॥೧೯॥ ಮೃಡನದೃಷ್ಟಿಯೊಳು ರುಜೆಯಡರಿತೆಂದತಿ ಭೀತಿ । ವಿಡಿದು ನಿಜಲೋಚ. ನವನಿತ್ತ ಕನ್ನಪ್ಪ । ನಡಿಗಳಂ ಪೊತ್ತು ಬಿಡಿದಿರ್ಪೆ ॥೨೦॥ ಜಡೆದಲೆಗೆ ತನ್ನ ಶಿರಮುಡಿದಲೆಯ ನಿತ್ತು ಶಿವ । ನಡಿಗೆ ಸಲೆಸಂದ. ಕಲಿಪಗಲ್ಚೋಳ ನೀ ನೆಡೆಗೊಂಡಿರೆನ್ನ ಮನದಲ್ಲಿ ॥೨೧॥ ಶಶಿಭೂಷಣಂಗೆ ನೇಮಿಸಿದಕ್ಕಿಸೂಸೆ ತ । ನ್ನಸುವಿತ್ತೊಲಿ ಸಿದ. ರಿವಾಳ್ತಾಂಡನೀಮ । ನ್ನಿಸು ಲೇಸು ಸೈಪು ದಳೆಯುವೆನು ॥೨೨॥ ಖಂಡ ಪರಶುವಿನ ಕರಿಗೊಂಡ ಕಂತೆಯನುಪವೆ । ಗಂಡು ನಿಜರುಧಿರ. ದೊಳು ತೊಳೆದ ತಿರುಕುರುಪೆ । ತೊಂಡರೆನಗಮಳ ತೆಯನೀಗೆ ॥೨೩॥ ಧುರದ ಭಟನೊಳು ಭಸಿತವಿರೆ ಕಂಡು ತನ್ನೊಡಲ । ನಿರಿದಿತ್ತ ನಿಷ್ಠ. ರೆನಿಸಿದೇಣಾ ದಿನಾ । ಥರ ಚಾರನಾಗಿ ಬದುಕುವೆನು ॥೨೪॥ ಮುಳಿದು ಚರವೇಷಮಂ ತಳೆದು ಬಂದಿರಿಯೆ ಖಳ । ನಳುಕದೊಲವಾಂತ. ಚಲ ಸೇದಿರಾಜನೆ । ನ್ನೊಳು ಶಾಂತಿಸುಖವ ನೆರೆವಾಳ್ಕೆ ॥೨೫॥ ಶಿವನಿಂದೆ ಗೈವ ಬಹುಸವಣರಸುದೆಗೆವ ಶೂ । ಲವನಿರಿದು ಮೋದ. ಸವಿದಿಹ ಕುಲಚ್ಚರ್ಯ । ನವಿರತಂಬುದ್ಧಿ ಗೊಡ

ಲೆನಗೆ ||೨೬|| ಅಗೆವ ಕೊಳನಂ ಜರೆದು ನಗುವ ಜಿನಸಮಯಿಗಳ | ನೊಗೆಯ ಲೋಸುಗವೆ ನಯನಂ ಬಡೆದ ನಾಟ್ಯ | ಮಿಗೆ ತಾಂಡಿಮುದವ ನೆನಗೀಗೆ||೨೭|| ಅಸಮಾಕ್ಷನಿಂದಕರ ರಸನೆಗಳನುಗಿದು ಸಂ | ತಸವನೊಳಕೊಂಡ. ಕಳ ಚತ್ತಿಯಾಂಡ ನೀ | ನಸ.ಗಾಯ್ಯುವುದೆನ್ನ ಜನವರ್ಗ ||೨೮|| ಕಲುಷರೂಪಿನ ಜೈನಕುಲಪಂಕಮಂದಾಂಟಿ | ಮಲಹರನಚರಣ. ಎಡಿವ ವಾಗೀಶನೀ | ನೆಲೆಸು ವದನಾಂಬು ಜದೊಳೆನ್ನ ||೨೯|| ಜೆಂಬಿಡಪೆ ಬತ್ತಲೆಗರಂ ಬಡೆದು ಭಸಿತವನೊ | ಡಂಬಡಲು ಧರೆಯೊ. ಳೆಸಗಿದ ತಿರುಜ್ಞಾನ | ಸಂಬಂಧಿ ನಿಜವ ನರುಹೆನಗೆ ||೩೦|| ಎಸೆವಿಳೆಯನೈನಾರಡೆಸೆಯಿಂದೆ ದೀಕ್ಷೆಗೊಂ | ಡಸಮ ಲಿಂಗದೊಳು. ಬೆರೆದ ಮಂಗಾಯಕ್ಕ | ರಸಿಯರ್ಗೆ ತನುಜ ನೆನಿಸುವೆನು ||೩೧|| ಜ್ಞಾನಸಂಬಂಧರಿಂ ದಾನಂದರಸರೂಪ | ವಾನುತಂಡೆಸೆದ. ಸುಗುಣಿ ಸೌಂದರಪಾಂಡ್ಯ | ನೀನೆನ್ನ ಪುಣ್ಯ ದಧಿದೈವ ||೩೨|| ಮನಸಿಜಾರಿಯ ಪಾದ ವನಜಮಂ ಪೊತ್ತು ಪಾ | ವನತೆಯಿಂದರಸು. ತನವಾಂತವೇಳ್ನೂತ | ರೆಸಗೆ ಸಂಪದದೊ ಳಿರಿಸುವುದು ||೩೩|| ಹಗನಕೌಪೀನಕ್ಕೆ ಸಂಬಾರದಿರೆ ತನ್ನ | ಶರಿರಮಂ ತೂಗಿ. ದಮರನೀತಿಗಳ ಬಂ | ಟರ ಬಂಟರಂಘ್ರಿ ಬಿಡದಿರ್ಪೆ ||೩೪|| ಮಿಸುಪಲಿಂಗಕ್ಕೆ ಮಾನಸದಲ್ಲಿಗುಡಿಕಟ್ಟಿ | ವಸುಧೆಯೊಳ್ಪೂಜ್ಯ. ನಾದೂರ್ಪ ಸಿಲೆಯಾಂಡ | ನಸಮಪುಣ್ಯವನೆ ನಗೆಮಾಳ್ಕೆ ||೩೫|| ನಾಡೆ ಪೊಸ್ನಾಂಬ ಲವ ನೋಡುವಾತುರತೆಯೊಡ | ಗೂಡಿ ನಿರ್ಮಳತೆ. ದಳೆವ ತಿರುನಾ ಳ್ಪೋವ | ರೀಡಾಡಲೆನ್ನ ಭವವನ್ನು ||೩೬|| ಪೊಡವಿ ತೀವಿರೆ ಶಿವನ ಗುಡಿ ಗಳಂ ರಚಿಸಿದ್ದೈ | ಯಡಿಯುರಡಿದಾವ. ರೆಗಳಂ ನೆನೆದು ಸುಖಂ | ಬಡುವೆನೆನ್ನಾತ್ಮ ದಣಿವಂತೆ ||೩೭|| ಅಣಿಯರದ ಭಕ್ತಿ ಧಾರುಣಿಗೆ ಪೊಸತಾಗಿ ಮ | ನ್ನಣೆಯೊಳೀಶಂಗೆ. ಶಿವಲಿಂಗಮಿತ್ತ ಕಲಿ | ಗಣನಾಥನೆನ್ನ ಕುಲಗುರುವು ||೩೮|| ಪರಮನಂ ಮಾನಸಾಂತರದೊಳರ್ಚಿಸಿ ಮುಕ್ತಿ | ತರುಣಿಯೊಡನ ಗಲ. ದಿರುತಿರ್ಪೋಹಿಲರೆನ್ನ | ದುರಿತ ಸಂಕುಳವ ನೊರೆಸುವುದು ||೩೯|| ವರಶಲದಿಯಾಗಿ ಶಂಕರಪೂಜೆಗೈದು ಭಾ | ಸುರಗಣ ನಿಕಾಯ. ದೊಳು ಸಂದ ಕಳಚಂಗ | ಪೆರುಮಾಳೆಯೆನಗೆ ದಯುವಾಗು ||೪೦|| ಕಡುನೇಹದಿಂ ಕಲ್ಲೊಳಡೆ ಪೂಜೆಗೆಂದೀಶ | ನೊಡನೊಲಿವನೆಂದು. ಜಗಕೆ ಸಾರಿದ ಸಾಂಖ್ಯ | ಶಡಿಗಳೆರಲೆನ್ನ ಶಿರದಲ್ಲಿ ||೪೧|| ಪರಮಂಗೆ ಪಾಲ್ಗರೆಯೆ ಗಿರಿಜೆ ಪಶುವೇಷ ಮಂ | ಧರಿಸಿ ಬರೆ ಕಾಯ್ದ. ಕರುಣ ಸಾಗರನೆನಿಪ | ತಿರುಮೂಲರೆನ್ನ ಸುರ

ಧೇನು ||೪೨|| ಮನವಾರೆ ದೇವಾಂಗವನು ನೆಯ್ದುಚರ್ವಾಂಬ | ರನಗಣರಿಗಿತ್ತ. ಮೆರೆದ ನೈಸರಪಾದ | ವನಜವೆನ್ನೆದೆಯೊಳಿರುತಿರ್ಕೆ ||೪೩|| ಅಣುವಿಲ್ಲದಿರಲಗ್ಗವಣಿ ಶರ್ವನಂಘ್ರಿಯೊಳ | ಗೆಣಿಸಿ ತನುವಿತ್ತ. ಮಳೆಯಂ ಪಡೆದ ಪಗಲ್ | ಕೊಣೆಯೂಂಡರೆನ್ನ ಸುಖಸಿಂಧು ||೪೪|| ಅಗಜೇಶನಿಗೆ ತನ್ನ ಸೊಗಸುತಿಹ ಮೊಳಕೈಯ್ಯೊ | ಳೊಗೆದ ಗಂಧವನೆ. ಧರಿಸಿದಳಘಂಡವೂ | ರ್ಗಗಳೆನ್ನ ಹರುಷ ಸುಪಭೂಜ ||೪೫|| ನಲಿದಿಕ್ಕಿ ಧೂಪವಂ ನೆಲನರಿಯೆ ಶಿವಲಿಂಗ| ದೊಲವಿನೊಸ್ಯ್ಯಾರ. ವೆನು ತಿರ್ದಿದಮಳ ಕಂ | ಗುಲಿಯಕಲಿಯುರ್ಗೆ ಮಣಿಯುವೆನು ||೪೬|| ಅಂಬಿಕಾವಲ್ಲಭನೊಡಂಬಡೆ ಶಿರೋಜಂಗ | ಳಂ ಬೆಳಗನೆತ್ತಿ. ದುರುಪಕರದ ಕಡವಲ | ನಂಬಿ ಪೊರೆಯನ್ನ ನೆಡೆವಿಡದೆ ||೪೭|| ಇಂದುಧರನಿದಿರ ಸೊಡರಂದವಳಿವೃತ್ತವಿರ | ಲಂದುನಿಜರುಧಿರ. ವೆರೆದಚ್ಚಕಲಿಯುನಾ | ರೊಂದಿಪುದೆನಗಂಪ ದರಿವನು ||೪೮|| ಮಳೆಯೊಳ್ಳೈತರೆ ಶೂಲಿ ಮೊಳೆಪಕ್ಕಿಯಟ್ಟ್ವೆ ಭೂ | ತಳವರಿಯಲಿಕ್ಕಿ. ದಿಳೆಯೂಂಡಗುಡಿಮಾರ | ರೆಳಸಿ ಮೂಳ್ಕೆನಗೆ ವೋದವನು ||೪೯|| ವರಮೂಲ ಮಂತ್ರವನೆ ಹರಣವಾಗುಚ್ಚರಿಸಿ | ಪರಮನೊಲುಮೆಯುನು. ಪಡೆದ ಮುರುಗರ ಚರಣ | ವಿರಲೆನ್ನ ಮಾನಸದೊಳೊಂದಿ ||೫೦|| ತಿಳಿದು ಪಂಚಾಕ್ಷರವ ಕೊಳಲೊಳೂದುತ್ತ ಶಿವ | ನಿಳಯದೊಳು ಪೊಕ್ಕ. ವರಚೊಕ್ಕನೈನಾರ | ರೆಳಸಿ ಮನವಾರೆ ನೆನೆಯುವೆನು ||೫೧|| ಸರಸಮಯುಗಾನದಿಂ ದುರಗ ಕುಂಡಲನೊಪ್ಪ | ತಿರೆ ಪಾಡಿಮೆರೆದ. ತಿರುನೀಲಕಂಠಪಾ | ಣರು ಸೆಲೆಸಲೆನ್ನ ಭಾವದೊಳು ||೫೨|| ವಾಸವಾದಿಗಳರಿಯದೀಶನಂ ನಿಜಯಾಗ | ವಾಸಕ್ಕೆ ಬರಿಸಿ. ಧರೆಗೆ ತೋರಿಸಿದ ಸೋ | ಮಾಸಿಮಾರನೆ ಬಲಗೊಂಬೆ ||೫೩|| ಧಾರುಣಿಗೆ ಬರಿಸಿ ಮದನಾರಿಯನ್ನಗಿಸಿ ಮನ | ವಾರೆ ಗಣಪದವ. ನೊಳಕೊಂಡ ಕಡಪೂರ | ಕಾರಿ ಸಹಕಾರಿಯೆನಿಸೆನ ||೫೪|| ನಡೆಕರುತೆ ಮಳೆಯೊಳಿರುಳೆಸಹ ಹರಹರಾ ಎಂ | ದೊಡನೆ ಬಂದೀಶ. ನೊಂಪೆಂವ ನಮಿನಂದಿ | ಕೊಡಲೆನಗತಿಧರ್ಮ ರತಿಯನು ||೫೫|| ಕೊರಳವಿಷಮಂ ಕಂಡು ಮರಣವಹುದೆಂದು ಭವ | ಹರನನಾರ್ಪೆವು. ತಿಹ ರುದ್ರಪಶುಪತಿಗೆ | ಶರಣೆಂದು ಸಿದ್ಧಿ ಪಡೆಯುವೆನು ||೫೬|| ಮುಕ್ಕಣ್ಣನಿಗೆ ಶಲದಿ ತಕ್ಕದಲ್ಲೆಂದು ಬಗೆ | ಮಿಕ್ಕುತೂಪಿಂದ. ಸತಿಗೆ ಪತಿಯಹ ನೀಲ | ನಕ್ಕರಿಂದಹಿತ ವನುಗೆಲುವೆ ||೫೭|| ಮೊದಲು ಸಿಕ್ಕಿದ ಮೀನ ಮುದದಿ ಶಿವಗೆಂದು ಬಿಡು | ವುದರಿಂದೆ ವಿಮಲ. ನೆನಿಸಿದತಿಭಕ್ತ ಎೀ | ಮೊದವಿಸಾವಂದ

ಘನವೆನಗೆ ||೫೮|| ಬಿಡದೆ ವಾಗೀಶನಂ ಮೃಡನೆಂಬ ನಿಷ್ಠೆಯನು | ವಿಡಿದು ಗಣಪದವ. ನೊಡನೈದಿದಃಪೂತಿ | ಯಡಿಯರಂ ಕೀರ್ತಿ ಸುವೆನೊಪ್ಪಿ ||೫೯|| ಜಗವರಿಯೆ ಜೂಜಿನಿಂದೊಗೆದರ್ಥವನೆ ಶರಣ | ರುಗಳಿಗಿತ್ತಭವ. ನೊಡನಾಡಿ ಗೆಲಿದೊಸೆಗೆ | ಮಿಗೆಯಚ್ಚುತರ್ಗೆ ಶಿಶುವಾನು ||೬೦|| ಸಲೆಚರ ಪದಾಂಬು ಜವನೊಲಿದು ಪೂಜಿಸ ಲುಮಾ | ಲಲನೇಶನೊಪ್ಪಿ. ನಿಜಪದವನಿತ್ತ ಚಿರು | ಪುಲಿಯಾಂಡರೆನ್ನ ಸುಖದಾಗು ||೬೧|| ಜನರೈದೆ ಬವರಕ್ಕೆ ತನಗಿತ್ತ ಧನವ ನೆ | ಳ್ಳನಿತನುಳುಹಿಸದೆ. ಚರಸೇವೆ ಗೈದಧಿಕ | ಮೊನೆಯಾಂಡರೆನ್ನೊಡೆಯ ನೆಂಬೆ ||೬೨|| ಶರಣರ್ಗೆತನಗುಳ್ಳ ಧರಣಿಯೊಡೆತನವಿತ್ತು | ಪರಮಪದವಾಳು ವಡವಗೆಯಪೆರುಮಾಳೆ | ವಿರತಿಯನು ಬೇಡು ವೆನುನಿನ್ನ ||೬೩|| ಮನಸಿಜಾ ರಿಯ ಭಕ್ತನೆನಿತು ಧನವುಂ ಬೇಡ | ಲನಿತುಮಂ ಕೊಟ್ಟ. ಕಡುತ್ಯಾಗಿ ನರ ಸಿಂಗ | ಮೊನೆಯಾಂಡ ಶಾಂತ ವಿರಿಸೆನ್ನ ||೬೪|| ತ್ರಿಣಯನಂ ತಾನೊಲಿದು ಗಣಿಕೆಯರಮನೆಗೆ ಕುಂ | ಟಣಿಯಾಗಿ ನಡೆಸಿ. ದಧಿಕ ನಂಬಿಗೆ ಮನಂ | ದಣಿವಂತೆ ನಮಿಸಿ ನಲಿಯುವೆನು ||೬೫|| ಪೊಡವಿಬಣ್ಣಿಸೆ ದೇವರೊಡೆಯನೊ ಲುಮೆಯನೊಪ್ಪ | ವಿಡಿದ ಸೌಂದರನ. ಪಿತನಾಗಿ ಜಸವೆತ್ತ | ಜಡೆಯನೈ ನಾರ ಸುತನಪ್ಪೆ ||೬೬|| ಭೂವಿನುತ ಸಂಬಿಯನುಮೂವರನ ಕರುಣದಿಂ | ದೋವಿ ಪಡೆದವುಲ. ತರುಣಿಯಸ್ಯಜ್ಞಾನ | ದೇವಿಯರ ಸೂನು ಧಿಟ ವಾನು ||೬೭|| ನಂಬಿಯಣ್ಣನ ಮನದೊಳಿಂಬಾಗೆ ಮುಂದೆಗುಡಿ | ಯಂಬಿಡದೆ ಪಿಡಿದು. ನಡೆದ ಪಿರುಮಾಳವಿಕು | ರಂಬರಂ ಕೂರ್ತು ನಮಿಸುವೆನು ||೬೮|| ಶಿವನ ಮೆಲ್ಲಡಿ ನೋಯಲವನಿಯೊಳು ನಡೆಸುತಿರೆ | ತವೆ ಮುಳಿದುನಂಬಿ. ಯೊಳು ಸಂದ ಕಲಿಕಾಮ | ನವಿರತಂ ಲೇಸು ಗೊಡಲೆನಗೆ ||೬೯|| ಕಲಿಗೊರ ಲನಾದೊಡಂ ಮರೆದು ಶರಣರ್ಗೆ ಬಂ | ದೆಲಗದಿಹನಂಬಿ. ಯೊಡಗೂಡಿ ಪೊರೆಗೆಂದ | ಮೆರೆಮಿಂಡರೆನಗೆ ಶರಣಕ್ಕೆ ||೭೦|| ಪೇಳದೈದಲು ನಂಬಿ ಕೇಳಿ ಕೈಲಾಸಕ್ಕೆ | ದಾಳಿಯಿಟ್ಟತುಳ. ಬಲಚಾರವುನ ಚರಣ | ದೂಳಿಗದ ಬಂಟ ನೆನಿಸುವೆನು ||೭೧|| ನೇರಿತಹ ಶರಣ ಸಂಚಾರಮಾರ್ಗದೊಳು ಸುವಿ | ಚಾರ ದಿಂದಡಿಯ. ನಿಡದೆ ತಲೆಯೊಳು ನಡೆದ | ಕಾರಿಕಾಲಮ್ಮೆ ಪೊರೆಯನ್ನ ||೭೨|| ಈವಿಧದೊಳರುವತ್ತು ಮೂವರ ಚರಿತ್ರವ ನು | ಮಾವರನ ಕರುಣ. ಶರಧಿ ಮಿಗೆಮಿಾರುತಿರ | ಲೋವಿ ಕೇಳ್ದವನೆ ಕೃತಕೃತ್ಯ ||೭೩|| ಅಂದಿಂದು ಮುಂದೆ ಪಲವಂದದಾಚರಣೆಯಿಂ | ದಿಂದುಶೇಖರನ. ನೊಲಿಸಿದ ಗಣಾವಳಿಯ |

ನೆಂದೆಂಡು ಪಾಡಿ ದನೆ ಮುಕ್ತ ||೭೪|| ಶರಣರರುವತ್ತು ಮೂವರ ಮಹಿಮೆಗಳ
ನಿಂತು । ಬರೆದೋದಿ ಕೇಳೆ. ಪೇಳಿದರ್ಗೆಯು ಸುಖಂ । ದೊರೆವು ದಿಹ ಪರ
ದೊ ಳಿದುಸಿದ್ಧ ||೭೫|| ವರಚಿಂತಾಮಣಿಯೆನಿಪ ಪರಿಪರಿಯ ಶರಣರೆ । ಲ್ಲರ
ಮನೋರಥವ. ನೊಲಿದಿತ್ತ ಶಂಭು ನೀ । ನಿರಿಸೆನ್ನನವರ ಸಭೆಯೊಳಗೆ ||೭೬||
ಇಂತು ನಿಜಗುಣಯೋಗಿ ಸಂತಸದೊಳೊರೆದಿದ ನ । ನಂತ ಮಹಿಮಾಂಬು.
ನಿಧಿ ಶಂಭುತಾನೊಪ್ಪಿ ।ಸಂತರಿಂ ಪಾಡಿ ಸುತಮಿರ್ಕೆ ||೭೭||

ಶ್ರೀಮನ್ನಿಜಗುಣ ಶಿವಯೋಗಿ ವಿರಚಿತಮಾದ
ಅರುವತ್ತು ಮೂರು ಪುರಾತನರ ಸ್ತೋತ್ರ
ಸಮಾಪ್ತಂ.

———

ಶ್ರೀ ಗುರುಶಂಭುಲಿಂಗಾಯನಮಃ

# ಕೈವಲ್ಯಪದ್ಧತಿ.

## ಶಿವಕಾರುಣ್ಯ ಸ್ಥಲ



### ೧. ರಾಗ—ನಾದನಾಮಕ್ರಿಯೆ.

ಶ್ರೀಗುರುವಚನೋಪದೇಶವನಾಲಿಸಿ । ದಾಗಳಹುದು ನರಂಗೆಮುಕುತಿ ॥ಪ॥ ದುರಿತಕರ್ಮವನೊಲ್ಲದಿರು ಪುಣ್ಯವನೆಮಾಡು । ಹರನಡಿವಿಡಿ ಶಾಂತ ರೊಡನಾಡು ॥ ಕರುಣವಿರಲಿಜೀವರೊಳು ನೀತಿವಿದನಾಗು । ಪೊರೆಪೊರ್ದಿದರ ನೆಂದುಬೆಸಸುವ ॥೧॥ ನಿಂದಿಸಿನುಡಿಯದಿರಾರನು ಮನಸಿಗೆ । ಬಂದಂತೆನಡೆ ಯದಿರಿಹದಲ್ಲಿ ॥ ಕುಂದುವಡೆಯದಿರು ಕಾಮಾದಿಗಳನುಜಯಿ । ಸೆಂದು ಕೈವಿಡಿ ದನುಗ್ರಹಿಸುವ ॥೨॥ ಭವಮಾಲೆಗಲಸು ಪುಸಿಯದಿರೆಡರುಬಂದು । ಕವಿಯ ಲಂಜದಿರು ಸಂಪದದೊಳು ॥ ತವೆಮದವಳಿದಿರು ತತ್ವಸಂತತಿಯನು । ವಿವರಿಸಿ ನೋಡೆಂದುತಿಳುಪುವ ॥೩॥ ಬಳಸದಿರದ್ವೈತವನುಬಾಹ್ಯದಲ್ಲಿ ನಿಂ । ನೊಳಗೇ ಕೋಭಾವನೆಯೊಡಗೂಡು ॥ ತಿಳಿದುಸಮಯನಿಷ್ಠೆಗಲಿ ವೇದವಿದಭಕ್ತಿ । ಗಳ ನಗಲದಿರೆಂ ದುಸುರುವ ॥೪॥ ಆರುನಾನೆಂದುವಿಚಾರಿಸು ವಿಷಮಸಂ । ಸಾರವಿದ ನು ಕನಸೆಂದರಿ ॥ ಮಾರಮರ್ದನಶಂಭುಲಿಂಗವನೊಲಿಸಿ ಗಂ । ಭೀರಸುಖದೊ ಳಿರೆಂದರುಪುವ .... .... .... ॥೫॥

### ರಾಗ—ಧನ್ಯಾಸಿ.

ಏಳುದಿನದುದಯದೊಳು ಗಾನಮೂರುತಿಗಳಾ । ದೇಳುನಡೆತಂದರವು ಮರವೆ। ಪುಗದಭವ ನೀ । ನೇಳೆನುತ್ತುಪ್ಪವಡಿ ದುಪಚಾರವನುಮಾಡಿ ಯೇಳಿಸಿ ದ ರಗಜೇಶನ ॥ಪ॥ ಏಳುಪಾತಾಳ ಮೇಲೇಳುಲೋಕಾಬ್ಧಿಯೇ । ಳೇಳುಶೈಲಂ ಗಳೇಳುದ್ವೀಪಗಳಾಪ್ರಕೃತಿ । ಯೇಳೇಳುಮಿಶ್ರಾಧ್ವಪತಿಗಳು ಸಭಾಂಗನೆಂಬೇಳ

ರೊಡನಮರಗಣರು ॥ ಏಳನೂರೆಪ್ಪತ್ತು ಮಾತೃಕೆಯರೆನಿಸಿಕೊಂ । ಬೇಳುಶಕ್ತಿಗಳು ಕೈವಲ್ಯಸೋಪಾನಂಗ । ಳೇಳುಳ್ಳಶರಣರೇಳೆಂಟುದೇಶದಜನ ವಿದೇಳು ತೈತಂದಿದೆಶಿವ ॥೧॥ ಏಳುರಸನೆಗಳೇಳುವಾಜಿ ಮಿರುಗುವಿಪ್ಪ । ತ್ತೇಳುತಾರಾರಮಣನೆನಿಸುವ ತ್ರಿಲೋಚನನೆ । ಯೇಳವಸ್ಥೆಗಳೇಳುಧಾತು ವ್ಯಸನಂಗಳೇಳೇಳಾವರಣರಹಿತನೆ ॥ ಏಳುಮೂದೆರದ ಸ್ವರಾಳಿಮಯಗಳತಂತ್ರಿ । ಯೇಳೆಸೆವ ವೀಣಾದಿಲೋಲ ನಯನೋದಯದ । ಏಳುನದಿಗಳಸೂಡಿದನೆ ಮಹಾಮಂತ್ರಂಗಳೇಳುಕೋಟಿಗಳರ್ಥನೆ ॥೨॥ ಏಳಸುನಿಯಾಮದಿಂ ದೇಳುಕುಟಿಲದಭುಜಗ । ನೇಳುತೋರುವ ಪ್ರಣವದೇಳುಭೇದವನುಕಂ । ಡೇಳುಸುಜ್ಞಾನಭೂಮಿಕೆಸಿದ್ಧಿಯಾಗೆ ಪದಿನೇಳು ತತ್ವದತನುವನು ॥ ಏಳುಜನ್ಮದ ಕಲುಷವನುಜಯಿಪ ಯೋಗಿವರ । ರೇಳುತಾರಾಪ್ರಪೋಳು ಕೇಳುವ ಸುನಾದಾತ್ಮ । ಏಳುಮಲಪಾಶ ದೂರನೆ ಶಂಭುಲಿಂಗ ನೀನೇಳುಮುನಿಕುಲವಂದ್ಯನೆ .... ॥೩॥

## ೩. ರಾಗ-ಶಂಕರಾಭರಣ.

ಶರಣಜನರ ಸದುಹೃದಯನಳಿನದೊಳು । ಪರಿಶೋಭಿಸುತ್ತಿಹುದು ನಿನ್ನಪಾದ । ಹರಿಯ ನಯನದ ಕುರುಹು ವಿಡಿದಿಹುದೀಗ । ಗುರುಶಂಭುಲಿಂಗ ನಿನ್ನ ದಿವ್ಯಪಾದ ॥ಪ॥ ದಿಟ್ಟರಾವಣನು ರಜತಾಚಲವನೆತ್ತಲೊತ್ತಿ । ಬಿಟ್ಟಿತು ರಸಾತಳಕೆನಿನ್ನಪಾದ । ನೆಟ್ಟನಂಧಕಾಸುರ ನೆದೆಯಮೇಲೆಭರತದ । ಕಟ್ಟಳೆಗೆಕುಣಿಪುದುನಿನ್ನಪಾದ ॥ ಬೆಟ್ಟನೊಳುಬರೆದ ಚಕ್ರವಜಲಂಧರನಿಗೆ । ಕೊಟ್ಟುಶಿರವರಿದುದುನಿನ್ನಪಾದ । ತಿಟ್ಟನೆತಿರುಗುವ ಮುಪ್ಪುರವನಿಟ್ಟಸಿಬೇಗ । ಸುಟ್ಟುಜಯಿಸಿತು ಶರ್ವನಿನ್ನಪಾದ ॥೧॥ ಮೃಗರೂಪದಳೆದಗಧರ ನರಸಲುತನ್ನ । ಬಗೆದೋರಿತಿಲ್ಲವಲ್ಲೊ ನಿನ್ನಪಾದ । ಬಗೆದುಪಾತಾಳವೇಳ ನುಳಿದಿಳದತ್ತಲತ್ತ । ಮಿಗೆಮಾರಿಪೆರೆದುದುನಿನ್ನಪಾದ ॥ ನಿಗಮನಿಕರಜಾಯಿಲಂಗಳನರಣ್ಯದೊಳು ಪುಗಲೊಡನ್ಸೈದಿಸಿತ್ತು ನಿನ್ನಪಾದ । ನಗಜಾಧಿಪತಿ ನಿರುಪಮನಿತ್ಯನಿರವಧಿ ಜಗದಂತರ್ವ್ಯಾಪಿಶಿವನಿನ್ನಪಾದ ॥೨॥ ಬೆಂದನುಲಿಯಂದವಾಗಿ ಮುಂದಿರೆಕಂದರ್ಪನನು । ಬಂದುಹುಳಿದಾಡಿತಲ್ಲೊ ನಿನ್ನಪಾದ ॥ ಕುಂದದಿಳೆಯೆಂಬರಥ ವಂದು ನಾಗಲೋಕದೊಡ । ನೊಂದುವಂತೆ ಮೆಟ್ಟಿಪುದು ನಿನ್ನಪಾದ ॥ ಚಂದ ಚಂದದಿಂದೆ ಕಾಳಿದಾಸ ಮೊದಲಾದಕವಿ । ವೃಂದವೈದೆ ಬಣ್ಣಿಪುದು ನಿನ್ನಪಾದ । ಇಂದು ಕುಂದ ಹಿಮಹಾರ ಪುಂಡರೀಕ ಪಾಂಡುರಂಗ । ಮಂದರಮಂದಿ

ರವಾಸ ನಿನ್ನಪಾದ ॥೩॥ ಮನುಮುನಿ ನರನಾಗ ದನುಜದಿವಿಜರನು । ದಿನದೊಳು ಭಜಿಪುದುನಿನ್ನಪಾದ । ವಿನಮಿತಸುರವಿಸರದ ಮಕುಟದಮಣಿ । ಘನತೇಜದೊಡನಾಡಿ ನಿನ್ನಪಾದ ॥ ನೆನದವರಘರಿಪು ಗಹನದಹನ ನುತ । ಜನವನರುಹರವಿ ನಿನ್ನಪಾದ । ಕನಕಶಿಖರನಿಜನಿಳಯು ಧನದಸಖ । ಜನನರಹಿತಭವನಿನ್ನ ಪಾದ ॥೪॥ ಪ್ರಣವದನೆಲೆ ಮಂತ್ರಗಣದಭವನ ಗುಣ । ಮಣಿಕುಲಜಲನಿಧಿ ನಿನ್ನಪಾದ । ಅಣಿಮಾದಿಗಳಜನನದಭೂಮಿ ಸುಖದಸಂ । ದಣಿ ಸತ್ಯಶುಭದಾಗು ನಿನ್ನಪಾದ ॥ ಗಣತತಿಗಳ ಬೀಡು ತಣುವಿನತಾಣ ತತ್ವ । ದಣಿಮುಕುತಿಯುಖಣಿ ನಿನ್ನಪಾದ । ಫಣಿಪಕಂಕಣ ಕರುಣಾರಸಭರಿತೇ । ಕ್ಷಣಗುರುಶಂಭುಲಿಂಗ ನಿನ್ನಪಾದ .... .... ॥೫॥

## ೪. ರಾಗ-ನಾದನಾಮಕ್ರಿಯೆ.

ಕಾಯವಿಡಿದಾತ್ಮರಾಶಿಗೆ ಪರತರಮುಕ್ತಿಗು । ಪಾಯವಿದು ನಿಜಶಿವ । ಮಂತ್ರವಣ್ಣ ॥ಪ॥ ಅವರಿವರೆಂಬುದೇನೋ! ಶಿವಶಿವ । ಭುವನದಮಾನವರೊಮ್ಮೆತಾವಾಗಲಿ । ಶಿವಮಂತ್ರವಿದನುಸುರೆ । ಮೋಸದೊಳೆಮ್ಮ । ಶಿವಮಂತ್ರವಿದನುಸುರೆ ॥ ಶ್ಲೋಕ ॥ ಸಕೃದುಚ್ಚಾರಮಾತ್ರೇಣ ಪಂಚಾಕ್ಷರಮಹಾಮನೋಃ ॥ ಸರ್ವೇಷಾಮಪಿಜಂತೂನಾಂ ಸರ್ವ ಪಾಪಕ್ಷಯೋಭವೇತ್ ಎನಲಾಗಿ । ಯಿಂತೆನಲಾಗಿ । ಶ್ರುತಿಯೆನಲಾಗಿ ॥ ಹವಣಿಸಬಾರದಕಲುಷವಳಿದು ರಾಜಿ । ಸಾವರು ನಿರ್ಮಲತೆಯಿಂದೆನಲಾಗಿ ॥೧॥ ಇನಿತಾದವಟಬೀಜದ । ಹರಹರ । ಘನತೆಸುಂತೆಸೆವಾರು ವರ್ಣದ ಮನುವಿದು । ಮನಸಿಜಹರಬೋಧಕ । ಬೇಗದೊಳೊಮ್ಮೆ । ಮನಸಿಜಹರಬೋಧಕ ॥ಶ್ಲೋಕ ॥ ಈಶಮಂತ್ರೋ ಮಹಾಶಕ್ತಿರೀಶ್ವರಃ ಪ್ರತಿಪಾದಕಃ ॥ ಸಕೃದುಚ್ಚಾರಮಾತ್ರೇಣ ಸರ್ವಸಿದ್ಧಿಪ್ರದೋಭವೇತ್ ॥ ಎನಲಾಗಿ । ಯಿಂತೆನಲಾಗಿ । ಶ್ರುತಿಯೆನಲಾಗಿ ॥ ದಿನದೊಳು ತಾನೋದುವೇಳೆ ಜಪಿಸಿದೊಡೆ । ತನಗೆಬೇಡಿದನೀವುದೆನಲಾಗಿ ॥೨॥ ಗೌತಮವಾಮದೇವ । ಶಿವಶಿವ । ಶ್ವೇತವಶಿಷ್ಠನಾರದಸನಕಾದಿ ಪು । ನೀತಮುನೀಶ್ವರರು । ಚಾರು ಪು । ನೀತಮುನೀಶ್ವರರು ॥ಶ್ಲೋಕ॥ ವಶಿಷ್ಠವಾಮದೇವಾದ್ಯಾ ಮುನಯೋಮುಕ್ತಕಲ್ಮಷಾಃ ॥ ಮಂತ್ರೇಣಾನೇನಸಂಸಿದ್ಧಾಮಹಾತೇಜಸ್ವಿನೋಽಭವನ್ ॥ ಎನಲಾಗಿ । ಯಿಂತೆನಲಾಗಿ । ಶ್ರುತಿಯೆನಲಾಗಿ ॥ ಓತುಜಪಿಸಿ ಮಂತ್ರವಿದನು ಭಕ್ತಿಯೊಳು ವಿ । ಖ್ಯಾತರೆಂದೆನಿಸಿದರೆ

ನಲಾಗಿ ॥೩॥ ಸರಸಿಜಭವಸುರಪ । ಹರಹರ । ಹರಿ ದಿನಕರ ಶಶಿಮುಖ್ಯ॥ ದೇವತೆಗಳು । ಪರಮಪಂಚಾಕ್ಷರಿಯ । ವೈಭವದಿಂದೆ । ಪರಮಪಂಚಾಕ್ಷರಿಯ ॥ ಶ್ಲೋಕ ॥ ಬ್ರಹ್ಮಾದೀನಾಂಚದೇವಾನಾಂ ಜಗತ್ಸೃಷ್ಟ್ಯಾದಿಕರ್ಮಣಿ ಮಂತ್ರಸ್ಯಾಸ್ಯೈವಮಹಾತ್ಮ್ಯಾತ್ ಸಾಮರ್ಥ್ಯಮುಪಜಾಯತೇ ॥ ಎನಲಾಗಿ ಯಿಂತೆನಲಾಗಿ।ಶ್ರುತಿಯೆನಲಾಗಿ । ಸುರುಚಿರ ಜಗದುದಯಾದಿಕೃತ್ಯವಮೂಳ್ಪ। ಸಿರಿವಡೆತಿರ್ಪರೆಂದೆನಲಾಗಿ । ಯೆನಲಾಗಿ ॥೪॥ ಮುನ್ನ ಸಾನಂದಋಷಿ । ಶಿವಶಿವ । ಸನ್ನಿಧಿಯೊಳು ನ-ಡಿದೋನ್ನಮಶ್ಶಿವಯೆಂ । ದುನ್ನತನರಕಿಗಳ । ಕಾಣುತವೆಸ । ಮುನ್ನತನರಕಿಗಳ ॥ಶ್ಲೋಕ॥ ಪುರಾಸಾನಂದಯೋಗೀಂದ್ರಃ ಶಿವಜ್ಞಾನಪರಾಯಣಃ ॥ ಪಂಚಾಕ್ಷರಂಸಮುಚ್ಚಾರ್ಯ ನಾರಕಾನ-ದತಾರ ಯತ್ ॥ ಎನಲಾಗಿ। ಯಿಂತೆನಲಾಗಿ । ಶ್ರುತಿಯೆನಲಾಗಿ । ಚಿನ್ನಿಧಿಗುರು ಶಂಭುಲಿಂಗದ ಪದವಿತ್ತು । ಮನ್ನಿಸಿಪೊರೆದನೆಂದೆನಲಾಗಿ .... ॥೫॥

## ೫. ರಾಗ-ಧನ್ಯಾಸಿ.

ಹರನಾಮವನನುಬಿಡದೆ ಜಪಿಸಿಬಲ್ಲವರು ಭವ । ಪುರಣಮಾಯಾಕರ್ಮ ಮಲಪಾಶಬಂಧ ಬಹು । ದುರಿತಸಂಸಾರ ಸಂತಾಪಸಂಚಯುವಳಿದು ವರಭೋಗ ಮೋಕ್ಷವಹುದು ॥ಪ॥ ಶಿವಮಹಾದೇವ ಶಂಕರ ಶರ್ವ ಪಾರ್ವತೀ । ಧವ ನಂದಿ ವಾಹ ದೇವೇಶಾನುದಕ್ಷ ವಾ । ಸವನತಪದಾಂಭೋಜ ನಗಚಾಪ ನಿರ್ಮಲ ನಿರಾ ತಂಕ ನೀಲಕಂಠ ॥ ಭುವನೇಶವಿಜಯ ವೇದಾಂಗ ವೈಶ್ರವಣಸಖ । ಪವಮಾನ ಪಂಚಮುಖ ಪಶುಪತಿ ಸಹಸ್ರಾಕ್ಷ। ಭವ ಭರ್ಗ ಭಸಿತಾಂಗ ಭಾಳಲೋಚನ ಮೇರುಕಾರ್ಮುಕ ಕಪರ್ದಿಯೆಂದು ॥೧॥ ಸೋಮ ಶಾಂತಃಭವು ವಿರೂಪಾಕ್ಷ ವಿಶ್ವಾಭಿ । ರಾಮ ಗಂಭೀರ ಕಾಲಾರಿ ಕೂಟಸ್ಥ ವಿಭು । ವಾಮದೇವಾ ಘೋರ ಪಂಚಾಕ್ಷರೋಂಕಾರ ತತ್ಪುರುಷ ರುದ್ರ ಭದ್ರ ॥ ಭೀಮ ಸದ್ಯೋಜಾತ ಮೃಡ ಮಹಾಕಾಲ ಜಿತಕಾಮಮೃತ್ಯುಂಜಯ ಪುರಾತನಪರಾತ್ಪರ ನಿ। ರಾಮಯಾನಂ ತತೇಜೋರಾಶಿಸರ್ವಜ್ಞ ಶಾಶ್ವತಕಪಾಲಿಯೆಂದು ॥೨॥ ಶೂಲಿ ಸುಜನೈಕಬಾಂಧ ವ ಸದಾಶಿವ ಚಂದ್ರ । ಮೌಳಿ ಮಹಿಮೋಗ್ರ ಚರ್ಮಾಂಬರಾಸುರಶಿರೋ । ಮಾಲಿ ಮಂದಾಕಿನೀಧರ ಮಹೇಶ್ವರ ಮೇಘವಾಹ ಮಂದರನಿವಾಸ ॥ ನೀಲಲೋಹಿತ ಪಾರಿಜಾತಪಾವನ ಲೋಕ । ಪಾಲ ಕೈಲಾಸಮಂದಿರ ಮಂತ್ರಮಯ ಭಕ್ತ । ಲೋಲ ಪಂಚಬ್ರಹ್ಮಪರನಾದಬಿಂದುಕಳೆ ಪರಮಾತ್ಮಪುರವೈರಿಯೆಂದು ॥೩॥

ವರದ ವಾಗೀಶ ವರ್ಣಾತೀತ ವಂದ್ಯ ಜಯ। ಪರನು ಪರತರ ಪರಂಜ್ಯೋತಿ ಪರ ಮಾನಂದ । ನಿರಪಾಯ ನಿರುಪಮ ನಿರಾವರಣನಿರ್ಲೇಪನಿರವಯವ ನಿತ್ಯತೃಪ್ತ ॥ ಉರಗಕಂಕಣ ವಿಶ್ವತೋಬಾಹು ವಿಶ್ವಾಕ್ಷ । ಸುರಗಣಾರ್ಚಿತ ಸನಾತನ ಸದಾಗ ತಿಹಂಸ । ಗಿರಿಶ ಗಾಂಗೇಯಪಿತ ಗಣನಾಥ ಜಗದೀಶ ವಿಷಧರ ಪಿನಾಕಿಯೆಂದು ॥೪॥ ಉದಯಾಸ್ತಮಾನದೊಳು ನೂರೆಂಟುನಾಮವನು । ಪದುಳದಿಂದೋ ದಿಕೇಳಿದವರ್ಗೆಶಂಭುಲಿಂ । ಗದಕರುಣದಿಂದಿನಿತುಕೊರತೆಯಿಲ್ಲದೆ ಸಕಲಸಂಪದ ದೊಳೊಂದುಗೂಡಿ ॥ ಸದಮಳಜ್ಞಾನ ಸದ್ಭಕ್ತಿಗಳು ಮೇಲೆ ಮೇ । ಲೊದಗಿಕೈ ಸಾರುತಿಹವಿಹದಲ್ಲಿ ಪರದೊಳೊಂ । ದಿದಗಣಪದವನೈದಿ ನಿಜಸುಖದೊಳಿಹ ಮುಕುತಿ ದೊರೆವುದಿದುಸತ್ಯವೆಂದು ॥೫॥

## ರಾಗ-ಧನ್ಯಾಸಿ

ಪರಮೇಶ್ವರಿಯಪುಣ್ಯನಾಮವನು ಪಗಲಿರುಳು । ಸರಸಾನುರಾಗದಿಂ ದೋದಿ ಕೇಳಿದವರ್ಗೆ । ದುರಿತಕಂಟಕವಳಿದು ಕೈಸಾರುತಿಹ ವಮಳತರಭೋಗ ಮೋಕ್ಷಂಗಳು ॥ಪ॥ ಹ್ರೀಂಕಾರಿ ವಾಣಿ ಕಲ್ಯಾಣಿ ರುದ್ರಾಣಿ ರಮೆ । ಓಂಕಾರರೂ ಪಿಣಿ ಗಣಾನಿ ಗಾನಪ್ರೀತೆ । ಐಂಕಿಲಾಮಾಲಿನಿ ಮಹಾಮಾಯೆ ಮಾತಂಗಿಕ್ಲೀಂ ಕಲೇವರೆವರೇಣ್ಯೆ ॥ ಸೌಂಕಾರಸದನೆ ಶರ್ವಾಣಿ ಶಾರದೆ ಸತ್ಯೆ । ಕ್ರೋಂಕವಚ ಮುಖ್ಯೆ ಮಂತ್ರಾಧಿದೇವತೆ ದೇವಿ । ಶ್ರೀಂಕಿಲಾಕಾರಿ ವಿದ್ಯಾಂಗಿಮಾತೃಕೆಮಾನ್ಯೆ ಶಾಂಕರೀಶಾನಿಯೆಂದು ॥೧॥ ಗಿರಿಜೆ ಗೀರ್ವಾಣಪೂಜಿತೆ ಗೌರಿಗುಹಜನನಿ ಪರನಾದಬಿಂದುಮಂದಿರೆ ಮನೋಂಬುಜಹಂಸೆ । ವರದೆ ವೈಭವೆ ನಿತ್ಯಮುಕ್ತೆ ನಿರ್ಮಲೆ ನಿರಾವರಣೆ ಶಿವೆ ಶಾಂತೆ ಕಾಂತೆ ॥ ಧರಣಿಧರ್ಮಾನುಗತೆ ಸಾವಿತ್ರಿಗಾ ಯತ್ರಿ । ವಿರಜೆ ವಿಶ್ವಾತ್ಮಕೆ ವಿಧೂತಪಾಪವ್ರಾತೆ ಶರಣಹಿತೆ ಸರ್ವಮಂಗಳೆಸಚ್ಚಿ ದಾನಂದೆ ಪರೆ ಸುಧಾಕಾರಿಯೆಂದು ॥೨॥ ಚಂಡೆಚಂಡೇಶ್ವರಿ ಚತುರೆ ಕಾಳಿಕೌ ಮಾರಿ ಕುಂಡಲೆ ಕುಟಿಲೆ ಬಾಲೆ ಭೈರವಿ ಭವಾನಿ ಚಾ । ಮುಂಡಿ ಮೂಲಾಧಾರೆ ಮನುವಂದ್ಯೆ ಮುನಿಪೂಜ್ಯೆ ಪಿಂಡಾಂಡಮಯೆ ಚಂಡಿಕೆ । ಮಂಡಲತ್ರಯನಿಳ ಯೆ ದಂಡಿ ಜಯ ದುರ್ಗಿ ಫಣಿ । ಕುಂಡಲೆ ಮಹೇಶ್ವರಿ ಮನೋನ್ಮನಿ ಜಗನ್ಮಾ ತೆ । ಖಂಡಶಶಿಮಂಡನೆ ಮೃಡಾಣಿ ಪಾರ್ವತಿ ಪರಮಚಂಡಕರಮೂರ್ತಿಯೆಂದು ॥೩॥ ವಿಮಲೆ ವಿಖ್ಯಾತೆ।ಮಧುಮತಿ ಮುಖ್ಯೆ ಮಹನೀಯೆ । ಸುಮತಿ ಸುಲಲಿತೆ ಹೈಮವತಿ ಭಾವೆ ಭೋಗಾರ್ಥಿ । ಕಮಲೆಕಾತ್ಯಾಯನಿ ಕರಾಳೆತ್ರಿಪುರವಿಜಯೆ

ದಮೆ ದಯಾರಸಪೂರಿತೆ ॥ ಅಮೃತೆ ಯಂಬಿಕೆ ಯನ್ನಪೂರ್ಣೆ ಯಶ್ವಾರೂಢೆ। ಶಮೆ ಶುದ್ಧೆ ಸಿಂಹವಾಹಿನಿ ಶುಭಕಲಾಪೆ ಸು। ಪ್ರಮದೆಪಾವನೆಪದ್ಮೆ ಪಾಶದೆ ಪರಬ್ರಹ್ಮ ಯುಮೆ ಸಹಜಸುಮುಖಿಯೆಂದು ॥೯॥ ಇಂತುಗುರುಶಂಭುಲಿಂಗದ ಶಕ್ತಿ ಸೌಭಾಗ್ಯಸಂತತಶರೀರ ಸಮ್ಯಜ್ಞಾನಸತ್ಕ್ರಿಯೆ ಸ। ಮಂತು ಕರುಣಾಸನಾ ಭರಣಾಯುಧಾದಿ ಸಗುಣಾಂತರಾದಿಗಳಾಗುತ॥ ಸಂತಸವನೀವ ಶಾಂಭವಿಯ ನೂರೆಂಟು ಶುಭ। ನಾಂತನಾಮಂಗಳನು ಜಪಿಸಿದೊಡೆ ಸತಿಪುತ್ರ। ಸಂತಾನ ಸಕಲಸಂಪದಸಿದ್ಧಿಯಪ್ಪುದೀರಂತೆ ನಿಶ್ಚಯವಿದೆಂದು ॥೫॥

## ೭. ರಾಗ—ಲಲಿತೆ.

ಜಯಜಯಮಂಗಳಮಯ ಮಹಿಮೋದಯ। ಜಯಜಯಜನ್ಮಜರಾ ಮೃತಿಭಯಹರ। ಜಯಜಯ ನಿತ್ಯನಿರಾಕುಳನಿರ್ಮಳ ಜಯಜಯಶಂಕರನೆ ॥ಪ॥ ಕೆಂಬೊಗರಿನಜಡೆಮುಡಿ ಯರಮನೆಯೊಳ। ಗಂಬುನಿತಂಬಿನಿ ಯಾಳ್ದನೆ ಯಶ್ವತ। ಕಂಬಲ ಕರ್ಣಾಕಲಿತನೆ ಕಂತುಕದಂಬಕರೂಪಕನೆ॥ ಅಂಬಾನನ ವನರುಹ ಮಧುಮದರೋ। ಲಂಬ ಮಿದೆನಿಸುವಗಂಧವಹನೆಶ್ರುತಿ। ಗಿಂಬಹ ರಸನೆಯ ನುಣ್ಗದಪಿನ ಪೊಳಪಿಂ ಬಗೆಗೊಪ್ಪುವನೆ ॥೧॥ ಥಳಥಳಿಸುವ ತಂಬೆಳಗು ಬಿಸಿಲು ಶಿಖಿ। ಗಳಕಂಗಳ ಕಳೆವೆಳಗಿನ ಸುಮುಖನೆ। ಗಳದೊಳು ಕತ್ತುರಿಗೆರೆಯನೆ ಪೊಸಬಿಸದಳೆದನೆ ಪೇರುರನೆ॥ ನಳನಳಿಸುವ ತೋಳ್ಗಳ ಸಾಲ್ಗಳ ಚೆಲು। ವಳವಟ್ಟನೆ ವರಪರಶು ಮೃಗಾಭಯ। ವಿಲಸಿತಕರನೆ ಸಕಲಜಗದುದರನೆ ಪೊಳೆವಜಿನಾಂಬರನೆ ॥೨॥ ಹರಿಯಜವಾಸವ ಮನುಮುನಿದಾನವ। ನರನಾಗಾಮರ ನಮಿತಪದಾಬ್ಜನೆ। ಸರಿಮಿಗಿಲೆಲ್ಲಿಯು ಮಿಲ್ಲವೆನಿಸಿಪುರ ತರನೆ ನಿರಂಜನನೆ॥ ಪರಮನೆ ಬಿಂದುಕಳಾನಾದಾತ್ಮನೆ। ಚಿರಚಿನ್ಮಾತ್ರನೆ ನಿಗಮಾಗಮನುತ। ಸರಸಾಮೋದನೆ ಗುರುಶಂಭುಲಿಂಗ ಶರಣಸುರದ್ರುಮನೆ ॥೩॥

## ೮. ರಾಗ—ಲಲಿತೆ.

ಸುರನತಚರಣೆಗೆ ಸರಸಾಭರಣೆಗೆ। ವರಗುಣನಿಕರೆಗೆ ವಿತರಣಸುಕರಿಗೆ ನಿರುಪಮ ಚರಿತೆಗೆ ನಿಜಸುಖಭರಿತೆಗೆ ಪರತರಪಾರ್ವತಿಗೆ। ಜಯಜಯ ॥ಪ॥ ಗೌರಿಗೆ ಗಾಂಭೀರೆಗೆ ಶೃಂಗಾರಿಗೆ। ಸಾರಸಗಂಧಿಗೆ ಶಿವತನುಬಂಧಿಗೆ। ವಾರಿಜ ವದನೆಗೆ ವಿದ್ಯಾಸದನೆಗೆ ಧೀರೆಗೆ ಕಾರುಣ್ಯಾ॥ ಪಾರಾವಾರಿಗೆ ಪುಣ್ಯಾಕಾರಿಗೆ।

ಹಾರದುರೋಜೆಗೆ ತೀರದಪೂಜೆಗೆ। ಕಾರಣರೂಪಿಗೆ ಕೀರ್ತಿಕಲಾಪಿಗೆ ಶಾರದೆ ಸೇವಿತೆಗೆ ॥೧॥ ಜಗದಾಧಾರಿಂಗೆ ಜನ್ಮವಿದೂರಿಂಗೆ। ನಗಜಾತೆಗೆ ಗುಹಗಣಪರ ಮಾತೆಗೆ। ನಿಗಮಾಗಮವಾಣಿಗೆ ಕಲ್ಯಾಣಿಗೆ ಸದ್ಗುಣ ಗಣಮಣಿಗೆ ॥ ಅಗಣಿತ ನಾಮೆಗೆ ಸೊಗಸಿನಸೀಮೆಗೆ। ಮೃಗಧರಜೂಟಿಗೆ ರತ್ನಕಿರೀಟಿಗೆ। ಪೊಗಳುವ ಮುನಿಸಂತಾನಿಗೆ ಮಾನಿಗೆ ಬಗೆಗಳವಡೆದುಮೆಗೆ ॥೨॥ ದುರಿತವಿರೋಧಿಗೆಸಲೆ ನಿರುಪಾಧಿಗೆ । ವಿರಹಿತಮಾಯಿಗೆ ಶರಣಸಹಾಯಿಗೆ । ಪರಶಕ್ತಿಗೆ ಪಾವನ ಸದುಭಕ್ತಿಗೆ ಸಿರಿಗಧಿದೇವತೆಗೆ ॥ ಕರಿಮುಖಲೀಲಾಲೋಲೆಗೆ ಬಾಲೆಗೆ। ಕರ ಣವಿಶುದ್ಧಿಗೆ ಕಾಮಿತಸಿದ್ಧಿಗೆ । ಗುರುಶಂಭುಲಿಂಗಜೀವಿಗೆ ಭಾವೆಗೆ ಸುರುಚಿರ ಶಾಂಭವಿಗೆ ॥ ಜಯಜಯ ॥ .... ॥ ೩ ॥

## ೯. ರಾಗ-ದೇಶಿ.

ಪಾಲಿಸೆನ್ನನುಪದುಳವೆರಸಿ ಪರಶಿವನಿಗತಿ । ಮೇಲೆನಿಪ ಸುಗುಣಸಂಪನ್ನೆಶವಾರ್ಣಿ ॥ ಪ ॥ ಜರೆಮರಣವನು ಜಯಿಸಿ ದಮೃತಸೇವನೆಯುಳ್ಳ। ಹರಿಯಜಾದಿಗಳ ಬಲುಹನಪಹರಿಸಿದಾ ॥ ಗರಳವನು ನಲಿದುಂಡು ಹರನಳುಕದುಳಿದ ಭಾ । ಸುರತೆನಿನ್ನೈರದಾಳಿಯ ಮಹಿಮೆ ಗಿರಿಜೆ ॥೧॥ ಹೇಳಹೆಸರಿಲ್ಲದಭವನು ನಿನ್ನದೆಸೆಯಿಂದ:। ಭಾಳಲೋಚನನೆನಿಸಿ ನಿಖಿಳನಿರ್ಜರರ ॥ ಮೇಳಕಧಿಪತಿಯಾದ ನೆಂದೊಡಾಗಮನಿಗಮ। ಜಾಲವೈದುವವೆ ನಿಜನುತಿಗೆ ನಗಜಾತೆ ॥೨॥ ನಿನಗೆ ತನ್ನರೆಯೊಡಲ ನೊಲಿದಿತ್ತನೀಶನೆಂ। ದೆನುತಿಹರು ತಿಳಿದುನೋಡದೆ ಕವೀಶ್ವರರು ॥ ಮನಸಿಜಾರಿಂಗೆ ಮಂತ್ರಮಯಮೂರ್ತಿಗಳನುನೀ। ನನುಗೊಳಿಸಿ ಪೂಜ್ಯನೆನಿಸಿದೆ ಲೋಕಜನನಿ ॥೩॥ ಜಡೆಗಟ್ಟಿತಿರಿದುಂಡು ಮರುಳುಗಳಕೂಡಿ ಮೈ। ದೊಡೆದುಬೂದಿಯನು ಸುಡುಗಾಡೊಳಾಡಿ ॥ ಜಡರೀತಿವಡೆದ ರುದ್ರನಿಗೆ ನೀನೊಲಿದುಕೈ। ವಿಡಿದು ಪಾವನಚರಿತನೆನಿಸಿದೆಭವಾನಿ ॥ ೪ ॥ ಸಿರಿಸಕಲಸಿದ್ಧಿಸಂಪದವಿದ್ಯೆವಿಭವಾದಿ। ಪರಿಕರದೊಳೊಂದಿ ನೀನುಪಕರಿಸದಿರಲು ॥ ಗುರುಶಂಭುಲಿಂಗದೊಳ ಗಾವಲೇಸಿಹುದಿಳೆಯ । ನರರವನದೊಲವೀಯ ಲೆಳಸಿದೊಡೆಗೌರಿ ॥ .... .... ॥ ೫ ॥

## ೧೦. ರಾಗ-ನಾದನಾಮಕ್ರಿಯೆ.

ಅಗಣಿತಮಹಿಮೆಯ ನಗಲಧವಿಭವನೆ । ಜಾಣರದೇವ। ಸೊಗಸುವ ಸುಗುಣಸಂತತಿ ಗೂಡಿದಭವನೆ। ಜಾ ॥ ಪ ॥ ಪಿತಮಾತೆಯರೊ ಳೊಗೆಯದೆ

ರೂಪುವೆತ್ತನೆ । ಜಾ । ಮತಿಯಹಂಗಿಲ್ಲದೆಲ್ಲವನರಿವಾತನೆ । ಜಾ ॥ ಗತಿಗೆಳಸದೆ ನಿತ್ಯಮುಕ್ತನೆನಿಸಿದನೆ । ಜಾ । ಯತಿಗಳಲೋಚನಾಗ್ರದೊಳುಸಂಚರಿಪನೆ । ಜಾ ॥೧॥ ತಿರಿದುಂಡುಸಕಲಲೋಕವನಾಳ್ದಗರುವನೆ । ಜಾ । ವರನಿಗಮವ ನಸುಗತಿಯೊಳ ಗೊರೆದನೆ । ಜಾ ॥ ಸುರಬಲುಹನೊಂದುತೃಣದಿಂದೆ ಮುರಿದನೆ । ಜಾ । ಒರೆದಚಕ್ರದೊ ಳಸುರನ ಶಿರವರಿದನೆ । ಜಾ ॥೨॥ ಪೂಜಿಸದಾರಸುಪೂಜೆಗೊಂಬಧಿಕನೆ । ಜಾ । ಮೂಜಗನೆಂಬನಾಟಕವನಾಡಿಸುವನೆ । ಜಾ ॥ ರಾಜೀವನಾಭನು ವಧುವಾಗಲಾಳ್ದನೆ । ಜಾ । ಸೋಜಿಗದೊಡಲೊಳಾತ್ಮರಭೋಗವಿೀವನೆ । ಜಾ ॥೩॥ ಕಾವನನುರುಹಿ ಕಾಮಿನಿಯೊಡವೆರದನೆ । ಜಾ । ತೀವಿನಿಜಾನಂದದೊಳು ಮಿಕ್ಕುಮೆರೆದನೆ । ಜಾ॥ ಜೀವರೊಳಿಡೆವಿಡದಿರ್ದುಕಾಣಿಸದನೆ । ಜಾ । ಭಾವಿಸಲಾವುದ ನದರೊಳುತೋರ್ಪನೆ । ಜಾ । ॥೪॥ ಹರಿಯಜರುಗಳ ವಾದವನುಮಾಣಿಸಿದನೆ । ಜಾ । ಗರಳವಸೇವಿಸಿ ಮರಣವಗೆಲಿದನೆ । ಜಾ ॥ ಶರಣಜನರ ಭವರುಜೆಗಾದಿವೈದ್ಯನೆ । ಜಾ । ಪರಿಭಾವಿಸಲು ಶಂಭುಲಿಂಗನಿರ್ನಿರ್ವಾಣನೆ । ಜಾಣರದೇವ । .... ॥೫॥

## ೧೧. ರಾಗ-ಸಾರಂಗ.

ಪರಮಪಾವನ ಪಂಚಮುಖದಯಾಸಿಂಧುವೆ । ಶಂಭುಲಿಂಗ ॥ ವರದವಾಸವನತ ಲೋಕೈಕಬಂಧುವೆ । ಶಂಭುಲಿಂಗ ॥ ಪಲ್ಲವಿ ॥ ಅನುಪಮಾಚಲಭಕ್ತಿಭಾವಾನುಕೂಲನೆ । ಶಂ । ಮನುಮುನಿಜನರ ತಪೋನಿಧಿಲೋಲನೆ । ಶಂ ॥ ಜನನಮರಣಭಯಹರ ಜಿತಕಾಲನೆ । ಶಂ । ವನಜಭವಾಂಡಮಂಡಲ ಪರಿಪಾಲನೆ । ಶಂ ॥೧॥ ಗಿರಿಜೆಯಕುಚಗಂಧ ವಕ್ಷಾನುಲೇಪನೆ । ಶಂ । ಶಿರದರಮನೆಯ ಸಿಂಗರವೆಣ್ಣಿನೋಪನೆ । ಶಂ॥ ಶರಣಸತಿಯನೊಲಿಸುವ ಸತ್ಕಲಾಪನೆ । ಶಂ । ಸರಸಸಂಗೀತ ಸಾಹಿತ್ಯ ಸಲ್ಲಾಪನೆ । ಶಂ ॥೨॥ ಅಕಳಂಕಮಹಿಮ-ಸುಗುಣಮಣಿಹಾರನೆ । ಶಂ । ಸಕಲಚರಾಚರ ಜೀವರಾಧಾರನೆ । ಶಂ ॥ ವಿಕಸಿತಹೃದಯ ನಳಿನಹಂಸಾಕಾರನೆ । ಶಂ । ಮುಕುತಿಸಂಪದಸಿದ್ಧಿ ಸಮುದಾಯೋದಾರನೆ ॥ ಶಂ ॥ .... .... ॥೩॥

## ೧೨. ರಾಗ-ಶುದ್ಧಸಾಳೆ ವರ್ಣ.

ನೋಡಲಾಗದೆ ದೇವ । ನೋಡಲಾಗದೆ । ಕೂಡೆನಿನ್ನದಿಟ್ಟಮೂರು । ನಾಡೆಲೇಸುಮಾಡಲೆನ್ನ ॥ ಪ ॥ ಮಿಸುಕಲೀಯದೆನ್ನ ಮೋಹ । ವಿಸರವೆಂಬ

ವನವನುರುಹಿ | ಭಸಿತವೆನಿಸಿರುಪ್ರನಿನ್ನ | ನೊಸಲವಹ್ನಿನೇತ್ರದಿಂದೆ | ನೋ ||೧|| ಕುಲಪತಿವಿರ ಮುಸುಕಿಮುಗಿದು | ನಲಿಯುದೆನ್ನ ಹೃದಯನಳಿನ || ವಲರೆ ದಿವ್ಯರೂಪ ನಿನ್ನ | ಬಲದಭಾನುನಯನದಿಂದೆ | ನೋ ||೨|| ಕರಣ ಕುಲಚಕೋರಿರತಣಿಯೆ | ಹರುಷಶರಧಿ ವಿಾರಲೆನ್ನ || ವರದಶಂಭುಲಿಂಗ ವಾಮ | ದುರುಸುಧಾಕರಾಕ್ಷಿಯಿಂದೆ ||ನೋ|| .... ||೩||

## ೧೩ ರಾಗ—ನಾದನಾಮಕ್ರಿಯೆ.

ನೋಡುದಯುದೊಳೆನ್ನನೆಂದು ಭಾಳನಯನವ | ನೊಪ್ಪು | ಮಾಡಿ ಹರಿ ಯುದಿಟ್ಟಸಿಂದುದೀಶನಡಿಯೊಳು ||ಪ|| ಮುಳಿದುಕಾಲಕಾಮಪುರ ಮಜಾಂಡ ಕೋಟಿಯ | ನುರುಹಿ | ಕಳೆವಬಲವನುಳ್ಳ ನಿನ್ನ ಸಲುಗೆಯಿಲ್ಲದೆ || ನೆಲೆಯೆನಿ ಸನೆನಗೆ ಶಿವಾಂಘ್ರಿಯೆಂದುಭೀತಿಸಿ | ಬೇಡಿ | ಕೊಳುವೆನೆನ್ನ ನುಳುಹಿಕೋ ಕೃ ಶಾನುಚಕ್ಷುವೆ ||೧|| ಹರಿವರಾಹವಾದಿಯೂದ ಪಲವುಜನನವ | ನೈದಿ | ಬರು ವಚಕ್ರಿಯೊಡನೆ ತಿರುಗಿಬಳಲಲಾರದೆ || ಶರಣೆನುತ್ತಭವನ ಚರಣವಿಡಿದೆನೆಂ ದೆಂಡೆ | ನಿನಗೆ | ಸರಿಯುಕಾಣೆನಾನು ಚಿತ್ರಭಾನುನೇತ್ರವೆ ||೨|| ಜಡಮತಿಗಳೆ ನಿಸುವ ಕೆಲರು ವಾರಿಜಾಕ್ಷನ | ರುದ್ರ | ನೊಡನೆಸದೃಶವಾಗಿ ತಿಳಿವರದನು ತೊಲಗಿಸಿ || ಮೃಡನೆಪೂಜ್ಯ ನಸುರವೈರಿಯುಹನುಪೂಜಕ | ನೆಂದು | ಪೊಡವಿ ಗರುಹಿಮನ್ನಿಸೆನ್ನ ನನಲದೃಷ್ಟಿಯೆ ||೩|| ನಿಗಮವರಸು ವಾಗಮಾವಳಿಗಳುಪೊ ಗಳುವ | ಮೂರು | ಜಗದಜನರುಸೇವಿಸುವ ಮುನಿಗಳುಜಾನಿಪ || ನಗಸುತಾ ಧಿಪತಿಯು ಪನ್ನಗಳನವನೊಂದಿದ | ಯೆನ್ನ | ನಗಲಲೀಯುದಿರಿಸುವದೆಲೆ ಪಾವ ಕಾಕ್ಷಿಯೆ ||೪|| ಚೆಂದದಿಂದೆತನ್ನ ನಿಜವನಿಂತುನುತಿಸುವ| ಶಾಂ| ಯೆಂದದೀಕ್ಷಣ ಕ್ಕೆಮೆಚ್ಚಿಶಂಭುಲಿಂಗದ || ಹೆಂದದಮರ ನತಪದಾರವಿಂದದಲ್ಲಿಯೆ | ನೀನಿ | ರೆಂದು ಶಾಂತಿರಸದೊಳಾಳ್ದುದಳಿಕಲೋಚನ || ||೫||

## ೧೪. ರಾಗ—ನಾದನಾಮಕ್ರಿಯೆ.

ನೋಡಿಸಲಹೈಯು ನಿನ್ನಡಿವಿಡಿದೆನಭವ ನೆರೆ | ಕಾಡುತಿಹಪೂಗೋಲನ | ಬಿಡದೆ | ಹೇಡಿಗೊಳಿಸುವಕಾಲನ | ಒಲುಹಿ | ಗೀಡುಮಾಡದೆಬಾಲನ | ಎನ್ನ ||ಪ|| ಎಳೆವರೆಯುದಬಲೆ ಕಂಗೊಳಿಸಲಳುಪಿದೊಡೆ ಕೊಲೆ | ಗೆಳಸಿ ಬೇಗದಿಬಂದು | ಮುಳಿದುಜೊಬ್ಬಿಡುತಲಂದು | ಶರಧನುವಿಡಿದುನಿಂದು |

ತಳುವದೆಸೆಯುತ್ತಿಹನು ಮದನ । ಗೆಲುವ ಡರಿದಿವನಕದನ । ನೀ । ನುಳುಹಿಕೊ ಪಂಚವದನ । ಎನ್ನ ॥೧॥ ತನುವನಂಜಿಸಲು ರೋಗದ ಬೇಸಿಗೆಯಬಿಸಿಲು । ವನು ಮುನ್ನದಾಳಿಯಿಂಕಾಡಿ । ಘನಬಾಧೆಯೊಡಗೂಡಿ । ಸತಿಸುತರನೋಡೆ । ಮುನಿದುಪಾಶವನುಬೀರಿ । ಕಾಲ । ನನುಗೆಡಿಸುತಿಹನುಸಾರಿ ॥ ಪೇಳದೆನುಶಿವ ನಿಜವತೋರಿ । ಎನ್ನ ॥೨॥ ಶರಣಜನಬಂಧು ಶಂಕರಕೃಪಾಸಿಂಧು ಸ । ದ್ಗುರು ಶಂಭುಲಿಂಗಕರುಣದಿಂದೆ । ಪರಿಭವಾಂಬುಧಿಯಿಂದೆ । ತೆಗೆದುಸಂತಸ ದಿಂದೆ । ಪೊರೆವುದುಮನೋಜದಂಡ । ಧರವಿಜಿತ ಸುಪ್ರಚಂಡ । ವಿನುತಹರಿ ಯಜರುಗಳ ತಂಡ । ಎನ್ನ ॥ .... .... .... ॥೩॥

## ೧೫. ರಾಗ-ಭೈರವಿ.

ಎನ್ನನೊಲವಿಂದ ಪಾಲಿಸುಪಾರ್ವತೀಶಾ । ಸನ್ನುತಾಗಮನಿಗಮ ನಿರ್ಜಿತಪಂಚಪಾಶ ॥ಪ॥ ಸುದತಿಯರ ಸವಿನೋಟವೆಂಬುವಲರಂಬುಬಂದು । ಹೃದಯವಿಂಮ್ಯೆಗಾಣ ಲಂಗಜನತಾಪವಂದು ॥ ಮುದವನುಡುಗಿಸುತಿದೆ ವಿವೇಕ ವಿರಹಿತನೊಂದು । ಹದವನರಿಯೆನಿದಕೆ ನಿಮ್ಮಡಿವಿಡಿದೆನಿಂದು ॥೧॥ ಭವ ಮಹಾವನದೊಳು ಸುಮಾರ್ಗದ ಹೊಲಬುಗೆಟ್ಟು । ಹವಣಿಸಲುಬಾರದ । ಕಲುಷಕಂಟಕವೆನಟ್ಟು ॥ ಜವನದೂತರ ದಾಳಿಯಿಂದಲತಿ ಭಯವಟ್ಟು । ಶಿವದಿಡುವೆನನುಗೆಡುವೆ ನಿಮ್ಮವನಾಸೆವಟ್ಟು ॥೨॥ ಹರಿವಿರಿಂಚಿಸುರೇಂದ್ರವಂ ದಿತಪದಸರೋಜ। ಶರಣಜನ ಸಂದೋಹಕಾಮಿತಕಲ್ಪಭೂಜ ॥ ಗಿರಿಸುತಾಸುಖ ವನಧಿವರ್ಧನಪೂರ್ಣರಾಜ । ವರದಕರ ಗುರು ಶಂಭುಲಿಂಗವೆ ದಿವ್ಯತೇಜ ॥೩॥

## ೧೬. ರಾಗ-ಭೈರವಿ.

ಕಾಯೋಸುಖಸಾರ ನೀನುಪಕಾರ । ಮಾಯಾವಿದೂರ ಬಿಡದೆನ್ನ ಗುಣಮಣಿಹಾರ ॥ ಪ ॥ ತನುಮೋಹ ವಖಿಳೇಂದ್ರಿಯದ ಪರಿತಾಪ । ಧನ ದಾಸೆ ಸುಜನರನಿಂದೆ ಯಾಲಾಪ ॥ ವನಿತಾಭಿರತಿ ಲೋಕಗತಿಯುವ ಲೇಪ । ಮನ ವಿಡಿದಳಲುವೆನ್ನನು ನಗಚಾಪ ॥೧॥ ಪಲವು ವಿಷಯ ದುಷ ಹತಿ ಯೊಡಗೂಡಿ । ಕಲುಷರೂಪಿನ ಕರ್ಮವನು ಮಿಗೆಮಾಡಿ ॥ ಕುಲ ಜಾತಿರೂಪುಸಂಪದವನೆ ಬೇಡಿ । ಸಲೆಬಾಧೆ ಬಡುವೆನಭವ ನೀ ನೋಡಿ ॥ ೨ ॥ ಕರುಣಾಂಬುನಿಧಿ ಕೆ ರೆ ಮು ಸ ಙು ವ ಪಾಂ ಗ । ಗಿರಿರಾಜಸುತೆ

ವಿಜಿರಾಸುವ ವಾಮಾಂಗ ॥ ಶರಣ ಸಂಕುಳದ ಮಾನಸ ನಿಜಸಂಗ ! ಪರಿಭವ ಯುತನೆನ್ನ ನೆಲೆ ಶಂಭುಲಿಂಗ ॥ .... .... ॥ ೩ ॥

## ೧೭. ರಾಗ-ತೋಡಿ

ಎನ್ನನೆಪಾಲಿಸು ಪುಣ್ಯ ಮಯಗಾತ್ರ । ಸನ್ನುತ ಸ-ಗುಣ ಮಣಿಗಣ ಸೂತ್ರ ॥ ಪ ॥ ತೋರಿಕೆಡುವ ಒಡಲೆ ತಾನಹುದೆಂದು । ಘೋರ-ತಾಪ ದುರಿಯ ವ-ಧ್ಯಾಧಿ ನಿಂದು । ವಿಕಾರಬಾರ ದರಿವರ್ಗದೊಳು ನೊಂದು । ಮತಿ । ಗಾರುಪಡುತಿದೆ ಭಕ್ತ ಸುರಭೂಜ । ಕೃಪೆ । ದೋರೆನಗೆ ಶ. ಣ ವಾರ್ಧಿ । ಪೂರ್ಣರಾಜ । ಬೇರೆ । ಬೇರೆ ಕಾಣಿಸುವ ಜಗದಾದಿ ಬೀಜ ॥ ೧ ॥ ಭಾವೆ ಯರ ರೂಪಿನೊಳು ದಿಟ್ಟನಟ್ಟು । ಕಾವ ನಲರಂಬು ಗಳಿಗೆದೆಗೊಟ್ಟು ತೀವಿದಾಸೆ ಯೊಡಗೂಡಿ ಗತಿಗೆಟ್ಟು । ಮನೋ । ಭಾವತಿ ಗೊಳುತಲಿದೆ ಜಿತಕಾಲ। ಪರಿ। ಭಾವಿಸೆನ್ನ ನಗಜೆ ಮು ರತಿಲೋಲ। ನತ। ದೇವದಾನವಾದಿ ವಿಶ್ವ ಲೋಕಪಾಲ ॥ ೨ ॥ ಅಸುರ ಕರ್ಮವೆ ತನಗಂಗವಾಗಿ । ಮೋಸದೊಳಿನಿತು ಸ.ಖ ಭೋಗಕಾಗಿ । ಭಾಸುರಾನಂದದ ಮುಕ್ತಿಯನು ನೀಗಿ । ಜೀವ । ಘಾಸಿಯಾಗು ತಿದೆ ಯೋಗಿ ಜನಸಂಗ । ನೋಡಿ । ಲೇಸನೀವುದೆನಗೆ ಭಾವಜ ಭಂಗ । ಸುವಿ । ಲಾಸನಿಧಿ ನೀನೆಗುರುಶಂಭುಲಿಂಗ ॥ ೩ ॥

## ೧೮. ರಾಗ-ನಾದನಾಮಕ್ರಿಯೆ

ಯಾಕೆನ್ನ ನಿಂತು ಸಂಸೃತಿಯೊಡ ಗೂಡಿ । ದೆಲೆದೇವ ರೆಲೆದೇವರೇ । ಸಾಕಿನ್ನು ನಿಜವ ನೀಯದೆ ತಳುಮಾಳ್ಪರೆ । ಎಲೆ ॥ ಪ ॥ ಮೊದಲು ನೀನೆನ್ನ ನಜ್ಞಾನ ಶಕ್ತಿಗೆ ಮಾರಿ । ದೆಲೆ । ಒದವಿಮುತ್ತದನೆ ಕೆಡಿಸಲೆಂಬ ಬಗೆದೋರಿ । ದೆ ॥ ಪುದಿದಕರ್ಮದಪಾಕ ದನುಗುಣ ದೊಳುಮಿಾರಿ । ದೆ । ವಿಧಿಸಿಬಳಿಕ ಮಾಯಾಮಲ ಪಾಶವನು ಬೀರಿ । ದೆ ॥ ೧ ॥ ಬಿತ್ತರವೆನಿಪ ಭುವನ ದೇಹ ವನು ಮಾಡಿ । ದೆ । ಮತ್ತೆನ್ನ ನವರವ ರಭಿಮಾನದೊಡಗೂಡಿ । ದೆ ॥ ಮುತ್ತಿಮೋಹಿಸುವ ಸುಖಾದಿ ಭೋಗವನೂಡಿ । ದೆ । ಸುತ್ತಿಬರಿಸಿ ಬಹು ಜನನಮಾರ್ಗದೊಳಾಡಿ । ದೆ ॥ ಮರಳಿ ವಿನಯ ವಿವೇಕವನೆನ್ನೊಳಿಂಬಿಟ್ಟೆ । ಯೆ । ಪರಬೋಧವರುಹಿ ಬಂಧದ ಬಲುಹನು ಸುಟ್ಟೆ । ಯೆ ॥ ವರವಾಗಿ ನಿನ್ನ ಸಮಾನ ಪದವಿಗೊಟ್ಟೆ । ಯೆ । ಗುರುಶಂಭುಲಿಂಗ ನೀನೆನಗಾಗಿ ಕೃಪೆವಟ್ಟೆ । ಯೆಲೆ ದೇವರೆಲೆದೇವರೆ ॥ .... .... ॥ ೩ ॥

## ೧೯. ರಾಗ-ತೆನುಗು ಕಾಂಬೋಧಿ

ಶಂಕರಾ । ನೋಡುನೀನೆನ್ನ ಪರಿಭವದ ಬಾಧೆಯನು ಕೃಪೆ । ಮಾಡು ಬೇಗದೊಳಭಯವಿತ್ತು ॥ ಪ ॥ ಶಂಕರಾ । ಮಾಯೆಕರ್ಮದ ಬಾಧೆ ಕಾಯ ಕರಣದ ಬಾಧೆ । ವಾಯು ವಿಷಯೇಂದ್ರಿಯದ ಬಾಧೆ ॥ ಶಂ ॥ ಹೇಯವಹ ಜನನ ಮರಣದ ಬಾಧೆ ತಾಪಸವು । ದಾಯದತಿ ಬಾಧೆ ಬಲುಹೆನಗೆ ॥ ೧ ॥ ಶಂ । ಹಸಿವು ತೃಷೆಗಳ ಬಾಧೆ ವ್ಯಸನ ವೇಳರ ಬಾಧೆ। ದೆಸೆಗೆಡಿಸುವರಿ ಕುಳದ ಬಾಧೆ ॥ ಶಂ ॥ ಕುಸುಮ ಬಾಣನಬಾಧೆ ಮವ ಶೋಕ ಮೋಹ ರತಿ । ವಿಸರ ದುರು ಬಾಧೆ ಘವವೆನಗೆ ॥ ೨ ॥ ಶಂ । ಬೇರೆಬೇರಿನ್ನುವೈದೋರಿ ಕಾಡುವ ಬಾಧೆ। ನೂರುಸಾಸಿರ ಕೋಟಿಯುಂಟು ॥ ಶಂ ॥ ಮೀರಲರಿದಿವ ನೆನಗೆ ನೀನೆ ತೊಲಗಿಸಿ ಸುಖದ । ಸೂರೆಗೊಡು ಗುರುಶಂಭುಲಿಂಗ ॥ ॥ ೩ ॥

## ೨೦. ರಾಗ. ಭವುಳಿ

ಕರುಣಿಸೆನ್ನೊಳು ಸುಗುಣ ವಿನಿತಿಲ್ಲ ವೆಣಿಸುವಡೆ । ನಿರವಧಿಗಳೆನಿಸು ತಂಡಲೆವ ದೋಷ । ನೆರೆದಿವಕೆ ಪರಿಹಾರವಿದನೋಡಲಹುದೆನಿಸ । ದಿರುತಿಪ್ಪ ವಾಗಿ ಯನಿಮಿತ್ತವಭವ ॥ ಪ ॥ ಜನಿಸಬಾರದಯೋನಿ ಮರಣವಾಗದತಾಣ । ವನುಗೆಡದರೀತಿ ಮೋಹಿಸದ ವಿಷಯ । ತನುವನಂಟದರುಜೆಯು ಮುಖ ಗೆಡಿಸದಿಹ ಲಜ್ಜೆ । ಮನವ ನಡಸದ ಚಿಂತೆ ಮರೆಯದರಿವು ॥ ತೊನೆಯದ ವಿಕಾರ ವಂಚಿಸದ ಭೂತಾದಿ ವಂ । ಚನೆಮಾಡ ದನ್ಯಧನ ವಾಡದಾಟ । ಮುನಿಯದರಿ ಮುಟ್ಟದಾಹಾರ ವೆನಗಿಲ್ಲವೆನ । ಲಿನಿತವಸ್ಥೆಯೊಳು ಸಿಲುಕಿದೆನೊ ಶಿವನೆ ॥ ೧ ॥ ಅಡಿಯಿಡದನೀತಿ ಮಾಡದಪಾಪ ವೆಳಸಿವ್ಯೆ । ವಿಡಿಯದಂಗ ಜಮುದ್ರೆ ಸುಡದತಾಪ । ಜಡಿಯದೆಮದೂತ ರೆಳೆಯದನಿರಯತತಿ ಯುಕ್ಕ । ನುಡಗಿಸದಕೊರತೆ ನಿಂದಿಸದ ಸುಜನ ॥ ಕಡೆಗಾಣದಾಸೆ ಕೆಡಿಸದಬಾಳು ಹರಣವನೆ । ಬಿಡಬೇಹುದೆಂದು ಬಗೆಯದಬಡತನ ॥ ಪಡೆಯದಿಹ ದೂಷಣ ವರಸಲೆನ್ನೊಳಿಲ್ಲವಂ । ದೊಡೆ ಪೇಳಲೇನು ಪೆರತಿಹುದು ಮೃಡನೆ ॥ ೨ ॥ ಪರಿಹರಿಸಬಹುದೆಂಬದುಃಖ ವಿನ್ನೇನಿಲ್ಲಿ । ಪರಿಯಂತ ವೆನಿಸಿಕೊಳುತಿಹ ಸಂಸೃತಿ ॥ ತರಹರಿಪನೆಲೆ ಬಾರದಿರುವಕಂಟಕ ವಿನ್ನು । ಚರಿಸದುಳಿದಿರ್ಪ ದುರ್ಮಾರ್ಗವೊಂದು ಪರಿಭಾವಿಸಿ ॥ ದೊಡಿಲ್ಲವೆನ್ನೊಳದು ಕಾರಣದಿ ।

ಶರಣುಹೊಕ್ಕೆನು ವರದಕರನೆ ನಿನ್ನ । ಬಿರುದಿಗಾಗಿಯೆ ಬಿಡದೆ ಪೊರೆ ಶಂಭು ಲಿಂಗ ನಿಜ । ಚರಣವಾರಿಜದ ನಡುವಗಲದಿರಿಸಿ ॥ ॥ ೩ ॥

## ೨೧. ರಾಗ-ಕುರಂಜಿ

ಕರುಣಿಸು ಕಾಡದೆನ್ನನು ಬಂದು । ಶರಣು ಹೊಕ್ಕೆನು ಶಂಕರ ನಿನ್ನ ॥ ಪ ॥ ಬಿಡಲಾರದ ವಿಷಯಂಗಳಿಗೀಸುವ । ವೆಡೆಯಾಡುತಿಹುದೆನ ವರತ ॥ ತಡೆಯದೆ ನೀನಲ್ಲಲ್ಲಿಯೆಕಾಣಿಸಿ । ಕೆಡಿಸೆನಗವರಾಸೆಯನೀಶ ॥ ೧ ॥
ತನು ಧನ ವನಿತಾದಿ ಯೊಳಾವಭಿರತಿ । ಜನಿಸಿಕುದಂತೆ ನಿನ್ನಯ ನಿಜಾಂಘ್ರಿ ॥
ವನಜದೊಳೀ ಮತಿಗನುರಾಗವನಿ । ತ್ತಿನಗಭಯಂಗೊಡು ಪುರಮಥನ ॥ ೨ ॥
ಶಿಶುವಿನ ದುರುಳತೆಯನು ಸೈರಿಸಿ ಪಿತ । ನೊಸೆದುಮುದ್ದಿಸಿ ಲಾಲಿಸುವಂತೆ ॥
ಮುಸುಕಿ ದುರ್ಗುಣವಿರಲವ ನೆಣಿಸದೆ ಮ । ನ್ನಿಸು ಬಿಡದೆನ್ನ ನುಮಾರವಣ ॥
ಕಲುಷವಡಸಿದವನೆಂದುರೆನೀನೆನ್ನ । ನುಳಿಯಲಹುದೆ ನಿನ್ನಯನೆನಹು ॥
ತೊಲಗಿಸದಘ ಮೊಂದಿಲ್ಲದರಿಂದೆನ । ಗೊಲಿದುಸಲಹು ಸಾರಿದೆನಭವ ॥ ೪ ॥
ಬಡವರನೀಕ್ಷಿಸು । ತವರುಚಿತವನುರೆ । ನಡಿಸುವರೊಲಿದು ಸಜ್ಜನರೆಲ್ಲ ॥
ಪೊಡವಿಗೆ ದೀನನೆನಿಸಿದೆನ್ನನಧಿಕನೀ । ನೆಡೆವಿಡದಿರು ಗುರುಶಂಭುಲಿಂಗ ॥ ೫ ॥

## ೨೨. ರಾಗ-ಮಧುಮಾಧವಿ

ನಿನ್ನೊಳಾವಸುಗುಣ ವಿಹುದು ವಿಚಾರಿಸಿ ನೋಡ । ದೆನ್ನೊಳರಸುವೆ ಲೇಸುಗಳನೇಕೆ ದೇವ ॥ ಪ ॥ ಕರಚೆಲುವಿನ ರತಿಪತಿಯನುರುಹಿದೆ ಮುಪ್ಪುರದ । ವರೆಲ್ಲರೊಕ್ಕಲನೆ ಕೆಡಿಸಿದೆ ॥ ವರವೇದವಿದನ ತಲೆಯನೆಚ್ಚುಗೆಡಹಿದೆ । ಪುರುಷೋತ್ತಮನ ಕಣ್ಣನೊಪ್ಪಿತೆಗೆಸಿದೆ ॥ ೧ ॥ ನುತಧರ್ಮರಾಜನ ನಿರಿದೆ ಮುಮ್ಮೊನೆಯಿಂದೆ । ಶ್ರುತಿತತಿಯನು ಶುನಿಯೆನಿಸಿ ನಡೆಸಿದೆ ॥ ಕ್ರತುಪೂಜೆ ಯಳಿದೆ ದಕ್ಷನ ಋಷಿಯರುಗಳ ಕುಲ । ಸತಿಯರೆಲ್ಲರನು ಸೈತಿರದೆಲಜ್ಜಿಸಿದೆ ॥ ೨ ॥ ನೋಡುಲಿಂತನೇಕಗುಣನಿಂದೆಯುಂಟು ನಿನಗದ । ನಾಡಲಿನ್ನೇನದು ಕಾರಣದಿ ನಾನರಿಯದೆ ॥ ಮಾಡಿದಪರಾಧ ಕೋಟಿಯನು ಮರೆದವನೊಂದು । ಗೂಡಿಕೊ ನಿನ್ನೊಳೆನ್ನ ನೆಲೆ ಶಂಭುಲಿಂಗವೆ ॥ ೩ ॥

## ೨೩. ರಾಗ-ನಾದನಾಮಕ್ರಿಯೆ

ಸಾರವಸ್ತು ವಲ್ಲದನ್ಯವನೊಲಿವೆ ಸುವಿ । ಚಾರವಿಲ್ಲಸೇಕೆ ನಿನ್ನೊಳು । ದೇವರೆ ॥ ಪ ॥ ಕೂಡೆಕಂಪುವೆತ್ತ ಗಂಧವನುಳಿದು ಸುಡು । ಗಾಡಬೂದಿಯ

ತಾಳ್ದಿ ವ್ಕೈಯೊಳು । ದೇವರೆ ॥ ಮಾಡಿದಲಂಕಾರವೆಲ್ಲವ ನೊಲ್ಲದೆ ಕೊಂ । ಡಾಡಿ ತೊಟ್ಟೆಪನ್ನಂಗಗಳ । ದೇವರೆ ॥೧॥ ಪಿಂಗಿತೋರಹಾರವಂ ಮಿಗೆ ಮಂಡೆ ಮಾಲೆ । ಗಂಗವಿತ್ತೆ ಸಂತಸದಿಂದೆ । ದೇವರೆ ॥ ಮಂಗಳದುಕೂಲವ ನೊಮ್ಮೆ ಪೊದೆಯದೆ ಮಾ । ತಂಗ ಚರ್ಮವಾಂತೆಭಾವಿಸೆ । ದೇವರೆ ॥೨॥ ವಾರಣಾದಿ ವಾಹನಂಗಳ ನಗಲಿರ್ನೀನು । ಸಾರಿಬಿಡದೆತ್ತನೇರಿದೆ । ದೇವರೆ ॥ ಭೂರಿವಿಶ್ವ ವಲ್ಲಭನಾಗಿ ಮತ್ತೆಮನ । ವಾರೆತಿರಿದುಂಡು ಬಾಳುವೆ । ದೇವರೆ ॥೩॥ ಗಾಡಿಯುಳ್ಳ ನಿರ್ಜರಾಳಿಯ ನೆಳಸಬೊಂದು । ಗೂಡಿದೆ ಪೈಶಾಚವೃಂದವ । ದೇವರೆ ॥ ನೋಡದೆ ಹೇಮಾದ್ರಿವಾಸ ನೊಪ್ಪಿ ಮನೆ । ಮಾಡಿಕೊಂಡೆ ಪ್ರೇತಭೂಮಿಯ । ದೇವರೆ ॥೪॥ ಮೋಹವಿಲ್ಲದೊಂದರೊಳಿಂತು ನೀನು ಸುರ ಸ । ಮೂಹ ದಿವ್ಯಸಿದ್ಧಿ ಮಾಳ್ಪುದು । ದೇವರೆ ॥ ಊಹಿಸಲಾತ್ಮಾನುಭವಿಗೆ ಭೋಗ ದೊಳು ನಿ । ರ್ಮೋಹವೈಸೆ ಶಂಭುಲಿಂಗವೆ । ದೇವರೆ ॥೫॥

## ೨೪. ರಾಗ. ಮಧುಮಾಧವಿ

ಕೂಡೆನೇಮಿಸಿದೆ ಹಿತವಹಿತವೆಂಬೆರಡನು । ನೋಡುನಿನ್ನೊಳಾವ ಬಲ್ಲಿತನವಿಹ ದಭವ ॥ ಪ ॥ ಕಡುಚೆಲುವೆಸೆವಜವ್ವನವನು ಜರೆಯು ಬಿಡಲ । ರಿಪೆನಿಪಭೋಗವನು ರೋಗವನು ॥ ತಡೆಯದಖಿಳ ವಿದ್ಯೆಯನು ದರಿದ್ರತೆ ಯನು । ಪೊಡವಿಗಧಿಕ ಸಂಪದವನು ಲೋಭವನು ॥೧॥ ಪರಿತೋಷವನು ವಿತ್ತ ದಳಿಯಾಸೆಯನು ಪರ । ತರಶಮೆಯನು ನೀರೆಯರ ವಿಲಾಸವನು ॥ ಕರಸೊಗ ಸಾವ ಜೀವನವನು ಮರಣವನು । ವಿರತಿಯ ನಗಲದರಿವನು ಗರ್ವವನು ॥ ೨ ॥ ಮನುಜತ್ವವನು ಮುಕ್ತಿಯೊಲವಿಲ್ಲದಿಹುದನು । ತನುದಂಡನೆಯನು ಚಿತ್ತ ಮೊಳು ಕಾಮವನು ॥ ಮುನಿವರ್ತನೆಯನು ಲೋಕದರಂಜನೆಯನು ಪಾ । ವನ ಶಂಭುಲಿಂಗವಾದೆನ್ನನು ಸಂಸೃತಿಯನು ॥ ೩ ॥

## ೨೫. ರಾಗ- ಚೌಪದಿವರ್ನ

ನೀನೊಲಿಯದ ನಿಮಿಷವೆ ಪಲವರುಷ । ವಾನೆಂತುಳಿವೆ ಮನ್ನಿಸು ದೇವ ॥ ಪ ॥ ಜ್ಞಾನವಿರೋಧಿ ಮಾಯಾವಿಕೃತಿ ಬಹು । ಧಾನ್ಯವೆಶುಕ್ಲ ಧಾತು ಗಳಾಗೆ ॥ ಈ ನಿಖಿಳ ಪ್ರಜೋತ್ಪತ್ತಿಯನವರೊಳು । ನೀನುಂಟು ಮಾಳ್ಪೆ ಸರ್ವೇಶ್ವರ ॥ ೧ ॥ ಮಬಳಿದುಮನ್ಮಥನ ವಿಕ್ರಮವನುಜಯಿಸಿ । ಮುಪ್ಪೊಳಲ

ದುರ್ಮುಖಿಯರಾಕ್ಷಸರಸಿಕ್ಕಿ ॥ ನಳಪಾರ್ಥಿವಾದಿ ಶ್ರೀಮುಖದಸೌಮ್ಯರಿಗೆ । ಮಂಜುಳತರಾನಂದವೀ ವನುಪಮು ॥ ೨ ॥ ಭಾವಿಸೆಪ್ರಭವಾದಿಕ್ಷಯಕಡೆಯಾದವರ । ಭಾವವಿಕಾರತ್ವವಿರಹಿತ ॥ ಜೀವದುಃಖಾರ್ಣವೋತ್ತರಣಪ್ಲವಮಹಿ । ಮಾವಿಭವದ ಶಂಭುಲಿಂಗನೆ ॥ ೩ ॥

## ೨೬. ರಾಗ-ಸೌರಾಷ್ಟ್ರ

ತಂದುತೋರೆ ಪಳಿವಾತು ಪೊಡೆಯ ನೈವೊಗದ ಸಾ । ಲಂಡವನು ಸರಿಮಾಡಿದನಿಂದುವದನೆ ॥ ಪ ॥ ನೆಲದಾಳಿಗಳ ರಾಯನ ಕುವರಿ ಗೊಲಿದು ನೆಲ । ಕಲಸೆನಿಸದೆ ನೆಲದೊಲವಿತ್ತು ನೆಲಸ ॥ ಪಲವೆಡೆ ನೆಲೆಯೊಳಾಂತನ ಪಚ್ಚವನೆ ತೊಟ್ಟು । ನೆಲಗಣ್ಣ ನಣುಗನ ನಿಕ್ಕಿ ವಿಕ್ಕವನ ॥ ೧ ॥ ಮುಗಿಲ ಪಗೆಯ ನುಂಬವನ ಪಗೆಗಳಿಯನ । ಪಗೆಯಾಗಿ ಮುಗಿಲೇರಿದನ ಮಗ ನೊಡನೆ । ಪಗೆಯಂತೆ ನೆಣಸಿಮುಗಿಲ ಹಾದಿಯಗಟ್ಟೆ । ಮುಗಿಲ ಹೂವನೆ ಸೂಡಿ ಬಗೆಗೊಳಿಸುವವನ ॥ ೨ ॥ ತಾವರೆಯಾಗದ ತಾವರೆಗಳನೊಮ್ಮೆ । ತಾವರೆ ಯಲರಿ ತಾವರೆ ಮುಟ್ಟಿತನ್ನ । ತಾವರೆ ವನೆಯಲರೆಯನು ತಾವರೆ ಯುಳ್ಳ । ತಾವರೆಗೀಯಲೊಲಿದ ಶಂಭುಲಿಂಗನ .... ॥ ೩ ॥

## ೨೭. ರಾಗ-ಸಾಳಂಗ

ಕಮಲಕಮಲ ಕುಮುದಾಶ್ರಯ ಮಸ್ತನೆ । ಶಂಭುಲಿಂಗ। ಕುಮುದ ಕಮಲ ತರುಣಾನ್ವಿತಹಸ್ತನೆ । ಶಂ ॥ ಪ ॥ ಹರಿಹಂಗನ ಹರಿಸಖನೊಳು ಸುಟ್ಟನೆ । ಶಂ । ಹರಿಯರೂಪಿನ ಹರಿಯಪು ಕೊಂದದಿಟ್ಟನೆ । ಶಂ । ಹರಿಯೆದೆಯನು ಹರಿಶೂಲದೊಳಿಟ್ಟನೆ । ಶಂ । ಹರಿನತಪದ ಹರಿಹರರೂಪುದೊಟ್ಟನೆ । ಶಂ ॥ ೧ ॥ ಸೋಮಪವಾಮಾಂಗನೆ ಸೋಮಸುತೇಜನೆ । ಶಂ । ಸೋಮಸಖನೆ ಸೋಮಜನ ಸುರಭೂಜನೆ । ಶಂ ॥ ಸೋಮನಾಮನೆ ವಿಶ್ವ ಸೋಮಸ್ವಭಾವನೆ । ಶಂ । ಸೋಮಕಲಾತೀತ ಸೋಮಪ್ರಯೋಜ್ಯನೆ । ಶಂ ॥ ೨ ॥ ಸುರಭಿಯ ಸುರಭಿ ಮಾಲಾರ್ಪಿತ ಸೂತ್ರನೆ । ಶಂ । ಸುರಭಿಯ ಸುರಭಿಭವಾಬ್ಧಿಗೆ ಭೈತ್ರನೆ । ಶಂ ॥ ಸುರಭಿಯರಸನ ಸುರಭಿನುತಿ ಪಾತ್ರನೆ । ಶಂ । ಸುರಭಿಗೆ ಸುರಭಿದನ ವನಚೈತ್ರನೆ । ಶಂ .... ॥ ೩ ॥

## ೨೮. ರಾಗ-ಸೌರಾಷ್ಟ್ರ

ಕೋಗಿಲೆ ಚೆಲ್ವಕೋಗಿಲೆ ಮುದ್ದು । ಕೋಗಿಲೆ ಜಾಣಕೋಗಿಲೆ ॥ ಪ ॥ ಹಿಂಪೆ ತಪಡೊಳೀಶನೊಂದಿರು ತಿರಲೆಚ್ಚು । ಬೆಂದಕಾಮನ ಬಿಟ್ಟುಕೋಗಿಲೆ ॥ ಬಂಡುಳೀಗದಿ ಬಾಲೇಂದು ಧರನಕೂಡಿ । ಕುಂದದೆ ನೀಬಾಳುಕೋಗಿಲೆ ॥ ॥ ೧ ॥ ಮನುಮುನಿಗಳ ನೀತಿಯನು ಕೆಡಿಸುವದುಷ್ಟ । ಮನಸಿಜನನು ಮಾರಿ ಕೋಗಿಲೆ ॥ ಘನಪದವನು ತನ್ನ ನೆನೆವರಿಗೊಲಿದೀವ । ಧನದ ಮಿತ್ರನಸಾರು ಕೋಗಿಲೆ ॥ ೨ ॥ ನಲ್ಲರನಗಲಿದ ಮೆಲ್ಲೆದೆಯರಕೊಲ್ವ । ಫುಲ್ಲಶರನ ಪಿಂಗಿಕೋಗಿಲೆ ॥ ಎಲ್ಲ ಜೀವರಿಗೆರವಿಲ್ಲ ದೊಲವನೀವ । ಬಲ್ಲಭವನೊಳಿರು ಕೋಗಿಲೆ ॥ ೩ ॥ ಮಂಗಳರವ ದೊಳನಂಗನ ಬಣ್ಣಿಸೆ । ಭಂಗವಲ್ಲವೆನೋಡು ಕೋಗಿಲೆ ॥ ಕಂಗೊಳಿಸುವಸರ್ವ ಮಂಗಳೆಯರಸನ । ಪಿಂಗದೆನೀಪಾಡು ಕೋಗಿಲೆ ॥ ೪ ॥ ದುರುಳಕಂತುವಿ ನೊಡನಿರೆ ಲೋಕದೊಳು ನಿನ್ನ । ಪರಪುಟ್ಟನೆಂಬರು ಕೋಗಿಲೆ ॥ ಧರೆಗೆಜನಕನಾದ ಗುರುಶಂಭುಲಿಂಗದ । ಚರಣಪಲ್ಲವಪಿಡಿ ಕೋಗಿಲೆ .... .... .... ॥ ೫ ॥

ಇತಿ ಶಿವಕಾರುಣ್ಯಸ್ಥಳ ಸಮಾಪ್ತ

ಮಂಗಲಮಸ್ತು.



ಶ್ರೀ ಗುರುಶಂಭುಲಿಂಗಾಯನಮಃ

## ಜೀವಸಂಬೋಧನಸ್ಥಲ

—:o:—

### ೧. ರಾಗ-ಧನ್ಯಾಸಿ

ನೆನೆವುದನುದಿನ ದುದಯ ಕಾಲದೆಚ್ಚರಿಕೆಯೊಳು । ವಿನುತ ಗುರುಮೂರ್ತಿಯ ನುಮೇಶನಂಘ್ರಿಯನು ನಿ । ನ್ನನುಬಲಿಕಸುವಿಚಾರದಿಂದೆ ನೇಮಕವಾಗಿ । ಮನುಜ ನಿನಗಹುದು ಮುಕ್ತಿ ॥ ಪ ॥ ಹೆಣ್ಣುಮಕ್ಕಳುಗೂಡಿ ನಿನ್ನೆ ಜಾಗರವಿರ್ದು । ಕಣ್ಣಿವೆಯು ನಿಕ್ಕಿದನಿತರೊಳು ಕನಸಾಗೆ ಪಲ । ವಣ್ಣದಾಕೃತಿಗಳನು ತಾನೆ ತಳೆದವನುಳಿದು । ತಿಣ್ಣವಹ ನಿದ್ರೆಯಲ್ಲಿ ॥ ಎಣ್ಣೆಬತ್ತಿಗಳರತಸೊಡರಂತೆ ಕೆಟ್ಟಿಂತು । ಹಣ್ಣಿ ಕೊಂಡೈದಿಹೆನೆ ಮೊದಲಂತೆ ಬಾಳುವಿಗೆ । ಬಣ್ಣಿಗೆಯ ಬಹು ಕೆಲಸಗಳನು ನಿಜವೆಂಬಂತೆ । ಬಣ್ಣಿಸಲ್ಕರಿದಿದೆಂದು ॥ ೧ ॥ ತನುವಿದೇನೆನ್ನೊಳೊಂದಿತೇತಕೆ ನಾನಾರು । ಜನನ ಮರಣಕ್ಕಾರೆ ನೆನ್ನೀಶರಿರದೊಳು । ನೆನೆವಾಲಿಸುವ ಸೋಂಕುವರಿ ವುಣುವ ವಾಸಿಸುವ ತನವಾರದೀನುಡಿಗಳು ॥ ಜನಿಪವೆಲ್ಲಿಂದಸುಗಳೇನ ನೆವ್ಮಿಹವೆನ್ನ । ನನುಗೊಳಿಸಿ ನಡಸುವವರಾರೇತರಿಂದೆ ಜಗ । ವಿನಿತು ಭೇದಾಕಾರದಿಂದುದಿಸಿತೆಂಬ ಭಾ । ವನೆಗಳನುಭಾವವಿಡಿದು ॥ ೨ ॥ ತಾಯಿ ಗರ್ಭದೊಳು ನಾನಿರ್ದವೇಳೆಯೊಳಲ್ಲಿ । ಹೇಯದತಿ ಬಾಧೆಗೆ ಮನಂನೊಂದು ಪೇಸುತಿಹ । ಪೇಯುವನು ಬಿಟ್ಟೀತಕಿಂತು ಪೊರಮಟ್ಟಿರುವೆ । ನಾಯುಷ್ಯ ವಿಹುದರೊಳಗೆ ॥ ಕಾಯಜವಿರೋಧಿ ಗುರುಶಂಭುಲಿಂಗವ ನೊಲಿಸಿ । ಮಾಯೆಯನು ಮೀರಿ ಭವವನು ಗೆಲುವೆನೆಂಬ ಸಮು । ದಾಯ ದಧಿಕಾರವೆನ್ನದು ಮರೆದೆನದಕಿನ್ನು । ಪಾಯವೇ ಧರ್ಮವೆಂದು ॥ ೩ ॥

### ೨. ರಾಗ-ಶಂಕರಾಭರಣ

ಸುಮ್ಮನೆಕಾಲವನು ಕಳೆದು ಸಾವುದುಚಿತವೆ । ನೆಮ್ಮನಿಜವನು ಮುಕ್ತಿವಡೆಯದೆ ಮನುಜನೀ ॥ ಪ ॥ ಧರೆಯನೆಲ್ಲವನು ಸಣ್ಣಿಸಿ ಧೂಳಿಮಾಡಲಾ । ಪರಮಾಣುಗ ಳೆನಿತನಿತು ದೇಹವನು ॥ ಧರಿಸುತೊಂದೊಂದು ಜೀವರಬಸುರೊಳು ಬಂದು । ಮರಳಿನೀನತ್ತ ತಿರುಗದಂತೆ ರಚಿಸದೆ ॥ ೧ ॥

ಜನನ ಮರಣ ರುಜೆ ಭಯ ಶೋಕ ಜರೆ ಬಡ । ತನ ಪರಸೇವೆ ಯಾಚನೆ ಹಾನಿ ಹಳಿವು ॥ ಮುನಿಸು ವಿಷಯರತಿ ವಿರಹ ಸಂತಾಪ ಚಿಂ । ತನೆಗಳು ನಿನಗಾಗದಿಹ ಬುದ್ಧಿಗಲಿಯದೆ ॥ ೨ ॥ ಹವಣಿಸಬಾರದ ಹಲವು ದುಃಖಂ ಗಳನ । ನವರತ ವನುಭವಿಸುವ ನಿನಗಿನ್ನು ॥ ಸವೆಯದಾನಂದವಹುದು ಶಂಭು-ಲಿಂಗದ । ಸುವಿಚಾರ ಭಜನೆ ಭಕ್ತಿಯೊಳೆಂಬುದರಿಯದೆ .... ॥ ೩ ॥

## ೩. ರಾಗ-ಶಂಕರಾಭರಣ

ನಿದ್ರೆ ಬಾರದಿದೆನ್ನ ಪರಿಭವ ದುಃಖಸ । ಮುದ್ರವೆನಿಸುವ ಸಾಯಸವ ನೆನೆನೆನೆದು ॥ ಪ ॥ ಪಾಪಾನುಗುಣದಿಂದೆ ಗಿಡ ಮರ ಕ್ರಿಮಿಗಳ ರೂಪಾಗಿ ಕೀಟ ಪತಂಗಾದಿಯಾಗಿ ॥ ಆ ಪಕ್ಷಿ ಕುಲವಾಗಿ ಮೃಗಜಾತಿಯಾಗಿ ಮೇ । ಲಾಪಶುರೂಪಾಗಿ ಬಹುಬಾಧೆಗಲಸಿ ॥ ೧ ॥ ಭೂತ ಪಂಚಕದ ರೂಪಾಗಿ ಯೋಷಧಿಯಾಗಿ । ಧಾತು ಸಪ್ತಕದ ರೂಪಾಗಿ ತಂದೆಯೊಳು ॥ ಮಾತೆಯ ಸೂತಕ ರುಧಿರರೂಪಾಗಿ ಮ । ತ್ತೀತನು ವಾಗುವಹ್ಸರಿಯನು ಕೇಳ ॥ ೨ ॥ ಬಾಲಕ ತರುಣ ಜರಾಜೀರ್ಣ ರೂಪಾಗಿ । ಮೇಲೆ ನರಕಿಯಾಗಿ ಬಳಕೀಕ್ರಮ ದೊಳು ॥ ತಾಳಲಾರೆನು ತನುವನು ಶಂಭುಲಿಂಗವೆ । ಪಾಲಿಸೆಂದೆರಗಿ ಬಿನ್ನೈಪೆ ಭೀತಿಯೊಳು ..... .... .... ॥ ೩ ॥

## ೪. ರಾಗ-ನಾದನಾಮಕ್ರಿಯೆ

ಆರು ತರಹರಿಸ ಬಹುದಡಿಗಡಿಗೆ ತೋರುವತಿ । ಘೋರ ಸಂಸಾರ ದನುತಾಪ ಸಂತತಿಯ ॥ ಪ ॥ ಮಾತೆಯುದರದೊಳು ಮೊಗ ವಿಡದಮುನ್ನ ಸುವಳಿವ । ಪೂತಿಗಂಧದ ಹೇಯುವನು ಸಿಡಿಲಸಮುದಾ ॥ ಘಾತಿಮಿಗೆ ಪೊಡೆದು ಕೆಡಪುವ ಸೂತಿ ವಾಯುವನು । ಯಾತನೆಯ ನಡುಗಡಲದೆನಿಪ ಜನನವನು. ॥ ೧ ॥ ಸಿರಿಯ ದೋಕುಳಿಯ ನಾಡುವ ಪರಿಯ ಬಾಲ್ಯವನು । ದುರುಳತೆಯೊಳೇನನರಿಯದ ಶಿಶುತ್ವವನು ॥ ಮರುಳು ಗೊಳಿಸುವ ಕಂತು ವಿನಕಾಟ ಮೊದಲಾದ । ದುರಿತಕುಲ ಬಂಧುವೆನಿಸುವ ಯೌವನವನು ॥ ೨ ॥ ನುಡಿಯ ಬಾರದ ಲಜ್ಜೆಗೊಡುವ ಜರೆಯನು ತನ್ನ । ನಡಸಿತೀರದ ಬಾಧೆ ಗೊಳಿಸಮರಣವನು ॥ ಜಡಿವ ಯಮಭಟರ ಕೋಪವನಿಂತು ಭವಭವದೊ । ಳಿಡೆವಿಡದೆ ಶಂಭುಲಿಂಗವೆ ಬಿಡಿಸು ನೀನಿದನು .... ॥ ೩ ॥

## ೫. ರಾಗ-ಮಧುಮಾಧವಿ

ಪಡೆವೆನೀನೆಂದಿಗೆ ಪರಮುಕ್ತಿ ಸುಖವನು । ಕೆಡುವಕಾಯದ ಮೋಹ ವನು ಮಾಣೆಮನುಜ ॥ ಪ ॥ ಮಲಮೂತ್ರ ಮಣಾವಿರ್ದ ನೆಲೆಯೊಳು ನಿಲೆ ನೆಂಬೆ । ಪಲವುಪೇಯದ ತಾಣವೆನಿಸು ಮಂಗದೊಳು ॥ ನೆಲಸಿ ವಿಷಯ ಸುಖವನು ಭೋಗಿಸುವೆನೆಂದು । ಸಲೆಮನವೆಳಸಿಹುದನು ಬಿಡೆಮನುಜ ॥ ೧ ॥ ಜಡ ದೃಶ್ಯ ಮಿತಿ ಪರಿಣತೆ ಭೂತಕಾರ್ಯತೆ । ವಿಡಿದು ಕನಸು ನಿದ್ರೆ ಯೊಳ ಗಿಲ್ಲವಾಗಿ ॥ ಕೊಡನಂತೆ ಬೇರೆನಿಸಿಹುದು ತಾನಲ್ಲವೀ । ಯೊಡಲೆಂಬ ಸುವಿ ವೇಕ ವನುಮಾಡೆ ಮನುಜ ॥ ೨ ॥ ಅನಿಮಿತ್ತವರಿಗಳೆನಿಪ ಕಾಮಾದಿಗಳಿಗೆ । ತನುವನೇಕವನಿತ್ತೆ ಭವಭವಂಗಳಲಿ ॥ ನಿನಗೊಂದು ದೇಹವಿದನು ಕೊಟ್ಟು ತಪವಾಂತು । ಘನಶಂಭುಲಿಂಗವಾಗಿರಲೊಲ್ಲೆ ಮನುಜ .... ॥ ೩ ॥

## ೬. ರಾಗ-ವಸಂತ

ಅಜ್ಞಾನಿ ಯಲ್ಲವೆ ನೀನುಜೀವನೆ । ಸುಜ್ಞಾನಿಯೆಂದು ನುಡಿವರೆ ॥ ಪ ॥ ಚೈತನ್ಯರೂಪ ನಾಗಿರ್ದು ಜಡಪಂಚ । ಭೂತದೇಹ ವಿದನೀನೆಂಬೆ ॥ ಪೂತ ನಿರ್ಮಲ ನಿಜತತ್ವಮಯನಾಗಿ । ಸೂತಕಾದಿ ವಿಧಿವಿಡಿದಿರ್ಪೆ ॥ ೧ ॥ ಮೂರ ವಸ್ಥೆಗಳೊಂದ ರೊಳಗೊಂದಿಲ್ಲ । ಮೂರವಸ್ಥೆಯನರಿವುತ ॥ ಬೇರೆ ಸಾಕ್ಷಿಕ ನಾಗಿರ್ದುನೀಸಂಸೃತಿ । ದೂರಿಗೀಡಾಗಿ ಬಳಲುವೆ ॥ ೨ ॥ ಚಿತ್ತೊಂದೆ ಯದು ಗುರು ಶಂಭುಲಿಂಗ ವೆಂ । ದುತ್ತಮ ಶ್ರುತಿ ಸಾರುತಿರೆ ॥ ಮತ್ತೆನೀನೋರ್ವ ನಲ್ಲದೆ ಬರಿದೆ । ಮೋಹಿಸುತಿರ್ಪೆ ನಾಮ ರೂಪವನು .... ॥ ೩ ॥

## ೭. ರಾಗ-ಶಂಕರಾಭರಣ

ಕಂಡು ಕೇಳಿ ಮತ್ತೆ ಮೋಹಿಪರೆ ಬಲ್ಲವರು । ಭೂಮಂಡಲದ ಭೋಗ ಪೂಗವ ನತಿಗಳೆಯದೆ ॥ ಪ ॥ ಪಡೆದವರೊಡನಾಡಿಗಳು ಬಗೆಗೊಳಿಸುವ । ಮಡದಿಯು ರೊಲವೀವತನುಜರೊಂದಿನಿಸು ॥ ಬಿಡಲರಿದೆನಿಪ ಬಂಧುಗಳಚ್ಚ ಸುಖಿಗಳು । ಕಡು ಜಾಣರುಗಳು ತಮ್ಮಿದಿರೊ ಳಳಿವುದನು ॥ ೧ ॥ ಬಲಿ ವಾಲಿ ಕರ್ಣ ಕೌರವ ರಾಮ ರಾವಣ । ನಳ ನಹುಷ ರಘು ಭೀಮ ಬಲಭದ್ರ ಸಗರ ॥ ಕಲಿಪಾರ್ಥ ಕೀಚಕ ಶಿಶುಪಾಲ ದಶರಥ । ರೊಳಗಾದನೇಕರೆಲ್ಲರ

ಹಾನಿಕಥೆಯನು ॥ ೨ ॥ ಸೊಡರಿನ ಸುಡುವತನವ ನರಿಯದೆ ಬಂದು । ಕೆಡುವ
ಪುಳುವಿನ ವೋಲಖಿಳವಸ್ತುಗಳ ॥ ಕೆಡುವ ದೋಷವನುವಿಚಾರಿಸಿ ವಿಬುಧರು
ಬಿಡದಿಹುದನುಚಿತ ವೆಲೆಶಂಭುಲಿಂಗವೆ ॥ .... ॥ ೩ ॥

## ೮. ರಾಗ-ಸೌರಾಷ್ಟ್ರ

ಮಾಡಲುಚಿತವೆ ಮನುಜಾ । ಮಾಡಲುಚಿತವೆ । ಕೂಡೆ ಬಾಧೆ
ಬಹಳ ವಿಹುದ । ನೋಡಿ ಧನದ ಲೋಭವಿದನು ॥ ಪ ॥ ಧನವ ಗಳಿಸುವಲ್ಲಿ
ಮೊದಲು । ತನುವಿಗತಿ ಬಳಲ್ಕೆ ನಡುವೆ । ಮನಕೆ ದಿಗಿಲುಮಿಗಿಲು ಮರಸಿ ।
ಜನರು ನೋವುವೆಡೆಯೊಳಿಂತು ॥ ಜನಿಪುದಳಲು ಮತಿಗೆವೆಚ್ಚ । ವಿನಿತನೆಸಗೆ
ಕೆಡಲು ಕಡೆಗೆ । ತನಗೆ ಕಂಟಕಂಗಳಾವ । ದಿನ ದೊಳೊದಗಿ ಬಪ್ಪುವಾಗಿ ॥ ೧ ॥
ಉರಗ ವಹ್ನಿ ಮರುಳು ಮೋಸ । ವರಸು ಕಳ್ಳರನುಜರು ಜೆಗು । ಳಿರಿಸೆ ನೆಲ
ದಿವೆಲ್ಲ ವಳುಪಿ । ಸರಿದು ತಾನೆ ಪೋವುದಾಗಿ ॥ ಪಿರಿದು ಧನವ ನೆರಪುವಂಗೆ ।
ದುರಿತ ಕೋಟಿವುದಿದು ಪಲವು । ಪರಿಯನೋವ ನಿಹಪರದೊಳು । ತಿರುಗು
ವಂತೆ ಮಾಳ್ಪುದಾಗಿ ॥ ೨ ॥ ಇಂತು ವಿಷಸಮೇತ ಮಧುವಿ । ನಂತೆ ಸೊಗಸು
ದೋರಿ ನಿಖಿಳ । ಚಿಂತೆ ಗೊಡುವ ಧನದ ಕಾಂಕ್ಷೆ । ಯಿಂ ತೊರೆದು ಸುಜಾಣ
ನಾಗಿ ॥ ಮುಂತೆ ಶಂಭುಲಿಂಗ ದೊಲವ । ನಿಂತು ಪಡೆಯೆ ಶರಣತತಿಗೆ ।
ಸಂತಸದೊಳು ಸವೆವುದುಂಬು । ದೆಂತುತನು ವಿದಳಿವುದಾಗಿ ॥ ೩ ॥

## ೯. ರಾಗ-ಭವುಳಿ

ಮನುಜ ನೀನಖಿಳ ಭೋಗಾಶ್ರಯಂಗಳ ಮಿಗಿಲ । ನನುಕರಿಸಿ ನೋಡಿ
ಮತ್ತೀನೆಲದೊಳು । ಘನದುರಾಶೆಯನು ಮಾಡಿದರೆ ನಿನ್ನಂತೆ ಜಡ । ರೆನಿಸು
ವವರುಂಟೆ ಭಾವಿಸಿ ನೋಡಲು ॥ ಪ ॥ ಶಿವ ಶಕ್ತಿ ವರ ಸದಾಶಿವ ನೀಶ್ವರನು
ವಿದ್ಯೆ । ತವೆಕಾಲ ಕಲಾ ನಿಯತಿ ಯುವಿದ್ಯೆಯು । ಸವೆಯುದನುರಾಗ ಪುರುಷ
ಪ್ರಕೃತಿ ಗುಣ ಬುದ್ಧಿ । ಕವಿದಹಮು ಚಿತ್ತ ವಿಜ್ಞಾನೇಂದ್ರಿಯ ॥ ವಿವಿಧ
ಕರ್ಮೇಂದ್ರಿಯ ರವಾದಿತನ್ಮಾತ್ರನಭ್ಯ। ಪವಮಾನ ಶಿಖಿ ವಾರಿ ವಿಶ್ವಂಭರ ।
ಅವರ ಪಂಚೀಕರಣ ಪಂಚವಿಂಶತಿ ತತ್ವ । ನಿವಹ ದೊಬ್ಬುಳಿ ಯವರ ಕಾರ್ಯ
ದೊಳಗೆ ॥ ೧ ॥ ಪಲವಜಾಂಡಂಗ ಳವರೊಳಗಿ ದೊಂದಂಡ ವಿದ । ರೊಳಗೆ
ಪದಿನಾಲ್ಕು ಲೋಕ ವವರೊಳಗಿ । ದಿಳೆಯೊಂದು ಬಳಿಕೇಳು ದ್ವೀಪಂಗಳವ

ರೊಳಗೆ । ಕಳೆದಾರನೊಂದು ಜಂಬೂ ದ್ವೀಪವು ॥ ತಿಳಿಯೆನವಖಂಡ ವವರೊ ಳಗೆಂಟ ನುಳಿದೊಂದು । ಬಳಿಕ ದೈವತ್ತಾರು ದೇಶಗಳವ । ರೊಳಗೊಂದನೇ ಕಪುರ ವವರೊಳೊಂದದರೊಳಗೆ । ನಿಳಯಕೋಟಿಗ ಳವರಗೋಟೆನಲ್ಲಿ ॥ ೨ ॥ ನಿನಗೊಂದು ಮನೆಯದಕೆ ಬಲುದಾಯಿಗರಭಾಗ । ವನುವಾಗಿ ಮಿಕ್ಕುದೊಂ ದಲ್ಪ ವೆನಿಪ । ಮನೆಯದರೊಳಗೆ ಮಕ್ಕಳಳಿಯರೆಡೆ ವನೆಗಳೆದು । ವನಿತಾದಿ ಗೂಡಿ ನೀನಿರುವ ನೆಲವು ॥ ಇನಿತಲ್ಲದೂಟೆ ಪರಿಕಿಪೊಡದಕ್ಕಾಗಿ ಕೆಂ । ಮನೆ ಸಾವ ಬಲುಗೇಡನಿದನು ಮರೆದು । ತನುಮನಂಗಳನು ನೋಯಿಸದೆ ಶಂಭು ಲಿಂಗದ । ಘನಸುಖಪದವನೊಲಿಸುನೀಬಲ್ಲಡೆ .... ॥ ೩ ॥

## ೧೦. ರಾಗ-ಮಧುಮಾಧವಿ

ಮನುಜ ನೀನೆಡೆವಿಡದನುದಿನವೆಳಸುವ । ವನಿತೆಯೊಳೆಣಿಸ ಲೊಂದಿ ನಿಸು ಲೇಸಿಹುದೆ ॥ ಪ ॥ ಮೊಲೆಯು ಮಾಂಸವನು ಮುಡಿಯು ನವಿರನು ದೇಹ ದೆಲುವನು ಮುಸುಕಿದ ಪಸಿಯ ತೊವಲನು ॥ ಪಲವೆಡೆಯಣ ನರವನು ಬೇರೆ ಬೇರೆ ನೀ । ನಲಸದರಸಿ ನೋಡು ಲಲನೆ ಮೋಹನವೆ ॥ ೧ ॥ ಕರಣದೊಳಳಿವ ಮಲವನು ಕಾಂತಿಯೊಳು ಮುಂ । ಬರಿವ ಶೋಣಿತವನು ಪೊಸಜವ್ವನ ದೊಳು ॥ ಪರಿಣಾಮವನು ಚಿತ್ತದೊಳು ಕಪಟವನು ಬಿ । ತ್ತರಿಸಿ ಭಾವಿಸೆ ನಾರಿ ನಿನಗೆ ಶೋಭನವೆ ॥ ೨ ॥ ಪಡೆವ ಸಾಯಸವನು ನಡುವಲ್ಪಸುಖವನು ಕಡೆಯನಿರಸವನು ಕೆಡುವತನುವನು ॥ ಬಿಡದೆಬರಿಯರಂಜನೆಯ ಸತಿರತಿ ಗಾಗಿ । ಕೆಡದಿರೆಲವೊ ಶಂಭುಲಿಂಗವನುಳಿದು .... ॥ ೩ ॥

## ೧೧. ರಾಗ-ತೆನುಗು ಕಾಂಬೋಧಿ

ವನಿತೆಯರೊಲವಾವ ನೆಲೆಯೆಂದು ಮೋಹ । ವನು ಮಾಡುವರು ಮುಕ್ತಿವಡೆಯದೆ ನರರು ॥ ಪ ॥ ಕಲೆಯನರಿದು ಕೂಡಿ ಬಯಸಿದುಚಿತ ವಿತ್ತು । ಚೆಲುವನೆನಿಸಿ ನಿರತವನಾಂತು ॥ ಒಲಿಸಿದನೊಡನಿರುತಿರ ಲನ್ಯರತಿಗೆ ಹಂ । ಬಲಿಸುವರಂಬುಜಾಕ್ಷಿಯ ರೆಡೆವಿಡದೆ ॥ ೧ ॥ ಸವಿನುಡಿ ಸೊಬಗು ಬಿನ್ನಣ ವನುಕೂಲತೆ । ನವರೂಪು ಜವ್ವನದಿಂಪು ದೋರಿ ॥ ತವಕಗುಂದದೆ ತವೆಮಿಗೆ ಮೆಚ್ಚಿಸಿದನ ಹಿಂ । ಗುವರು ಹೆಂಗಳು ಬೇರೆ ಮನದೊಳಗೆಳಸಿ ॥ ೨ ॥ ಸುಳಿಗಾಳಿ ಸುರಚಾಪ ಕನಸು ನೀರಿನಲಿಪಿ । ಪೊಳೆವ ಮಿಂಚಿವನೊಮ್ಮೆನಿಜ

ವೆನಿಸಿ ॥ ಕೊಳಲಹು ದರಿದಬಲೆಯರತಿ ಯದರಿಂದ । ಸಲೆ ಶಂಭುಲಿಂಗದರ್ಶನ
ಗೈಯುತಿರದೆ .... .... .... ॥ ೩ ॥

## ೧೨. ರಾಗ-ಭೈರವಿ

ಸೋಲದಾತನೆ ವಿರಕ್ತನು । ಮನದೊಳಗೆ । ಬಾಲೆಯರ ಸಿಂಗರವನೆ । ಕಂಡು ॥ ಪ ॥ ತಳಿರಡಿಯ ಸಣ್ದೊಡೆಗಳ । ಚಲುವಿನೊ । ಬ್ಬುಳಿಯಹ ನಿತಂಬಭರದ । ನಡೆಗೆ ॥ ಬಳುಕುವತಿ ಬಡನಡುವಿನ । ತೆಳುವಸ್ತ್ರ । ನಳಿತೋಳ ನಲ್ಲಳನುವ । ಕಂಡು ॥ ೧ ॥ ನಸುದೋರ್ಪ ಬಲ್ಮೊಲೆಗಳ। ಲಾವಣ್ಯ। ರಸವೊಸರ್ವ ಮುದ್ದುಮೊಗದ । ಕಾಂತಿ ॥ ಪಸರಿಸುವ ನಿಡುಗಂಗಳ । ಜವ್ವನದ । ಮಿಸುನಿವಣ್ಣದ ಮೈಯಳ । ಕಂಡು ॥ ೨ ॥ ಚೊಲ್ಲೆಯದ ಬಳಲು ಮುಡಿಯ । ತೊಳಪ ಕೆಂ । ಬಲ್ಲು ಕಂಬುಗ್ರೀವದ । ಸೊಗಸ ॥ ನುಳ್ಳ ಚಂದುಟಿಯ ವೊಗರ । ನುಗುವ ತೆಳು । ಗಲ್ಲದಸಿಯಳ ರೀತಿಯ । ಕಂಡು ॥೩॥ ಮುರಿದುನೋಡುವ ನೋಟದ । ಮುಗುಳ್ನಗೆಯ । ಸರಸದಿನಿಗಲೆಯ ನುಡಿಯ। ಸನ್ನೆ ॥ ವೆರಸಿ ತೋರುವ ಭಾವದ । ಮೋಹಮುಂ । ಬರಿವ ಸೊಬಗಿನ ಸುದತಿಯ । ಕಂಡು ॥ ೪ ॥ ಮನವನಳ್ಕಿರಿವುದೊಂದು । ಭಯವಿಲ್ಲ । ದನುಕೂಲ ನೀರೆ ತನ್ನ । ನೆಳಸಿ ॥ ವಿನಯವಾಂತಿರಲಳುಪದೆ । ನಿಜಧೈರ್ಯ ವನು ಶಂಭುಲಿಂಗದಿಂದ । ಪಡೆದು ॥ .... .... ॥ ೫ ॥

## ೧೩. ರಾಗ-ಕಾಂಬೋಧಿ

ಸುತನ ಸೊಗಸು ಮಿಗಿಲೆನ್ನದೆ ಚಿಂತೆಗಳ । ಮತಿವಂತರರಿದು ಮೋಹವನುಳಿದಿಹುದು ॥ ಪ ॥ ಮೊದಲು ಪುತ್ರನ ವಾಂಛೆಯೊಳುಚಿಂತೆ ಗರ್ಭವಾಗ । ಲದು ಕೆಡದಿರಲೆಂಬ ಕಡುಚಿಂತೆ ಪಡೆವಾ ॥ ಹಡನುರುತರಚಿಂತೆ ಗ್ರಹರೋಗದುಪಹತಿ । ಯೊದಗುವ ಚಿಂತೆ ಪೊರೆಯುವ ಚಿಂತೆ ಪಿರಿದು ॥ ೧ ॥ ಬಾಲನ ದುರುಳತನದ ಚಿಂತೆ ಯೌವನದ । ಕಾಲದೊಳ್ಕಂತು ಕಂಗೆಡಿಪ ಚಿಂತೆ ಯದರ ॥ ಮೇಲೆ ವಿವಾಹವೆಸಗುವ ಚಿಂತೆ ಬಾಳುವೆಗೆ । ಪೇಳಿ ಬುದ್ಧಿಯನು ಕಲಿಸುವ ಚಿಂತೆ ಬಲುಹು ॥ ೨ ॥ ಬಳಿಕ ದೈವಾಧೀನದಿಂದಳಿಯಲತಿ ಚಿಂತೆ । ತಿಳಿಯಲಾತ್ಮಜರಿಂದೆ ಬಹುಚಿಂತೆಗಳನು ॥ ತಳೆವುದೀ ಪರಿ ತಥ್ಯವಹುದಾಗಿ ಶಂಭುಲಿಂಗ । ದೊಳು ಪ್ರೀತರೆನಿಸಿ ಚಿಂತಿಸರು ಬಲ್ಲವರು ॥ .... ॥ ೩ ॥

## ೧೪. ರಾಗ-ಸೌರಾಷ್ಟ್ರ

ಬಿಡಬೇಕು ಬಲುಹಿಂದೆ ಬರಿದೆ ತನ್ನಿರವನು ಕೆಡಿಸುವ । ಕಾಮವಿದನು ಕಂಪ ಯೋಗಿ ॥ ಪ ॥ ಸುಗುಣ ಸಂತತಿಯನು ನಿಗಮಾದಿ ವಿಧಿಯನು । ಮಿಗ್ಗೆ ತಪವನು ತನಗಹ ಸಿದ್ಧಿಗಳನು ॥ ಜಗದ ಪೂಜ್ಯತೆಯನು ಸೊಗಸುವೀ ತನುವನು । ಬಗೆಯ್ಯೆ ಕಾಮವೆ ಬಣ್ಣವಳಿವುದರಿಂದ ॥ ೧ ॥ ಹಿರಿಯರೊಲವನು ರಾಜರ ಮನ್ನಣೆಯನು ಸ । ತ್ಪುರುಷರ ಭಯಭಕ್ತಿಯನು ಲೋಕದವರ ॥ ವರವಂದನೆಯನು ತನ್ನುರುತ್ತೇಜ್ಜವನು ಕಷ್ಟ । ತರದ ಕಾಮವೆ ಕಡೆಗಾಣಿಪುದರಿಂದ ॥ ೨ ॥ ತನಗೆ ಮುಂದೊದಗುವ ಮುನಿದೇವಗಣಪದ । ವನು ರುದ್ರೇಶ್ವರ ಸದಾಶಿವ ಭಾವನೆಯನು ॥ ಘನಶಂಭುಲಿಂಗವಾಗಿಹ ಮುಕ್ತಿ ಸುಖವನು । ಜನಿಸಿದೀ ಕಾಮವಿಲ್ಲೆನಿಪುದರಿಂದ .... ॥ ೩ ॥

## ೧೫. ರಾಗ-ನಾದನಾಮಕ್ರಿಯೆ

ಯಾಕೆ ವಿರತಿಯನುಳಿದು ಹೀನ ವಿಷಯವನೊಲಿವೆ । ಕಾಕುಮಾನಸವೆ ನಿನಗದರೊಳೇನುಂಟು ॥ ಪ ॥ ಚಲುವಾಲ ಚಲ್ಲಿ ಸುರೆಗುಡಿವಂತೆ ಮಧುರಾನ್ನ । ದೊಲವರತು ಪಳೆಮಾಂಸವನು ಭಕ್ಷಿಪಂತೆ ॥ ಗೆಲುವು ಬರಲೊಲ್ಲದೆ ಮಹಾ ರುಜೆಯನುಂಬಂತೆ । ಸಲೆ ತತ್ವ ಮತಿಗೆಡಿಸಿ ಮರವೆಯೊಳು ಸುಳಿವೆ ॥೧॥ ದಾತಕ್ಕೆ ಹಾರ ಮಣಿಗಳನು ತೆಗೆದಿಡುವಂತೆ । ಸಾರಕತ್ತುರಿದೊಳೆದು ಕೆಸರ ದೊಡೆವಂತೆ ॥ ಮೇರುವನು ಬಿಟ್ಟು ಗದುಗನು ಪಡೆದು ಬಾಳ್ವಂತೆ । ಚಾರು ಪರಮಾರ್ಥವನು ಹಿಂಗಿ ಪುಸಿವಿಡಿವೆ ॥ ೨ ॥ ಶ್ರುತಿಯ ಸುವಿಚಾರವನು ಜರಿದು ತರ್ಕಿಸುವಂತೆ । ವ್ರತನಿಷ್ಠೆಗೆಟ್ಟು ನೊಣನಗಿದು ತಿಂಬಂತೆ ॥ ಗತಿಯೊಳುತ್ತಮ ಶಂಭುಲಿಂಗವಾಗಿಹ ಮುಕ್ತಿ । ಯತಿಶಯವನುಳಿದು ಲೌಕಿಕದೊಳೊಡವೆರೆವೆ .... .... .... ॥ ೩ ॥

## ೧೬. ರಾಗ-ಆಹರಿ

ಬೇಡ ಬೇಡಲೆ ಮನವೆ ವಿಷಯದಾಸೆ । ಮಾಡಿ ಕೆಡದಿರು ಸಾರಿದೆ ॥ಪ॥ ಅಳಿ ಮೀನು ಗಜ ಪತಂಗ ಮೃಗವೆಂಬಿ । ವಳಿವ ವೊಂದೊಂದರೊಳು ॥ ಬಳಸಿದೈದಿಂದ್ರಿಯದ ಗುಣದೊಳು । ಸುಳಿಯಲೆಂತುಳಿವೆ ನೀನು ॥ ೧ ॥ ಕಾಸಿದ ಪೊಂದೊಡಿಗೆ ನಂಜಿನ । ಬೀಸು ಹೂರಿಗೆ ಜಾರೆಯ ॥ ಲೇಸಿವನನು

ಕರಿಸೆ ಕಡೆಯೊಳು । ಘಾಸಿಯಾಗುವೆ ತಪ್ಪದು ॥ ೨ ॥ ಪೊಲ್ಲವೆನಿಪ ಮಾಯಾ ಮಯಭೋಗ । ದಲ್ಲಿ ದುಃಖವೆ ನೋಡಲು । ಬಲ್ಲೊಡೆ ಶಂಭುಲಿಂಗವನ ಭಜಿ । ಸೆಲ್ಲ ಸುಖವನ್ನೈದುವೆ ॥ .... .... ॥ ೩ ॥

## ೧೭. ರಾಗ–ಕುಂತವರಾಳಿ

ಬೇಡಬೇಡ ಭೋಗದೊಡನಾಟ । ನೋಡು ನಂಜುವೆರಸಿದ ಸವಿಯೂಟ । ಕೇಡು ಕಡೆಯೊಳಿಹುದದು ಮಾಯೆಯ ಕೈಮಾಟ ॥ಪ॥ ಮೊದಲು ಸಾಹಸದೊಳತಿ ದುಃಖವನನುಭವಿಸಿ । ಮುದವಣು ಮಾತ್ರವನಿತ್ತು ನಡುವಿಹುದು ತವಿಸಿ । ಒದವಿ ಕಾಣಿಪುದದು ಕಡೆಯೊಳು ಹೇಸಿಕೆಯ ವಗಡಿಸಿ । ಹದನಿದು ವಿಷಯುವ ನೆಳಸಲಹುದೆ ಲವಲವಿಸಿ ॥ ೧ ॥ ಕನಸು ಬಿಸಿಲುದೊರೆ ಸುರಧನು ಸುಳಿಗಾಳಿ । ಘನತತಿ ಮಿಂಚಿನ ಪರಿಯಂತಿರೆ ವಿಷಯಾಳಿ ॥ ಜನಿಸಿ ಕೆಡುತಿಹುದಿದನಿಳೆಯೊಳು ಕಂಡು ಕೇಳಿ । ಮನವಿಡೆ ಫಲವೆ ಭಸಿತದೊಳು ಹವಿಯನು ಬೀಳಿ ॥ ೨ ॥ ಈ ತೆರದಿಂದಖಿಳದ ನಿರಸವನು ತಿಳಿದು । ಭೀತಿ ಸದವ ರಳಿಯಾಸೆಗಳನು ಮಿಗೆ ಪಳಿದು ॥ ಖ್ಯಾತಿವಿಾಗಿಲು ಶಂಭುಲಿಂಗದ ನಿಜವಾಗುಳಿದು । ನೇತಿಗಳೆಯದಾನಂದದೊಳಿರು ಮೋಹವಳಿದು ॥ ೩ ॥

## ೧೮. ಶ್ರೀರಾಗ–ದೇಶಿ

ಆಡುತ್ತೈದಳೆ ಮಾಯೆಯೆಂಬ ಕಾಮಿನಿ ಬಿಡದೆ । ನೋಡಿ ಬಲ್ಲವರು ಸಂಸಾರ ನಾಟಕವ ॥ ಪ ॥ ಶಿವಶಕ್ತಿಯೆಂಬ ರಂಗದೊಳು ನರನಾಗದಾ । ನವದೇವತಾದಿ ಪೆಸರಿನತನುಗಳೆಂಬ । ವಿವಿಧರೂಪಿನ ಬೊಂಬೆಗಳಿಗಾತ್ಮರೆಂಬ ಸೂ । ತ್ರವನು ಹವಣಿಸಿ ಮೋಹದೊಡನೆ ಮೇಳೈಸಿ ॥ ೧ ॥ ಮೂರವಸ್ಥೆಯ ಮರೆಯೊಳಿರ್ದು ತಾನಲ್ಲಲ್ಲಿ ಯಾರುವಿಕೃತಿಗಳು ನವಗುಣೋನ್ನತಿಗಳೆಂಬ ॥ ಬೇರು ವಡೆದಿಹಭಾವರಸಚಿತ್ರ ರಚನೆಕೆಲ । ಜಾರದಂತಭಿನಯಿಸಿ ತೋರಿನಿಯತಿಯೊಳು ॥ ೨ ॥ ಪರಮುಕ್ತರೆಂಬ ಕೋವಿದರೊಂದುಗೂಡಿ ಪರ । ತರ ಶಂಭುಲಿಂಗವೆಂಬತುಳ ಭೂಭುಜನು ॥ ಪರಿವಿಡಿದು ತನ್ನ ಸನ್ನಿಧಿಯೊಳಿಂತೆಸೆವ ವರ । ಪರಿಯ ನವಿಕಾರದಿಂದೀಕ್ಷಿಸುತ್ತಿರಲು .... ॥ ೩ ॥

## ೧೯. ರಾಗ-ಕಾಂಬೋಧಿ

ಕಂಡು ಸಂಸ್ಕೃತಿಯನಿದಿಂದ್ರಜಾಲವೆ ನೆಲೆ। ಗೊಂಡುದೆಂದರಿತುಕೊ ನಿನ್ನೊಳಗೆ ॥ ಪ ॥ ಹುರುಳಿಲ್ಲದಿಹ ಬಿಂದುವದೀ ಗರ್ಭದೊಳು ನಿಂದೀ। ಪರಿಯ ಶರಿರವೆನಿಸಿ ಬಂದು ಬೆಳೆದು ॥ ಪರಿವಿಡಿದುಂಡು ನುಡಿದು ನೋಡಿ ಕೇಳಿಮು। ತ್ತಿರದಡಗುವ ವಿಸ್ಮಯವಿದನು ॥ ೧ ॥ ತೊಗಲತಿತ್ತಿಗೆ ಸಮನಾದ ಕಾಯು ದೊಳು ಕಂ। ಡಿಗಳು ತೆಗೆದಿರೆ ಪಲವವರೊಳಗೆ ॥ ಸುಗತಿಯನುಳ್ಳಮಾರುತ ನಿರ್ದು ತೊಲಗದೆ। ಸೊಗಸುದೋರುವ ಸೋಜಿಗವನು ಕಂಡು ॥ ೨ ॥ ಧರೆ ವಾರಿ ಶಿಖಿ ವಾಯು ನಭವೆಲ್ಲವನು ಮೀರಿ। ಪರಿಪೂರ್ಣ ವೆನಿಸುವಾತ್ಮನಿ ಗಿಂತು ॥ ಕರಣ ಸಂಕ್ರಮಣವಾದೊಡನೆ ಖಂಡಿತವೃತ್ತಿ। ದೊರೆಕೊಂಡ ನವ ವಿಚಿತ್ರವನು ॥ ೩ ॥ ಬೇರೆ ಬೇರೆನಿಸಿ ನಾನಾವಿಷಯದೊಳೊಂದಿ। ತೋರಿ ಮೋಹಿಸಿ ಕೂಡೆ ಕೆಡುತಿರುವ ॥ ಮೂರವಸ್ಥೆಯನೊಂದು ದಿನದೊಳೈದುವ ಹಂಸ। ನಾರಡಿತನ ದಚ್ಚರಿಯನು ಕಂಡು ॥ ೪ ॥ ಭವದುಃಖ ಜೀವನುತ್ತಮ ಗುರುಕೃಪೆಯನೊ। ಪ್ಪುವ ಪುಣ್ಯ ಫಲದಿಂದೆ ಪಡೆದು ॥ ಹವಣಿಸದಾನಂದ ಮಯನಾದ ಶಂಭುಲಿಂ। ಗವೆ ತಾನೆನಿಸುವ ಚೋದ್ಯವನು ॥ ॥ ೫ ॥

## ೨೦. ರಾಗ-ಪಹಡಿ

ಕೇಡನುಳ್ಳದೆಂದು ವಿಶ್ವವಿಷಯದೊಳು। ಮಾಡಲುದಾಸೀನವ ನದೀ ಗಳೆ ಮಹಾ ವಿರತಿ ॥ ಪ ॥ ಧರೆಗೋವಿನಡಿ ಮೇರುಗಿರಿ ಯೊಂದುಮೊರಡೆ ಯೇಳು। ಶರಧಿವಚ್ಚರೆ ದಶದಿಕ್ಕುದೇಹಳಿ ॥ ನೆರೆದ ಜನವೇಚಿತ್ರದಿರ ವಜಾಂ ಡವೆ ಚಂಡು। ಸುರತರು ನಿಂಬಭೂಜವಾಗಲದೆ ವಿರತಿ ॥ ೧ ॥ ಜಗವಿದು ತೃಣ ವಜ ಹರಿ ಸುರ ಪದವಣು। ವಗಣಿತ ಸಿದ್ಧಿ ನಾಟಕದ ರಚನೆ ॥ ಬಗೆ ವೋಡಿ ತನು ಭಿನ್ನಘಟ ವಂಗನಾದಿ ಭೋಗ। ದೊಗುಮಿಗೆ ನಿರಸವೆನಿಸೆ ವಿರತಿ ॥ ೨ ॥ ನಿರುಪಮಾದ್ವಯ ನಿತ್ಯಸುಖಬೋಧ ರೂಪನಾದ। ಗುರು ಶಂಭು ಲಿಂಗವೆ ತಾನಾಗಿ ಮಿಕ್ಕಿನ ॥ ವರಗತಿಗಳೆಲ್ಲವನು ಹೇಯವೆಂಬ ಮತಿ। ದೊರೆ ದಚಲಿತಮಾಗಲದೇ ವಿರತಿ ॥ .... .... ॥ ೩ ॥

## ೨೧. ರಾಗ-ಸೌರಾಷ್ಟ್ರ

ಗಣಿತವಿದನು ಕೂಡಿ ಕಳೆಯಬಲ್ಲಾತನೆ। ತ್ರಿಣಯನೆನಿಪನು ಲೆಕ್ಕಿಗರ ಮಧ್ಯದೊಳು ॥ ಪ ॥ ಒಂದನು ಮೂರಾಗಿ ಪೆಚ್ಚಿಸುತವರೊಳ। ಗೊಂದೊಂ

ದರೊಳಗೆರಡೈದನೀರೈದು ॥ ಒಂದರೊಳೊಂದು ನಾಲ್ಕನು ಕೂಡುತದನು ಮ। ತ್ತೊಂದೊಂದನೆರಡು ಮೂರೆನಿಸಲೊಂದಾಗೆ ॥೧॥ ಒಂದರೊಳೆಂಟಾರು ದೋರಲವರ ನಡು। ವೊಂದರೊಳೆರಡಾರು ಗೊಂಡಡೇ ಳೆನಿಸೆ॥ ಮುಂದೆರ ಡೊಂದಾಗಲೊಂದೊಂದೊಂಭತ್ತಾಗು। ತ್ತೊಂದು ಪೂರಾರುಳ್ಳದ್ದಾಗೆ ಕಡೆ ಯೊಳು ॥೨॥ ಒಂದು ತಾನಾ ಶಂಭುಲಿಂಗವಾದೊಂದರೊ। ಳೊಂದಾಗು ತ್ತೈದು ನೆರ-ವೆ ದಳಿದಿದನು॥ ಒಂಬು ಸೂತ್ರಸೊಳುಪಾಧ್ಯರು ಗೂಡಿ ಗಣಿ ಸಿದೊ। ಡೊಂದುಳಿದುದೆ ಸೊನ್ನೆ ಯಿಲ್ಲಬೇರೊಂದು .... ॥೩॥

## ೨೨. ರಾಗ-ಪಹಡಿ

ಆ ಹದತಪ್ಪಿದೊಡಿಂತು ತಪ್ಪುವವಿವು। ದೇಹಿಗಳಿಗೆ ನೋಡು ರಮಣಿ ರನ್ನೆ ॥ಪ॥ ಮದುವೆ ಕಾಲೋಚಿತದಿನಿವಾತು ಕನಸಿನೊ। ಳುದಿಸಿದ ಸಿರಿ ಸುದತಿಯು ಸತ್ಕಲೆ॥ ಒದವಿದ ಯೌವನದಿಂಪು ವಿಷಯಸುಖ। ವದು ನೇಮ ದೇರ-ಮಾರುಗಳೆಂಬಿವು ॥೧॥ ಬೆಳೆವಭೂಮಿಯಬೆದೆ ಲಂಚದೆಡೆಯ ಪೊನ್ನು ಪೊಳೆಮಿಂಚಿನೊಳುತೋರುವ ಭಾವನೆ॥ ಸುಳಿವೆಲರೊಳು ಬಂದ ಸೌರಭ ವರಿವುದು॥ ಪಳುವಿನ ಪೊನಲ ಕಾಲುವೆಯೆಂಬಿವು ॥೨॥ ಪರಸಿ ನೇಮದೊ ಳೊಂದು ವೇಳೆ ಮಾಡುವದಾನ। ವರಸಿನಸೇವೆ ಪರೋಪಕಾರ॥ ಕರಗಿದೆರ ಕವದು ರಸಪಾಕಪರಿಣತೆ। ಗುರುಶಂಭುಲಿಂಗದೊಲುಮೆಯೆಂಬಿವು ॥೩॥

ಇತಿ ಜೀವಸಂಬೋಧನಸ್ಥಲ ಸಮಾಪ್ತ

ಮಂಗಳಮಸ್ತು

———

ಶ್ರೀ ಗುರುಶಂಭುಲಿಂಗಾಯನಮಃ

# ಅಥ ನೀತಿಕ್ರಿಯಾಚರ್ಯಾ ಸ್ಥಲ

## ೧. ರಾಗ-ಸೌರಾಷ್ಟ್ರ

ಶ್ರೀಗುರು ವಚನದಿಂದಧಿಕ ಸುಧೆಯುಂಟೆ। ರಾಗದಿಂಬೇರಿನ್ನ ಭವ ಬೀಜಮುಂಟೆ ॥ ಪ ॥ ನರಜನ್ಮದಿಂದಿಹದೊಳು ಮಿಗಿಲುಂಟೆ । ಕರಣ ವಿಜಯದಿಂದೆ ಕಲಿತನಮುಂಟೆ ॥ ಧರೆಗೆ ಯಾಚನೆಯಿಂದೆ ಲಘುತರಮುಂಟೆ । ಪರಬೊಮ್ಮದರಿವಿನಿಂದುಳಿ ಜಾಣ್ಮೆಯುಂಟೆ ॥ ೧ ॥ ಕಡುಲೋಭದಿಂದೆ ದುರ್ಗುಣವನ್ಯಮುಂಟೆ । ಪಡೆದಸವಾದದಿಂ ಮರಣಮಿನ್ನುಂಟೆ ॥ ಎಡೆವಿಡದಿಹ ಸತ್ಯದಿಂ ತಪಮುಂಟೆ । ಕೆಡಿಸದಿಪ್ಪಭಿಮಾನದಿಂ ಧನಮುಂಟೆ ॥ ೨ ॥ ತನುವಿದನುಳಿದಿಂದ್ರ ಜಾಲದಾಟಗಳುಂಟೆ । ನನೆಗೋಲಿನಿಂದೆ ನೋಯಿಸುವಲಗುಂಟೆ ॥ ವಿನಯತನಹುದರಿಂದುಪಚಾರಮುಂಟೆ । ತನಗಿಂದ ಪ್ರಿಯವಾದ ವಿಷಯವೊಂದುಂಟೆ ॥ ೩ ॥ ಶಮೆಯಿಂದೆ ಮುಕುತಿ ಸಾಧನ ಪೆರತುಂಟೆ । ವಿಮಲಮಾನಸದಿಂದೆ ಶುಭತೀರ್ಥಮುಂಟೆ ॥ ಕ್ರಮತಪ್ಪಿ ನಡೆವುದರಿಂ ಕಷ್ಟಮಿನ್ನುಂಟೆ । ಮಮಕಾರದಿಂದೆ ಮಿಕ್ಕಿನ ಬಂಧಮುಂಟೆ ॥ ೪ ॥ ಕರುಣದಿಂದತಿಶಯುವಹ ಧರ್ಮಮುಂಟೆ । ವಿರತಿಯಿಂದಿತರ ಸಂಪದ ಸುಖಮುಂಟೆ ॥ ವರಭಕ್ತಿಯಿಂದೆ ಸಚ್ಚರಿತನೊಂದುಂಟೆ । ಗುರುಶಂಭುಲಿಂಗದಿಂ ಪರದೈವಮುಂಟೆ ॥ .... .... .... ॥ ೫ ॥

## ೨. ರಾಗ-ದೇಶಿ

ಎಂತೊಲಿವನೋ ತನಗಿನ್ನೆಂತೊಲಿವನೋ । ಎಂತೊಲಿವನೋ ಕರಣತ್ರಯದ ದೋಷವಿರೆ । ಕಂತು ಕಾಲ ಪುರವೈರಿ ಗುರುಶಂಭುಲಿಂಗ ॥ ಪ ॥ ಪರವಧುವಿನಕೂಟ ವನ್ಯರವಿತ್ತಾಪ । ಹರಣ ವಭಕ್ಷ್ಯಸೇವನೆ ಹಿಂಸೆ ॥ ಪರಿವಿಡಿದೀ ನಾಲ್ಕು ಪಾತಕಂಗಳು ಮಾ । ಮರ ಜನ್ಮವೀಯೆ ಕಾಯದೊಳೊಂದಿರೆ ತನಗೆಂತೊಲಿವನೋ ॥ ೧ ॥ ಪುಸಿ ಯನುಚಿತ ನಿಷ್ಠುರತ್ವ ಪೈಶೂನ್ಯತೆ । ಮುಸುಕಿದೀನಾಲ್ಕು ದೋಷಂಗಳು ॥ ಪಶುಪಕ್ಷಿ ಮೃಗ ಯೋನಿಯೊಳಗೆಳದೊಯ್ದುಪು । ಟ್ಟಿಸುವ ವಚನದೊಳೆಡೆವಿಡದಿರೆ ತನಗೆಂ

ತೊಲಿವನೋ ॥ ೨ ॥ ಜನರೊಲಿಯದಕಾರ್ಯದೆರಕ ವನಿಷ್ಟ ಚಿಂತನೆ । ಯ
ಧನಸತಿಯರ ಕಾಂಕ್ಷೆ ॥ ಎನಿಸುವೀನಾಲ್ಕು ದುರಿತ ಜನನವೀಯೆ । ಮ
ದೊಳೊಂದಿರೆ ಶಂಭುಲಿಂಗ ತನಗೆಂತೊಲಿವನೋ ॥ .... .... ॥೩

## ೩. ರಾಗ-ನಾದನಾಮಕ್ರಿಯೆ

ಆವಬಲವಿಡಿದಳುಕದಖಿಳ ದುರಿತವನೆಸಗಿ । ಜೀವಿಸುವೆ ಮಾಜ
ಸುಶಿಲೆ ಮಾನವ ॥ ಪ ॥ ಸಿರಯವಿಲ್ಲವೆ ಜವನಸೀಮೆದೆಗೆದುದೆ ಮೃತ್ಯು
ಪರಮಃಧರ್ಮವನೆಪಿಡಿದುದೆ ಯಮನ ಭಟರು ॥ ಕರುಣ ರಸಮಯ
ಮರವೆಯೆ ಚಿತ್ರಗುಪ್ತರಿಗೆ । ಚರಿಸನಿಂದುದೆ ಕಾಲವದು ಪರೀಕ್ಷಿಸಲು ॥೧
ಕೇಡ. ಕಡೆಗಂಡುನಿಂದುದೆ ರುಜೆಗಳಿಹವನುಳಿ । ದೋಡಿದವೆ ಜರೆಯುನೊ
ಲೊಳು ಗೂಡದಂತೆ । ಮಾಡಿದರೆ ಶಿಕ್ಷೆಯನು ಭವಮರಣವಲಸಿದವೆ
ಕೋಡಿಹೋದುದೆವಯೋಗತಿ ವಿಚಾರಿಸಲು ॥೨॥ ಚಿಂತೆಬಂದಡಿಗಡಿಗೆ ಮು
ಕದತಿಸುಖವನೋ । ರಂತೆ ನೇಮಿಸಲು ಕಲಿತುದೆವಿಧಿ ವಿಕಾರ ॥ ಸಂತತಿ
ನಗಲಿದವೆ ಸಕಲವಿಷಯಾಳಿ ನಿನ । ಗಿಂತು ಗುರುಶಂಭುಲಿಂಗನನೋ
ದಿರಲು ॥ .... .... ॥೩

## ೪. ರಾಗ-ಕಾಂಬೋಧಿ

ಒಂದರಿಂದನರ್ಥಕೋಟಿ ಬಂದು ಬಂದಡಸುತಿಹು । ದೆಂದೊ
ಗುಣಾವಳಿಗಳೊಂದಿರಲಿನ್ನೇನಹುದೋ ॥ ಪ ॥ ಮದ ಲೋಭ ಮಾ
ಮೋಹ ಕದನ ಕರ್ಕಶ ಯೌವ । ನದ ಸೊಂಪು ಸೊಬಗು ಸಂಪದ ಸ
ಲೋದಯ ॥ ಪುದಿದಲಾವಣ್ಯ ರೂಪು ಮದನವಿಕಾರ ಸಿದ್ಧಿ । ಸಿದ ವ
ವಶ್ಯ ವರ್ಗ ದೊದವನೀತಿಗಳೊಳು ॥ ೧ ॥ ಅವಿವೇಕ ಹಿಂಸೆ ಪರಯುವತಿ
ರೊಲುಮೆ ಸಂ । ಭವಿಸಿದಕೋಪ ಕಡುತವಕ ಮಾತ್ಸರ್ಯ ॥ ವಿವಿಧಕ
ಪೃತ್ತಿಕವಿದಮಾಯಾವಿಲಾಸ । ಹವಣಿಸದಾಸೆ ಕರ್ಮನಿವಹವಿಂತಿವರೊಳು ॥
ಕುಮತಶಾಸ್ತ್ರಾನುಗತಿ ವಿಮತಿ ದೇಹದೊಳತಿ । ಮಮತೆ ಸಂಸೃತಿಯ
ಭ್ರಮ ದುರಾತ್ಮಕರ ॥ ಸಮರತಿ ಶಂಭುಲಿಂಗದಮಳಚರಣಭಕ್ತಿ । ವಿ
ಖತೆ ವರವೇದಾಗಮ ದೂಷಣಂಗಳೊಳು ॥ .... .... ॥೩

## ೫. ರಾಗ-ಶಂಕರಾಭರಣ

ತನ್ನೊಳು ಸುಖದುಃಖ ಮೋಹಾದಿಗಳು ತೋರ । ಲುನ್ನಿಪುದವನೆಲ್ಲ ಗುಣಮಯವೆಂದು ॥ ಪ ॥ ಒಡಲು ತಾನೆಂದರಿವುನೇ ಮಂದಮತಿ ಮೋಸ । ಜಡಭಾವ ನಿದ್ರೆ ನಿಷೇಧಕರ್ಮಾಳಿ ॥ ಬಿಡದಲಸತೆ ಚಪಲತ್ವವಿಡಿದು ವೃಥಾ । ಕೆಡುವ ತನವನೆ ಕೂಡಿಹುದು ತಾಮಸ ಗುಣ ॥ ೧ ॥ ಮದ ಲೋಭ ಮೋಹ ಮಾತ್ಸರ್ಯ ನಿಷ್ಠುರ ಕರ್ಮ । ಸುದತಿಯರಾಶೆ ಕಪಟರೀತಿ ಕೋಪ ॥ ಕದನ ಕರ್ಕಶವೃತ್ತಿ ಕಡುಶೋಕ ನಿರ್ದಯ । ಮೊದಲಾದ ಕಲುಷವಿವನರಿಯೆ ರಾಜಸಗುಣ ॥ ೨ ॥ ಕರುಣ ವಿನಯ ತಪೋಃ ವಿರತಿ ವಿವೇಕ ವಿ । ತರಣ ನಿರ್ಧಾರಣ ದಮೆ ಧರ್ಮ ಧೈರ್ಯ ॥ ನಿರಭಿಮಾನತೆ ಸತ್ಯ ಪರವಿದ್ಯೆ ಯೆಂಬಿವೆ। ಗುರುಶಂಭುಲಿಂಗ ದೊಲುಮೆಯ ಸಾತ್ವಿಕಗುಣ ॥ .... .... ॥ ೩ ॥

## ೬. ರಾಗ-ಭವುಳಿ

ತಡೆವುದಾಗದು ತನಗಗಣಿತ ವಿಷಯದೊ । ಳೆಡೆಯಾಡುವತಿಚಪ ಲತೆಯ ಚಿತ್ತವನು ॥ ಪ ॥ ಧರೆಯನಜಿನದಂತೆ ಸುರುಳಲಹುದು ಮೇರು । ಗಿರಿಯ ನಂಗುಲಿಯ ಕೊನೆಯೊಳಾನಲಹುದು ॥ ಶರಧಿಯ ನೊಮ್ಮೆಪಾನವ ಮಾಡಲಹುದು ಸೈ । ತಿರಿಸ ಬಾರದು ನಿಮಿಷಾರ್ಧ ವೀಮನವ ॥ ೧ ॥ ಮೊಲನ ತಲೆಯೊಳು ಕೋಡನು ಕಾಣಲಹುದಭ್ರ । ದೊಳು ಸೌರಭದ ವಾರಿಜವನೆತ್ತ ಲಹುದು ॥ ಬಳಸಲಹುದು ರವಿಕಿರಣೋದಕವ ನಸ । ದಳವರೆಘಳಿಗೆಸಿಲ್ಲಿಸಲು ಮಾನಸವ ॥ ೨ ॥ ಮಾರವಿರೋಧಿ ಮಾಯಾಮೋಹ ರಹಿತ ನ। ಪಾರಮಹಿಮ ಶಂಭುಲಿಂಗದೊಲವನು ॥ ಭೂರಿ ಪುಣ್ಯದ ಫಲದಿಂದೆ ಪಡೆಯದೆ ಸಂ । ಸಾರಿ ಸುಮ್ಮನೆ ಗೆಲಲರಿದು ಹೃದಯವ ॥ .... .... ॥ ೩ ॥

## ೭. ರಾಗ-ಹಿಂದೋಳವಸಂತ

ನೋಡಿ ಬಲ್ಲವರು ಸುಖಭೋಗದಲಿಯಾಸೆಯೊಡ । ಗೂಡಿ ಕೆಡದಿರಿ ಭಾಗ್ಯವಿಲ್ಲದಾಗದು ಬಿಡದೆ । ಮಾಡಿಯದರಿಂದೆ ಶಿವಧರ್ಮ-ಕತಿಯನೆ ಬೇರೆ ಬೇಡ ಬಹುಕೋಟಲೆಗಳು ॥ ಪ ॥ ಕುಲ ಜಾತಿ ರೂಪು ಯೌವನ ಗಾಡಿ ಗರುವತನ । ಬಲುಪರಾಕ್ರಮ ಬಂಧುಜನರೊಲುಮೆ ನಿಪುಣತ್ವ । ಛಲ

ನೀತಿ ವಿದ್ಯೆ ವಿನಯಾಲಾಪ ಶಾಸ್ತ್ರಕವಿತಾರಚನೆ ಕುಶಲಂಗಳು ॥ ಸಲೆಕೌಚ
ಕೃಷಿ ಸೇವೆ ಯಾಚನೆಯಲಂಕಾರ । ಗೆಲವಮಲಗುಣ ವಾದ ವಶ್ಯವಮಣಿ
ಮಂತ್ರತತಿ । ಫಲಿಸಲರಿಯವು ಪುಣ್ಯದನುಕೂಲವಿಲ್ಲದಿರೆ ತನಗೆ ಮನವೆಳಸಿ
ದಂತೆ ॥೧॥ ದಿವಿದುರ್ಗ ವಮರಸಂಕುಳಸೇನೆ ಗುರುಮಂತ್ರಿ । ಪವಿಯ
ಪಿಡಿವಾಯುಧ ವಜ್ರಾಚ್ಯುತರ ಬಲಹು ಖಷಿ । ನಿವಹದಾರೈಕೆ ಯೈರಾವ
ತವೆಯಾನ ಸಂಜೀವನವೆ ಮಂತ್ರಸಿದ್ಧಿ ॥ ಸವೆಯದಮೃತಾಹಾರ ವಿನಿತು
ಮೊದಲಿರ್ದು ವಾ । ಸವನಾಜಿಯೊಳು ಮುರಿದನಸುರರಿಗೆ ಭೀತಿಯಿಂ ।
ದವಿರತಂ ದೈವ ಬಲಮೊಂದಿಲ್ಲದಿರೆ ಹಾನಿಯಹುದಾವನಾದೊಡಿಂತು ॥೨॥
ಗಿರಿಯ ಶಿಖರದೊಳು ಕಾಂತಾರದೊಳು ನಡುಗಡಲೊ । ಳುರಿಯ ಮಧ್ಯ
ದೊಳು ರಣಭೂಮಿಯೊಳು ಶತ್ರುಗಳ । ನೆರವಿಯೊಳು ಜೋರವಿಷಭೂ
ತಾದಿ ಭೀತಿಯೊಳು ಪರದೇಶದಂಡಲೆಯೊಳು ॥ ದೊರೆಮುಳಿದ ವೇಳೆಯೊಳು
ಬಲು ಕಂಟಕಂಗಳೊಳು । ಹರಣದಳವಿನೊಳು ನಿದ್ರಾಲಸ್ಯ ಮರವೆತನ ।
ಗಿರೆ ಸಾಹಸವನುಳಿದ ಕಾಲದೊಳು ಕೂಡೆ ಪೊರೆವುದು ಪೂರ್ವ ಸುಕೃತ
ಮಿರಲು ॥೩॥ ಘಾಲಿಯೊಂದರರಥ ವಹಿತಪನ್ನಗನಹೊರಜೆ । ಯೇಳು
ವಾಜಿಗಳು ಸಾರಥಿಹೆಳವನಾದರುಣ । ನಾಲಂಬರಹಿತ ವಹಮಾರ್ಗ ವತಿ
ಬಲದ ಮಂದೇಹರುಗಳೊಡನಾಹವ ॥ ಮೇಲೆ ತಾನೋರ್ವನೇ ಪಗಲೊಂದ
ರೊಳು ರವಿ ವಿ । ಶಾಲದಭ್ರದಕಡೆಗೆ ದಾಂಟುವನು ದೈವಾನು । ಕೂಲ
ಮಿರೆ ವಿಷಮಸಾಧನದಿಂದೆ ತನಗಹುದು ಲೋಕಹಿತವಾದ ಕೀರ್ತಿ ॥೪॥
ಇದನರಿತು ವನಿತಾದಿ ವಿಷಯದೊಳು ಕೊರತೆವಡೆ । ಯದೆ ಸಕಲ ಸಂಪದವ
ನಿಹಪರದಿ ಒಯಸುವವರು । ಪದುಳದಿಂದನ್ಯರಿಗೆ ಹಿತವಾಗಲೆಂಬುವರು ನಿಜ
ಮೋಕ್ಷವೆಳಸುವವರು ॥ ಮುದವಲರಿ ಶಂಭುಲಿಂಗದ ಪಾದಪಂಕಜವ । ನೊ
ದವಿ ಸಲೆಕಾಮ ವರನಿಷ್ಕಾಮವೆಂಬುಭಯ । ವಿಧಿವಿಡಿದು ಭಜಿಸೆ ಬಾಹ್ಯಾ
ಭ್ಯಂತರದೊಳ. ಪರಮಾನಂದ ಸಿದ್ಧಿಯಹುದು ॥ ॥೫॥

## ೮. ರಾಗ-ಸೌರಾಷ್ಟ್ರ

ಚಿಂತಿಸದಿರು ಸುಖದುಃಖದೆಡೆಯೊಳು ನೀ । ನಿಂತು ತಿಳಿದ ಬಳಿಕೆಲೆ
ಜೀವನೆ ॥ ಪ ॥ ರೋಗಾದಿಗಳ ಬಾಧೆಗಳು ಬಂದು ತಾವೆ ನೀ । ನಾಗಿ ಯೆಳಸ
ದಿರ ಲುಂಡೆಸುವಂತೆ ॥ ರಾಗವಿಲ್ಲದೊಡೆ ಪೋಗದು ನಿನಗಹಸುಖ । ಪೂಗ

ವಿಂತಿದು ನಿಜವಹುದರಿಂದ ॥ ೧ ॥ ಬರಲುಳ್ಳದುಃಖವ ನನುಭವಿಸದೆ ಬೇರೆ । ಪರಿಹರವದಕಿಲ್ಲ ವಿಹುದೆಂದೊಡೆ ॥ ಪಿರಿದು ಸಾಹಸಿಗಳೆನಿಪ ರಾಮ ನಳ ಪಾಂಡವರು । ನೋಯಲೇಕೆ ನೀ ನದನರಿದು ॥ ೨ ॥ ಜನನ ಮರಣದಾಗು ಹೋಗಿನೊಳೊಡೆತನ । ವಿನಿತಿಲ್ಲವಾಗಿ ನಿನ್ನೊಳು ತೋರ್ಪವು ॥ ತನುಭೋಗ ನಿಕರವಂತಹುದು ಸೈತಿರು ನೀನು । ಘನಶಂಭುಲಿಂಗದಾಧೀನನಾಗಿ ॥ ೩ ॥

## ೯. ರಾಗ-ಸೌರಾಷ್ಟ್ರ

ಮನುಜ ನಿನಗಾದ ನೋವಿಗೆ ಚಿಂತಿಸುವರೆ ಮುಂ । ನಿನವರಿಗಾದ ಬಾಧೆಯನೋಡಲು ॥ ಪ ॥ ಹರಿಗಾದ ಹಾನಿಯ ನಜನಿಗಾದೆಡರನು । ಸುರಪತಿಗಾದ ಲಜ್ಜೆಯನು ಪಂಚ ॥ ಶರನಿಗಾದುರಿಯ ನಿಂದುವಿಗಾದ ಕುಂದನು । ವರುಣನಿಗಾದೂಣೆಯನು ನೋಡಲು ॥ ೧ ॥ ರವಿಗಾದ ಭವಣೆಯ ನಹಿಪತಿಗಾದ ಭಾ । ರವ ದಕ್ಷನಿಗಾದ ಕೊರತೆಯನು ॥ ಹವ್ಯವಾಹನನಿಗಾದನುಗೇಡಂತಕನೆನಿ । ಸುವನಿಗಾದುರದೇರುವನು ನೋಡಲು ॥ ೨ ॥ ಮುನಿವಶಿಷ್ಠನಿಗಾದ ಶೋಕವನಾ ರಾಮ । ಜನಕನಿಗಾದಸುಭಂಗವನು ॥ ಸನಕಾನುಜನಿಗಾದ ಜಡಜೀವತೆಯನು ವ್ಯಾ । ಸನಿಗಾದ ಬಾಹುಬಂಧವ ನೋಡಲು ॥ ೩ ॥ ಬಲಿ ಹರಿಶ್ಚಂದ್ರರಿಗಾದ ಪಾಡನು ನಹುಷ । ನಳರಿಗಾದುಪಹತಿಯನು ಸಗರ ॥ ಕುಲ ಕಾರ್ತ್ಯವೀರ್ಯನಿಗಾದ ನಾಶವ ನತಿ । ಬಲ ಪಾಂಡವರಿಗಾದಳಲ ನೋಡಲು ॥ ೪ ॥ ಈಪರಿಯೊಳವರಿವರೆನ್ನದೊಡಲು ಗೊಂ । ಡಾ ಪುರುಷರಿಗಾದ ದುಃಖವನು ॥ ರೂಪಿಸಲರಿದಾಗಿ ಗುರುಶಂಭುಲಿಂಗದ । ಶ್ರೀಪಾದವನು ನೆನೆ ಸುಖವಹುದು ॥ .... .... ॥ ೫ ॥

## ೧೦. ರಾಗ-ನಾದನಾಮಕ್ರಿಯೆ

ಭಾಪು ವಿಧಿ ನಿನಗೆ ಬಲ್ಲಿದರು ಬೇರಾರುಂಟು । ರೂಪುಗೆಡಿಸಿದೆ ಮಹಾಮಹಿಮರೆಲ್ಲರನು ॥ ಪ ॥ ಹರಿಯನೀರೈದು ಪರಿಭವದೊಳಗೆ ಬಳಲಿಸಿದೆ । ಸರಸಿಜೋದ್ಭವನ ನಡುದಲೆಯೊಂದನಳಿದೆ ॥ ಸುರುಚಿರಸುಧಾಕರನ ತನುಗುಂದಿಸಿದೆ ದೇವ । ವರನ ಮೈಯೊಳು ಲಜ್ಜೆವನೆಯನೊಂದಿಸಿದೆ ॥ ೧ ॥ ವೇದವನು ವಾಜಿಯೆನಿಸಿದೆ ಬಾದರಾಯಣನ । ವಾದದೊಳು ತೋಳ ಶೂಲಗಿಸಿದೆ ದಿನಮಣಿಗೆ ॥ ಬಾಧೆವಡಿಸಿದೆ ರಾಹುವಿಂದೆ ಫಣಿ ಗಜ ಪಕ್ಷಿ । ಗಾದ ಸಾಹಸಕೆಡಿಸಿ ಸೆರೆಯೊ

ಳೊಂದಿಸಿದೆ ॥ ೨ ॥ ಏಳು ಧರಣಿಯ ನಾಳುವರಸನಂ ಪೊಲೆಯನಿಗೆ । ಯಾಳು ಮಾಡಿದೆ ಪಂಚಸಾರ್ವಭೌಮರಿಗೆ ॥ ಬಾಳದಿರಿಕೆಯನಿತ್ತೆ ಶಂಭುಲಿಂಗೈಕ್ಯ ರೊಳು । ಕೀಲಿಸಿದೆ ಪ್ರಾರಬ್ಧ ಭೋಗನೀತಿಯನು .... ॥ ೩ ॥

ಇತಿ ನೀತಿಪಾದಃ

---

## ೧೧. ರಾಗ-ಭೈರವಿ

ಕಾಲ ಕರ್ಮ ಮಾಯೆಯೆಂಬಿವನು ಗೆಲಲಹುದು ವಿ । ಶಾಲಮತಿಗಳು ಶಿವಭಕ್ತಿಯುಕ್ತರಾಗಿರೆ ॥ ಪ ॥ ಪದಿನಾರು ವರುಷದಾಯುಷ್ಯವದು ತನಗೆ ತೀ । ರಿದವೇಳೆಯರಿದು ಮಾರ್ಕಂಡೇಯ ಮುನೀಶ್ವರನು ॥ ಮದನವೈರಿಯ ಮರೆ ಯಹೊಕ್ಕು ಮೇಲಂತಕನುಗ್ರ । ಕದನವನಿರದೆ ಜಯಿಸಿ ನಿತ್ಯನಾದನಾಗಿ ॥೧॥ ನುಡಿಯಬಾರದ ದೋಷಿಯೆನಿಸುವ ವಿದಳನು । ಕೆಡೆದು ಸಾವೆಡೆಯೊಳಾಹಾ ರವೆಂದು ತನಗೆ । ಬಿಡದುಂಬ ನರಕದುಃಖವನು ಸೋಂಕದೆ ಮುಕ್ತಿ । ಪಡೆ ದಿಳೆ ಪೊಗಳೆ ಸುಖದೊಳಿರಲದರಿಂದ ॥ ೨ ॥ ಮಾಯೆನೀನು ನಿನಗೆ ವಂದಿಸೆನು ನಾನೆನಲು ಕಾ । ತ್ಯಾಯನಿ ತನ್ನಂಶವನು ಬೇಡೆ ಭೃಂಗಿಬಿಸುಟು ॥ ಕಾಯ ಜಾರಿ ಶಂಭುಲಿಂಗದಿಂದೆ ಬೇರೊಂದಂಘ್ರಿಯನು । ಸಾಯಸವಿಲ್ಲದೆ ನಿಜ ದೊಳು ಪಡೆದಿರಲು ॥ .... .... ॥ ೩ ॥

## ೧೨. ರಾಗ-ಭೈರವಿ

ದೇಶ ಕಾಲ ವಸ್ತುಗಳಿಂದೀಶನೊಲಿವನು ಕರ್ಮ । ಪಾಶವಳಿದು ನಿಜ ವಹುದಿಂತು ನೋಡಿದರೆ ॥ ಪ ॥ ಕಾಶಿಯಲ್ಲಿ ಜಾರವಿಪ್ರನು ಸತಿಯೊಳೋರ್ವಳ ನೀಚ । ವಾಸದ ಸುರೆಯ ಭಾಂಡದೊಳು ಸಾಯಲವನು ॥ ಮೋಸವಿಲ್ಲದಾ ಪೆಸರಿನಿಂದೆ ಲಿಂಗವೆನಿಸಿ ವಿ । ಲಾಸವಚ್ಚಳಿಯದೆ ಪೂಜ್ಯತೆವಡೆದಿರಲು ॥ ೧ ॥ ನೀತಿಗೆಟ್ಟು ಹೀನಮಾನಿನಿಗೆಮೆಚ್ಚಿ ತನಗೆ ಸಂ । ಜಾತ ಸುತೆಯರನೆ ರಮಿಸಿ ಸುಕುಮಾರನು ॥ ಪೂತ ಶಿವರಾತ್ರಿಯೊಳು ನೋಡಿ ಲಿಂಗದಂಘ್ರಿಯನು । ಖ್ಯಾತಗಣನಾಥನಾಗಿ ಸುಖದಿರುತಿರಲು ॥ ೨ ॥ ಅಡವಿಯೊಳಗೆ ಬಿದ್ದ ಕಡು ಪಾಪಿಶಬರನ । ಸುಡುಗಾಡ ಬೂದಿಗಾಲ ಶುನಿ ಘಣೆದುಳಿಯೆ ॥ ತಡೆಯದ ವನು ಶಂಭುಲಿಂಗದ ಕರುಣದಿಂದೆ । ಪಡೆದು ಬಿಡದೆ ಮುಕ್ತಿವನಿತೆ ಗೂಡಿರಲು ॥ .... .... .... ॥ ೩

## ೧೩. ರಾಗ-ತೋಡಿ

ಸದರವಲ್ಲವೆ ತಿಳಿಯೆ | ಸದರವಲ್ಲವೆ | ಮದನವೈರಿ ತನ್ನವರ್ಗೆ | ಪದುಳದಿಂದ ಕೊಡುವ ಮುಕ್ತಿ ||ಪ|| ಕಳವಿಗೆಂದು ಬಂದು ತನ್ನ | ನಿಳಯದೊಳಗೆ ಕೆಡುವ ಸೊಡರ || ಬೆಳಗಲವನಿಗವುಳತೆಯನು | ತಳುವದೀಶನಿತ್ತನಾಗಿ ||೧|| ಮರಣಗಾಲದಲ್ಲಿ ಹೊಲನ | ಹರಗಣೆನುತ ಕಳವಳಿಸಿದ || ನರನಿಗಭವನೊಲಿದು ಸಾರ | ತರದ ಸೊಗಸುಗೈದನಾಗಿ ||೨|| ನೆಲಕೆ ಬಿದ್ದುದೊಂದುಲರನು | ಸಲಲಿ ತನಗೆನಲ್ಕೆ ಶೂಲಿ || ನಲಿದು ಶ್ವೇತನಿಗೆ ವಿಲಾಸ | ವಲರೆ ಮನ್ನಿಸಿದನಾಗಿ ||೩|| ಕಲ್ಲಿಲಿಟ್ಟು ಕಾಲಿಲೊದೆದು | ಬಿಲ್ಲಿನಲ್ಲಿ ಪೊಯ್ದು ಬಿಟ್ಟ | ಯಲ್ಲಿ ನಡಸಿದವರ ನಂದ | ದಲ್ಲಿ ಹರನಿರಿಸಿದನಾಗಿ || ೪ || ಶಲಭಜಾಯಿಲಾನೆ ಪಂದಿ | ಮೊಲ ನಿರುಂಪೆ ಹದ್ದು ಹಕ್ಕಿ || ಗಳನು ಶಂಭುಲಿಂಗವಮರ | ಕುಲಕೆ ಮಿಗಿಲೆನಿಸಿದನಾಗಿ || ........ || ೫ ||

## ೧೪. ರಾಗ-ಶಂಕರಾಭರಣ

ಸಂಗತಮಾಗಿ ಜೋಡಿಸಿ ಪೇಳಿದುತ್ತರ | ದಿಂಗಿತವರಿತು ನಡೆವನೆ ಬಲ್ಲವನು ||ಪ|| ದುರಿತದೊಳಧಿಕವಾವುದು ನಿಂದೆ ಜೀವನ | ವೆರಸಿದ ಮರಣವಾವುದು ಚಿಂತೆ ಕೆಡುವ || ಶರಿರದ ಸಫಲವಾವುದು ಪರಹಿತ ಕಿಂ | ಕರವೃತ್ತಿಯಾವುದು ತನಗಳಿಯಾಸೆ ||೧|| ಅಸುವಿನೋರಗೆ ಯಾವುದೊಂದಭಿಮಾನ | ವೆಸೆವ ಜಾಗರಣವಾವುದು ಸದ್ವಿವೇಕ || ಶಶಿಯ ಶೀತಳವಂದವಾವುದು ಶಮೆ ಸುಧಾ | ರಸಧಾರೆಯಾವುದು ಮಿಗೆ ಮೃದುವಚನ || ೨ || ತುಳವದೇ ಮಾಳ್ಪದಾವುದು ಭವಹರಣ ವ | ಗ್ಗಳಿಕೆ ಯಾವುದು ಸುಚರಿತ್ರ ಮೀಮನುಜ || ಕುಲಜನನದ ಲಾಭವಾವುದಾನಾರೆಂದು | ತಿಳಿವುದು ವೀರವಾವುದು ಕಂತುವಿಜಯ || ೩ || ಗುರುತನವಾವುದಿಳೆಯೊಳಯಾಚನೆ ಪರ | ತರ ಸುಖವಾವುದಖಿಳ ಭೋಗವಿರತಿ || ವರಗುಣವಾವುದುದಾರ ವಚ್ಚಳಿಯದಾ | ಭರಣವಾವುದು ಬಗೆಗೊಳಿಸುವ ವಿದ್ಯೆ || ೪ || ಮತಿಗೆ ಮಂಗಳವೀವುದಾವುದುತ್ತಮಸಂಗ | ವತಿನಿಷ್ಠೆ ವಿಡಿವುದಾವುದು ಹರಸಮಯ || ಹಿತವಾವುದಿಹಪರದೊಳು ಧರ್ಮರತಿ ಸದು | ಗತಿಯಾವುದೆನೆ ಶಂಭುಲಿಂಗವಾಗಿಹುದು ||೫||

## ೧೫. ರಾಗ-ನಾದನಾಮಕ್ರಿಯೆ

ಎಲ್ಲರೊಡನೆ ವೈರವಿಲ್ಲದೆ ಕೂರ್ಪುದೆ । ಚಂದಮಮ । ತಲ್ಲಣಿಸದೆ ನೀತಿಯಲ್ಲಿರಲಾರ್ಪುದೆ । ಚಂದಮಮ ॥ ಪ ॥ ಹಿತವಿ ದಹಿತವೆಂದತಿಶಯಿಸಿ ತಿಳಿವುದೆ । ಚಂ । ಶ್ರುತಿವಿರಹಿತವಾದ ಮತವ ತಾನುಳಿವುದೆ ॥ ಚಂ ॥ ಮತಿ ಯೊಳೊಗೆದ ದುರ್ವಿಕೃತಿಯ ನಚ್ಚಳಿವುದೆ । ಚಂ । ಸತಿ ಸುತಾದಿಗಳನಿತ್ಯತೆ ಯೆಂದು ಪಳಿವುದೆ । ಚಂ ॥ ೧ ॥ ಕೊರತೆಯನಾನದೆಚ್ಚರೊಳೊಂದಿ ಚರಿ ಪುದೆ । ಚಂ । ಪರರದುರ್ಗುಣಗಳ ಮರೆವುತಾದರಿಪುದೆ । ಚಂ ॥ ಮರುಗದಾ ಪತ್ತಿನೊಳುರೆ ತರಹರಿಪುದೆ । ಚಂ । ತೊರೆದುದರಲ್ಲಿ ಮತ್ತೆರಗದುತ್ತರಿ ಪುದೆ । ಚಂ ॥ ೨ ॥ ದುರಿತವೆಲ್ಲನಿತನಾದರು ನೀತಿಗಳೆವುದೆ । ಚಂ ॥ ದೊರಕ ಲೇನದರೊಳು ಪರಿಣತೆ ದಳೆವುದೆ । ಚಂ ॥ ಕರಣವ ನಖಿಳಸಂಸರಣದಿಂ ಸೆಳೆ ವುದೆ । ಚಂ । ವರಪುಣ್ಯಲತೆಯ ನಾವರಿಪಂತೆ ಬೆಳೆವುದೆ । ಚಂ ॥೩॥ ಭವರಿಪು ಮರಳದಂಡವನೊಂದಿ ಗೆಲ್ವುದೆ । ಚಂ । ಜವನಧಾಳಿಯಕೆಡಿಸುವ ಭಕ್ತಿಗ ಲಿವುದೆ । ಚಂ ॥ ಶಿವಪದ ಧ್ಯಾನಲಕ್ಷ್ಯವ ನೋಡಿನಲಿವುದೆ । ಚಂ । ತನೆತನ್ನ ನಿಜವನರಿವ ಯುಕ್ತಿಗಲಿವುದೆ । ಚಂ ॥೪॥ ದುರುಳ ಕಂತುವಿನ ಕಾತುರವನ ತಡೆವುದೆ । ಚಂ । ವಿರತಿ ವಜ್ರದಿ ಮೋಹಗಿರಿಯ ನುಗ್ಗೊಡೆವುದೆ । ಚಂ ॥ ಶರಣರಂಘ್ರಿಯೊಳಹಂಕರಿಸದೆ ಕೆಡೆವುದೆ । ಚಂ । ಗುರುಶಂಭು ಲಿಂಗದಿಂದುರೆ ಮುಕ್ತಿ ಪಡೆವುದೆ । ಚಂದಮಮ ॥ ........ ........ ॥೫॥

## ೧೬. ರಾಗ-ಶಂಕರಾಭರಣ

ಜಾಣನು ಲೌಕಿಕ ಪರಮಾರ್ಥವೆರಡನು । ಮಾಣದೆ ಕೂಡಿ ನಡಿಸುತಿ ಹನಿಂತು ॥ಪ॥ ತರುಣಿಯ ಮೊಲೆಯೊಂದ ನುಣ್ಣುತಲಣುಗನನ್ಯ । ಕರದೊ ಳುಳಿದ ಕುಚಾಗ್ರವ ನೋಽವುವಂತೆ ॥ ನರಜನ್ಮ ವಿಡಿದಿಹ ಭೋಗಾನುಭವ ದೊಳು । ಪರಲೋಕ ಗತಿಯ ಸಾಧನದೊಳೊಂದಿಹನು ॥ ೧ ॥ ಕೊಳನ ಹೊಕ್ಕರೆಯೊಡಲಿನ ತಂಪು ಬಿಸಿಲಿನ । ಜಳವನು ಮಿಕ್ಕನೈಯೊಳು ಕಾಣ್ಬ ನಂತೆ । ತಿಳಿವಿನ ಸುಖವನು ವಿಷಯ ಬಾಧೆಯನು ಸಂ । ಗೊಳಿಸುತೆ ಸಮ ಯಮೊಂದರೊಳೈಗುತಿಹನು ॥೨॥ ಪರನ ಸಂಗದ ಸೊಗಸನು ಮರೆಯದೆ ನಿಜ । ಪುರುಷನೊಳೊಂದುವ ಪುಂಶ್ಚಲಿಯಂತೆ ॥ ಗುರು ಶಂಭುಲಿಂಗದ ನೆನಹು ನೆಲಸಿಬಾಹ್ಯ । ಪರಿಕರದಭಿರತಿಯನು ಪಿಂಗದಿಹನು ॥೩॥

## ೧೭. ಶ್ರೀರಾಗ

ಮುಕ್ತಿಕಾಂತೆಯ ರತಿ ಸುಮ್ಮನಾಗುವದೆ ಪರ । ಯುಕ್ತಿಯರಿದು ಕೂಡುವರಿಗಲ್ಲದಿಂತು ॥ಪ॥ ಶ್ರುತಿ ಗುರು ಸಖತನುಕೂಲವಿಲ್ಲದೆ ಮಾಯಾ ॥ ಸತಿಯ ಮುನ್ನಿನ ಮೋಹವಳಿಯದೆ ॥ ಮತಿಲಯ ದೇಶಾಂತದೆಡೆ ಸಮನಿಸದೆ ಸಂ । ಸೃತಿ ದುಃಖದಾತಂಕವಡಗದೆ ॥ ೧ ॥ ವರಗುಣದೊಳಗಾಡಿ ಮೆರೆಯದೆ ಸುಕೃತದ । ಕರಚಲುವೆಸೆಯದೆ ಮನುಗಳ ॥ ಸರಸಸಲ್ಲಾಪವಿಲ್ಲದೆ ವಿವೇಕದ ಸನ್ನೆ । ವೆರಸಿ ನೋಡದೆ ನೇಮವಿಡಿಯದೆ ॥ ೨ ॥ ಮುದವಲರುವ ಭಾವವರಿದನುಭವಿಸದೆ । ಯೊದವಿ ಕರಣ ಬಂಧವೆಸಗದೆ ॥ ಸದಮಲ ಶಂಭುಲಿಂಗದ ಕೃಪೆವಡೆಯದೆ । ಹೃದಯವಗಲದೊಂದುಗೂಡದೆ ॥ ........ ........ ........ ॥೩॥

## ೧೮. ರಾಗ-ಪಹಡಿ

ಸುಮ್ಮನಾಗದರಿವಿನಿಂದವೆ ಮುಕುತಿ । ನೆಮ್ಮಿ ಲೇಸೆನಿಸುವ ಗುಣಗಣವಿಲ್ಲದವನಿಗೆ ॥ಪ॥ ಗುರುಪಾದಸೇವೆ ಶರಣರಸಂಗ ಹರಪೂಜೆ । ಕರುಣ ವಿನಯ ನಿಜಸಮಯನಿಷ್ಠೆ । ವಿರತಿ ವಿವೇಕ ವಿದ್ಯೆ ಶಮೆ ದಮೆ ಸತ್ಯ ಧರ್ಮ । ವನಭಕ್ತಿ ನೀತಿಗಳ ಬಲವಿಲ್ಲದವನಿಗೆ ॥ ೧ ॥ ನಿಗಮಾಗಮದೊಳು ನಂಬುಗೆ ನಿತ್ಯವಿಧಿಗಳ । ನಗಲದೆಚ್ಚರು ದೇಹದೊಳು ವಿಮೋಹ ॥ ಜಗದಪವಾದದೆಡೆಯೊಳು ಭೀತಿ ಸುಜನರ । ಬಗೆಗೊಳಿಸುವ ನಡೆನುಡಿಯಿಲ್ಲದವನಿಗೆ ॥ ೨ ॥ ಕಾವನಲರಂಬಿಗೆದೆಗೊಡದ ಬಲುಮೆ ಜೀವ । ಭಾವವೆಳ್ಳನಿತು ದೋರದ ಮಳಯೋಗ ॥ ತೀವಿದನುಭವ ಸುಖರೂಪನಾದ ಶಂಭುಲಿಂಗ । ಮಾವರಿಸಿ ಕೀಟಭೃಂಗನ್ಯಾಯವಿಲ್ಲದವನಿಗೆ ॥ ........ ........ ॥ ೩ ॥

## ೧೯. ರಾಗ-ಶಂಕರಾಭರಣ

ಬೇಡುವೆನಭವ ನಿಮ್ಮನು ಭವಭವದೊಳು । ಮಾಡೆನಗೊಲಿದು ಸುಗುಣ ಸಂತತಿಯನಿಂತು ॥ಪ॥ ಎಪರಡಸಿದ ವೇಳೆಯೊಳು ಧೈರ್ಯವನು ಸಿರಿ । ಪಡೆದು ಜೀವಿಸುವೆಡೆಯೊಳು ನಿಸ್ಸಂಗವನು ॥ ಕಡು ಜವ್ವನದೊಳು ವಿಕೃತಿದೋರದಿಹುದನು । ಪಿಡಿದ ನೇಮವನೆಡೆವಿಡದತಿ ಛಲವನು ॥ ೧ ॥

ಅಸುವಳಿಯಲು ದೇಹಿಯೆನಲೊಲ್ಲದಧಟನು । ಪುಸಿಯನೆಲ್ಲಿಯು ನುಡಿಯದ ಸತ್ಯವಿದನು ॥ ಮಸಳಸದಿಹ ಪುಣ್ಯಮುಸು ಕೀರ್ತಿಯನು ಶಾಂತ । ರೊಸೆ ದಹುದೆಂದು ಬಣ್ಣಿಸುವ ವರ್ತನವನು ॥ ೨ ॥ ವಿತರಣದೊಡನೆ ಭೋಗಿಸು ವರ್ಥದೊದವನು । ಹಿತವಚನವೆ ತೊಡವೆನಿಪ ದಾನವನು ॥ ಶ್ರುತಿ ಬೋಧ ನೆಯೊಳುಪರತಿ ಯಿಲ್ಲದಿಹುದನು । ನುತಿವೆತ್ತ ಕೈಸಾರುತಿಹ ಮನೋರಥ ವನು ॥ ೩ ॥ ಕೋಪವಂಟದ ತಪವನು ಪರವಧುವಿನ । ರೂಪುಗಂಡೆಳಸದ ಕರಣ ವಿಜಯುವನು ॥ ತಾಪವಡರಿ ಕೆಡಿಸದ ಸಾರಸುಖವನು । ಕಾಪಟ್ಯವಿಲ್ಲ ದಾಶ್ರಮ ಧರ್ಮರತಿಯುನು ॥ ೪ ॥ ಧರೆಯೊಳತ್ಯಧಿಕವೆನಿಪ ಶಾಂತಿ ಮತ ವನು । ಕರುಣ ವಿದ್ಯೆಗಳುಳ್ಳ ಗುರುಭಜನೆಯುನು ॥ ಪರತರ ಮುಕುತಿದೋ ರುವ ಶಾಸ್ತ್ರವನು ಕಂತು । ಹರ ಶಂಭುಲಿಂಗ ನಿಮ್ಮಡಿಯ ಭಕ್ತಿಯುನು ॥ ೫ ॥

## ೨೦. ರಾಗ-ಸೌರಾಷ್ಟ್ರ

ಕರುಣಿಸು ನೀನೆನ್ನ ಕರಣ ನಿಕರದೊಳು । ವರಪುಣ್ಯವಗಲದಂತಿಲೆ ದೇವ ! ಶರಣಸಹಜ ಭಾವ । ಗಿರಿಜೆಯ ಸುಖಜೀವ ॥ ಬೇಗ ಕರುಣಿಸು ॥ ಪ ॥ ಸತಿಮೊದಲಾದ ಸಂಪದವನೆಳಸಿ ಮಂದ । ಮತಿಕಂಡ ಕೆಲಸವ ನಲಸದೆ । ಕ್ಷಿತಿಯೊಳಿಸಗುವಂತೆ ಗುರುಸೇವೆಯೊಳಗಭಿ ॥ ರತಿಯ ನೆನ್ನೊಡ ಲಿಗೀಯಖಿಳೇಶ । ನುತಗುಣ ನಿಧಿಕೋಶ । ಜಿತ ಪಂಚ ವಿಧಪಾಶ ॥ ಬೇಗ ಕರುಣಿಸು ॥ ೧ ॥ ಜನರೊಲಿವಭಿಮಾನದೊಳು ವಾದಿ ಬಹುತರ್ಕ । ವನೆ ಬಿಡದೋದಿ ಬಳಲುವಂತೆ । ಮನುಗಳ ಜಪವೆನ್ನ ಮೇಲ್ನುಡಿಯೊಳಗನು ॥ ದಿನವಿರೆ ಮಾಡುಪಾವನಶೀಲ । ಮುನಿಕುಲ ನುತಿಲೋಲ । ವಿನಮಿತ ಸುರ ಜಾಲ ॥ ಬೇಗ ಕರುಣಿಸು ॥೨॥ ಸಲೆಸಮರತಿಯೊಳೊಲಿಸಿ ಮೆಚ್ಚಿಸಿದ ನೊಮ್ಮೆ । ತೊಲಗಿದಿನಿಯುಳು ಧ್ಯಾನಿಸುವಂತೆ । ನೆಲಸಿತತ್ವಾನುಭಾವನೆ ಯೆನ್ನ ಮನದೊಳು ॥ ಚಲಿಸದೋಲಿರಿಸು ಭಾವಜಭಂಗ । ವಿಲಸಿತವಿಮು ಲಾಂಗ । ಸುಲಭನೆ ಶಂಭುಲಿಂಗ ॥ ಬೇಗಕರುಣಿಸು ॥ ........ ॥ ೩ ॥

## ೨೧. ರಾಗ-ಸುವ್ವಾಲೆ ವರ್ಣ

ಮಾಡಲಿಲ್ಲವೆ ತಪವನು ಮಾಡಲಿಲ್ಲವೆ । ಕೂಡೆಸುಗುಣದೊಡನೆ ತಿಳಿದು । ನೋಡಿತ್ರಿವಿಧ ಕರಣದಲ್ಲಿ ॥ ಪ ॥ ಗುರುಭಜನೆ ಸುಕರ್ಮವೃತ್ತಿ । ಹರನಪೂಜೆ ಶರಣ ಸೇವೆ ॥ ಪರಮಸಾತ್ವಿಕಂಗಳೆಂಟು । ನೆರೆದುನೆಲಸಿ ತನು

ವಿನಲ್ಲಿ ॥ ೫ ॥ ವಿನಯವನ್ನಹಿತವತರ್ಕ । ವನಸ ಶಬ್ದ ವಚಲಿತಾರ್ಥ ॥ ವನಘವಮಂತ್ರ ವಾಗಮಂಗ । ಲಿನಿತುವಿಡಿದು ವಚನದಲ್ಲಿ ॥ ೨ ॥ ಶವ ವಿವೇಕ ವಾತ್ಮವಿದ್ಯೆ । ದವೆ ದಯಾ ವಿರಕ್ತಿ ಯೋಗ ॥ ವಮುಳರೂಪ ಶಂಭುಲಿಂಗ । ವಮುರ್ದುತೋರೆ ಸುಮನದಲ್ಲಿ ॥ .... .... ॥ ೩ ॥

## ೨೨. ರಾಗ-ದೇಶಿ

ಕರುಣಿಸೆನಗಿದನೆ ಬೇಡುವೆನಭವ ಬೇರೊಂದು । ವರವನೊಲ್ಲೆನು ಮುಕ್ತಿ ದೊರೆವ ಸಾಧನವ ॥ ಪ ॥ ಆವಕಾಲದೊಳು ಬಳಿಕಾವದೇಶದೊಳು ಬೇ । ರಾವವಸ್ತುವಿನೊಳೊಡೆ ವೆರೆಯದತಿಮಮತೆ ॥ ಆವಪರಿಯೊಳು ತನ್ನ ಮೇಲಿರ್ಪುದಂತೆ ಗುರು । ದೇವತೆಯೊಳನುರಾಗವಿಹುದೆ ನಿಜಭಕ್ತಿ ॥ ೧ ॥ ಅದಿದೆನ್ನದಖಿಳ ತತ್ವವನೇತಿಗಳೆದುಳಿದ । ಸದಮಳಚಿದಾನಂದ ಪೂರ್ಣ ತಾನೆಂದು ॥ ಹೃದಯದೊಳುನಂಬಿ ಬಹುಮತವನೆಣಿಸದೆಮತ್ತೆ । ಪದುಳ ದಿಂದಿರಲದೇ ಸಹಜ ಸುಜ್ಞಾನ ॥ ೨ ॥ ಅರಿದು ವನಿತಾದಿ ವಿಷಯದೊಳುಳ್ಳ ದೋಷವನು । ತೊರೆದವನು ಮರಳಿ ಮೋಹಿಸದೆ ಛಲಿಯಾಗಿ ॥ ಕೊರತೆ ಯಿಲ್ಲದ ಶಂಭುಲಿಂಗದಂತಿರೆ ಭೋಗ । ದೆರಕವಿಲ್ಲದುದೀಗ ಪರಮ ವೈರಾಗ್ಯ ॥ .... .... .... .... ॥ ೩ ॥

## ೨೩. ರಾಗ-ಶಂಕರಾಭರಣ

ಮಂದಮತಿಗೆ ವಿಚಾರಿಗೆ ದೈವಪರನಿಗೆ । ಚಂದವೆನಿಪ ಕಾಂಡಗಳ ನಿಂತು ತಿಳಿವುದು ॥ ಪ ॥ ದೇಹಾಭಿಮಾನವ ವೆರಸಿ ಕೃತ್ಯನಿಚಯವ । ನೂಹಿಸಿ ಮಾಡಿ ಯವರ ಫಲಂಗಳನು ॥ ಸಾಹಸಿದಾಗಿ ಭೋಗಿಪ ಕರ್ತೃತಾನೆಂಬ । ಮೋಹವೆ ಭವಬೀಜವಹುದಿದು ಕರ್ಮಕಾಂಡ ॥ ೧ ॥ ಕರಣಾದಿಗಳು ತಮ್ಮ ವಿಷಯಂಗಳಲ್ಲಿ ಸಂ । ಚರಿಸಿ ಕೋಟಲೆಗೊಳುತಿಹವಲ್ಲದೆ ॥ ಪರಿ ಭಾವಿಸಿದೊಡೆ ತಾನವಕೆ ಸಾಕ್ಷಿಕನೆಂಬ । ವರವಿವೇಕವೆ ಬಂಧರಹಿತ ಸುಜ್ಞಾನಕಾಂಡ ॥ ೨ ॥ ತಾನು ತನ್ನಸು ತನುಗುಣ ಕರ್ಮ ವಿಷಯ ಸಂ । ತಾನ ಕರಣ ಭೋಗ ಭುವನಾದಿಗಳನು ॥ ಸಾನುರಾಗದೆ ಶಂಭುಲಿಂಗವೆಂದರಿದಭಿ । ಮಾನವಿಲ್ಲದುದೆ ಮುಕ್ತಿಯನೀವ ಭಕ್ತಿಕಾಂಡ ॥ .... .... ॥ ೩ ॥

ಇತಿ ಕ್ರಿಯಾಪಾದಃ

---

## ೨೪. ರಾಗ-ದೇಶಿ

ಶರಣ ಸತಿಯ ಮದುವೆಯ ಸಂಭ್ರಮವನು । ನೋಡಿರಮ್ಮ । ಪರಮಾನಂದ ಪಯೋನಿಧಿ ಯೊಳಗೋ । ಲಾಡಿರಮ್ಮ ॥ ಪ ॥ ಸಿಂಗರಿಸಿದ ಶುಭ ಮಂದಿರಮಂದದ । ಹಂದರಮ್ಮ । ಮಂಗಳ ಚೌಕದ ಹಸೆಯಜಗುಲಿ ಹಸ । ನಾದುದಮ್ಮ ॥ ಕಂಗೊಳಿಸುವ ಕಲಶಗಳಿಂದೈರಣೆ । ತುಂಬಿರಮ್ಮ । ಹಿಂಗದವರೊಳೊಪ್ಪುವ ತೇಜೆಡೆವರ । ವೆನಿಸಿತಮ್ಮ ॥ ೧ ॥ ಕಲಶೋದಕ ದೊಳು ಮಿಂದು ಶುಚಿತೆಯುಳ । ವಟ್ಟುದಮ್ಮ । ತಿಳಿವಿನ ಬೆಳುವಟ್ಟೆಯು ನೊಲಿದುಡೆ ಚೆಲು । ವೆತ್ತುದಮ್ಮ ॥ ತಿಲಕ ಭಸಿತ ರುದ್ರಾಕ್ಷಿಯ ಮಣಿದೊಡ ವಾದುದಮ್ಮ । ವಿಳಸಿತ ಶಿವ ಹಸ್ತಾಬ್ಜದ ತೊಂಡಿಲು । ಗಟ್ಟಿತಮ್ಮ ॥ ೨ ॥ ನೆರೆದ ಗಣಂಗಳೊಸಗೆಯ ಸುವಾಸಿನಿ । ಯರುಗಳಮ್ಮ । ಪರಿವಿಡಿದೊರೆವಾ ಗಮ ವಿಧಿ ವಾದ್ಯದ ರಭಸವಮ್ಮ ॥ ವರಮಂತ್ರದ ಶೋಭಾನವಿಂಬಾಗಿರೆ । ಪಾಡಿತಮ್ಮ । ಸರಿದುದು ಮಾಯಾಮಲ ಕರ್ಮದ ತೆರೆ । ಯಾಗಳಮ್ಮ ॥೩॥ ಭಜನೆ ಭಕುತಿಗಳಿವೆ ಜೀರಿಗೆ ಬೆಲ್ಲ । ವಾದವಮ್ಮ । ನಿಜದೀಕ್ಷಾ ಸಮಯದ ಸುಮುಹೂರ್ತಸ । ಮನಿಸಿತಮ್ಮ ॥ ಸುಜನಸಜನದ ಕೈವಾರವೆ ಮಂಗಳ । ಪಾಠವಮ್ಮ । ತ್ರಿಜಗನ್ನುತ ಗುರುಕರುಣರಸದ ಕೈ । ಧಾರೆಯಮ್ಮ ॥೪॥ ಮೆರೆವ ಸಿರದರಮನೆಯ ನಿಬ್ಬಣವೈ । ತಂದುದಮ್ಮ । ಕೊರತೆರಹಿತ ಶಂಭುಲಿಂಗನೇ ಮದ । ವಳಿಗ ನಮ್ಮ ॥ ಮೆರೆದಿನಿಸಗಲದೆ ನೇಹವೆರಸಿ ಕೈ । ವಿಡಿದನಮ್ಮ । ನೆರೆದಿಹ ಮುತ್ತೈದೆ ಶರಣಪಥನಿಜ । ಕಾಣಿರಮ್ಮ ॥ .... ॥ ೫ ॥

## ೨೫. ರಾಗ-ತೆನುಗು ಕಾಂಬೋಧಿ

ಅವಪುಣ್ಯವೊ ಲಿಂಗ ಪೂಜಾ ವಿಧಿಯನುಭಾವವಹುದು ನರಜನ್ಮ ದೊಳು । ಸಾವಿರ ಮುಖದೊಳರಸಿನೋಡಿ ನಿಗಮಾಗಮಾವಳಿ ಗಾಣದಸಾ ಧ್ಯವಿದು ॥ ಪ ॥ ಮೊದಲು ಲಿಂಗದ ಕಳೆಯನು ಭಾವಿಸುವ ರತಿ । ಹೃದಯ ದೊಳೊಡಗೂಡಿ ನೆನೆವ ರತಿ ॥ ಸದಮಳ ಲೋಚನದೊಳು ನಿಟ್ಟಿಸುವರತಿ । ಯೊದವಿ ಕರದೊಳಿಂಬಿಡುವ ರತಿ ॥ ೧ ॥ ಹರುಷರಸದೊಳು ಮಜ್ಜನವೆರೆ ವಿಂಪು । ಪರಮ ವಸ್ತ್ರ ಗಂಧಾಕ್ಷತೆ ಗೊಡುವಿಂಪು ॥ ಪರಿಮಳವೆಸೆವಲರನು ಸಿಂಗರಿಸುವಿಂಪು । ವರಧೂಪಾರತಿಗಳನೆತ್ತುವಿಂಪು ॥ ೨ ॥ ರಸವೊಸರುವ ಸವಿಗಳನೂಡುವನುರಾಗ । ವೆಸೆವ ತಾಂಬೂಲವನು ನೀಡುವನುರಾಗ ॥

ಮಿಸುನಿಯ ಛತ್ರ ಚಾಮರವನಿಕ್ಕುವನುರಾಗ । ಪೊಸೆದು ದರ್ಪಣವನು ಪಿಡಿವನುರಾಗ ॥ ೩ ॥ ಕೂಡೆ ಬಿಜ್ಜಣಿಗೆಯು ನೋಡಿ ಬೀಸುವ ಲೇಸು । ನಾಡೆನಮಿಸಿ ಲಲ್ಲಿಗರೆವ ಲೇಸು ॥ ಮೂಡುವ ತನುಪುಳಕದೊಳು ಪಾಡುವ ಲೇಸು । ನೋಡುತಾನಂದಾಶ್ರು ಸುರಿವ ಲೇಸು ॥ ೪ ॥ ಹಿಂಗದೆ ಪುಷ್ಪಾಂಜಲಿ ಗೈಯುವತಿ ಸುಖ । ಸಿಂಗರವೆನಿಸಿ ಬಣ್ಣಿಸುವ ಸುಖ ॥ ಮಂಗಳಮಯ ಶಂಭುವೆನಿಸಿ ರಾಜಿಪ ಸುಖ । ಲಿಂಗಪೂಜಾ ಸಂಭ್ರಮದ ಸುಖ ॥೫॥

## ೨೬. ರಾಗ-ನಾದನಾಮಕ್ರಿಯೆ

ಬೇರೊಂದುಪದವಿಯನು ಪಡೆವೆನೆಂಬಳಿಯಾಸೆ । ದೋರದೆನ್ನೊಳು ಗುರುವಿನೊಲುಮೆ ದೊರಕೊಳಲು ॥ ಪ ॥ ಶ್ರೀ ಗುರುಪದಾಬ್ಜ ರೇಣು ಭಸಿತದೊಳೆನ್ನ ನಾ । ವಾಗಲೆಡವಿಡದ ಮಾಯಾಗ್ರಹಂತೊಲಗೆ ॥ ನೀಗಿಜನನಾದಿ ವಿಕೃತಿಯನು ನಿಜಬೋಧರೂ । ಪಾಗಿ ಸಂತಸದೊಳಾನಿಹುದನತಿಗಳೆದು ॥೧॥ ತಿಳಿಯಲೆನ್ನಯ ಸುಕೃತದುದಯ ಗಿರಿಯಗ್ರದೊಳು । ಬೆಳಗಿದೋರಲು ಗುರುದಯಾ ದಿವಾಕರನು ॥ ಘಳಿಲನಜ್ಞಾನ ತಮವಿರದಡಗೆ ಪರಮಾತ್ಮ । ನುಳುಮೆ ಯಪರೋಕ್ಷವಾದವತಿಶಯವನುಳಿದು ॥ ೨ ॥ ಎನ್ನ ಮತಿಯೆಂಬ ಸಸಿವಣಗೆ ಗುರುನಿರೀಕ್ಷಣ । ಜೊನ್ನ ದೊಪವೆರೆದು ಸುವಿವೇಕ ರಸವಾಂತು ॥ ಚೆನ್ನೆಸೆವ ಕಾಂತಿಮಯ ವಾಗಲದರಲ್ಲಿ ಸಲೆ । ಸನ್ನಿಹಿತ ಸಹಜಾನುಭವವ ನಿಲ್ಲೆಂಪು ॥ ೩ ॥ ಶಿವಹಸ್ತವೆಂಬ ಪರುಷವ ನೆಸ್ನ ಶಿರದೊಳೊ । ಪ್ಪುವ ತೆರದೊಳಿಂಸೆ ಗುರುವರನು ದುರ್ಗುಣದ ॥ ಅವಲೋಹವ ತೊಲಗಿಸಿ ತನು ಕರಣಮಾನಸ । ನಿವಹವತಿ ಶುದ್ಧವೆನಿಸಿದುದ ನಪಲಪಿಸಿ ॥ ೪ ॥ ಗುರುವಚನ ಬೋಧೆಯೆಂಬಮೃತಧಾರೆಯೊಳೆನ್ನ । ದುರಿತ ಸಂತಾಪಗಳ ಸಮುದಾಯವಡಗಿ ॥ ಪರಮಾನುರಾಗವೆಡೆಗೊಂಡು ತೆಕ್ಕನೆತೀವಿ । ಗುರುಶಂಭು ಲಿಂಗವಾದುದನೊಡಂಬಡದೆ ॥ ........ ........ ॥ ೫ ॥

ಇತಿ ಚರ್ಯಾಪಾದಃ.

ಇತಿ ನೀತಿಕ್ರಿಯಾಚರ್ಯಾ ಸ್ಥಲ ಸಮಾಪ್ತಂ.

ಮಂಗಲಮಸ್ತು.

ಶ್ರೀಗುರು ಶಂಭುಲಿಂಗಾಯನಮಃ

## ಅಥ ಯೋಗಪ್ರತಿಪಾದನಸ್ಥಲ

## ಮಂತ್ರಯೋಗ

### ೧. ರಾಗ-ನಾದನಾಮಕ್ರಿಯೆ

ಶ್ರೀಗುರುವೆ ನೀನೆ ಶರಣಾಗೆನಗೆ ನಿಜಸುಖದ । ಸಾಗರನೆ ಸಕಲ ವಿದ್ಯಾಗುಣ ನಿವಾಸ ॥ಪ॥ ಮಲದ ಮರವೆಯನು ಮಾಯಾ ಮೋಹವನು ಕರ್ಮ । ಕುಲದಸುಖ ದುಃಖವನು ವಚನಬಂಧವನು ॥ ಸಲೆತಿರೋಹತಿಯ ಸಾಹಸವೆಂಬುದನು ಬಿಡಿಸಿ । ನಲಿದೆನ್ನ ಬೋಧರೂಪವನೆ ಬೋಧಿಸಿದ ॥ ೧ ॥ ಸುರನರೋರಗ ದನುಜ ಮನುಮುನೀಶ್ವರತರ್ಕ । ವರಮಂತ್ರಶಾಸ್ತ್ರ ನಿಗಮಾಗಮಪುರಾಣ ॥ ದರುಶನ ಮತಾದಿಗಳು ಕಾಣದರಸುವತತ್ವ । ದಿರವಿದೆಂದೆನಗೆ ಕಣ್ಣಾರೆ ಕಾಣಿಸಿದ ॥ ೨ ॥ ತಿಳಿಯಲ್ಕೆದಧ್ವವನು ಮೀರಿದಕಲೆಯಮೇಲೆ । ಬೆಳಗುವಾಗಸದಗ್ರದಮಲ ಶಕ್ತಿಯನು ॥ ಕಳೆದೆಸೆವ ಶಂಭುಲಿಂಗದ ಯೋಗವಿತ್ತೆನ್ನ । ನುಳುಹಿದ ನಿರಾಭಾರಿ ದೇಶಿಕವರೇಣ್ಯ ॥ ॥ ೩ ॥

ಇತಿ ಗುರು ಸ್ತೋತ್ರಂ

### ೨. ರಾಗ-ಮಾಳವ

ಯೋಗಿಗೆ ಸಕಲಸಂಸಾರ ಸಂಗವದಿಲ್ಲ । ವಾಗಿ ತಿಳಿವರದು ಪುಸಿ ನೋಡು ರಮಣಿ ॥ ಪ ॥ ವರವಿದ್ಯೆಯೆಂಬ ಕುಲವನಿತೆಯುಂಟಗಲದ । ಪರಿತೋಷವೆಂಬ ಮೋಹದಣುಗನುಂಟು ॥ ವಿರತಿಯೆಂಬನುಕೂಲ ಜನಮುಂಟು ಕ್ಷಮೆಯೆಂಬ । ಚರನುಂಟು ಶಾಂತಿಯೆಂಬ ಸಖನಸರಸಮುಂಟು ॥ ೧ ॥ ನುತಭಕ್ತಿಯೆಂಬ ಮಾತೆಯುಂಟು ಸುಚ । ರಿತವೆಂಬ ಪಿತನುಂಟು ಸತ್ಯವೆಂಬ ಕುವರಿಯುಂಟು ॥ ಹಿತವಾದ ನಂಬುಗೆಯೆಂಬಾಪ್ತಜನರ ಸೇವೆಯುಂಟು । ಮತಿಯೆಂಬ ಗೇಹಮುಂಟಾಚಾರವೆಂಬ ಕ್ಷೇತ್ರಮುಂಟು ॥ ೨ ॥ ದಾಸಿಯುಂಟಹಿಂಸೆಯೆಂಬ ದಾಸನುಂಟಸ್ತೇಯವೆಂಬ । ಲೇಸನೀವ ಧರ್ಮವೆಂಬ ವಾಹನವುಂಟು ॥ ಭಾಸುರಮೈತ್ರ್ಯಾದಿಯೆಂಬ ಪೌತ್ರರುಂಟು ಮುಕ್ತಿಯೆಂಬ । ದೇಶಮುಂಟು ಶಂಭುಲಿಂಗವೆಂಬ ಗುರುತನವುಂಟು ॥ ೩ ॥

## ೩. ರಾಗ-ಅಹರಿ

ಜಗದೊಳುನ್ನತವಾದ ಯೋಗಸಾಧಕ । ರುಗಳ ನಾಲ್ವರನಿಲ್ಲಿ ವರ್ಣಿಸುವೆನು ॥ ಪ ॥ ಬಲಹೀನನನುರಾಗಿ ಮಂದಮತಿ ನಸು । ಗೆಲಸವಿಡಿದವನನ್ಯವಶವರ್ತಿ ॥ ಸಲೆರೋಗಿ ಗೃಹಕೃತ್ಯದೆಡೆಯೊಳು ಮತಿ । ನೆಲಸಿದಾತನೆ ಮೃದುವೆನಿಸುವನು ॥ ೧ ॥ ಸಮಭಾವ ಸುಜನರಸಂಗ ಸುಖಿ ಕಾರ್ಯ । ಸಮುದಯದೊಳುಸಾಕ್ಷಿ ದೃಢನೇಹಿ ॥ ವಿಮಲನಿಂದ್ರಿಯವೃತ್ತಿ ಶಾಂತನಭ್ಯಾಸಿ ಭಾಸು । ರಮತಿಯುಳ್ಳವನೆ ಮಧ್ಯನೆನಿಸುವನು ॥೨॥ ವರನೀತಿ ಕ್ಷಮೆ ಧೈರ್ಯ ಸತ್ಯವಚನ ನಿ । ರ್ಧರಣ ನಿರ್ಮಲಚಿತ್ತ ಸಾರಶೌರ್ಯ ॥ ಪರಿತೋಷ ವಿನಯಾದಿ ಸರ್ವಸುಗುಣವಾ । ವರಿಸಿತೋರ್ಪವನತಿಮಾತ್ರನಹನು ॥ ೩ ॥ ಬಹುಶಾಸ್ತ್ರ ಪರಿಣತ ನಿಹಪರಭೋಗವಿ । ರಹಿತ ನಖಿಳ ಕರ್ಮದೂರ ನಧಿಕ ॥ ಮಹಶೂರನವಿಕಾರಿ ತತ್ವಭಾವಸಂ । ನಿಹಿತನೆನಿಪನತಿಮಾತ್ರತರನು ॥ ೪ ॥ ಇನಿಬರೊಲಿದು ಮಂತ್ರ ಲಯ ಹಠ ರಾಜ । ವೆನಿಪ ಯೋಗದೊಳೊಂದೊಂದನೈದಿ ॥ ಘನಗುರು ಶಂಭುಲಿಂಗದಿಂದೆ ನಿಜಸುಖ । ವನು ಪಡೆವುದು ಮೇಲೆ ಕ್ರಮವಿಡಿದು ॥ .... .... .... ॥ ೫ ॥

ಇತ್ಯಾಧಿಕಾರಿ ಭೇದಃ



## ೪. ರಾಗ-ನಾದನಾಮಕ್ರಿಯೆ

ಕೇಳಿ ತಿಳಿದು ಪಂಚಯೋಗವಿವನು ಮಾಡ । ಲಾಳಲಹುದು ಮುಕ್ತಿಪದವನು ॥ ಪ ॥ ಒಂದೆರಡಾರೆಂಟು ವರ್ಣದ ಮನುಗಳ । ಛಂದವನರಿದೆಳಸಿದುದನು ॥ ಕುಂದದೆ ಜಪಿಸುತಿರಲು ಮಂತ್ರಯೋಗವಿ । ದೆಂದು ಪೇಳುವರು ಸಂಯಮಿಗಳು ॥ ೧ ॥ ನಾದದ ನಿಜದೊಳಾಗಲಿ ಬಿಂದುವಿನ ರಮ್ಯ । ವಾದ ರೂಪಿನೊಳಾಗಲಸು ಗೂಡಿ ॥ ಭೇದವಳಿದು ಮನವಿರೆ ಲಯಯೋಗ ವೆಂ । ದೋದಿ ಸೂರಿಗಳು ಸೂಚಿಸುವರು ॥ ೨ ॥ ಹವಣಿಸಿದಷ್ಟಾಂಗದಿಂದೆ ಕರಣಮುದ್ರಾ । ನಿವಹದಿಂ ಬರಿಯ ಕುಂಭಕದಿಂದೆ ॥ ಪವನ ವಿಜಯವೆ ಮೂರನೆಯಸುಯೋಗವೆಂ । ದವಿಚಲ ಮತಿಗಳೂಹಿಸುವರು ॥ ೩ ॥ ಅರುವಿನಿಂದೊ

ಳಹೊರಗಣ ಮೂರು ಲಕ್ಷ್ಯದಿಂ । ದರಿದು ತತ್ತ್ವವನು ಮಾನಸ ವೃತ್ತಿ ॥ ಕರಿಗೊಂಡು ನಿಂದೊಡದನೆ ರಾಜಯೋಗವೆಂ । ದರುಹಿ ತೋರುವರಚ್ಚ ಸುಖಿಗಳು ॥ ೪ ॥ ಗುರು ಶಂಭುಲಿಂಗದರ್ಶನೆ ಯನುಸಂಧಾನ । ವರಭಕ್ತಿ ವಿದ್ಯಾ ಸುಪ್ರತವ್ಯೆದು ॥ ನಿರುತದಿಂದಳವಟ್ಟುದನೆ ಶಿವಯೋಗವೆಂ । ದೊರೆ ವರೊಲಿದು ವೇದ ವಿದುಗಳು ॥ .... .... .... ॥ ೫ ॥

ಇತಿ ಯೋಗಭೇದಃ

—:o:—

## ೫. ರಾಗ-ಭೂಪಾಳಿ

ಬೇರೆ ಬಹು ವಿದ್ಯೆಯೊಳು ಬಳಲುವರು ತಮ್ಮೊಳಗೆ । ತೋರುವ ಮಹಾಮಂತ್ರವನು ಜಪಿಸದೆ ॥ ಪ ॥ ಪವನ ಗತಿಯೆನಿಸುವರುಣೇಂದು ವೀಥಿಗಳೊಳಗೆ । ಸವಿಸರ್ಗ ಬಿಂದುಸಹ ಶಕ್ತಿವರ್ಣ ॥ ಶಿವಬೀಜವೆಂಬೆರಡು ಚಲಿಸುತೆಲ್ಲರೊಳು ತೋ । ರುವ ಮಂತ್ರವಾತ್ಮಪ್ರಸಾದವಹುದು ॥ ೧ ॥ ಆರು ನೂರುಮಿಕ್ಕ ಪಂಚೂರೇಳು ಸಾಸಿರ ಜಪದೊ । ಳುರಿವ ಫಲವಹುದು ದಿನ ವೊಂದೊಂದಕೆ ॥ ನೆರೆನಿರಾಯಾಸ ವದರಿಂದುದಯ ಸಮಯದೊಳು । ಮರೆಯದಾ ಮಂತ್ರವನೆ ಜಪಿಸುತಿಹುದು ॥ ೨ ॥ ಬಳಿಕಲಾ ಮಂತ್ರಾಕ್ಷರ ದ್ವಯಂಗಳ ಗಮನ । ವಳಿದು ಕೂಡಿದ ಸಂಗಮಸ್ಥಲದೊಳು ॥ ಬಳಕೆ ಗೊಳಗಾಗದಿಹ ಪರನಾದವದು ತಾನೆ । ತಿಳಿಯೆ ಪರಮಪ್ರಣವ ಮಂತ್ರ ವಹುದು ॥ ೩ ॥ ಮತ್ತಾರು ಚಕ್ರದ ಸರೋಜದೆಸಳೆನಿಸಿದ್ದೈ । ವತ್ತು ಶುದ್ಧಗೆ ಮಾತೃಕಾಮನುವದು ॥ ಬಿತ್ತರದ ಕರ್ಣಿಕೆಗಳಾಗಿಹ ನಕಾರಾದಿ । ಮೊತ್ತ ವೆಸೆವುದೆ । ಮೂಲ ಮಂತ್ರವಹುದು ॥ ೪ ॥ ನೋಡಲಿಂತಮಳ ಮಂತ್ರಾಳಿ ವಾಚಕವದನು । ಕೂಡಿರ್ಪಶಂಭುಲಿಂಗವೆ ವಾಚ್ಯವು ॥ ರೂಢಿ ವೆತ್ತೀಪರಿ ಯೊಳಿಹುದನಾರೈದೆಳಸಿ । ಮಾಡೆ ಜಪವನು ಮುಕ್ತಿಸಿದ್ಧಿಯಹುದು ॥ ೫ ॥

ಇತಿ ಮಂತ್ರಯೋಗ ಸಮಾಪ್ತಃ

———

ಶ್ರೀ ಗುರುಶಂಭುಲಿಂಗಾಯನಮಃ

## ಅಥ ಲಯಯೋಗಃ

### ೧. ರಾಗ—ಧನ್ಯಾಸಿ

ಪಡೆದು ಜಪಿಸಿ ನೋಡಿ ಕೇಳಿ ನೆನೆದು ನಿಜ । ದೊಡಗೂಡಿ ಸುಖಿಸ ಬಲ್ಲೊಡೆ ಮುಕ್ತನಹನು ॥ಪ॥ ಮದ ಮೋಹ ನಿದ್ರೆಯೊಳಳಿಯೆ ಬೋಧಿಸಿ ವಿಷ । ಯದೊಳು ಸಂಚರಿಸಲೊಯ್ಯನೆ ಬರಸೆಳೆದು ॥ ಪುದಿದು ಬಾರದೊ ಡೀಶನ ನೆನಹು ಗಲಿಸಿ ನಿಜ । ಹೃದಯವಸಿಂತು ಸ್ಥಿತಿಡುವ ರೀತಿಯನು ॥೧॥ ಮಹದಾದಿ ಮರೆಯ.ತೊಲಗಿಸಿ ಮಾಯಾತೀತ । ವಹ ನಿಜವರುಪಲು ಮನ ನಸಂತ್ರಾಣ ॥ ಸಹಜ ಸಂಧಾತ್ಮವ ಸಲಹಿತೋರಲು ಮಂತ್ರ । ವಹ ದೆಂಬ ಮಹಿಮೆ ವಡೆದ ಮುನಿಗಳನು ॥೨॥ ಪವಳದ ಬಳ್ಳಿ ಮಿಂಚಿನ ಮಾಲೆ ಮಿಸು ನಿಯ । ರವೆ ರನ್ನದೀವಿಗೆ ತಾರಕಾಜಾಲ ॥ ರವಿಸೋಮ ಶಿಖಿಯ ನೆರವಿ ಯಂತೆ ಪಲವು ಬಂ । ಣವ ತೋರುತಿಹ ಬಿಂದುವನು ತ್ರಿಕೂಟದೊಳು ॥೩॥ ಶಂಧಿ ನಿರ್ಜರ ಭೇರಿ ಮೇಘಾದಿಬಹುರವ । ಮುರಜೆ ಕಹಳೆ ಶಂಖ ಘಂಟಾ ದಿನಿನಾದ ॥ ವರವಾಸ ವೀಣೆ ಕಿಂಕಿಣಿ ಭ್ರಮರಾದಿ ಸು । ಸ್ವರಪಂವಿಡಿದನಾ ಹತದ ನಾದವನು ॥೪॥ ಬೆಳಗು ಕತ್ತಲೆ ರವಿ ಶಶಿ ತಾರೆ ಭುವನಾಳಿ । ವಿಲ ಯವೈದಿಹ ಮಹಾಶೂನ್ಯದಾಗಸವ ॥ ಕಳೆದಚಲಿತ ಸಚ್ಚಿದಾನಂದ ನಿತ್ಯ ನಿ । ರ್ಮಲ ಶಂಭುಲಿಂಗ ತಾನಾದ ಸಂತಸವ ॥ ........ ॥೫॥

### ೨. ರಾಗ—ಮಾಳವ

ನಿಮಿಷವಾಗಲಿ ನಿಮ್ಮನೆನಹು ನಿಂದೊಡೆ ಮುಕ್ತಿ । ಸಮನಿಸದಿಹುದೆ ಶಂಕರ ಯೋಗಿ ಜನವಂದ್ಯ ॥ಪ॥ ಮೂರು ಪೊಳೆಗಳ ಸಂಗಮದ ತಾಣ ದೊಳು ಮಿಂದು । ಮೂರು ತಾಪದಾದಿ ಮಲವನು ದೊಳೆದು ॥ ಮೂರು ಗುಣವನೆ ಮೀರಿ ತೋರುವ ಸುತೇಜದೊಳು । ಮೂರು ಮನೋವಾಯು ದೃಷ್ಟಿಗಳು ಕೂಡಿ ಕರಗೊಂಡು ॥೧॥ ಅಸುಗತಿಯೊಡನೆ ಸುಳಿವ ವರ್ನವೆ ರಡರ । ಪೆಸರಳಿದೆಡೆಯೊಳೇಕಾಕ್ಷರಿಯ ॥ ದಶವಿಧವೆನಿಪ ನಾದವನಾಲಿಸುವ ಸುಖ । ರಸದ ಸೊಗಸು ಮಿಗೆ ಮತಿ ಮರೆದನ್ಯವನು ॥೨॥ ಸುರಭಿ ನಿಸ್ವನದ ಹಾದಿಗಳ ನಾಲ್ಕರನಡು । ವರಿದೆನಿಸುವ ಪರಂಜ್ಯೋತಿಯನು ॥ ಬೆರಸಿ ತೋರುವ ಸಚ್ಚಿದಾನಂದ ಮಯನಾದ । ಗುರುಶಂಭುಲಿಂಗದೊಳವಿರಳ ಭಾವದಿಂದ ॥ ........ ........ ॥೩॥

## ೮. ರಾಗ—ಸೌರಾಷ್ಟ್ರ

ಮನವೆಂಬ ಗಿಳಿಯುಸೊಯ್ಯಾರದೊಳೋದಿ ಮೆ । ಲ್ಲನೆ ಮುದ್ದು ನುಡಿ ಗಲಿಸೆಲೆ ಮಾನಿನಿ ॥ಪ॥ ಆರು ಜಾಳಂದರದೆಸೆವಾಗ್ನೇಯ ದಿಂ । ಚೇರಿದ ರನ್ನ ಪಂಜರದೊಳಗೆ ॥ ಮೂರು ವರ್ಣದ ಕೋಲಿನ ಮೇಲೇರಿಸಿ ಕಾಲ್ಗೆ । ಪಾರದಂತಸು ಸರಪಣಿ ಹೂಡಿ ॥೧॥ ನಯನ ವಟ್ಟಲೊಳು ಚಿನ್ಮಯದಿನಿ ಗೆನೆಯೂಡಿ । ಸ್ವಯಸುನಾದದ ತನಿವಣ್ಣನಿತ್ತು ॥ ಭಯವೀವ ರಿಪುವೆಂಬ ಚೀಲಿಯನೆಬ್ಬಟ್ಟ । ಪ್ರಿಯದೆ ವೈಗಡದಿ ಭಾವದ ಕೈಯೊಳು ॥೨॥ ನಾದ ವಿದೂರ ನಿಸ್ಸೀಮ ನಿತ್ಯಾನಂದ । ಧಾಮ ಬೋಧಾದ್ವಂದಾನಂತರೂಪ ॥ ನೇಮರಹಿತ ಶಂಭುಲಿಂಗವೆನಿಸುವಾತ್ಮಾ । ರಾಮನೆ ಶಿವಶಿವ ಯೆಂದೋ ದಿಸಿ ॥ ........ ........ ॥೩॥

## ೯. ರಾಗ—ನಾದನಾಮಕ್ರಿಯೆ

ಏನನೆಂಬೆನತಿವಿಚಿತ್ರ ದೋರಲೆನ್ನೊಳು । ಕಂಡು । ಮೌನದಿಂದೆ ಬೆರಗುಗೊಂಡೆ । ನೆಲೆಲೆಮಾನಿನಿ ॥ಪ॥ ಅಂಗಕರಣ ದುರವಣೆಗಳಪಿಂಗಿ ಮೊದಲೊಳು । ನೋಲ್ಪ । ಕಂಗಳೊಳಗೆ ಯರಿದು ನಿಟಲತಟದಿ ಕೀಲಿಸೆ ॥ ಪೊಂಗಿಮೂಲ ಮರುತನಡರಿ ನಿಲೆ ತ್ರಿಕೂಟದಿ । ಮನವು । ಮಂಗಳ ಪ್ರಭಾ ವದೊಡನೆ ಕೂಡಿ ಕೊನರಿತು ॥೧॥ ನಸುವಿರಿದ ಪರಾಗದಲರನರಿದು ಮೋಹಿಸಿ । ಬಿಡದೆ । ಪಸಿದು ತುಂಬೆ ಝೇಂಕೃತಿಯೊಳು ಜಿನುಗುವಂದದಿ ॥ ಅಸುವಿನೊಳಗೆ ಮೂಲ ಮಂತ್ರ ನಾದವೆಸೆಯುಲು । ಜೀವ । ದೊಸೆಗೆ ಯೂಗ ಲೊಡನೆ ದಿವ್ಯಕಾಂತಿ ತೀವಿತು ॥೨॥ ಬಚ್ಚಬರಿಯ ಚಿತ್ಸುಧಾ ರಸಾಂಬು ನಿಧಿಯೊಳು । ಮುಳುಗಿ । ಯೆಚ್ಚರಿಲ್ಲದಮಳಸುಖದ ಸುಗ್ಗಿವಡೆವುತ ॥ ಬಿಚ್ಚಿ ಬೇರೆ ದೋರದಂತೆ ಶಂಭುಲಿಂಗವ । ನಪ್ಪಿ । ಯೆಚ್ಚರಡಗಿದಚ್ಚಪರವಶ ದೊಳು ನಿಂದೆಸು ॥ ........ ........ ॥೩॥

## ೧೦. ರಾಗ—ತೆನುಗುಕಾಂಬೋಧಿ

ಕೋಗಿಲೇ । ದನಿದೋರು ಶರ್ವನೆನಿಸುವ ಮಾಗೆ ಪೋದುದಿಂ । ನನು ನಯದಿ ಗುರುಕರುಣವೆಂಬ । ಕೋಗಿಲೆ ॥ ಘನವಸಂತವಿದೆನಗೆ ಸೊಗಸು ದಿಗೆ ಪ್ರಣವರೂ । ಪಿನ ಚಿತ್ರತರವಾದ । ಕೋಗಿಲೆ ॥ಪ॥ ದಳನಾಲ್ಕು ದಳವಾರು ದಳಹತ್ತು ಹನ್ನೆರಡು । ದಳಷೋಡಶ ದ್ವಿದಳವನಾಂತ ।

ಕೋಗಿಲೆ ॥ ನಳಿನ ಕುಲದಿಂದೆಸೆವ ಚಕ್ರವೆಂಬಾರು ತಿಳಿ । ಗೊಳನ ಕೆಲದಲ್ಲಿ ಭೋರೆಂದು । ಕೋಗಿಲೆ ॥ ಸುಳಿವ ಸರಸ್ವತಿ ಗಂಗೆ ಯಮುನೆಯೆಂದೆಂಬ ನದಿ । ಗಳನಡುವೆ ಚೌಕಮಧ್ಯದಲಿ । ಕೋಗಿಲೆ ॥ ನಳನಳಿಸಿ ಬೆಳೆದು ಬೆಳಗುವ ಬಿಂದುವೆಂಬಿನಿದು । ದಳೆದ ಮಾನ್ವರವ ವೇರಿರ್ದು । ಕೋಗಿಲೆ ॥೧॥ ಶರಧಿಯ ಮೊರಹಿನಂತೆ ಘನಘೋಷದಂತೆ ನಿ । ರ್ಝರರವದಂತೆ ದುಂದುಭಿ ಸ್ವನದಂತೆ । ಕೋಗಿಲೆ ॥ ವರನಾದದಂತೆ ಘಂಟಾನಿನದದಂತೆ ಬಂ । ಧುರದ ಶಂಖಧ್ವಾನದಂತೆ । ಕೋಗಿಲೆ ॥ ಮುರಜೆಯಸ್ವನದಂತೆ ವಾಸದಧ್ವನಿ ಯಂತೆ । ಮೊರೆವಳಿಯಝೇಂಕಾರದಂತೆ । ಕೋಗಿಲೆ ॥ ನೆರೆದಕಿಂಕಿಣಿಯು ಮೇಲುಲಿಯಂತೆ ವೀಣೆಯಿಂ । ಚರದಂತೆ ಪೊಸಪರಿಗಳಿಂದ । ಕೋಗಿಲೆ ॥೨॥ ಯೋಗಿಗಳಿಗಣಿಮಾದಿಸಿದ್ಧಿಗಳು ವಾದಿಗಳಿ । ಗಾಗಮಂಗಳು ಚಂದನಾವಿ । ಕೋಗಿಲೆ ॥ ಭೋಗಿಗಳಿಗೊಲವೀವ ಸವಿಗಲೆಯೊಳಿಹ ಪರ ವಿ । ರಾಗಿಗಳಿ ಗಹ ಸುಖಾಳಿಗಳು । ಕೋಗಿಲೆ ॥ ಜೇಗನೊಳು ನಿನ್ನ ಧ್ವನಿಗೇಳಿ ಕೈಸಾ ತಿಹ । ವಾಗಿ ಗುರುಶಂಭುಲಿಂಗವನು । ಕೋಗಿಲೆ ॥ ಕೂಗಿ ಕರೆದೆನಗೆ ತೋರಿ ಸಿದೆ ನಿನ್ನಂತೆ ಸಖ । ರಾಗಿಮತ್ತಾರುಂಟು ಕೋಗಿಲೆ ॥ .... ॥೩॥

## ೧೧. ರಾಗ-ಮಾಳವ

ಯೋಗಿ ನಿಜಾನಂದದೊಳು ನುಡಿಸುವ ವೀಣೆ । ರಾಗರಸದ ತರಂಗಿಣಿ ನೋಡು ರಮಣಿ ॥ ಪ ॥ ತನುವೆಂಬ ಹೊಳಹಿಗೆರಡು ದಿಟ್ಟಯೆಂಬ ಕಾಯ । ನನುವರಿದಲುಗದಂತಿರೆ ಕೀಲಿಸಿ ॥ ಸನುಮತವಾದ ಷೋಡಶಾಧಾರವೆಂಬ ರಮ್ಯ । ಮೆನಿಸುವ ಮೆಟ್ಟುಗಳನೆಲೆಯನಾರೈದು ನೋಡಿ ॥೧॥ ತಿಳಿದೇಳು ಮುಖ್ಯನಾಡಿಯೆಂಬ ತಂತಿಗಳನು ನಿ । ರ್ಮಲಮತಿ ಮನವಸುವಿಂದ್ರಿ ಯಂಗಳ ॥ ಕಲವೆಂಬ ತಿರುಪುಗಂಭದೊಳುಬಂಧಿಸಿ ಮೂಲ । ದೊಳಗಣ ತಾರೆಯೆಂಬ ಕಲೆಯ ಶ್ರುತಿಯನೆತ್ತಿ ॥೨॥ ವರಶಂಕರಾಭರಣವನು ವೇಳೈಸಿ ಯೋಗ । ಕರಣವೆಂಬಗುಲಿಯನಿಟ್ಟು ಬಾಜಿಸಿ ॥ ವರನಾದವೆಂಬ ಗೀತ ವನು ಗುರುಶಂಭುಲಿಂಗ । ವರಿದೆಂದುಮೆಚ್ಚಿ ಮುಕ್ತಿಪದವೀಯೆ ಕೇಳಿ ಸುವ ॥ .... .... .... ॥೩॥

ಇತಿ ಲಯಯೋಗ ಸಮಾಪ್ತಃ

———

ಶ್ರೀ ಗುರುಶಂಭುಲಿಂಗಾಯನಮಃ

## ಅಥ ಹಠಯೋಗ

### ೧೨. ರಾಗ-ಪಾರಶಿ

ಯೋಗದಂಗನೆಂಟು ಭೇದವಾಗಿ ತೋರ್ಪುದವನು ತಿಳಿವು। ದಾಗಮ ಪ್ರಮಾಣದಿಂದೆ ಮುಕುತಿಗೆಳಸುವಧಿಕರು ॥ ಪ ॥ ವಿದಿತಯಮ ವಹಿಂಸತಾದಿ ದಶ ವಿಭಾಗವಹುದು ನಿಯಮ। ವದು ತಪೋವಿಧಾನವಾದಿ ಪಂಚಯುಗ ಸಮೇತವು ॥ ಪದುಳದಾಸನವೆ ಮಹೋತ್ಪಲಾದಿ ನಿಖಿಳ ಮುಖವೆನಿಪ್ಪು। ದೊದವಿ ರೇಚಕಾದಿ ಸಪ್ತರೂಪ ವಸುನಿರೋಧನ ॥ ೧ ॥ ಚರಿಸುವಿಂದ್ರಿಯ ವ ನುಪಾಯದಿಂದೆ ಸೆಳವುದೊಳಗೆ ಪ್ರತ್ಯಾ। ಹರಣವದು ಶಿವಾಶ್ರಯ ದೊಳು ಚಿತ್ತವಿಹುದೆ ಧಾರಣ ॥ ಹರಪದಾನುಚಿಂತೆ ಧ್ಯಾನವೆನಿಪುದಾ ಸ್ವರೂಪದಲ್ಲಿ। ಮರಳದಚಲ ಭಾವಮಾಗೆ ವರಸಮಾಧಿ ನಿಜವದು ॥ ೨ ॥ ತಿಳಿಯೆ ಮೊದಲು ನಾಲ್ಕುಬಾಹ್ಯವೆನಿಸಿ ಕಾಮ ಕೋಪ ರೋಗ। ಕಲುಷ ಸಂತತಿಯನು ಕೆಡಿಪ ವಂತರಂಗವೆನಿಸುತ ॥ ಉಳಿದ ನಾಲ್ಕು ವಿಷಯಮೋಹ ವಿಮತಿ ಮರವೆಗಳನೆ ನೀತಿ। ಗಳೆದು ಶಂಭುಲಿಂಗದಂಘ್ರಿ ಸಂಗಸುಖವನೀವವು। .... ॥ ೩ ॥

ಇತಿ ಸಗುಣಾಷ್ಟಾಂಗಂ

### ೧೩. ರಾಗ-ನಾದನಾಮಕ್ರಿಯೆ

ಪರಿವಿಡಿದು ನಿರ್ಗುಣಾಷ್ಟಾಂಗ ಯೋಗವನರಿದ। ವರಯೋಗಿಗಾನಂ ದಮಯ ಮುಕ್ತಿಯಹುದು ॥ ಪ ॥ ತನು ಕರಣ ವಿಷಯೇಂದ್ರಿಯ ವಿಸರವೆಲ್ಲ ರೊಳು ವಿರತಿ। ಜನಿಸಿಹುದೆ ಯಮ ವಾತ್ಮ ನಿಜದೊಲುಮೆ ನಿಯಮ ॥ ವನಿತಾದಿ ವಿಷಯದೊಳುದಾಸೀನವಾಸನವು। ಕನಸೆಂದು ಬಾಹ್ಯವನು ಬಿಡು ವುದಸುನಿಯಮ ॥ ೧ ॥ ಬಗೆಯನೊಳದೆಗೆವುದೆ ಪ್ರತ್ಯಾಹರಣವಾ ಮನ। ಬಗೆ ದರಿವಿನೊಳು ನಿಲೆ ಧಾರಣವೆನಿಪುದು ॥ ಮಿಗೆಶುದ್ಧ ಚೈತನ್ಯತಾನೆಂಬುದೇ ಧ್ಯಾನ। ವಗಲದಿರಲಾ ಬುದ್ಧಿಯದು ಸಮಾಧಿ ॥ ೨ ॥ ಪೇಳಿದಿವರೊಳು ಮೊದ ಲಿನೈದಂಗದಿಂದಹಿತ। ಜಾಲವಳಿದಮಳತೆಯ ಚಿತ್ತವನು ॥ ಮೇಲಣಂಗತ್ರ ಯದಿ ಗುರುಶಂಭುಲಿಂಗದೊಳು। ಮೇಳೈಸಲದೆ ಯೋಗಲಕ್ಷಣವಹುದಾಗಿ ॥೩॥

ಇತಿ ನಿರ್ಗುಣಾಷ್ಟಾಂಗಂ

## ೧೪. ರಾಗ-ಸಾರಂಗ

ಆಸನಸ್ಥಿರವಾಗಿ ಮನವಸುವೆರದಕ್ಷಿ । ನಾಸಾಗ್ರದಲ್ಲಿ ನಿಂದೊಡೆ ಮುಕ್ತಿ ॥ ಪ ॥ ಎಡದ ಹಿಮ್ಮಡನಿನಾಧಾರವೆಡೆಯನೊತ್ತಿ । ತೊಡನೆ ದಕ್ಷಿಣದ ಹಿಮ್ಮಡವನು ॥ ಮಡಗಿ ಮೇಹನದ ಮೇಲ್ಗಡೆಯೊಳು ರುಜುವೆನಿ । ಪೊಡಲಿಂದಮಿರೆ ಸಿದ್ಧಾಸನವದು ॥ ೧ ॥ ತೊಡೆ ಕಿರುದೊಡೆಗಳ ನಡುವೆರಡಂಘ್ರಿಗ । ಳಡಗಿರ್ದು ಸಸಿನವಾದೊಡಲಿಂದ ॥ ಬಿಡದೆ ಕುಳ್ಳಿರೆ ಸ್ವಸ್ತಿಕಾಸನವಹುದೆಂದು । ತಡೆಯದಿದನು ನೋಡಿತಿಳಿವುದು ॥ ೨ ॥ ತೊಡೆಗಳೆರಡರ ಮೇಲಡರಿ ಮಡಂಗಳು । ಬಿಡದೆ ಕೂಡಿರಲೆಡ ಬಲವಾಗಿ ॥ ಕಡುನೇರಿತ್ತಾದೊಡಲಿಂದೆ ಕುಳ್ಳಿರ್ಪುದಾ । ದೊಡೆ ಪದ್ಮಾಸನ ವೆಂದೆನಿಪುದು ॥ ೩ ॥ ಎಡದ ಪಾದದ ಮಡವಡಿಯಾಗಿ ಸಿಲೆ ಬಲ । ದಡಿ ಮಡನೆಡದ ತೊಡೆಯ ಮೇಲೆ ॥ ಮಡಗಿರೆ ರುಜುಕಾಯದಿಂದೆ ಕುಳ್ಳಿರ್ದೊಡೆ । ನುಡಿವರದನು ವೀರಾಸನವೆಂದು ॥ ೪ ॥ ತನಗಾವಕೆರದಿಂದೆ ಜನಿಪುದು ಧೈರ್ಯವಂ । ತನುವಾಗಿ ಕುಳ್ಳಿರ್ದು ಚಲಿಸದೆ ॥ ಮನವಕ್ಷಗಳನು ನಿರೋಧಿಸಿದೊಡೆ ಸುಖಾ । ಸನವದು ಗುರುಶಂಭುಲಿಂಗವೇ ॥ .... .... .... ॥ ೫ ॥

ಇತ್ಯಾಸನಭೇದಃ

---

## ೧೫. ರಾಗ-ಮಧ್ಯಮಾವತಿ

ಮೂರು ಬಂಧದ ಲಕ್ಷಣವನರಿದೊಡೆ ಬಂಧ । ಮೂರಳಿದಹುದು ಸಕಲ ಸಿದ್ಧಿ ॥ ಪ ॥ ಅನಿಲ ನಿರೋಧನದಿಂದಾಧಾರವಾದಪಾನ । ದಿನಪತಿಯನು ಹೃದಯಶಶಿ ॥ ಯೆನಿಸುವ ಪ್ರಾಣದೊಡನೆ ಕೂಡಿ ನಡುನಾಡಿ । ಗನುಗೂಡಲದೆ ಮೂಲಬಂಧವು ॥ ೧ ॥ ವರನಾಡಿ ಕಂದದೆಡೆಯು ನಾಭಿಚಕ್ರದು । ಪಂಕೆಳಗೆಂಬೆರಡೆಡೆಯನು ॥ ಪಿರಿದು ಬಂಧಿಪುದುಡ್ಡಿಯಾಣ ಬಂಧವಹುದದು । ಜರೆ ಮರಣವನು ಕೆಡಿಸುತಿರ್ಕು ॥ ೨ ॥ ಗಳಸಂಕೋಚವನೆಸಗಿ ತನ್ನ ಚುಬುಕವ ನಿಳುಹಿ ಹೃದಯ ತಾಣದೊಳಗಿಟ್ಟು ॥ ಚಲಿಸದಿರಲು ಜಾಲಂಧರ ಬಂಧವಿದರಿಂದು । ಜ್ವಲಿಪಮೃತವೆ ಶಂಭುಲಿಂಗವು ॥ .... ॥ ೩ ॥

ಇತಿ ಬಂಧತ್ರಯಃ

---

## ೧೬. ರಾಗ-ಭೈರವಿ

ಯೋಗಿ ಯೆಂದೆನಿಸೆನ್ನನು । ವಿಷಯಸುಖ । ಯೋಗಿಯೆನಿಸದೆ ಜಗದೊಳು । ಶಿವನೆ ॥ ಪ ॥ ವರಚೌಕ ಮಧ್ಯದೊಳಗೆ । ರಾಜಿಸುವ । ಪರನಾದವನೆ ಬೋಧಿಸಿ । ಪೊರಗೆ ॥ ತರುಣಿಯನುಭವದ ನುಡಿಯ । ಕೇಳುವಾ । ತುರವಿದನು ಬಗೆಗೊಳಿಸದೆ ॥ ಶಿವನೆ ॥ ೧ ॥ ಚಲಿಸದಾಸನ ಮುದ್ರೆಯ । ಮೊದಲಲ್ಲಿ । ಸಲೆ ಸಾಂಗವೆನಿಸಿ ನಿಲಿಸಿ । ಬಳಿಕ ॥ ಲಲನೆಯಾಲಿಂಗವನು । ಮಾಡುವಿನಿ । ಗಳೆಯ ಮೋಹವನೆಸಗದೆ । ಶಿವನೆ ॥ ೨ ॥ ಮಂಡಲತ್ರಯದ ಮೇಲೆ । ದೀಪಿಸುವ । ಖಂಡತೇಜವನೆ ತೋರಿ । ಜೇರೆ ॥ ಪುಂಡರೀಕಾಕ್ಷಿಯಧಿಕ । ರೂಪನೆಡೆ । ಗೊಂಡು ಭಾವಿಸಲೀಯದೆ । ಶಿವನೆ ॥ ೩ ॥ ನಡುನಾಡಿಯಗ್ರದಲ್ಲಿ । ಸಾರಸುಖ । ದೆಡೆಯಮೃತ ರಸವನೂಡಿ । ಕೂಡೆ ॥ ಕಡುಚಲುವೆಯಧರ ಸಧೆಯ । ಸೇವನೆಯ ಸಡಗರದೊಳೊಡ ವೆರಸದೆ । ಶಿವನೆ ॥ ೪ ॥ ನವಹೃದಯ ಕಮಲಸಲರೆ । ಬಿಡದೆ ತೀ । ಡುವ ಸುಗಂಧವನೆ ತೀವಿ । ಮಿಕ್ಕಾ ॥ ಯುವತಿಯುಸುರೊಳುಗಂಪನು । ವಾಸಿಸುವ । ಸವಿಗುಡದೆ ಶಂಭ ಲಿಂಗ । ಶಿವನೆ ॥ .... .... .... ॥ ೫ ॥

## ೧೭. ರಾಗ-ಧನ್ಯಾಸಿ

ಮೋಹ ಮಲ ಪಾಶವಿಲ್ಲದ ನಿನಗೆ ನಿದ್ರೆಯೆಂ । ದೂಹಿಸಿವೆ ನೆನ್ನಮರವೆಯ ತಿಳಿಯುವೆನಗಾದ । ಸಾಹಸವೆ ಯುದಯ ಸಮಯಾರೋಪವಿಂತಾಗೆ ದೇವ ನೀನುಪ್ಪವಡಿಸ ॥ ಪ ॥ ಪರನಾದವೆಂಬ ಮುಂಗೋಳಿ ಮಿಗೆ ಕೂಗುತಿದೆ । ಪರಬಿಂದುವೆಂಬ ಮೂಡಣ ಕೆಂಪು ಮಸಗುತಿದೆ । ಚಿರಕಾಲ ದಿಂದಡಸಿದಜ್ಞಾನವೆಂಬ ತಮವಿರದಂಜಿ ಪರಿವುತಿದೆ ॥ ಭರದಿ ಕುಂಡಲಿಯೆಂಬ ತರಣಿ ತಲೆದೋರುತಿದೆ । ನೆರೆದುಲಿವುತಿದೆ ವಿಧಿಗಳೆಂಬ ಖಗರಾಶಿ ಬಹು । ತರ ಹೃದಯವೆಂಬ ವಾರಿಜವಲರುತಿದೆ ತಳುವದನಘ ನೀನುಪ್ಪವಡಿಸ ॥ ೧ ॥ ಮನದವಿಕೃತಿಗಳೆಂಬ ಕುಮುದತತಿ ಕೊರಗುತಿವೆ । ಮುನಿವ ಮಮಕಾರಗಳೆಂಬ ಚೋರರಭೀತಿ । ಯನುಗೆಡುತಿದೆ ಯಪ್ಪುಮುದವೆಂಬ ರಕ್ಕಸರ ಸುಳುಹು ವೈಗಾಣಿಸದಿದೆ ॥ ಜಿನುಗುವಿಂದ್ರಿಯವೆಂಬ ಜೊನ್ನವಕ್ಕಿಗಳು ಮು । ನ್ನಿನವಿಲಾಸವ ದೊರೆವುತಿವೆ ಸುಕೃತವೆಂಬಖಿಳ । ಜನರುಚಿತ

ಕರ್ಮವೆಸಗಲು ಬಯಸುತಿವೆ ನಿರಾವರಣ ನೀನುಪ್ಪವಡಿಸ ॥ ೨ ॥ ದುರಿತ ಬಲವೆಂಬ ಕೌಶಿಕನು ಕಂಗೆಡುತಲಿದೆ । ಹರಿವರಿಯ ಸಂಸಾರವೆಂಬ ಕನಸ ಳಿವುತಿದೆ । ಪರಿವಿಡಿದು ಪ್ರಾರಬ್ಧವೆಂಬ ವಿಷಯಾಳಿ ಗೋಚರಿಸುತಿದೆ ಮತಿ ದೃಷ್ಟಿಗೆ ॥ ಪರಿವ ಗಂಗಾ ಯಮುನೆಯೆಂಬ ಕೋಕಂಗಳೊಡೆ । ವೆರವುತಿವೆ ಭಾವನೆಗಳೆಂಬ ತಾರೆಗಳು ಪ್ಯೆ । ಗರೆವುತಿವೆ ಹಮ್ಮಿನಿರವೆಂಬ ಶಶಿಮಾಜು ತಿದೆ ವರದ ನೀನುಪ್ಪವಡಿಸ ॥ ೩ ॥ ಹವಣಿಸಿದ ಕರಣ ಮುದ್ರೆಗಳೆಂಬ ಭಜಕರೊ । ಪ್ಪುವ ಯೋಗವೆಂಬ ಪೂಜೋಪಚಾರಂ ಗೊಡಲು । ಸವಿ ನಯದೊಳವಧರಿಸಿ ಚೌಕಮಧ್ಯದ ರತ್ನಸಿಂಹಾಸನಾಗ್ರದಲ್ಲಿ ॥ ತವೆ ರಾಜ ವಿಭವದೊಳು ರಂಜಿಸುತ್ತಿರೆ ಲಕ್ಷ್ಯ । ನಿವಹವೆಂಬತುಳ ಭೂಪಾಲರೋಲ ಗವೀಯೆ । ಕವಿವ ದಶವಿಘ್ನಂಗಳೆಂಬಗಿಗಳೋಡುವರು ನಿತ್ಯ ನೀನುಪ್ಪವಡಿಸ ॥ ೪ ॥ ಆ ಸಮಯದನುಭಾವವೆಂಬ ಪರಿಚಾರಕನ । ಲೇಸೆನಿಪನಿಜ ಮಂತ್ರ ವೆಂಬ ವಿಜ್ಞಾಪನವ । ನೋಸರಿಸದಾಲಿಸಿ ಪರಾಕುಮಾಡದೆ ನೋಡಿ ಸನ್ನಿಧಿಯೊಳಿರ್ದೆನ್ನನು ॥ ಮೋಸವಾಗದಿರಣುಗ ನಿನಗಿನ್ನು ಭವಬಂಧ । ದಾಸರಿಲ್ಲೆಂದಭಯವಿತ್ತು ತವಪದಕಮಲ । ವಾಸದೊಳಗಿಂ ಬಿಟ್ಟು ಸಲಹು ಶಂಭುಲಿಂಗವೆ ಘಳಿಲನೆ ನೀನುಪ್ಪವಡಿಸ । ಶಿವನೆ ॥ .... .... ॥ ೫ ॥

ಇತ್ಯಂತರವೃತ್ತಿಃ

ಹಠಯೋಗ ಸಮಾಪ್ತಃ

---

ಶ್ರೀ ಗುರು ಶಂಭುಲಿಂಗಾಯನಮಃ

## ಅಥ ರಾಜಯೋಗಃ

### ೧೮. ಶ್ರೀರಾಗ

ಯೋಗಿಗಲ್ಲದೆ ದೊರೆವುದೆ ಪರತರ ಮುಕ್ತಿ ॥ ಪ ॥ ಚಿರಸುಖಾಸನತೆ ಶರೀರದ ಸಸಿನತೆ । ಕರಣ ನಿಕರದ ನಿಶ್ಚಲತೆ ॥ ಮರುತ ಮನ ದಿಟ್ಟಿಗ ಳೊಂದು ಗೂಡುತೆ । ವರಹೃದಯಾನು ಸಂಧಾನತೆ ॥ ೧ ॥ ಮಂಡಲತ್ರಯದ ತಾರಾಗ್ರದ ನಭದೊಳ । ಖಂಡ ಚಂದ್ರೋದಯವಾಗಲು ॥ ಕಂಡು ತದೀಯ ಸುಧೆಯನು ದಣ್ಣನೆದಣಿ । ದುಂಡು ನಿಜಾನಂದ ಲೀಯತೆ ॥ ೨ ॥

ಮೂರು ಪೊಳೆಯ ನಡುವಣ ನಾದವನು ಕೇಳಿ । ಮಾರುತಜನು ವಾಗೀಶ್ವರಿಯೊಳು ॥ ಬೇರಾಗದೊಂದೆನಿಸಿಪ ಚಿತ್ತಿನೊಡನೊಂದಿ । ತೋರುವ ಶಂಭುಲಿಂಗೈಕ್ಯತೆ ॥ .... .... .... ॥ ೩ ॥

## ೧೯. ರಾಗ-ದೇಶಿ

ಪರತತ್ವವದು ತನಗೆ ತಾನೆ ಗೋಚರವಹುದು । ವಿರಚಿಸಿದೀ ಮೂರು ಲಕ್ಷ್ಯವರಿದಂದು ॥ ಪ ॥ ತನುಮಧ್ಯವಿಡಿದಖಿಳ ಚಕ್ರ ಭೇದಿಸಿಯಾಗಿ । ಮಿನುಗುತಿಹ ನಡುನಾಡಿಯಂತರಾಳದೊಳು ॥ ವನಜಸೂತ್ರದ ಹವಣಿನೆಳೆ ಮಿಂಚುಗಳಿಗಧಿಕ । ವೆನಿಸ ತೇಜವನು ಮನದೊಳಗೆ ಭಾವಿಸಲು ॥ ೧ ॥ ಕರಿದು ಪೊಗೆಕೆಂಪು ಸಿತ ಪೀತ ವರ್ಣಂಗಳನೆ । ಪರಿವಿಡಿದು ನಾಸಾಗ್ರದಲ್ಲಿ ಪನ್ನೆರಡು ॥ ವರದಶಕ ಪಂಟಾರು ಚತುರಂಗುಲದ ಮಿತಿಯೊ । ಳಿರಿಸಿ ದೃಷ್ಟಿಯನು ಚಲಿಸದೆ ನಿರೀಕ್ಷಿಸಲು ॥ ೨ ॥ ಪಲವು ಶಶಿ ರವಿ ತಾರೆ ಶಿಖಿ ರನ್ನವೆಳಗುಗಳ । ನೊಳಕೊಂಡು ನೇಮಸೀಮೆಯನುಳಿದು ಮೆರೆವ ॥ ಸುಲಭ ಗುರುಶಂಭುಲಿಂಗದ ಪಾದಪಂಕಜವ । ನಲಸದನುಸಂಧಾನಿಸುತ್ತಿ ಸುಖಮಿರಲು ॥ .... .... .... .... ॥ ೩ ॥

## ೨೦. ರಾಗ-ಸೌರಾಷ್ಟ್ರ

ತಾರಕತ್ರಯದ ವಿಚಾರವೆಲ್ಲರನು ಸಂ । ಸಾರ ಸಾಗರವ ನುತ್ತರಿಸದಿಹುದೆ ॥ ಪ ॥ ಭೂತಪಂಚಕದ ಪಂಚೀಕರಣದಿಂ ಪುಟ್ಟ । ದಾ ತತ್ವ ಪಂಚವಿಂಶತಿಯುವಸರಿದು ॥ ನೇತಿಗಳಿದು ನಿಜಪದವೆ ತಾನೆಂಬ ಪುನೀತ ಭಾವನೆಯೆ ಸಾಂಖ್ಯವಿದು ಪೂರ್ವತಾರೆ ॥ ೧ ॥ ಧರಣಿಯ ತಾಣವೆರಡರೊಳು ಶಿಖಿಯಮಂ । ದಿರಯುಗದೊಳು ನಭದೆಡೆಯುಗಳದೊಳು ॥ ಕರಶಾಖೆ ಋತು ಗೂಡಿ ಬಲಿದು ನೋಡುತ ಕೇಳು । ತಿರೆ ಮಧ್ಯತಾರೆ ತಾನಿದು ಬಾಹ್ಯಮುದ್ರೆ ॥ ೨ ॥ ಪೊರಗಣ ವಿಷಯ ವಿಭ್ರಮತೆಗಾಣಿಸದವೆ । ದೆರದಕ್ಷಿ ತುಂಬಿಸೂಸದೆ ನಿಃಪ ವಾಯು ॥ ಕರಿಗೊಂಡು ಶಂಭುಲಿಂಗದೊಳಿಹ ಮನವಿದ । ನರಿಯಲಂತರ ಮುದ್ರೆಯುದಮನಸ್ಕ ತಾರೆ ॥ .... ॥ ೩ ॥

## ೨೧. ರಾಗ-ಸೌರಾಷ್ಟ್ರ

ಕಣ್ಣಿಮುಂದೆ ಕಾಣಿಸುತಿದೆ ಪರವಸ್ತುವಿದ । ನಣ್ಣಗಳರಿ ಬೇರೆ ಬಳಲುವರದೇಕ ॥ ಪ ॥ ಕರಿಯು ಬಿಳಿಯ ಕೆಂಪಿನರುಣೇಂದು ಶಿಖಿಯು ಸು । ಸ್ಥಿರ

ವಾದ ಮಂಡಲತ್ರಯದ ಮಧ್ಯದೊಳು ॥ ನೆರೆದು ತೋರುವ ನಾನಾಪರಿಯ ಬಿಂದುವಿನ ಬಂ । ಧುರದ ಕಾಂತಿ ಕೋಟ್ಯಾನು ಕೋಟಿಯ ನಡುವೆ ॥೧॥ ಮುಕುಳಿತವಾಗಿ ವಿಡುಕದಾಲಿ ರೇ । ಚಕ ಪೂರಕ ವಿಲ್ಲದಿಹಗಂಧವಹ ನನ್ಯ ವಿಷಯ ॥ ವಿಕೃತಿಸೋಂಕದೆ ನಿಂದಮನ ವಚ್ಚಳಿಯದೊಪ್ಪ । ವಕಳಂಕ ಮತಿಮರೆಯದೆ ನಿರೀಕ್ಷಿಸಲು ॥೨॥ ಇದಿರಿಟ್ಟು ಸಕಲವೆಲ್ಲವನು ನೋಡುವ ದಿವ್ಯ । ಹೃದಯಕಮಲ ಕರ್ಣಿಕಾಪೀಠದೊಳಗೆ ॥ ಸದಮಳ ಶಂಭುಲಿಂಗವೆ ಸಚ್ಚಿದಾನಂದ । ಪದವೆನಿಸಿಹುದಾಗಿ ಪರಿಭಾವಿಸಿದೊಡೆ ॥ .... ॥೩॥

## ೨೨. ರಾಗ-ಮಧುಮಾಧವಿ

ಪರತತ್ವದಿರವನು ಕರತಳಾಮಳಕದ । ಪರಿಯಂತೆ ಕಾಣಿಸುವೆಡೆಯಾವುದೆನಲು ॥ ಪ ॥ ಕಪ್ಪುರವೆರಸರಗ್ರದೊಳುತನ್ನಿರವನು । ಕಪ್ಪುರವಿಡಿದೊಪ್ಪುಗೆಡಿಸುವನೊಳಗೆ ॥ ಕಪ್ಪುರದೊಳಗಪ್ಪಿಗೆಣೆಯ ಮುಗಿಲಮಿಂಚಿ । ನೊಪ್ಪವೆ ನಿಜವೆಂದು ತಿಳಿವೆಡೆ ತಾನೆ ॥೧॥ ಪೊರಗೆ ತೋರುವ ಸತಿ ಪತಿಗಳ ಮೇಲಣ । ಮೆರೆವಾತುಮನೆ ಯಸುಪುರದಂಬರದೊಳು ॥ ನೆರೆ ನೀವಾರ ಕಂಟಕದ ತನುವಿನ ಪೊನ್ನ । ತೆರನದು ತತ್ವವೆಂದರಿವೆಡೆ ತಾನೆ ॥೨॥ ಜಲದ ಮೇಲಾಡುವ ರಾಜಹಂಸನಗೂಡ । ಕೆಲದ ಸಾಸಿರ ಸುವರ್ಣದ ಮಧ್ಯದಲಿ ॥ ಸುಲಲಿತ ಶಂಭುಲಿಂಗವೆ ಕಂಜದೆಳೆಯಂತೆ । ಬೆಳಗುತಿರ್ಪುದನು ಭಾವಿಸುವೆಡೆ ತಾನೆ ॥ .... .... .... ॥೩॥

## ೨೩. ರಾಗ-ಸೌರಾಷ್ಟ್ರ

ಯೋಚಿಸಿ ಪೇಳ್ವವನಿಗುಂಟು ಮೂರುಕಣ್ಣಿ । ನಾ ಚತುರತೆಯುಳ್ಳದಿದೇನೆಂಬುದನು ॥ ಪ ॥ ಮೊದಲೊಂದರೊಳು ಮೂವರಬಲೆಯರೆನಿಸಿ । ಹುದ್ದುಪುಣ್ಯಫಲವನು ಪಡೆವು ದೊಂದರೊಳು ॥ ಸದಮಳರನು ಪುಟ್ಟುಗೆಡಿವುದೊಂದರೊಳು ನದಿಗಳನೇಕದ ಜನನಿಯೊಂದರೊಳು ॥೧॥ ಒಂದರೊಳು ಬೆಸಗೊಂಬುದೊಂದರೊಳು ಪೊರೆವು । ದೊಂದರೊಳೆರಡನು ತಾನೊಂದುತಿಹುದು ॥ ಒಂದರೊಳು ಬೆಳಗುಗತ್ತಲೆಗಳುಕದ ಪೆರ । ತೊಂದರೊಳು ಬಂದು ತನ್ನ ಮುಂದುಗೊಂಡಿಹುದು ॥೨॥ ಹೆಣ್ಣು ಮಕ್ಕಳುಗಳೊಂದಾಟ ಮುಳಿದು ಪೊಗೆ । ವಣ್ಣದೊಂದೆರಡು ಬಟ್ಟೆಗಳನುಟ್ಟಿಹುದು ॥ ತಣ್ಣೆಸೆವುತಜ್ಞೆಯೆನಿವು

ದಾಸುರವೃತ್ತಿ । ಬಣ್ಣಿಸಿಕೊಂಬುದದೊಂದೆಡೆಯೊಳು ॥ ೩ ॥ ತಿರುಗುತಿಹುದು ನಿಲ್ಲದೊಂದರೊಳದು ನಿಂದು । ಪರಿವುದೊಂದರೊಳೆರಡೆಂಟೆಂಬರವನು ॥ ನೆರೆದಳತೆ ಬಂದುದೊಂದೆಡೆಯೊಳು ತೆರೆ । ದರೆ ತನಗದು ಭೋಗ ವೀವು ದೊಂದರೊಳು ॥ ೪ ॥ ಕುಂದದಾನಂದವ ನೀವು ದದೊಂದದತಿಬಲ್ಲಿದರ । ಸಂದು ಕಳೆವಡೆದಿಹು ದದೊಂದೆಡೆಯೊಳು ॥ ಮುಂದನಾಡಿ ತೋರ್ಪುದೊಂದ ರೊಳಾಡದಿಹುದದು । ಸಂದು ಶಂಭುಲಿಂಗದೊಲವಿತ್ತುದೊಂದರೊಳು ॥ ೫ ॥

## ೨೪. ರಾಗ-ಸೌರಾಷ್ಟ್ರ

ಕೊಳನಿದೊಂದತಿ ಕೌತುಕನೊಳು ಕಾಣಿಸುತಿದೆ । ಕಳಹಂಸ ನಿಳಯ ವೆನಿಸಿ ನೀರೆ ನೋಡೆ ॥ ಪ ॥ ಸರಸಿಜದೊಳಗೆ ತಾನಿದೆ ತನ್ನೆಡೆಯಣಂಬು । ಪರಿವುದು ಪೊರಸೂಸಿ ಬಿಸಿತಣ್ಣಿಗಾಗಿ ॥ ಎರಡೆನಿಸಿಹುದೇಕವಹುದು ಕಾಲಾದಿ ಸಂ । ಚರಣದಿ ಪುರುಷರೂಪವನು ತಾಳಿದೆ ॥ ೧ ॥ ಅಳಿ ಮೀನು ಮಿಂಚು ಕೈರವ ಕಂತುಶರ ಮೃಗ । ನಳಿನ ಮಯೂರ ಚಕೋರೇಂದು ಕಿರಣ ॥ ತೊಳಗುವ ತಾರೆ ಮಲ್ಲಿಗೆ ಬಗೆಗೊಂಡು ತ । ನ್ನೊಳು ವಿಶ್ವ ವಿಷಯ ಸಂಪದ ಸಿದ್ಧಿ ವಡೆದು ॥ ೨ ॥ ಬಿಸಿಲುರಿ ಜೊನ್ನದ ವರಗುಣ ಮೂಲಿಗ । ರಸುರಾಂಗಜಾಂಬರಫಣಿವಾಯುವರ್ನ ॥ ವಿಸರವಿಡಿದು ಶಂಭು ಲಿಂಗದ ನಿಜವಾಗಿ । ದೆಸೆದೋರ್ಕೆವಡೆದು ದ್ವಾರಾವತಿಯೆನಿಸಿ ॥ ॥ ೩ ॥

## ೨೫. ರಾಗ-ದೇಶಿ

ನೀನರಿದು ನೀರೆ ಪೇಳೆನಗೆ ಕಣ್ದೆರಪಾಗಿ । ನಾನಿಗಳೊಂದೊಂದ ನೊಲಿದು ಕೇಳುವೆನು ॥ ಪ ॥ ಕರಣಾದಿ ಕಾಲಾಟವೇನೇತರಿಂದಹುದು । ಹರನ ತನುವೆಂಟಗಲದೆಲ್ಲಿ ಕೂಡಿಹವು ॥ ಎರಡನೆಯ ಮಾತು ಮೈವೆತ್ತಿರ್ಪು ದಾವನೆಲೆ । ಕರುಣರಸವಾವುದರ ಕಡೆಯಿಂದಲಹುದು ॥ ೧ ॥ ಶಿವಶಕ್ತಿಗ ಳೆರಡು ಕಾಣಿಸುತ್ತಿಹವೆಲ್ಲಿ । ಶಿವನ ಚಿತ್ಪದವನರುಪುವ ಮಾರ್ಗವೇನು ॥ ಶಿವಯೋಗ ಮುದ್ರಾನುಭವದ ಬೀಡಾವುದು । ಶಿವಲಿಂಗದೆಡೆಯನೇನೆಂದು ಪೇಳುವರು ॥ ೨ ॥ ಶರೀರವಿಡಿದರ ವಿಷಯ ಭೋಗದಾಶ್ರಯವೇನು । ಕರ ಪೀಠದಿಷ್ಟವೆನಿಸುವ ಶಂಭುಲಿಂಗವು ॥ ಗುರುಮತದೊಳಾವ ದೆಸೆಯಿಂದ ಬಂದುದು ಮನದ । ಪರಿಣಾಮ ಪರವಶವದೆಲ್ಲಿ ಸೂಚಿಪುದು ॥ ॥ ೩ ॥

## ೨೬. ರಾಗ-ಸಾವೇರಿ

ನಿನ್ನ ಕಣ್ಣಿಂದೆ ಕಾಣೆಲವೊ ನೀನರಿವೆಂಬ । ಸನ್ನೆಯನನ್ಯಭಾವನೆ ಯಳಿದು ॥ಪ॥ ಮೂರುಬಣ್ಣಗಳು ಗುಣಾಕ್ಷರ ದೇವತೆ । ಮೂರು ಕಾಲಾವಸ್ಥೆ ತನು ಜೀವರು ॥ ಮೂರು ವೇದಾತ್ಮಾದಿಗಳು ದೃಶ್ಯವಾಗಿಂತು । ತೋರುತಿರ್ಪವು ನೀನೆ ದೃಶಿಯೆಂಬುದ ॥೧॥ ರವಿ ಸೋಮ ಶಿಖಿ ಮಂಡಲದ ಕಾಂತಿಯಿಂದೆ ತೋ । ರುವವೆಂತು ಘಟಪಟಾದಿಗಳಂತುಟು ॥ ವಿವಿಧ ತತ್ವಂಗಳು ನಿನ್ನ ಬೆಳಗಿನಿಂ । ದವೆ ರಂಜಿಸುವದಿದು ನಿಜವೆಂಬುದ ॥೨॥ ಸಕಲಜ್ಞನಖಿಳೇಂದ್ರಿಯಾದ್ಯ ನಮಳಯೋಗಿ । ನಿಕರ ಹೃದಯ ವಾರಿಜ ಹಂಸನು ॥ ಸಕಲಾರ್ಥ ಸಾಧಕನಹ ಶಂಭುಲಿಂಗವೆ । ಸಕಲಾನುಭಾವದಿ ನೀನಹುದೆಂಬುದ ॥ ........ ........ ॥೩॥

## ೨೭. ರಾಗ-ವಡ್ಡಿಧನ್ಯಾಸಿ

ಬಹು ಕೃತ್ಯವಳಿದಾತ್ಮ ಯೋಗ ನಿದ್ರೆಯೊ । ಳಿಹ ಮುಕ್ತನಿರವ ನೋಡು ರಮಣಿ ॥ಪ॥ ವರವಜ್ರಾಸನದಿಂದೆ ಸಮವೆನಿಪ ಸು । ಸ್ಥಿರವಾದ ತನುವೆಂಬ । ಸಜ್ಜವನೆಯ ॥ ಕರಣನಿಕರವೆಂಬ ಬಾಗಿಲನೆಲ್ಲವ । ನಿರದೆ ಷಣ್ಮುಖಿಯೆಂಬ । ಕದವನಿಕ್ಕಿ ॥೧॥ ನಡುನಾಡಿಗಂಭದೊಳು ಮೂಲ ಶಿಖಿಯೆಂಬ ಸೊಡರ ಬೆಳಗನೆತ್ತಿ ಬ್ರಹ್ಮರಂಧ್ರ ॥ ದೆಡೆಯಣಂಬುಜವೆಂಬ ಸಿರಿಮಂಚವ । ನಡರಿ ಪರಮ ಶಾಂತದೊಡನೊರಗಿ ॥೨॥ ಬಳಿಕ ಶಾಂಭವಿ ಮುದ್ರೆಯಿಂದೆ ಲೋಚನಂ । ಗಳನೊಯ್ಯ ನರೆ ಮುಚ್ಚಿ ಮೇಲೆ ಕವಿವ ॥ ಬೆಳಗಿನುನ್ಮನಿಯೆಂಬ ಸುಖಸುಪ್ತಿ ಯ । ಚ್ಚಳಿಯದೆ ಗುರುಶಂಭು ಲಿಂಗವೆನಿಸಿ ॥ ........ ........ ॥೩॥

ಇತಿ ತಾರಕತ್ರಯಃ

---

## ೨೮. ರಾಗ-ಸಾರಂಗ

ಪರಿಭಾವಿಸಲು ನಾಲ್ಕು ತೆರದೊಳೀಮನವೆ ಸಂ । ಚರಿಸುತಿರ್ಪುದು ಪೇಳ್ವೆನದನಿಂತು ॥ಪ॥ ಪದುಳಮಿರದೆ ಕಾಲತ್ರಯದೊಳು ವಿಷಯ ಸಂ । ಪದವನೆಳಸಿ ಚಿಂತೆಗೊಳಗಾಗ ॥ ಒದವಿ ತಾಮಸ ಹೃದಯದ ಹೀನವ

ತ್ತಿಯೆಂ । ಬುದು ತಾನೆ ವಿಕ್ಷಿಪ್ತವೆನಿಸುವದು ॥೧॥ ಯೋಗದೊಳಂತರಂಗ ದೊಳೊಮ್ಮೆ ಬಾಹ್ಯದ । ಭೋಗ ಸಂತಾನ ವಿಧಿಯೊಳೊಮ್ಮೆ ॥ ರಾಗಿಪ ರಾಜಸವಾದ ಚಿದ್ಗತಿಯೆ ಗ । ತಾಗತವಿದು ಮಧ್ಯವೆನಿಪುದು ॥೨॥ ಪೆರ ತೊಂದು ವಿಷಯದೊಳೆರಗದಂತರವಾಗಿ । ಮೆರೆವ ತತ್ವದೊಳೆಡೆಯುಡುಗದೆ ॥ ಕರಿಗೊಂಡು ಸತ್ವದುತ್ತಮಬುದ್ಧಿ ನಿಲಲದ । ನರಿಯೆ ಸಂಶ್ಲಿಷ್ಟವೆಂತೆನಿ ಪುದು ॥೩॥ ಅನು ನೀನದಿದೆಂಬುದೇನು ತೋರದೆ ಸಚ್ಚಿ । ದಾನಂದಬೋ ಧಾನುಭವದೊಳು ॥ ಮಾನಸವಡಗಿ ಸುಷುಪ್ತನಂತಿರಲು ಸ್ವ । ಲೀನವತ್ಯ ಧಿಕ ನಿರ್ಗುಣವಿದು ॥೪॥ ಇವರೊಳುತ್ತಮವೆನಿಸುವ ಮೂರನೆಯದಾಗಿ । ಹದಣಿಸಿ ನಿಂದ ಚೇತನವನು ॥ ತವೆ ತುರಿಯಾತ್ಮಕವನೆ ಮಾಡಿ ಶಂಭುಲಿಂ । ಗವೆ ತಾನಾದಿರವದು ನಿಜಮುಕ್ತಿ॥ ........ ........ ॥೫॥

ಇತಿ ವೃತ್ತಿಭೇದಃ

—:o:—

## ೨೯. ರಾಗ-ಸೌರಾಷ್ಟ್ರ

ತೊಲಗಿಸಿ ತನ್ನೊಡನಾಡಿಗಳನು ಮುಕ್ತಿ । ಲಲನೆಯನೊಡಗೂಡಿ ದನ ನೋಡೆ ರಮಣಿ ॥ಪ॥ ತನುವೆಂಬ ಸಜ್ಜೆಮನೆಯ ಚೌಕ ಮಧ್ಯವೆಂ । ದೆನಿಸುವ ಸಿರಿಮಂಚವಡರಿ ಮುಂದೆಸೆವ ॥ ಮನವೆಂಬ ಸಖನನಿಂದ್ರಿಯ ವೆಂಬ ಭೋಗ ಸಾ । ಧನವನೀವರ ನಸುವೆಂಬ ಚಾರರನು ॥೧॥ ನೆಲಸಿ ದಾರಧ್ವವೆಂಬನುಕೂಲ ಜನವ ನು । ಜ್ವಲ ನಾದ ಬಿಂದುಗಳೆಂಬ ಗಾಸ ರನು ॥ ನಲಿವ ಶಕ್ತಿಗಳೆಂಬ ಸಖಿಯರ ನಧಿದೈವ । ಕುಲವೆಂಬ ಸಕಲಕೋ ವಿದರ ಮೇಳವನು ॥೨॥ ಇನಿತೆಲ್ಲರನು ಪೊರಮಡಿಸಿ ರವಿ ಸುವೆನೆಂ । ಬನಿತ ರೊಳಾದುದಚ್ಚರಿಯಿದ ಮುಕ್ತಿ ॥ ವನಿತೆಯನೊಲುಮೆಯನುಳ್ಳ ತನ್ನನು ಕಾಣ । ದನುಪಮ ಶಂಭುಲಿಂಗವೆಯಾದನಮ್ಮ ॥ ........ ॥೩॥

ಇತಿ ಸಮಾಧಿಃ

ರಾಜಯೋಗ ಸಮಾಪ್ತಃ

———

ಶ್ರೀಗುರುಶಂಭುಲಿಂಗಾಯನಮಃ

## ಅಥ ಶಿವಯೋಗಃ

### ೩೦. ರಾಗ-ಸೌರಾಷ್ಟ್ರ

ದಿನ ದಿನದುಚಿತ ವೇಳೆಯೊಳುಪಚರಿಪುದು । ನಿನಗೆ ಕುಳವಲೆ ಯೋಗಿ ನೀನೆ ಬಿಡದಿದನು ॥ ಪ ॥ ಶಿವನ ಮೈವೆಳಗುತಾನಾದ ಭಸಿತವನು । ಶಿವನ ಮುಖವಾದಕ್ಷಮಾಲೆಯನು ॥ ಶಿವನ ಪೆಸರಾದ ಪಂಚಾಕ್ಷರ ಜಪವನು । ಶಿವನ ತದ್ರೂಪವಾದಿಷ್ಟವನು ॥ ೧ ॥ ಶಿವನ ಕರುಣಾತ್ಮಕವಹ ಸುಪ್ರಸಾದವನು । ಶಿವನ ಸುಖಮಯವಾದ ಪಾದತೀರ್ಥವನು ॥ ಶಿವನ ಸೌಭಾಗ್ಯ ಸಾಕಾರವಾದುಮೆಯುನು । ಶಿವನ ಪಲವೀವಿನ ಪ್ರಮಥರನು ॥ ೨ ॥ ಶಿವನಾಪ್ತಸಖಿಯಾದ ಭಕ್ತಿದೇವತೆಯನು । ಶಿವನ ಕೀರ್ತಿಯ ಮೂರ್ತಿವೇದವನು ॥ ಶಿವನ ಚಿತ್ಕಲೆಯಾದ ತನ್ನನು ಶಂಭುಲಿಂ । ಗವನರುಪಿದ ಗುರುಚರಣವನು ॥ .... .... ॥ ೩ ॥

### ೩೧. ರಾಗ-ಕಾಂಬೋಧಿ

ಪರತರ ಶಿವಲಿಂಗವೆಳಸಿ ನಿನಗಾಗಿ । ಕರಕಂಜದೊಳು ಕಾಣಿಸಿತು ಯೋಗಿ ಯಜಿಸು ॥ ಪ ॥ ಮೊದಲಪೀಠವೆ ಬಿಂದುವಾಗಿ ಮೇಲೆ ನಿಂದೆ । ಸೆದ ಪೀಠವದು ನಾದವಾಗಿ ಗೋಮುಖವೆ ಸದಮಳ ಕಳೆಯಾಗಿ ಸಕಲಾತೀತನೆ ಲಿಂ । ಗದ ನಿಜನಾಗಿರಲದರೊಳುಜ್ಜ್ವಲಿಪ ॥ ೧ ॥ ತರುವಿಸ್ತಾರವನೊಳಕೊಂಡಿರ್ದ ಬೀಜದ । ಪರಿಯಂತರಾರಧ್ವಗಳಿಗಿಂಬು ವಡೆದ ॥ ಪರಬೊಮ್ಮದಾಶ್ರಯವಾಗಿಹ ನಿಜಶಕ್ತಿ । ವೆರಸಿ ತನಗೆ ತಾನಾಧಾರವಾಗಿರ್ಪ ॥ ೨ ॥ ಮೂರು ಮಂಡಲವನುಚ್ಚಳಿಸಿ ಗುಣ ವರ್ಣ । ಮೂರನು ಮೀರಿ ಬೋಧ ಮಾತ್ರವಾಗಿ ॥ ತೋರುವ ಗುರುಶಂಭುಲಿಂಗವದು ತಾನೆ । ಬೇರೆನಿಸದೆ ನಿನ್ನ ಕಣ್ಣಮುಂದಿಹುದು ॥ .... .... ॥ ೩ ॥

ಇತಿ ಲಿಂಗಾರ್ಚನಂ

---

## ೩೨. ರಾಗ-ಫಾರಶಿ

ಪ್ರಾಣಲಿಂಗವಿದನು ಗುರುವಿ । ನಾಣತಿಯೊಳು ಕೇಳಿ ನೋಡಿ । ಮಾಣದೇಕ ಚಿತ್ತದಿಂದೆ ಜಾನಿಪನೆ ಕೃತಾರ್ಥನು ॥ ಪ ॥ ಆಸುವೆ ರವಿ ಯ ಪಾನಮಿಂದುವೆನಿಪು ದವರೊಳಗಲದೊಂದಿ । ಮಿಸುಪ ಶಾಂತ ಸಾಂತಮಾದ ಶೈವ ಶಕ್ತಿಬೀಜದ ॥ ಬೆಸುಗೆಯಾದ ತಾಣದೇಕ ವರ್ನದಖಿಳ ವೃತ್ತಿಮಯದ । ಪೆಸರು ದಳೆದು ಶ್ರವಣ ವಿಷಯವಾದ ಪರಮನಾದವೆ ॥ ೧ ॥ ಮೂಲ ಲಿಂಗ ನಾಭಿ ಹೃದಯ ಕಂಠಕೂರ್ಚ ಗೋತ್ರ ಮೊತ್ತ । ಜಾಲದಂಬುಜಾಕ್ಷ ರಾದಿ ದೈವ ಮಂತ್ರಶಕ್ತಿಯ ॥ ಮೇಳದೊಡನೆ ಕೆಂಪು ಮಿಂಚು ರನ್ನ ಚಿನ್ನ ಸೊಡರುಚಂಚ । ಲಾಲತಾಗ್ನಿ ದೀಪ್ತಿರೂಪದೋರ್ಪ ದಿವ್ಯಬಿಂದುವೆ ॥ ೨ ॥ ಪಲವು ವಿವರವಾಂತ ಕುಂಭದೊಳಗಣಚಲ ದೀಪದೊಂದು । ಬೆಳಗು ಮಸಗು ವಂತೆ ದೇಹ ಕರಣ ನಿಕರ ಮುಖದೊಳು ॥ ಪೊಳೆದು ವಿಶ್ವದೃಶ್ಯವೀಥಿಗಳನು ಬೇರೆ ಬೇರೆ ತೋರ್ಕೆ । ಗೊಳಿಪ ಚಾರು ಚಿತ್ಕಲ ಪ್ರಪೂರ್ಣ ಶಂಭುಲಿಂಗವೆ ॥ .... .... .... ॥ ೩ ॥

## ೩೩. ರಾಗ–ಫಾರಶಿ

ಭಾವಲಿಂಗವನೆ ಬಿಡದೆ ನೀನು ! ಪರಿ । ಭಾವಿಸು ಭೇದವಿಲ್ಲದೆ ಯೋಗಿ ॥ ಪ ॥ ಗುರು ಮಂತ್ರ ಶಕ್ತಿಯಿಂದುದಿಸದೆ । ಯೋಗ । ಕರಣ ಮಥನ ದೊಳುಜ್ಜ್ವಲಿಸದೆ ॥ ಕರ ಹೃದಯದ ಹವಣೆನಿಸದೆ । ನಿತ್ಯ । ಪರಿಪೂರ್ಣಾ ನಂದವಚ್ಚಳಿಯದೆ ॥ ೧ ॥ ದೀಪವದೀಪದ ಕಿರಣವ । ತಾನೆ । ವ್ಯಾಪಿಸಿ ತೋರುವ ಪ್ರಭೆಯಂತೆ ॥ ರೂಪಿಸಿ ಬೆಳಗುವಿಷ್ಟ ಪ್ರಾಣ । ಲಿಂಗಾ । ರೋಪ ವಿಲ್ಲದ ನಿರುಪಾಧಿಯ ॥ ೨ ॥ ಸುಕರದರ್ಚನೆ ಧ್ಯಾನವೆಸಗಲು । ತೋರ್ಪ । ಸಕಲಾಸಕಲ ನಿಷ್ಕಳಂಗಳ ॥ ನಿಕರ ವಿಷಯ ವಿಕಲ್ಪನೆ ಗೂಡದೊಪ್ಪು । ವಕಲಂಕ ನಿತ್ಯ ನಿರ್ಮಲವಾದ ॥ ೩ ॥ ಪೊರಗೊಳಗಣ ನೇತ್ರಮಾನಸ । ದಿಂದೆ । ಕುರುಹುವಡೆದು ಬಣ್ಣಬಗೆಯಾಗಿ ॥ ಬರಿ ಬಳಕೆಯೊಳೊಂದದ ವಿರಳ । ದೀಪ್ತಿ । ಕರಿಗೊಂಡು ವಿಕೃತಿಯೊಂದಿಲ್ಲದ ॥ ೪ ॥ ಸ್ಥೂಲ ತತ್ವಾ ತ್ಮಕ ಜೀವನ । ವೃತ್ತಿ । ಜಾಲವಂಟದ ಸೂಕ್ಷ್ಮಾಂತರದೊಳು ॥ ಮೇಳ ವಿಸದ ಸದಮಳ ಪರ । ಮಾನು । ಕೂಲದಿಂದಖಿಳ ಸಾಕ್ಷಿಕವಾದ ॥ ೫ ॥

ನೋಟದ ಸಮರತಿ ಕೂಟದ । ಮೇಲೆ । ಮಿಾಟನಿಸುವ ಪರವಶನಂತೆ । ನಾಟಿಸುತಿಹ ರೂಪು ರುಚಿಗಳ । ಮಿಾರಿ । ಸಾಟಿ ದೋರದ ತೃಪ್ತಿಮಯ ವಾದ ॥೬॥ ತರು ಮೂಲ ಶಾಖೆಯನೊಳಕೊಂಡ । ಬೀಜ । ದಿರವಿನಂದ ದೊಳು ಷಡಧ್ವದ ॥ ನೆರವಿಗೆ ಪರಮ ಕಾರಣವಾಗಿ । ಕಾರ್ಯ । ಕಾರಣ ಕರ್ಮದ ತೋರ್ಕೆವಡೆಯದ ॥೭॥ ಮಂದರಾಚಲನ ಚಲನೆ ನಿಂದ । ಸದಾ । ಸಿಂಧುವಿನಂತೆ ಬುದ್ಧಿವೃತ್ತಿ ॥ ಯೊಂದಿಲ್ಲದಿಹ ಕಾಲದೊಳು ನಿತ್ಯ । ಬೋಧಾ । ನಂದ ಮುಪ್ರೆಯೊಡೆಯದಿಪ್ಪ ॥೮॥ ತನು ಕರ್ಮವನು ವಾಯು ಜಯ ವನು । ಹಾರ । ದನುಭವ ಮಾತ್ರದೊಳಪರೋಕ್ಷ । ವೆನಿಸುವ ಗುರು ಶಂಭು ಲಿಂಗದ । ನಿಜ । ದನುವಿನ ಚಿನ್ಮಾತ್ರವೆನಿಸುವ॥ ........ ॥೯॥

ಇತ್ಯನುಸಂಧಾನಂ

---

## ೩೪. ರಾಗ-ದೇಶಿ

ಆವ ಮತದವ ರರಿವರಾಗಮವನುಳಿದು ಪರಿ । ಭಾವಿಸಲು ಸಕಲ ಜಗದಾದಿ ಲಿಂಗವನು ॥ಪ॥ ಕಲೆ ವರ್ಣ ಪದ ಮಂತ್ರ ಭುವನ ನಿರ್ಮಳ ತತ್ವ । ಕುಲವೆನಿಸಿ ಲಯಭೋಗದಧಿಕಾರವೆಂಬ ॥ ಪಲವವಸ್ಥೆಯನೈದಿ ಪರಮ ಪತಿಗಾ ಪೆಸರು । ಗಳನುಂಟುಮಾಡುವತಿಶಯದ ಬಿಂದುವನು ॥೧॥ ಹರನ ಬಹುಕೃತ್ಯದೆಡೆಯೊಳು ಪರಿಗ್ರಹಶಕ್ತಿ । ವರಲಿಂಗ ಪೀಠವಮಳ ಕ್ರಿಯಾರೂಪು ॥ ಪರೆ ಮೊದಲೆನಿಪ ನಾಲ್ಕು ನುಡಿವಳಿಯೊಳೊಲವಿತ್ತು । ಪರಿಪೂರ್ಣದೇಕವೆನಿಸುವ ಕುಂಡಲಿಯನು ॥೨॥ ಮಾಯೆಯನು ಮಿಾರಿ ಕರ್ಮವನು ಸೋಂಕದೆ ಮಲದ । ಸಾಯುಸವನುಳಿದ ವಿಜ್ಞಾನ ಕೇವಲರ ॥ ವಾಯದ ವಿವರ್ತ ಪರಿಣತಿಯುಳಿದು ಕಾರ್ಯಸಮು । ದಾಯವನು ವೃತ್ತಿ ಯೊಳು ಪಡೆವಂಬರವನು ॥೩॥ ತನಗಭವನೋರ್ವನಲ್ಲದೆ ಮಿಕ್ಕಿನಣು ಕರ್ತೃ । ತನವಿಲ್ಲದಖಿಳ ದೀಕ್ಷಾ ಪ್ರತಿಷ್ಠೆಯೊಳು ॥ ವಿನುತ ಸಿದ್ಧಿಗಳ ಸಾಧನ ದೆಡೆಯೊಳಧಿಕರಣ । ವೆನಿಸಿ ತಾನವನು ಫಲಿಸುವ ಬ್ರಹ್ಮವಿದನು ॥೪॥ ತಿಳಿದು ತಂತ್ರಾಂತರವನೆಳಸಿ ದೀಕ್ಷಿತರಾಗಿ । ಕಳೆದು ಮಾಯಾ ಕರ್ಮಪಾಶ ಯುಗಳವನು ॥ ಬಳಿಕ ಮುಕ್ತಿಯನೈದಿದವರೆಲ್ಲರನು ತನ್ನ ಕುಳದ ಭೋಗಿ

ಗಳೆನಿಸಿ ತಡೆವ ಕುಟಿಲೆಯನು ॥೫॥ ನವಚಕ್ರದೊಳು ಮಂಡಲತ್ರಯದ ಮಧ್ಯದೊಳು । ಹವಣಿಸಿದ ಬೆಳಗು ಬಹುವಿಧ ನಾದವೆಂಬ ॥ ಸವಿದೋರಿ ಯೋಗಿಗಳಿಗಾನಂದವನು ಮಾಳ್ಪ । ಶಿವನ ತನುವೆನಿಪ ನಿಜವಾಗೀಶ್ವರಿಯನು ॥೬॥ ನಿರುಪಮ ನಿರಾಲಂಬ ನಿರುಪಾಧಿ ಯೆಂದೆನಿಪ । ಗುರು ಶಂಭುಲಿಂಗವನು ತನ್ನ ನೆಡೆನಿಡದ ॥ ವರಯೋಗಿಗಳ ಮನೋಭಾವ ದೃಷ್ಟಿಗಳಲ್ಲಿ । ಕರತಳಾಮಳಕವೆನೆ ತೋರ್ಪ ವಿದ್ಯೆಯನು॥ ........ ॥೭॥

ಇತಿ ವಿದ್ಯಾ

## ೩೫. ರಾಗ–ಸೌರಾಷ್ಟ್ರ

ನೆನೆವುದು ಮೊದಲು ಹೃದಯ ನಳಿನವನಲ್ಲಿ । ಚಿನುಮಯ ಲಿಂಗ ದರ್ಶನೆ ಗೈಯೊ ಯೋಗಿ ॥ ಪ ॥ ವರಧರ್ಮಕಂದದ ಸುಜ್ಞಾನ ನಾಳದ । ಸುರುಚಿರೈಶ್ವರ್ಯವೆನಿಪ ದಳಾಷ್ಟಕದ ॥ ಪರಮ ವೈರಾಗ್ಯ ಕರ್ಣಿಕೆಯ ರುದ್ರಾದಿ ವಿ । ಸ್ತರ ಕೇಸರದ ಶಶಿನಿಭದ ಹೃದಯವ ॥೧॥ ಗುಣ ಮಂಡಲದ ವರ್ಣ ವಿಸರ ಮಂಡಲದಭ್ರ । ಮಣಿಸೋಮ ಶಿಖಿ ಮಂಡಲ ಬಿಂದು ನಾದ ॥ ಗಣಮಂಡಲದ ಪರಕುಂಡಲಿ ಭುಜಗನ । ಫಣದ ಬೆಳಗಿನ ಮಂಡಲದ ಹೃದಯವ ॥೨॥ ಬಿಸುತಂತು ನೀವಾರಶೂಕ ಸದೃಶಮಾದ । ಮಿಸುಪ ಮಿಂಚಿನ ತನಿವಣ್ಣದಾಕೃತಿಯ ॥ ದೆಸೆಗಳೆಲ್ಲವನುಜ್ಜ್ವಲಿಪ ಶಂಭುಲಿಂಗವೆ । ಜಿಸವೆತ್ತು ತನ್ನೊಳೊಂದಿರ್ಪ ಹೃದಯವ॥ ........ ॥೩॥

## ೩೬. ರಾಗ-ನಾದನಾಮಕ್ರಿಯೆ

ಮಾಡು ಶಿವಲಿಂಗ ಪೂಜೆಯನಂತರಂಗದೊಳು ನೋಡಿ ಸುಖಮಯ ಸಾಧನಗಳಿಂದೊಲಿದು ॥ಪ॥ ಹರನೆ ಸಕಲಾಧಾರನೆಂಬುದಾಸನ ವಖಿಳ । ಭರಿತನೀಶ್ವರನೆಂದು ತಿಳಿವುದಾಹ್ವಾನ ॥ ಪರಮಶಿವಪದವೆ ಜಗವೆಂಬುವದೆ ಪಾದ್ಯವದು । ಹರುಷವಾರಿಧಿ ಯಭವನ ಹುದೆಂಬುದರ್ಘ್ಯ ॥೧॥ ಪಾವನಾತ್ಮಕ ನೀಶನೆಂಬುದಾಚಮನೀಯ । ವಾವಿಮಳ ಶಮೆಯೆಂಬ ಸಲಿಲದಭಿಷೇಕ ॥ ಭಾವಪರಿಪೂರ್ಣವಾದುದೇ ವಸ್ತ್ರ ವಹಿತಕುಲ । ವಾವರಿಸದಿಹ ವಿದ್ಯೆಯದು ಯಜ್ಞಸೂತ್ರ

॥ ೨ ॥ ಮಿಗೆಮಂಗಳೋದಯವಲಂಕಾರವನುಭವದ । ಸೊ ಗ ಸೆ
ಲೇ ಪ ನ ವಧಿಕಕರುಣದಕ್ಷತೆಯು ॥ ಬಗೆಯಲರು ವಿಷಯವಾಸನೆಯಿಲ
ಯವೆ ಧೂಪ । ವಗಲದ ಪರಂಜ್ಯೋತಿಯದು ದೀಪವಹುದು ॥ ೩ ॥
ಭೇದವಡಗಿದಮತಿಯೆ ನೈ ವೇ ದ್ಯ ವಸಮರೂ । ಪಾದ ಸತ್ವಾದಿಗುಣ
ವೃ ತ್ತಿ ತಾಂಬೂಲ ॥ ವಾದನವೆ ವರನಾದವಹುದು ಸೋಹಂಭಾವ ।
ದಾದರಣೆ ಯುಳಿಯದಿರಲದೆ ಪ್ರ ದ ಕ್ಷಿ ಣ ವು ॥ ೪ ॥ ಒಹುತತ್ವವನು
ಮೀರಿದಿರವದು ನ ಮ ಸ್ಕಾ ರ । ವ ಹು ದು ಗುರುಶಂಭುಲಿಂಗದೊಳು
ತನ್ನುವನು ॥ ವಿಹಿತವೆನಿಸುವ ಯೋಗಮಾರ್ಗದಿಂ ಡೊ ಡ ವೆ ರ ಸಿ ।
ಸಹಜ ಕೈವಲ್ಯಪಡೆವುದೆ ವಿಸರ್ಜನವು ॥ .... .... ॥ ೫ ॥

ಇತಿ ಭಕ್ತಿಃ.

## ೩೭. ರಾಗ-ನಾದನಾಮಕ್ರಿಯೆ

ಲೇಸೆನಿಸುವ ಶಿವಯೋಗವಿವ್ವೈದನಭ್ಯಾಸಮಂ ಮಾಡಲು । ಮೋಸವಳಿದು ತನಗಚಲಿತ ಸುಖವೆ ನಿವಾಸವಾಗಿಹುದು ॥ ಪ ॥ ಕಲೆ ಛಂದ ಋಷಿ ಶಕ್ತಿ ಬೀಜ ಸುಸ್ವರ ತತ್ವಕುಲ ದೇವತಾಕ್ಷರ । ಸಲುವರ್ಣವಿವನುಳ್ಳ ಮನುಗಳೊಳು ಸುಗತಿಗಳನೋದಿ ತೋರುವ ॥ ಸುಲಭದೊಂದೆರಡಾರು ವರ್ಣದ ಮನುಗಳನೆ ಸಲೆ ಸಾಂಗವೆನಿಸಿ । ನಲಿದು ಬಿಡದೆ ಜಪಿಸುತೆ ಪರದೊಳು ಚಿತ್ತವಳಿಯೆ ಮಂತ್ರ ಯೋಗ ॥ ೧ ॥ ಆರುಚಕ್ರದೊಳಾರು ತೆರದೊಳೊಪ್ಪುವ ಕಂಜವಾರ ನಿಂಬುಗೊಂಡು । ತೋರುವ ಮನವಸುಗಳೊಡನೆ ಕೂಡಿ ಜಾರದೊಂದೆಡೆಗೆ ॥ ಮೀರಿಮೂಲಾಗ್ನಿವೆರಸಿ ನಡುನಾಡಿಯೊಳೇರಿ ಚಿಜ್ಜ್ಯೋತಿಯು । ಬೇರಾಗದೊಂದಿರೆ ಸ್ಪರ್ಶಯೋಗವಿದೆಂದು ಸಾರಿಪೇಳುವರು ॥ ೨ ॥ ಮೊದಲು ವಸ್ತ್ರಾಭರಣಾಯುಧಾದಿಗಳೊಳು ಪುದಿದೀಶರೂಪವನು । ಪದುಳದಿಂ ನೆನೆದದರವಯವವ ನೊಂದೊಂದನೊದವಿ ಬಿಟ್ಟುಳಿದ ॥ ಸದಮಳಾನಂದ ಚಿದ್ಘನವೆನಿಸಿದ ಪರಪದವನೈದಿ ತನ್ನ । ಹೃದಯ ಲಯವಾದೊಡದು ಭಾವಯೋಗವೆಂಬುದು ವಿಚಾರಿಸಲು ॥ ೩ ॥ ಕರಣಗೋಚರವಲ್ಲದಖಿಳ ಮನಂಗಳಾವರಿಸಿ ಲಕ್ಷಿಸದ । ಧರೆಮೊದಲಾದ ತತ್ವಾದಿಗಳೊಡನೆ ಸಂಕರಮಾಗದೊಪ್ಪುವ ॥ ಪರಿಕಲ್ಪನೆಗೆ ಬಾರದನುಪಮಾದ್ವಯ ನಿತ್ಯ ನಿರವಧಿ

ನಿರ್ಗುಣ । ಪರಮಾತ್ಮನೊಳು ಮತಿಯಡಗಲಭಾವವೆಂಬ ಯೋಗವ ಹುದು ॥ ೪ ॥ ಮರೆದೆನೆಂಬರಿದೆನೆಂಬುಭಯಬುದ್ಧಿಗೆಸಾಕ್ಷಿ ಬರಿಯರಿವೆನಿಪ । ಕುರುಹಿನ ಜಗವಾದೊಡಳಿದೊಡೆ ನಿಜರೂಪು ದೊರೆಯದೇಕವಾದ ॥ ಕೊರತೆಯಿಲ್ಲದ ಶಂಭುಲಿಂಗದೊಡನೆ ಮನವೆರಕವಾಗಿ ನಿಂದು । ಕರಿಗೊಂಡಿರಲು ಮಹಾ ಯೋಗವಾದೊಡೆ ನೆರೆ ಮುಕ್ತಿಯಹುದು ॥ .... ॥ ೫ ॥

ಇತಿ ಯೋಗಪಂಚಕಂ

---

## ೩೮. ರಾಗ–ದೇಶಿ

ಸತಿಪತಿಗಳಿವರ ಸಮರತಿಸುಖದ ಬಾಳುವೆಗೆ । ಪ್ರತಿಯುಂಟೆ ಲೋಕದೊಳು ನೋಡೆ ಲಲಿತಾಂಗಿ ॥ ಪ ॥ ಕಂಗಳೂರಿನ ಸೋಮಸೂರ್ಯ ವೀಧಿಯ ನಡುವೆ । ಶಿಂಗರದ ನೀಲದರಮನೆಯ ಮಧ್ಯದೊಳು ॥ ರಂಗುವೆಳಗೆಸೆವ ಸಜ್ಜೆಯ ಶಕುನಿಮಂಚದೆಡೆ । ಗಂಗವಿಸಿ ಬಂದು ಭರದೊಳು ಜವಳಿಗೊಂಡು ॥ ೧ ॥ ನಿರಿಸಡಿಲುತಿರೆ ತಾನೆ ತೊಟ್ಟ ಕಂಚುಕಗಳಿಯೆ । ನೆರೆತವಕವದರಿಂದೆ ಮುಂದುವರಿಯೆ ॥ ಮುರಿದೋಡೆ ಲಜ್ಜೆ ಗಾಢಾಲಿಂಗನದ ಸೊಗಸು । ಧರೆಯೊಳಾಳುತ್ತ ಸವಿಗಲೆಯೊಳೇಳುತ್ತೆ ॥ ೨ ॥ ಬೆರಸಿ ಬೇರೆನಿಸದೆರಡಾಲಿಕಲ್ಲುಗಳೇಕ । ಸುರಸವಾದಂತೆ ಪತಿಶಂಭುಲಿಂಗ ॥ ಶರಣ ಸತಿಯ ಕೂಡಿ ಪಗತರಾನಂದದೊಳು । ಪರವಶವನೈದಿಹುದ ನುಪಮಿಸಲು ಬಹುದೆ ॥ ೩ ॥

## ೩೯. ರಾಗ-ಸಾರಂಗ

ಯೋಗಿಗೆ ಪಂಚಾವಸ್ಥೆಗಳುಂಟು ಬೇರಂತವನರಿದಾಗಳೆ । ಕೈಗೂಡುವಳೊಲಿದಾ ಮುಕುತಿ ವನಿತೆ ॥ ಪ ॥ ಇಹ ಪರ ಲೋಕದ ಭೋಗವನೆಳಸದೆ ನಿಜಮೋಕ್ಷವೆಂ । ತಹುದು ತನಗೆಂದು ಶೃತಿಗುರುಗಳನಾರೈದು ॥ ಸಹಜ ಶಮೆ ಸತ್ಯ ಬುಧಜನ ಸಂಗತಿ ಮೊದಲಾದ । ಬಹು ಸುಗುಣದೊಳೆಚ್ಚರುದಳೆದುದೆ ಜಾಗರಾವಸ್ಥೆ ॥ ೧ ॥ ಬಿಸಿಲುದೊರೆ ಸುರಪನಧನು ಶರದಭ್ರದಂತೆಮೋ । ಹಿಸಿ ತೋರುವ ಭೂತಭುವನಾದಿ ವಸ್ತುಗಳು ॥ ಪುಸಿಯೆಂದು ತಿಳಿದಾತ್ಮನುಳುಮೆಯನೆಡೆವಿಡದೆ ಭಾ । ವಿಸುತಿರಲದುತಾನೆ ಕನಸೆಂದೆನಿಸು

ವವಸ್ಥೆ ॥ ೨ ॥ ಬೇದವಳಿದವಿರಳ ಸುಖ ಬೋಧವಳವಟ್ಟು ಬಳಿ । ಕಾದ ಪ್ರಾರಬ್ಧ ಭೋಗದೊಳು ವಿಕೃತಿಗಳ ॥ ಹೋದ ಹೊಲಬಿಲ್ಲದಚಲಿತ ಚಿತ್ತದಿ ರವೆ ತನ । ಗಾದೊಡದು ಸುಪ್ತಿಯೆನಿಸುತಿಹವಸ್ಥೆ ॥ ೩ ॥ ಬಯಲಬಾಗೊಡ ದಂತೊಳ ಹೊರಗಣ ಭಾವನೆಯ ಸಂ । ಶಯವಿಲ್ಲದಂಬುಧಿಯೊಳು ಮುಳು ಗಿದ ಘಟದಂತೆ ॥ ಸ್ವಯಮೆನಿಸುವ ಪರಿಪೂರ್ಣತೆ ಕರಿಗೊಂಡಚ್ಚಳಿಯದೆ ನಿ । ಶ್ಚಯವಾಗಲದೀಗಳೆ ನಿರ್ಮಲ ತುರೀಯಾವಸ್ಥೆ ॥ ೪ ॥ ಶರಿರವಿಡಿದಾವುದರೊ ಡನಭಿಮಾನತೆ ಯಣುವಿಲ್ಲದೆ । ನಿರುಪಮ ಸಾಕ್ಷಿಕ ಶಂಭುಲಿಂಗವಾಗುಳಿದು ದರುಶನ ಮತವಾದಿಗಳೆಲ್ಲರು ತಮತಮಗೊಂದೊಂದು । ಪರಿಯೊಳು ಪೊಗಲ್ದಿ ರವದು ತುರಿಯಾತೀತಾವಸ್ಥೆ ॥ .... .... .... ॥ ೫ ॥

ಇತಿ ವ್ರತಂ

ಯೋಗ ಪ್ರತಿಪಾದನಸ್ಥಲ ಸಮಾಪ್ತಂ

ಮಂಗಳಮಸ್ತು



ಶ್ರೀಗುರುಶಂಭುಲಿಂಗಾಯನಮಃ

# ಜ್ಞಾನಪ್ರತಿಪಾದನಸ್ಥಲ

## ೧. ರಾಗ-ಸಾರಂಗ ನಾಟಿ

ಅರುತೆರನಾದ ಭಾವಕರಿಗನುಗುಣವಾಗಿ । ತೋರುವ ಗುರುಕುಲದಿರವನು ಪೇಳುವೆನಿಂತೊಲಿದು ||ಪ|| ಆಕರುಷಣ ವಶ್ಯಾದಿಗಳಿಂದಿಹ ಸುಖವನು ವೇಳಿ । ಶೋಕವನೈದಿಸುವವನೆ ನಿಷೇಧಗುರುವಹನು ॥ ಬೇಕೆನಿಸುವ ಸಂಪದವನು ತನಗಿಲ್ಲಿ ಮುಂದೆ ಪರ । ಲೋಕದಲೀಸನು ಕೊಡುವನೆ ಕಾಮ್ಯ ಗುರುವಹನು ||೧|| ಭೇದಗತಿಗಳು ಹೇಯವೆಂದು ಶಮ ದಾಂತ್ಯಾದಿ । ಸಾಧನವನು ಕುರುಹಿಡುವನೆ ಸೂಚಕ ಗುರುಪಹನು || ವೇದವನುಮತವೆನಿಸಿದ ತತ್ವಸಂಪ್ರೀತಿಯನೆ । ಬೋಧಿಸಿ ತಿಳುಹುವ ಕುಶಲನೆ ವಾಚಕ ಗುರುವಹನು ||೨|| ಜೀವ ಶಿವ ತುರಿಯ ಪರವಸ್ತುಗಳೇಕತ್ವದನು । ಭಾವವನರುಹಿಸುವಾತನೆ ಕಾರಕ ಗುರುವಹನು ॥ ಪಾವನಾತ್ಮಕ ಶಂಭುಲಿಂಗವೆ ತಾನಾದ ನಿಜ । ಕೈವಲ್ಯಪದವೀವನೆ ವಿಹಿತ ಗುರುವಹನು || .... ||೩||

ಇತಿ ಗುರುಭೇದಃ

---

## ೨. ಶ್ರೀರಾಗ

ಸುಮ್ಮನಾಗದು ವಿಧಿಯೊಳೊಂದದೆ ಮುಕ್ತಿ || ಪ || ಇದುನಿತ್ಯ ವಿದನಿತ್ಯವೆಂಬುದನರಿಯದೆ । ಹೃದಯದ ಭೋಗೇಚ್ಛೆದೊರೆಯದೆ || ಒದವಿ ಶಮಾದಿ ಸಾಧನವಾರು ನೆರೆಯದೆ । ಸದುಗತಿಯಾಸೆಯೊಳುರಿಯದೆ ||೧|| ಗುರುಪಾದ ಸೇವೆಯನೊಲವಿಂದೆ ಮಾಡದೆ । ವರನಿಗಮವ ನೋಡಿ ಪಾಡದೆ ॥ ಶರಿರಮುಂತಾದುಪಾಧಿಗಳ ನೀಡಾಡದೆ । ಪರಮಜೀವರನೊಂದುಗೂಡದೆ ||೨|| ಸ್ವಪರವೆಂಬುಭಯ ವಾಸನೆ ದೋರೆ ಮುಳಿಯದೆ । ವಿಪರೀತ ಭಾವನೆಯಳಿಯದೆ || ಉಪಮೆಗೈದದ ಶಂಭುಲಿಂಗವಾಗುಳಿಯದೆ । ಸುಪಥವೀತೆರನೆಂದು ತಿಳಿಯದೆ || .... .... .... .... .... ||೩||

### ೩. ರಾಗ-ಮಧುಮಾಧವಿ

ಜ್ಞಾನ ವೈರಾಗ್ಯೋಪರತಿಗಳೆಂಬಿವನೆ ಸಂ। ಧಾನಿಸುತ್ತಿರೆ ಭೋಗ ಮೋಕ್ಷವಾಂಛಿತರು ॥ ಪ ॥ ಶ್ರವಣಾದಿಗಳು ಬೀಜವಾತ್ಮ ಹಂಕೃತಿಗಳ ವಿವರಣವದು ರೂಪು ಮರಳಿ ಸಂಸೃತಿಯ ॥ ನಿವಹ ಸಾಕ್ಷಿತ್ವವೇ ಕಾರ್ಯವಹುದೆಂದು ಬ। ಲ್ಲವರು ಭಾವಿಸುವುದರಿವಿಗೆ ನಿಜವೆಂದು ॥೧॥ ವನಿತಾದಿ ದೋಷದರುಶನವೆ ನಿಮಿತ್ತವಾ। ವನುವಿಂದವನು ಬಿಡುವುದು ರೂಪು ಬಳಿಕಾ ॥ ಮನವತ್ತಲೆರಗದಾನಿಷ್ಠೆಯದು ಕಾರ್ಯವೆಂ। ದೆನುತೆ ಬಗೆವುದು ವಿರಾಗತೆಗೆ ನೆಲೆಯೆಂದು ॥ ೨ ॥ ಯಮುವಾದಿ ಯೋಗವೇ ಕಾರಣವಹುದು ವಿ। ಶ್ರಮಿಸಿ ನಿಲೆ ಚಿತ್ತವದುರೂಪು ಬಾಹ್ಯದೊಳು ॥ ಭ್ರಮಿಸುವ ಕರ್ಮವಳಿದಿರ್ಪ ಸೆ ಕಾರ್ಯವೀ। ಕ್ರಮದಿಂದೆ ತಿಳಿವುದುಪರತಿಗೆ ಮತವೆಂದು ॥೩॥ ಇವರೊಳರಿವಿಲ್ಲದುಳಿದೆರಡು ಕೂಡಿರೆ ಮುಕ್ತಿ। ಸವನಿಸದುತ್ತರಲೋಕ ಗತಿಯಹುದು ॥ ಪವಣದರಿವಿರ್ದು ಮಿಕ್ಕೆರಡಿಲ್ಲದಿರೆ ಮೋಕ್ಷ। ಸವನಿಪುದಾರಬ್ಧ ದುಃಖವದು ಬಿಡದು ॥ ೪ ॥ ವಿರತಿಗೆಲ್ಲವನು ತೃಣವೆಂಬು ದುಪರತಿಗೆ। ಪರವಶನಂತಿಹುದಮಳಜ್ಞಾನಕ್ಕೆ ॥ ಗುರುಶಂಭುಲಿಂಗವೆ ತಾನೆಂಬ ದೃಢಬುದ್ಧಿ। ಶರಿರದಭಿಮಾನ ದಂದದೊಳಿಹುದವಧಿ ॥ .... ॥ ೫ ॥

ಇತಿ ಜ್ಞಾನವೈರಾಗ್ಯೋಪರತಿ ಲಕ್ಷಣಂ

---

### ೪. ರಾಗ-ಸಾವಂತ

ಕೈವಲ್ಯವರಿವಿಂದಹುದೆಂದೊಡಾತ್ಮ। ಕೋವಿದರಿಂತು ನೋಳ್ಪುದು ॥ ಪ ॥ ಹಿಂಗದೆ ನಿತ್ಯಕರ್ಮವ ಮಾಡಲು। ತುಂಗಧರ್ಮವಿವರ್ಧನ ॥ ಮಂಗಳಮಯ ಧರ್ಮದಿಂ ದುಷ್ಕೃತಿ। ಭಂಗವಂತಾಗೆ ಮೋಹಿಪ ॥೧॥ ಚಿತ್ತನಿರ್ಮಲವದರಿಂದೆ ಸಂಸೃತಿ। ಪ್ರೋತ್ತದೋಷ ದರುಶನ ॥ ಮತ್ತದರಿಂದೆ ವೈರಾಗ್ಯವದು ತಾನೆ। ಮುಕ್ತಿಯೊಲವೀವುದು ॥ ೨ ॥ ಕೂಡೆ ಕರ್ಮೋಪರತಿಯದು ಕೈಸಾರೆ। ಮಾಡುವಾಪೇಕ್ಷೆ ಯೋಗವ। ನೋಡಲಂತದರಿಂ ಶಂಭುಲಿಂಗದ। ರೂಢಿ ಸುಜ್ಞಾನವಪ್ಪುದು ॥ ॥ ೩ ॥

## ೫. ರಾಗ– ಕಾಂಬೋಧಿ

ತಿಳಿವುದೀಪರಿಯೊಳು ಮುಕುತಿ ದೊರೆವುದೆಂ । ದೆಳಸಿ ನಿಗಮ ನಿಷ್ಠ ರೆನಿಪ ಯೋಗಿಗಳು ।। ಪ ।। ಜ್ಞಾನದಿಂದೆ ಮರವೆಯಳಿವುದು ಮರವೆಯ । ಹಾನಿಯಿಂದೆ ಭೇದಬುದ್ಧಿ ಕೆಡುವುದದು ಕೆಡಲು ॥ ಹಾನೋಪಾದಾನವನುಳ್ಳ ವಿಷಯವದಿದೆಂಬನು । ಮಾನ ವಿಕೃತಿ ಪೋಪುದದು ಪೋಗಲೊಡನೆ ।।೧।। ರಾಗವೈರಗಳಿರವು ತೊಲಗೆ ಮಾಡಲಹು । ದಾಗದೆಂಬ ವಿಧಿನಾಶವದುನಾಶ ವೆನಿಸೆ ॥ ಆಗಪುಣ್ಯಪಾಪಕರ್ಮವಿಲಯ ವದುಪಿಂಗ । ಲಾಗಿ ದೇಹಭಾವ ನಷ್ಟ । ವದರನಷ್ಟದೊಳು ॥ ೨ ॥ ಮತ್ತೆಸಂಸೃತಿಗೆ ನಿರಾಕರಣವಹುದು ಮೇ । ಲುತ್ತಮ ಸಹಜವೆನಿಪವಸ್ಥೆ ಬಳಿಕಾ ॥ ಬಿತ್ತರಿಸಲರಿದಾದ ಸುಖವೆ ಸಲೆ ನೆಲ । ಸಿತ್ತದೀಗ ಶಂಭುಲಿಂಗವಾಗಿ ತಾನಿಪ್ಪಿರವದು ॥ .... ॥ ೩ ॥

ಇತಿ ಕೈವಲ್ಯ ಕ್ರಮಃ

---

## ೬. ರಾಗ-ಕಾಂಬೋಧಿ

ನಂಬು ಜ್ಞಾನವನೆ ಕರ್ಮವೆಂಬ ಜಾಲದೊಳು ಸಿಲ್ಕಿ । ಹಂಬಲಿಸ ದಿರು ಮುಕ್ತಿಸುಖಂ ಬಯಸಿ ಮನುಜ ॥ ಪ ॥ ಆಗಮ ಪುರಾಣ ವೇದಪೂಗ ದೊಳು ವಿಧಿಸಿದ । ಯಾಗ ದಾನ ಜಪ ನೀತಿ ಯೋಗ ಪೂಜಾದಿಗಳು ॥ ಈಗ ಜ್ಞಾನೋದಯ ಮಾತ್ರವಾಗಲದರೊಳು ಕೋಟಿ । ಭಾಗೆಯೊಳೊಂ ದಕ್ಕೆ ಸಮವಾಗುತಿರವದರಿಂದ ॥ ೧ ॥ ತನುವದಂಡಿಸಬೇಡ ಮನವನಿಲ್ಲಿಸ ಬೇಡ । ಧನವನೀಗಿರಬೇಡ ಮನೆಮಾರು ದೊರೆದು ॥ ವನವಾಸಬೇಡ ತನ ಗಿನಿತು ತತ್ವಜ್ಞಾನ ಸಂ । ಜನಿಸಲಘವೆಲ್ಲವನು ಕೆಡಿಪುದದರಿಂದ ॥ ೨ ॥ ಜ್ಞಾನವೆ ಮುಕ್ತಿಗೆ ಮಾರ್ಗವೇನು ಬೇರೊಂದಿಲ್ಲವೆಂದು । ಮಾನನಿಧಿಯಾದ ಶ್ರುತಿನಾನ್ಯಃಪಂಥವೆನಲು ॥ ನೀನಿದನೆ ಬಿಡದಿರನೂನ ಶಂಭುಲಿಂಗದ ಸು । ಜ್ಞಾನದೃಢಮಾಗೆ ಪರಮಾನಂದವಹುದರಿಂದ ॥ .... .... ॥ ೩ ॥

## ೭. ರಾ-ಶಂಕರಾಭರಣ

ಸನ್ಮತಿ ತನಗೆ ಸಂಪನ್ನವಾದರಿವಿದು । ನನ್ನಿಯೆಂದು ನಂಬು ಯೋಗಿ ನಿನ್ನ । ಮುನ್ನಿನ ಜಡಭಾವವಂ ನೀಗು ನಲಿದಿದು । ನನ್ನಿಯೆಂದು ನಂಬು ಯೋಗಿ ॥ ಪ ॥ ದುರಿತಕಾನನವಹ್ನಿ ಪರಿಭವ ಘನಚಂಡ । ಮರುತನ

ಜ್ಞಾನತಿಮಿರ ॥ ತರಣಿ ಮಾನಸಕುಲಗಿರಿವಜ್ರ ವನುತಾಪ । ಸರಸಿಜಹಿಮ ವಿದೆಂಬ ಆಹಾ ಸರಸಿಜಹಿಮವಿದೆಂಬ ॥೧॥ ಸಾರಸುಖದ ಸುಧಾವಾರಿಧಿ ಸುಕೃತದ । ಮೇರು ಮುಕ್ತಿಯ ಜನ್ಮಭೂಮಿ ॥ ಚಾರುಸಿದ್ಧಿಗಳ ಮಂದಾರ ವಿಪಿನದ ಮೂಲ । ಕಾರಣದಿರವಿದೆಂಬ ಆಹಾಕಾರಣದಿರವಿದೆಂಬ ॥೨॥ ನಿಗಮ ವರಸುವ ಮುನಿಗಳುಜಾನಿಪ ಸುರೋ । ರಗ ನರರ ಜಾಣುಮೆ ಗಾಣದ ॥ ಜಗದಾಗುಹೋಗಿನೊಳ್ಪುಗದಿಹ ಶಂಭುಲಿಂಗ । ದಗಣಿತ ನಿಜವಿದೆಂಬ ಆಹಾ ಅಗಣಿತ ನಿಜವಿದೆಂಬ ॥ .... .... .... ॥೩॥

ಇತಿ ಜ್ಞಾನೋತ್ಕರ್ಷಃ

---

## ೮. ರಾಗ-ಪಹಡಿ

ಬೊಮ್ಮವನರಿವೆನೆಂದು ಬಳಲುವರು । ತಮ್ಮನೇತಿಗಳೆದನ್ಯವನೆ ನೋಡಿ ಮನುಜರು ॥ಪ॥ ತಿಳಿದು ಮೊದಲು ತತ್ವಕುಳವೆಲ್ಲವನು ನೇತಿ । ಗಳೆದವನಾ ತ್ಮಕವೆಂದು ಬಳಿಕವನು ॥ ಒಳಗಧಿಕರಣವೆನಿಪನಿರ್ವಿಕಾರ ಸಂವಿ । ದುಳುಮೆ ತಾವೆಂಬ ವಿವೇಕವ ಬಳಿವಿಡಿಯುವೆ ॥೧॥ ಜಾಗರಣದೊಳು ಕನಸಿನೊಳು ನಿದ್ರೆಯೊಳು ಬೇ । ರಾಗಿಬಾಧೆ ಪಡುವ ವಿಶ್ವಾದಿಜೀವರ ॥ ಆಗುಹೋಗಿನೊಳ ಗಲ್ಲದನುಪಮಾನಂದ ಸುಧಾ । ಸಾಗರವೆ ತಮ್ಮನಿಜವಹುದೆಂದು ಬಗೆಯದೆ ॥೨॥ ಸ್ವಗತ ಸಜಾತಿ ವಿಜಾತಿಗಳೆಂಬ ಭೇದಭಾವ । ನೆಗಳು ಸಹಜವಾಗಿ ತಮ ಗಿಲ್ಲದೆ ॥ ಗಗನದಂತವಿರಳವಹ ಶಂಭುಲಿಂಗದೊಡ । ನಗಲಿಕೆ ತಮಗಿಲ್ಲದನು ಭೂತಿ ಜನಿಸದೆ ॥ .... .... ॥೩॥

ಇತಿ ಬಾಹ್ಯವೃತ್ತಿ ನಿರಾಕರಣಂ

---

## ೯. ರಾಗ-ಪಹಡಿ

ನಿನ್ನ ನಿಜವಿದನೆ ತಿಳಿ ಬೇ । ರೆನ್ನದಲೆ ಮನುಜ ॥ಪ॥ ಇದಮೆನಿ ಸಿಹುದಾ । ವುದದಕೆ ತಾನಾಶ್ರಯ ॥ ಪದವಾಗಿ ಬಾಧೆಯೊಂ । ದದೆತೋರು ತಿಹ ಸತ್ತಿ ॥೧॥ ಮೂರವಸ್ಥೆಗಳೊಳು । ತೋರುವಖಿಳವನು ॥ ಠೇರಿಂಟ್ಟಿರಿವು ದಾಗಿ । ವಿಾರಬಾರದ ಚಿತ್ತಿ ॥೨॥ ಎಲ್ಲವನಾರೈದು ನೋಡ । ಲಿಲ್ಲೆನಿಸಿದ

ನೇಹ ॥ ವೆಲ್ಲಿನೆಲಸಿಹುದು ತ । ನ್ನಲ್ಲಿಯದರಿಂದೆ ಸುಖ ॥ ೩ ॥ ಪ್ರಾಗಭಾವ ಮೊದಲಾದ । ವೀಘಟಾಳಿಗಳಿಗಲ್ಲ ॥ ದೇಗೈದು ನನ್ನೊಳಗಿಲ್ಲ । ವಾಗಿ ವಿಚಾರಿಸೆ ನಿತ್ಯ ॥ ೪ ॥ ಗಗನಾದಿಗಳು ತನ್ನೊ । ಳೊಗೆದ ಕಾರಣದಿಂದೆ ॥ ಮಿಗೆಪೂರ್ಣಪದವಿಂತು । ಬಗೆಶಂಭುಲಿಂಗವೆ ॥ .... ॥ ೫ ॥

ಇತಿ ವಸ್ತು ನಿರ್ದೇಶಂ

---

## ೧೦ ರಾಗ-ಸೌರಾಷ್ಟ್ರ

ಸ್ವಗತಾದಿ ಭೇದವಾತ್ಮನೊಳಿಲ್ಲವೆಂತೆನೆ । ಗಗನದಂತಿರೆ ನಿರವಯವನಾಗಿ ॥ ಪ ॥ ತರುವಿಗೆ ಶಾಖಾದಿ ಸ್ವಗತ ಭೇದವದನ್ಯ । ತರುವೆ ಸಜಾತೀಯವಹ ಭೇದವು ॥ ಗಿರಿಮುಖ್ಯವಹುದು ವಿಜಾತೀಯ ಭೇದವೀ । ಪರಿ ಭೇದವಿಲ್ಲವಾ ಪರದೊಳೆಂದು ॥ ೧ ॥ ಏಕಮೇವಾದ್ವಿತೀಯಂಬ್ರಹ್ಮವೆಂಬ ವ । ಚೋಕ್ರಮದೊಳು ವಿಶೇಷಣ ಪದದಿಂ ನಿ ॥ ರಾಕರಿಪುದು ಭೇದತ್ರಯುವನದಾಗಿ ಚಿ । ತ್ತೀಕವೀಜಗದುದಯಕೆ ಮೊದಲು ॥ ೨ ॥ ಉಳುಮೆಗೆ ಪೆರತಾಗಿ ಪರಮಾರ್ಥವೆನಿಸಿ ಕೊಂ । ಡುಳುಮೆ ಯೊಂದಿಲ್ಲವೆಲ್ಲಿಯು ನೋಡಲು ॥ ಉಳುಮೆಯಾದವಿರಳ ಶಂಭುಲಿಂಗದ ನಿಜ । ದುಳುಮೆಯೆ ತಾನೈಸೆ ಬೇರಾವುದುಂಟು ॥ .... .... .... ॥ ೩ ॥

## ೧೧. ರಾಗ-ಸೌರಾಷ್ಟ್ರ

ನಿನ್ನೊಳಿಹುದು ಸತ್ಯಪದವದನನುಭವ । ದಿಂ ನೋಡು ಮನುಜ ನೀನಹೆ ಮುಕ್ತನು ॥ ಪ ॥ ಮೊದಲಜನ್ಮದದೇಹ ವೀದೇಹ ವಿನ್ನು ಮುಂ । ದೊದಗುವ ದೇಹವೆ ಬೇರೆ ಬೇರೆ ॥ ಪುದಿದು ನೀನೋರ್ವನವರೊಳಗಲ್ಲದೆ ಕರ್ಮ । ದುದಯದಿಂ ದೇಹಿಯಾಗಿಹುದರಿಂದ ॥ ೧ ॥ ನೆನಸಿನೊಳಗೆ ನಿದ್ರೆ ಕನಸುಗಳಿಲ್ಲವಾ । ಕನಸಿನೊಳಿಲ್ಲವಾ ನೆನಸು ನಿದ್ರೆ ॥ ತನಿನಿದ್ರೆಯೊಳು ಮತ್ತೆ ಕನಸು ನೆನಸುಗಳಿಲ್ಲ । ವನಿತನನುಭವಿಪ ನೀನಿಹುದರಿಂದ ॥ ೨ ॥ ತಿಳಿಯಲೀಪರಿ ಬಾಲ್ಯ ಯೌವನ ವಾರ್ಧಿಕಂ । ಗಳು ತವ್ಮೊಳಗೆ ವಿಲಕ್ಷಣಮುಳ್ಳವು ॥ ತಳೆದು ನೀನೇಕರೂಪನು ಬಿಡದಂತವ । ರೊಳಗನುಸಂಧಾತೃವಹುದರಿಂದ ॥ ೩ ॥ ದಿನ ಪಕ್ಷಮಾಸ ವರುಷ ಯುಗ ಕಲ್ಪಾದಿ । ಯೆನಿಸುವಿ

ವೊಂದರೊಳಿಲ್ಲವೊಂದು ॥ ಅನಿತೆಲ್ಲರಾಗುಹೋಗನು ವಿಚಾರಿಸಿ ಕಾಣ್ಬ । ನಿನಗೆ ವಿಕೃತಿ ದೋರದಿಹುದರಿಂದ ॥ ೪ ॥ ಅರಿಯದಜ್ಞಾನವನರಿವ ವಿವೇ । ಕವ । ನರಿದ ವಿದ್ಯೆಯನದ್ವಿತೀಯವಾಗಿ ॥ ಅರಿವ ಗುರುಶಂಭುಲಿಂಗದೊಳನ್ಯ ವಿಲ್ಲದೆ ಮೆರೆವ ಸದ್ರೂಪು ನೀನಹುದರಿಂದ॥ ........ ॥೫॥

## ೧೨. ರಾಗ—ನಾದನಾಮಕ್ರಿಯೆ

ನೋಡು ನೋಡು ನೀನೆ ಪರವೆಂದು । ತತ್ವ । ಗೂಡದೆ ವಿಲಕ್ಷಣ ನಾಗಿ ನಿಂದು ॥ಪ॥ ಆದಿದೆನ್ನದಿದಿರಿಟ್ಟುದಳಿದು ಪೋಪ್ಪ । ದಿದಸತ್ಯವೆಂದು ನೇತಿಗಳೆದು ॥ ಮೊದಲವಾಸನೆಯ ಹಮ್ಮಳಿದು । ನಿಜ । ಪದವಖಂಡಿತ ವೆಂದು ತಿಳಿದು ॥ ೧ ॥ ನೆನಸಿನಖಿಳ ಜಗವೆಲ್ಲ । ಪುಸಿ । ಕನಸಿನಂದದಿ ನಿತ್ಯ ವಲ್ಲ ॥ ಜನನಾದಿ ವಿಕೃತಿಯೊಂದಿಲ್ಲ । ನಿನಗೆನುತಿವೆ ಶ್ರುತಿಕುಲವೆಲ್ಲ ॥ ೨ ॥ ಧರೆಮೊದಲಾದ ಮೂಲ ಬಿಂದು । ಕಡೆ । ಚರವಚರಾದಿಯೊಳಗೆಂದು ॥ ಬೆರಸದಾಶ್ರಯವಾಗಿ ನಿಂದು । ತೋರ್ಪ । ಗುರುಶಂಭುಲಿಂಗವೆ ನೀನೆಂದು॥ ........ ........ ॥೩॥

## ೧೩.—ರಾಗ—ತೋಡಿ

ಭವಮಾಲೆಗೊಳಗಾದೆನೆಂಬುದೆ ಪುಸಿ ನಿನ್ನ । ವಿವರಿಸಿ ನೋಡು ನೋಡೆಲೆ ಜೀವನೆ ॥ಪ॥ ಪೊರಚಿಂತೆಯಳಿದನಾಹತ ನಾದದೊಳು ಬುದ್ಧಿ । ಕರಿಗೊಂಡು ಪರಮಶಾಂತಿಯನೈದಲು ॥ ಮಿರುಗುವ ಬೆಳಗಿನ ಬಳಗವನೊ ಳಕೊಂಡು । ಮೆರೆವ ಶಿವಾತ್ಮನೀನಾಗುತಿಂತು ॥೧॥ ನೇತಿಗಳೆದು ಕಾಯ ಕರಣ ಕಾರ್ಯಂಗಳ । ಭೂತಕಾರಣ ಪಂಚಕವನುಳಿದು ॥ ನೀತಿ ಭೀತಿಯ ಮೀರಿ ನಿಂದು ನೋಡಲು ಪರಂ । ಜ್ಯೋತಿ ಸ್ವರೂಪ ನೀನಾಗುತಿಂತು ॥೨॥ ಅನಘನದ್ವಯ ನಿತ್ಯ ಮುಕ್ತ ಸತ್ಯಾನಂದ । ಜನನಾದಿ ರಹಿತ ಮಾಯಾ ವಿದೂರ ॥ ನೆನಿಪತತ್ತ್ವಮಸೀತಿಯೆನೆ ವೇದವಚನವು । ಘನಶಂಭುಲಿಂಗ ನೀನಾಗುತಿಂತು॥ ........ ........ ॥೩॥

ಇತಿ ಸದ್ರೂಪಾನು ಸಂಧಾನಂ.

---

### ೧೪. ರಾಗ—ತೆಸುಗು ಕಾಂಬೋಧಿ

ಅರಿವೆ ಬರಿಯರಿವೆ ನೀನು । ಮರೆಯದೊಮ್ಮೆಯು ಜಗ । ದಿರವನಿಂತ ರಿವೆ ॥ಪ॥ ಜಾಗರಣದ ಜಡಪೂಗವಿವನು ವಿಶ್ವ ॥ ನಾಗಿ ನೇತ್ರಾದಿಕ ಯೋಗದಿಂದರಿವೆ ॥೧॥ ಕನಸಿನ ಕಲ್ಪನೆಯನು ಮನವೆಂಬ ಸಾ ॥ ಧನದಿಂ ದೆ ತೈಜಸನೆನಿಸಿ ನೀನರಿವೆ ॥೨॥ ಪರಸುಖವನು ನಿದ್ರೆವೆರಸಿ ಮಾಯಾ ವೃತ್ತಿ ॥ ಕರಣದಿ ಪ್ರಾಜ್ಞಪೆಸರು ದಳೆದರಿವೆ ॥೩॥ ಮರಹನರಿವೆ ಮೊದಲ ರಿವನರಿವೆ ಬಳಿ ॥ ಕರಿವು ಮರವೆ ಸೋಂಕದಿರವ ನೀನರಿವೆ ॥೪॥ ಅರಿವು ತಾನೆ ಪರತರ ಶಂಭುಲಿಂಗದ ॥ ಕುರುಹಿನ ಭಾವನೆ ದೊರೆದು ನೀನರಿವೆ ॥೫॥

### ೧೫. ರಾಗ—ನಾದನಾಮಕ್ರಿಯೆ

ಅರಿವು ನೀನೆಂದು ಸದ್ಗುರು ಪೇಳೆ ತಿಳಿವನೆ । ಜಾಣರದೇವ । ಅರಿವಿ ನೊಳನ್ಯ ಕಲ್ಪನೆಗಳನುಳಿವನೆ ಜಾಣರದೇವ ॥ಪ॥ ಅರಿವೆ ಪರಬ್ರಹ್ಮವೆಂದು ಭಾವಿಸುವನೆ । ಜಾ । ಅರಿವನೆ ನಿತ್ಯ ನಿರ್ಮಳವೆಂದು ನೆನೆವನೆ । ಜಾ ॥ ಅರಿವೆ ನಿರ್ಗುಣ ನಿರ್ವಿಕೃತಿಯೆಂದು ಬಗೆವನೆ । ಜಾ । ಅರಿವಿಲ್ಲದುದೆ ಜಡ ವಹುದೆಂದು ಬಿಡುವನೆ । ಜಾ ॥೧॥ ಅರಿವೆ ಸದಾನಂದವೆಂದನುಭವಿಪನೆ । ಜಾ । ಅರಿವೆ ಸ್ವಯಂಜ್ಯೋತಿಯೆಂದರುಹಿಸುವನೆ । ಜಾ ॥ ಅರಿವಿನೊಳಿ ಲ್ಲೊಮ್ಮೆ ಮರಹೆಂದು ಬಲ್ಲನೆ । ಜಾ ॥ ಅರಿವವಸ್ಥೆಗಳಿಗೆ ಪೆರತೆಂದು ಕಾಣ್ಬನೆ ಜಾ ॥೨॥ ಅರಿವೆ ವಿಶ್ವಾಶ್ರಯವೆಂದನುಕರಿಪನೆ । ಜಾ । ಅರಿವಿಲ್ಲದಾಗದೆಂ ಬುದನೂಹಿಸುವನೆ । ಜಾ ॥ ಅರಿವರುಹಿಸಿ ಕೊಳ್ಳದೆಂದನುಮಿಸುವನೆ । ಜಾ । ಅರಿವೆ ಸಕಲ ಶಾಸ್ತ್ರನುತವೆಂದು ತೋರ್ಪನೆ । ಜಾ ॥೩॥ ಅರಿವೆ ತ್ರಿಪುಟಿಗಾ ದಿಯೆಂದು ಲಕ್ಷಿಸುವನೆ । ಜಾ । ಅರಿವನು ತನ್ನ ಕಣ್ಣೊಳು ಕುರುಹಿಡುವನೆ । ಜಾ ॥ ಅರಿವೆ ವಿಷಯ ಪಲರೂಪೆಂದು ನೋಳ್ಪನೆ । ಜಾ । ಅರಿವೆ ಸತ್ಕ್ರಿಯೆಗಳಿಗಸುವೆಂ ದು ಬಿಡದನೆ । ಜಾ ॥೪॥ ಅರಿವೆ ವಿದ್ಯಾದ್ವೈತ ಗುರುವೆಂದು ಭಜಿಪನೆ । ಜಾ ॥ ಅರಿವನೆ ಪರಮೋಕ್ಷದಿರವೆಂದು ಕೂರ್ಪನೆ । ಜಾ ॥ ಅರಿವೆ ತಾನೆಂದುಸಂದೆಗ ವಿಲ್ಲದಾತನೆ । ಜಾ ॥ ಅರಿವಿದುನಿಜಶಂಭುಲಿಂಗವೆಂದಿರ್ಪನೆ । ಜಾಣರದೇವ ॥೫॥

### ೧೬. ರಾಗ—ತೆಸುಗು ಕಾಂಬೋಧಿ

ಅರಿವೆ ಯೆಲೆ ಅರಿವೆ ನಿನ್ನ ತೆರ । ನರಿಯೆ ಮುಕ್ತಿಯಹುದು ನಿಶ್ಚಯ ವಂತೆ ॥ಪ॥ ಪೊರಗಣ ರೂಪಾದಿ ವಿಷಯವೆಲ್ಲವನು ಕ ॥ ಣ್ದೆರಸಾಗಿ ಸಲೆ

ಬೇರೆ ಬೇರೆ ಗೋಚರಿಸುವ ||೧|| ಒಂದರೊಳೊಂದಿಲ್ಲದಿಹ ಮೂರವಸ್ಥೆಯ || ನೊಂದದೆ ನಿತ್ಯ ಸಾಕ್ಷಿಕವಾಗಿ ಬೆಳಗುವ ||೨|| ನಾನಾತನು ಭಿನ್ನವಾಗಲವರ ಕೂಡೆ || ಹಾನಿ ಚಲನೆ ಭೇದವಿನಿತಿಲ್ಲದೊಪ್ಪುವ ||೩|| ದಿನ ಪಕ್ಷ ಮಾಸಾದಿ ಭೂತಾದಿ ಸರ್ಗಾದಿ || ಯೆನಿಪ ಕಾಲದೊಳು ಖಂಡಿತವಾಗ ದೊಪ್ಪುವ ||೪|| ನಯನ ಮಾನಸ ಜೀವ ತುರ್ಯ ನೀಶ ಬ್ರಹ್ಮ || ಮಯವಾದ ಶಂಭುಲಿಂಗದ ನಿಜವೆನಿಸುವ|| ........ ........ ||೫||

## ೧೭. ರಾಗ–ಸಾವಂತ

ಅರಿವೆ ತಾನೆಂದು ನಂಬಿ ನಿಂದೊಡೆ ಮುಕ್ತಿ | ಪೆರತಿಲ್ಲವೆಂದುದು ನಿಗಮೋಕ್ತಿ ||ಪ|| ತನುವಿಂದ್ರಿಯಾಳಿಯಸು ವರ್ಗವನು ಬಿಟ್ಟು | ಮನ ಬುದ್ಧಿ ಹಂತೆಯನು ಸುಟ್ಟು || ಜನಿತ ಭೂತವಿಷಯವನೆ ಬೇರಿಟ್ಟು | ಘನ ನಿರ್ಗುಣಾತ್ಮತೆ ಯಳವಟ್ಟು ||೧|| ವಿಕೃತಿರೂಪ ವಿಶ್ವತುಷವೆಲ್ಲವನು ತೂರಿ | ಪ್ರಕೃತಿ ಮಾಯೆಗಳನು ಮೀರಿ || ಸುಕೃತಾದಿ ಕರ್ಮವಾಸನಾ ರಸವಾರಿ | ಪ್ರಕಟಬಿಂದು ಶಿಖರಿಯನೇರಿ ||೨|| ಭಾವಕಲ್ಪನೆ ಭೇದಬಣ್ಣವಳಿದು ಪೋಗಿ | ಜೀವತ್ವವನು ನೆರೆ ನೀಗಿ || ತೀವಿ ಶಂಭುಲಿಂಗದೊಳುಮೆಯೆಚ್ಚರವಾಗಿ | ಕೈವಲ್ಯಪಡೆದವನೆ ಯೋಗಿ|| ........ ........ ||೩||

## ೧೮. ರಾಗ–ದೇಶಿ

ಆವಪುಣ್ಯದ ಫಲವಿದೆಂದು ಕುರುಹಿಡಲಹುದು | ಜೀವಭಾವವನು ಳಿದ ನಿಜನಿಷ್ಠೆಯ ||ಪ|| ಅರಸು ನರ್ತಕಿ ತಾಳಧಾರಿ ಸೂರಿಗಳನಾ | ವರಿಸಿ ಬೆಳಗುವ ರಂಗದೆಡೆಯ ಸೊಡರಂತೆ || ನೆರೆದಹವು ಬುದ್ಧೀಂದ್ರಿಯಾದಿ ವಿಷಯಂಗಳಾ | ಚರಣ ಸಾಕ್ಷಿಕ ಚಿತ್ತು ತಾನೆಂಬ ಸುಖವ ||೧|| ಮನೆ ಯಕಂಡಿಯೊಳೈದಿದಿನ ಕಿರಣದಲ್ಲಿ ಕರ| ವನು ಚಲಿಸೆ ನೇಸರು ಚಲಿಸಿತೆಂ ಬಂತೆ.|| ಜನನಾದಿ ವಿಕೃತಿ ಜೀವಂಗೆ ತೋರಿದೊಡದನು | ತನಗೆ ನಿಜವಲ್ಲವೆಂ ದರಿದ ಪರಿಣಾಮವ ||೨|| ಬೆಳಗು ಕತ್ತಲೆಗಳಂ ತಳೆದೊಡಾಗಸದ ನಿ | ರ್ಮಳವಳಿಯದಂತೊಪ್ಪುವರಿವು ಪುರವೆಗಳ || ಬಳಕೆಗಾಶ್ರಯವೆನಿಸುತವ ರೊಡನೆ ಬೆರಸದವಿ | ರಳ ಶಂಭುಲಿಂಗ ತಾನಾದ ಸಂಪದವ ||೩||

೧೯. ರಾಗ—ಧನ್ಯಾಸಿ

ಮೂರು ತನುವಿಡಿದು ತೋರುವ ಮೂರವಸ್ಥೆಯೊಳು । ಮೂರು ಗುಣವೃತ್ತಿಗೊಳಗಾದ ಜೀವತ್ರಯದ । ದೂರುವಡೆಯದ ಪ್ರತ್ಯಗಾತ್ಮ ತಾನೆಂಪರಿದ ಮೇಲೆ ಭವಮಾಲೆಯುಂಟೆ ॥ಪ॥ ಕರಣವೈದಿಂದ್ರಿಯದಶಕ ವೈದು ಭೂತಾದಿ । ಮರುತವೈದಿಂತೆಸೆವ ಪಂಚವಿಂಶತಿತತ್ವ । ಪರಿಕರದೊ ಳೊಂದಿಹುದು ತೋರತನುವಲ್ಲಿ ಸಾತ್ವಿಕ ಗುಣವಕಾರಾಕ್ಷರ ॥ ವರಲೋಚನ ಸ್ಥಾನವಷ್ಟದಳ ಕುಳದ ಗತಿ । ವೆರಸಿ ವಿಶ್ವಾತ್ಮ ವೈಶ್ವಾನರರು ವನಿತಾದಿ । ಪರಿವಿಡಿದು ಭೋಗವನು ಸಕಲ ಸಾಮಗ್ರಿಯಿಂದುಣುತಿಹುದೆ ಜಾಗರ ಣವು ॥೧॥ ಪೇಳಿದಿಪ್ಪತ್ತೈದು ತತ್ವದೊಳು ಮತಿ ಚಿತ್ತ । ಮೇಲೆ ಜ್ಞಾತೃ ಭೂತಂಗಳನುಳಿದು ವಿಕ್ಕ ಹದಿ । ನೇಳು ವೊತ್ತದ ತತ್ವವೆ ಲಿಂಗತನು ರಜೋಗುಣ ಕಂಠನೆಡೆಯುಕಾರ ॥ ಮೇಳದೊಳು ತೈಜಸ ಹಿರಣ್ಯಗರ್ಭರು ಕೂಡಿ । ಲೋಲಗತಿ ಕರ್ಣಿಕೆಯೊಳಗೆ ವಾಸನೆಯ ವಿಷ । ಯಾಳಿಯನು ಮನವೆಂಬ ಕರಣದಿಂದನುಭವಿಸುತಿಹುದೆ ಸ್ವಪ್ನಾವಸ್ಥೆಯು ॥೨॥ ಮೊದಲ ತನುವೆರಡರೊಳಗೊರೆದಖಿಳ ತತ್ವ ಸಂ । ಪದವಡಗಿ ಸಂಸ್ಕಾರದುಳುಮೆ ಯಾಗಿಹ ಪ್ರಕೃತಿ । ಯದು ಕಾರಣಾಂಗವದರಲ್ಲಿ ತಾಮಸಗುಣ ಮಕಾರ ನೆಲೆಹೃದಯನಡುವೆ ॥ ಪದುಳದಿಂ ನಿಂದಗತಿಗಳನೊಂದಿ ಪ್ರಾಜ್ಞೇಶ । ರೊದವಿ ಮಾಯಾವೃತ್ತಿಯೆಂಬ ಸಾಧನದಿಂದೆ । ಸದಮಳಾನಂದ ವಿಷಯ ವನು ಸೇವಿಸುತಿಹುದೆ ಸುಷುಪ್ತಿಯೆಂದೆನಿಪವಸ್ಥೆ ॥೩॥ ಆಜಾಗರಣದೊಳಿಡೆ ಯಾಡಿ ಬಳಲು ಮನವ । ಸೋಜೆಯಿಂ ನಿಲಿಸಿ ಬೇರೊಂದನೆಣಿಸದೆ ಮಹಾ । ತೇಜೋಮಯದ ಮೂಲಮಂತ್ರದ ಸುನಾದವನೆ ಕೇಳುತಿರ್ಪುದೆ ತುರಿಯವು ॥ ರಾಜಿಸುವ ನಾದಾನುಸಂಧಾನದಾರ್ಢ್ಯಕೆ । ಮಾಜಿ ನೈತಿರಲು ತುರ್ಯಾತೀತವೀರೆರಡ । ನೀಜಗದೊಳಭ್ಯಾಸಮಂ ಮಾಡಿದೊಡೆ ನಿತ್ಯ ಮುಕ್ತಿಪದಸಿದ್ಧಿಯಹುದು ॥೪॥ ಈಪರಿಯವಸ್ಥೆಯೈದರೊಳಾಳುತೇಳುತನು । ತಾಪ ಮಮಕಾರ ಮೋಹಜನನಾದಿ ವಿಕೃತಿಯಿಂ । ದಾಪತ್ತುಗೊಳುತಿರ್ಪ ಜೀವನೊಡವೆರಸದಾಶ್ರಯವಾದ ಸಾಕ್ಷಿ ತುರ್ಯ ॥ ರೂಪಚಿನ್ಮಾತ್ರ ಕೂಟಸ್ಥನೆಂದೆನಿಸತಾ । ನಾಪರಬ್ರಹ್ಮ ಪರಮಾತ್ಮ ಪರತತ್ವನಿ । ರ್ಲೇಪ ನಿತ್ಯಾಸಂದ ಘನಶಂಭುಲಿಂಗದಿರವಾಗಿ ತನಗಿಲ್ಲವಸ್ಥೆ ॥ ........ ॥೫॥

ಇತಿಪಂಚಾವಸ್ಥಾಃ.

### ೨೦. ರಾಗ-ಕಾಂಬೋಧಿ

ಜೀವನಿಗವಸ್ಥೆಗಳೇಳವನು ಪರಿ । ಭಾವಿಸಿ ನೋಡಿರೆ ಬಂಧರಹಿತ ರಪ್ಪರವರು ॥ ಪ ॥ ತನ್ನ ನಿಜವನು ಪರೀಕ್ಷಿಸದೆ ಹೇಯು । ವೆನ್ನದೆ ವಿಕೃತಿಯುಳ್ಳತನುವೆ ತಾನೆಂದು ॥ ಭಿನ್ನವಿಷಯದ ವಿಶ್ವವಿದನು ಕಂಡು । ನನ್ನಿಯೆಂಬ ಬಗೆ ಬಿಡದಿರಲದಜ್ಞಾನ ॥೧॥ ವೇದವಿಚಾರವನೆಲ್ಲದುಳದ ಶುಷ್ಕ । ವಾದದಿಂದೆ ಸಲೆ ಸಾಕ್ಷಿ ತುರಿಯ ಕೂಟಸ್ಥ ॥ ಬೋಧವಿಲ್ಲವದು ತೋರದೆಂಬ ಮೋಸದಾದಿ । ಯಾದುದುಭಯರೂಪೆನಿಸುವಾವರಣ ॥೨॥ ಕರ್ಮವನು ಮಾಡಿ ತತ್ಫಲವನು ತನ್ನ । ಧರ್ಮವೆನಿಸಿದ ಹಮ್ಮಿನೊಳಗೇವಳಿದು ॥ ಮರ್ಮವರಿಯದ ಚಿದಾಭಾಸನೆಂದು । ನಿರ್ಮಿತವಾಗೆ ಸಹಜವಪುದು ವಿಕ್ಷೇಪ ॥೩॥ ಮತ್ತೆ ಶ್ರುತಿ ಗುರುಪದವಿಡಿದು ಸಾಕ್ಷಿ । ಚಿತ್ತು ಬೇರುಂಟದು ಸ್ವರ್ಗದಂತೆ ಸತ್ಯವೆಂದು ॥ ಚಿತ್ತದೊಳು ನಂಬಲಾಗಿ ಮೊದಲು ಪೇಳ್ದ । ವೃತ್ತಿ ನಾಶವದು ಪರೋಕ್ಷಾತ್ಮಕಜ್ಞಾನ ॥೪॥ ಚಾರು ತತ್ತ್ವಮಸಿವಾಕ್ಯಾರ್ಥವನು ಸುವಿ । ಚಾರಿಪುದರಿಂದೆ ಪ್ರತ್ಯಗಾತ್ಮನೆ ತಾನೆಂಬ ॥ ಸಾಧನಿಷ್ಠೆಯಿಂದುಳಿದಾವರಣ ಪೋಪು । ದಾರ್ಢ್ಯಯಲದಪರೋಕ್ಷ ಜ್ಞಾನವೆನಿಪುದು ॥೫॥ ಕೂಡೆ ಕರ್ತೃತ್ವ ಭೋಕ್ತೃತ್ವವದರಬಾಧೆ । ಗೂಡಿಮೋಹಿಸುವ ಬಹುವಿಧದ ಸಂಸೃತಿಗೆ ॥ ನಾಡೆ ನಾಶವಾಗಲದನರಿದು ಸಂತ । ರಾಡುವರು ದುಃಖನಿವೃತ್ತಿಯು ತಾನೆಂದು ॥೬॥ ಜ್ಞಾನದಿಂದೆ ಶೋಕವಿಂತು ತೊಲಗೆ ಪರ । ಮಾನಂದ ವಾರಿಧಿ ನಿತ್ಯ ಮುಕ್ತ ಶಂಭುಲಿಂಗವೆ ॥ ತಾನಾಗಿ ಸೈತಿರೆ ತತ್ವವಿದರನುಮಾನಿಸದ । ನೂನ ತೃಪ್ತಿಯೆಂಬರದನೊಲಿದು ॥ .... .... .... ॥೭॥

ಇತಿ ಸಪ್ತಾವಸ್ಥಾಃ

---

### ೨೧. ರಾಗ-ಭೌಳಿ

ಆರು ನಾನೆಂದು ವಿಚಾರಿಸಿ ತಿಳಿಯೆ ಸಂ । ಸಾರ ಸಾಗರವನುತ್ತರಿಪುದರಿಂದೆ ॥ ಪ ॥ ತನುವಿದಾನಲ್ಲ ವಿಂದ್ರಿಯವಾನಲ್ಲಸುವರ್ಗ । ವೆನಿಪವಾನಲ್ಲ ಹಮು ಚಿತ್ತ ಬುದ್ಧಿ ॥ ಮನವಾನಲ್ಲಿಳೆ ವಾರಿ ಶಿಖಿ ವಾಯು ನಭವೆಂಬಿ । ವಿನಿತು ನಾನಲ್ಲವೆನಗೆ ವೇದ್ಯವಾಗಿ ॥೧॥ ಗುಣಹಂತೆ ಮಹದವಿದ್ಯಾ ಮಾಯಾಶ

ಕ್ತಿಗ | ಳಿಣಿಸಲಾನಲ್ಲವರಥರ್ಮಕರ್ಮ || ಗುಣವೊಂದುನಾನಲ್ಲವಿದಮಹ ಮೆಂದು | ಗಣಿಸಲಾನಲ್ಲೆನಗವು ದೃಶ್ಯವಾಗಿ ||೨|| ಪರಮ ಜೀವಾಂತರ ವಿಶ್ವ ತೈಜಸ ಪ್ರಾಜ್ಞ | ತುರಿಯಾದಿ ವಿಷಯದೃಕ್ಕುಗಳಿವಾನಲ್ಲ || ಪರತರಾ ನಂದೈಕರಸರೂಪ ದೃಶಿಮಾತ್ರ | ಗುರುಶಂಭುಲಿಂಗದ ನಿಜವೆ ತಾನಾಗಿ || .... .... .... ||೩||

## ೨೨. ರಾಗ-ದೇಶಿ

ನಾವರಿದೆವರಿದೆವೆಂಬಿರಿ ನಿಜವನದು ನಿಮ್ಮ | ಭಾವನೆಗೆ ಬಂದಪರಿ ಯನು ಪೇಳಿರಿ ||ಪ|| ದೇಹದಿರವಿನೊಳು ಸೋಜಿಗವೆನಿಸಿಹುದು ನಿಜವೊ | ದೇಹದೊಳಗಾಡಿ ನೋಡುವದು ನಿಜವೊ || ದೇಹ ಕರಣಾಳಿಗಾಧಾರವಾದಸು ನಿಜವೊ | ದೇಹಾಭಿಮಾನಿಯಹ ಪುನವೆ ನಿಜವೊ ||೧|| ನಾನೆಂಬುದೆಡೆವಿ ಡದೆ ಪೊರಗನರಿವುದೆ ನಿಜವೊ | ನಾನೆಂಬುದಡಗಿದಾನಂದ ನಿಜವೊ || ಆನಂ ದವದು ತೋರ್ಪುದೇನು ವಿಡಿದುದು ನಿಜವೊ | ಆನಂದವೆಂಬುದಡಗಿದ ನಿಲವೆ ನಿಜವೊ ||೨|| ಸಗುಣರೂಪವೆ ತನ್ನ ಸಹಜವಾದುದು ನಿಜವೊ | ಸಗುಣ ನಿರ್ಗುಣ ತತ್ವತಾನೆ ನಿಜವೊ || ಸಗುಣ ನಿರ್ಗುಣವನಚ್ಚಳಿದ ಪದವದು ನಿಜವೊ | ಸಗುಣಾದಿಗಳಸೋಂಕದಿಹುದೆ ನಿಜವೊ ||೩|| ಬಗೆಯಕುರುಹಿನ ಕಲಾ ಬಿಂದು ನಾದವೆ ನಿಜವೊ | ಬಗೆಯ ಬಣ್ಣಕೆ ಬಾರದಿಹುದೆ ನಿಜವೊ || ಜಗದ ನಾನಾತತ್ವದೊಡನಗಲದಿರ್ಪುದೆ ನಿಜವೊ | ಮಗುಳೆಯಾಜಗಕನ್ಯವ ಹುದು ನಿಜವೊ ||೪|| ಪಲವು ಮತಭೇದ ವಾದವನುಳಿದು ಸಂಶಯದ ಹೊಲಬಿಲ್ಲದಾನುನೀನೆಂಬುದಳಿದು || ಸಲೆ ನೇಮ ಸೀಮೆದೋರದ ಶಂಭು ಲಿಂಗವಾ | ದುಳುಮೆ ಚಿನ್ಮಾತ್ರವದು ನಿಜಕಾಣಿರೈ || ..... ||೫||

ಇತಿ ಚಿದ್ರೂಪಾನು ಸಂಧಾನಂ

---

## ೨೩. ರಾಗ-ತೆನುಗುಕಾಂಬೋಧಿ

ಸುಖವೆ ನಿಜಸುಖವೆ ನೀನು | ಸಿಖಿಲವೆನಿಸದೇಕ ಮುಖವಾಗಿರೆ ನ್ನೊಳು | ಸುಖವೆ ||ಪ|| ರಾಗ ವಿಷಯಸಿದ್ಧಿಯಾಗೆ ಸಾತ್ವಿಕಬುದ್ಧಿ || ಯೋಗದೊಡನೆ ಜೀವಭೋಗವೆನಿಸಿ ತೋರ್ಪೆ ||೧|| ಕಡುನಿದ್ರೆಯೊಳು ಮತಿಯಡಗೆ ಮಾಯಾವೃತ್ತಿ || ವಿಡಿದನಂತತೆಯನು ಪಡೆದು ರಾಜಿಪ

ಶಿವ ॥ ೨ ॥ ತನಿನಿದ್ರೆಯಳಿದನ್ಯ ನೆನಹು ಜನಿಸದೆ ಸು ॥ ಮ್ಮನೆ ನಿಂದ ವೇಳೆ ಯೊಳನಿದು ಗಾಣಿಸುವಚ್ಚ ॥ ೩ ॥ ಹಾನೋಪಾದಾನವೆಂಬೇನುವಿಲ್ಲದುಪೇಕ್ಷೆ ॥ ಮಾನಸವೈದಲನೂನವಾದನುಪಸನು ॥ ೪ ॥ ಪ್ರಿಯವಾದ ವಿಷಯ ಸಂಚಯ ದೆಡೆಯೊಳು ತಾನೆ ॥ ಪ್ರಿಯತಮನೆಂದು ತಿಳಿಯೆ ತನಗವಿರಳ ॥ ೫ ॥ ಕನಸಿನಂತಿರೆ ಜಗವನು ಪುಸಿಯೆಂದು ತ ॥ ನ್ನನೆ ಭೇದರಹಿತನೆಂಬನುಭೂತಿ ಯೊಳು ಮಿಕ್ಕ ॥ ೬ ॥ ಮಾನಸದೊಳು ಬಾಹ್ಯವೇನು ತೋರದೆ ಪರ ॥ ಮಾನು ಸಂಧಾನ ಸಂತಾನದೊಳಪರೋಕ್ಷ ॥ ೭ ॥ ಪರಿಪೂರ್ಣ ಕಾಮತೆ ದೊರೆದ ಸಮಯದೊಳು ॥ ಸರಿಯಾವುದಿಲ್ಲದೆ ಪರತರವಹ ಸತ್ಯ ॥ ೮ ॥ ಪದುಳದಿಂದೀ ಬಹುವಿಧದೆಡೆಯೊಳು ತೋರಿ ॥ ಸದಮಳ ಶಂಭುಲಿಂಗದೊ ಳೇಕರಸವಾದ ॥ .... .... .... .... ॥ ೯ ॥

ಇತ್ಯಷ್ಟಾನಂದಃ

---

### ೨೪. ರಾಗ–ದೇಶಿ

ಆವಪರಿಯಸುಖವ ಭಾವಿಸಿ ಬೇರೆಣಿಸಿದೊಡೆ । ಜೀವ ಪರಮ ಯೋಗದ ನಿಜಪರಿದನುಭವಿಯ ಸುಖಕೆ ಸರಿಗಾಣೆ ॥ ಪ ॥ ಕವಿಜನರುಪಮೆಗೆ ಹವಣಿಸ ಬಾರದ । ನವಲಾವಣ್ಯದ ಜವ್ವನೆಯ ॥ ತವಕದ ರತಿಗನುಕೂಲ ಸುಸಾಧನ । ನಿವಹದೆಸೆವ ಸುಖ ಮೊದಲಾದ ॥ ೧ ॥ ಮೇರು ಸಿಂಹಾಸನವ ಖಿಳ ದೇವ ಪರಿ । ಚಾರಕ ರಣಿಮಾದಿಗಳೊಡನೆ ॥ ಭೂರಿ ಭುವನವನಾ ಳುವ ತನವಿದು । ಕೈಸಾರಿರಲೊದಗುವ ಸುಖವಿಡಿದು ॥ ೨ ॥ ಸಾಕೆನಿಸದೆ ಸವೆಯದೆ ಬೇರೊಂದನು । ಬೇಕೆನಿಸದೆ ಕಡೆಯೊಳು ತನ್ನ ॥ ಜೋಕೆಗುಂ ದದೆ ನಿರುಪಮ ಶಂಭುಲಿಂಗದೊ । ಳೇಕಮೆನಿಪ ಸುಖವೊಂದಲ್ಲದೆ ॥ ೩ ॥

### ೨೫. ರಾಗ–ಕಾಂಬೋಧಿ

ತೋರದಯ್ಯೊ ಸುಖ ತೋರದಯ್ಯೊ । ಬೇರೆಬೇರೆ ಭಾವಿಸಿ ಬ್ರಹ್ಮಜ್ಞಾ ನವೊಂದಿಲ್ಲದವಗೆ ॥ ಪ ॥ ನಿಗಮಾಗಮವನೋದಿ ಸುಗುಣ ಸಂತತಿಗೂಡಿ ಜಗದೊಲವಾಂತು ತನ್ನ ಬಗೆಯನಾರೈಯದಿರೆ ॥ ೧ ॥ ಕಪಟವಳಿದು ಕೋಟಿ ಜಪವನೆಸಗಿ ಬಲು ॥ ತಪವನೆ ಮಾಡಿ ತತ್ವದುಪದೇಶವಡೆಯದೆ ॥ ೨ ॥ ಹಿಂಗ

ದಣಿಮಾದಿ ಸಿದ್ಧಿಯಂಗವಾಗಿ ಪೇರ್ವೆಲೋಕ || ಡಂಗುರವೆನಿಸಿ ಶಂಭು ಲಿಂಗದನುವರಿಯದಿರೆ || .... .... .... ||೩||

### ೨೬. ರಾಗ–ಕಾಂಭೋಧಿ

ಮುಕುತಿಸುಖವನು ಪಡೆವೆನೆಂಬ ಬಲು | ಯುಕುತಿವಂತನ ಬಗೆಯನು ನೋಡು ರಮಣಿ ||ಪ|| ಕನಸಿನ ಪುರುಷನು ವಿಂಚಿನ ಹೆದೆಗಿಂದ್ರ | ಧನು ವನೇರಿಸುತಾರಿಕಲ್ಲಿನಂಬು || ಮೊನೆದುರದೆಚ್ಚು ಗಂಧರ್ವಪುರದ ರಿ ಪು | ವನು ಕೆಡಪಿದನಂತೆ ತನುಧರ್ಮವಳಿದು ||೧|| ಮೊಲನಕೋಡನು ಕಿತ್ತು ಗಗನ ಕುಸುಮವೆತ್ತಿ | ತಳುವದೇ ಕೂರ್ಮ ಕುಂತಳವಿಡಿದು || ತುಳುಕಿ ಬಿಸಿಲು ಜೊರೆಯನು ಬಂಜೆಯಣುಗನ | ಸಲುಗೆವಡೆದನಂತೆ ಗೆಲಿದು ಮಾಯೆ ಯನು ||೨|| ನರನು ತೆಂಕಲು ಪೋಗಿ ಸುರಗಿರಿಯನು ಕಂಡು | ತರುಣಿಯ ರೊಲವನು ದಿಟವೆಂದು || ಉರುಪುವ ವಹ್ನಿಯನಥೋ ಮುಖವಾಗಿ ನಲಿ ದನಂ | ತುರು ಶಂಭುಲಿಂಗವೆ ತನಗನ್ಯವೆಂದು || .... .... ||೩||

### ೨೭. ರಾಗ–ಅಹರಿ

ಏನೆಂದು ಪೇಳುವೆನು ಪರಮಾನಂದ | ವೆನಗಾದ ಹದನಾನಿನ್ನು ||ಪ|| ಘೋರಭವಮಾಲೆಗಳುಕಿ ಮನದೊಳಿ | ದಾರಿಂದ ತೊಲಗುವದೆಂದು || ಚಾರು ಗುರುಪದವಿಡಿಯೆ ಮೊದಲ ಸಂ | ಸಾರವೆನಗಿಲ್ಲವಾದುದ ||೧|| ದೇಹಾ ದಿಗಳನೆ ತಾನೆಂಬ ಜಡಮಾಯಾ | ಮೋಹದಿಂದೆ ನೊಂದು ಬಳಿಕ || ಊಹಿಸಿ ತಿಳಿದೊಡಂತವನುಳಿದು ನಿ | ರ್ದೇಹಿಯಾನೆನಿಸಿದಿರವ ||೨|| ಆನೆಂಬುದದರ ರ್ಥವೇನೆಂದು ನಿಗ | ಮಾನುಮಾನ ವಿಡಿದು ವಿಚಾರಿಸೆ || ಜ್ಞಾನನಿಧಿ ಶಂಭು ಲಿಂಗದ ನಿಜರೂಪ | ವಾನಾಗಿ ಸುಖದೊಳಿಹುದ || .... ||೩||

### ೨೮. ರಾಗ–ಭೌಳಿ

ತನ್ನನೆ ಪರವೆಂದು ತಿಳಿವುದಲ್ಲದೆ ಬೇರೆ | ಭಿನ್ನವಿಟ್ಟರಸಲೇನುಂಟು ಕಾಣಿಸಲು ||ಪ|| ಶ್ರುತಿಗುರುಗಳ ಬೋಧೆಯದು ತತ್ತ್ವಮಸಿಯೆಂದು | ನುತಿಸಲಾನಾರೆಂದು ಬೆಸಗೊಂಡಬಗೆಗೆ || ಗತಿಯಾವುದಿನ್ನು ತನ್ನೊಳುಮೆ ತನ್ನೊಳಗಲ್ಲ | ದಿತರಂಗಳಲ್ಲಿ ಭೇದಿಸಲುಂಟೆ ಬರಿದೆ ||೧|| ತೋರುವ ಜಾಂಡ ಜಾಲಂಗಳನೊಳಕೊಂಡು | ಮೀರಿದಪ್ರತಿಮ ಬೋಧಾತ್ಮ ರೂಪಾಗಿ||

ಬೇರಿದೆಂ ದರುಹಲಿಲ್ಲಾಗಿ ತನ್ನೊಳಗೊಂದು । ದೂರಿಲ್ಲದಾರೈಯ ಬೇಕ ನುಭವದಿ ॥ ೨ ॥ ತುಂಬಿ ತುಳುಂಕದಾನಂದ ಸುಧಾಬ್ಧಿ ತಾ । ನೆಂಬುದೊಂದ ರಿವು ತನ್ನೊಳು ಲೀಯವಾಗೆ ॥ ಶಂಭುಲಿಂಗದ ಕೂಟವದು ತಾನೆ ನಿಜ ಮುಕ್ತಿ । ಯೆಂಬುದೆ ನಂಬುಗೆ ಪೆರತಿಲ್ಲವೆಂಮ ॥ .... .... ॥ ೩ ॥

## ೨೯. ರಾಗ-ಲಲಿತೆ

ಪೇಳೆನೀಗಳೆ ಮಾಜದೆ ರಾಜ ಮ । ರಾಳಗತಿಯ ನಾನಿನಿ ಭೋಗಂ ಗಳ । ಮೇಳಿಲ್ಲದೆ ಸವಿಯುವ ಸವಿಯಾವುದು ಕೇಳುವೆನಿಸನೊಲಿದು ॥ ಪ ॥ ಗುರುದೇವತೆ ನಿಗಮಾರ್ಚನೆ ಯೋಗಾ । ಚರಣೆ ಕುಲಾಶ್ರಮ ಹೋಮ ತಪೋವಿಧಿ । ವರವಧು ವಾಹನ ವಿತ್ತಾತ್ಮಜಸಖ ಭುವನಾದಿಗಳ ॥ ನೆರವಿಗಳೆಡೆಯೊಳು ಸಕಲರ ಮನದಾ । ದರವಾವುದನೆ ಕುರಿತು ನೆಲಸಿಹುದೀ ಪರಿಯಿಂದತಿ ಮಮತೆಗೆ ಮೊದಲಾದುದಕೆರವಾವುದೆ ರಮಣಿ ॥ ೧ ॥ ಒಲ್ಲೆನಿ ಸದ ಯಾಗಂತುಕವಲ್ಲದ । ಪಲ್ಲಟಿಸದ ಗುಣವರಸದ ಹವಣಿಗೆ । ನಿಲ್ಲದ ಬಿಡಿಸಲು ಬೇರೊಂದತಿಶಯವೆಲ್ಲಿಯು ಕಾಣಿಸದ ॥ ಸೊಲ್ಲಿಸಬಾರದ ಕಾರಣ ವಿಡಿದಿರ । ದೆಲ್ಲರ ಮತವಹ ಪರಮ ಪ್ರೀತಿಗೆ । ಬಲ್ಲವರಿಂದಿದು ವಿಷಯವೆನಿ ಸಿಕೊಳ ಬಲ್ಲದಿದಾವುದು ನೀರೆ ॥ ೨ ॥ ಕುಂದದೆ ಹೆಚ್ಚದೆ ಕಡೆ ಮೊದಲಿಲ್ಲದೆ । ನಿಂದಣಿಮಾದಿಗಳೆಂಬ ಮಣಿಗಳೊಡ । ನೊಂದಿ ಮಧುರತರವಾದ ಸುಖಾ ಮೃತ ಸಿಂಧುವೆನಿಸಿ ಮೆರೆವ ॥ ಇಂದು ಕಲಾಧರ ಗುರುಶಂಭುಲಿಂಗ । ವೆಂದೆ ನಿಸುವ ತಾನೆ ನೀನೆನ್ನನು । ಚಂದದಿ ಬೆಸೆಗೊಂಡ ಸುವಸ್ತುವ ನೋಡಂದ ದಬಲೆ ತಿಳಿದು ॥ .... .... .... .... .... ॥ ೩ ॥

ಇತ್ಯಾನಂದ ರೂಪಾವಿರ್ಭಾವಃ

## ೩೦. ರಾಗ-ಪಹಡಿ

ನಿನ್ನೊಳೊಡಗೂಡದಭಾವವ । ನುನ್ನಿಸಲೆ ಜೀವನೆ ॥ ಪ ॥ ಮುನ್ನ ವಿಲ್ಲದಭಾವಮುದಿಸಿಯಳಿದ ಮೇಲೆ ॥ ತನ್ನಿರವಿಲ್ಲೆನಿಸಿದಭಾವವು ॥ ೧ ॥ ಇದ ರೊಳದಿಲ್ಲೆನಿಸುವಭಾವ ವಸುದಿನ ॥ ವದಕಿಲ್ಲ ತೋರ್ಕೆಯೆನಿಪಭಾ ವವು ॥ ೨ ॥ ಎಲ್ಲವನೊಳಕೊಂಡಭಾವಚತುಷ್ಟಯ ॥ ವಿಲ್ಲಾಗಿ ಶಂಭು ಲಿಂಗದ ನಿತ್ಯಪದವಾದ ॥ .... .... .... .... ॥ ೩ ॥

## ೩೧. ರಾಗ—ತೆಲುಗುಕಾಂಬೋಧಿ

ಘಟವೆ ಪುಸಿಘಟವೆ ನೀನು । ದಿಟದಂತೆ ತೋರಿ ಮೋಹಿಪುದನೇ ನೆಂಬೆ ॥ ಪ ॥ ಮೊದಲು ಮೃತ್ತಿಕೆಯು ಪಿಂಡದೊಳು ನೀನಿಲ್ಲ ಪು । ಟ್ಟಿದಬಳಿ ಕೊಡೆದು ಧೂಳಾಗೆ ನೀನಿಲ್ಲ ॥ ವಿದಿತವಿಪಾದ್ಯಂತದೊಳಗೆ ನೀನಿಲ್ಲ ಮ । ಧ್ಯದೊಳಾವ ರೂಪು ನಿನಗೆ ನಿಜವಹುದು ॥ ೧ ॥ ನರರಮುಖದ ನುಡಿಮಾತ್ರ ದಿರವಿನಿಂದೆ । ಪರಿಕಲ್ಪಿತಾಕಾರದಿಂದೆ ವಿವೇಕ ॥ ವಿರಹಿತರಿಗೆ ಪರಮಾರ್ಥ ವೆನಿಸಿ ತೋರ್ಪೆ । ಪರಿಕಿಸಲೆಂದೆಂದು ನಿನಗುಂಟೆ ತೋರ್ಕೆ ॥ ೨ ॥ ಇಲ್ಲಿನಿಸದ ತೋರದಡಗದ ಮೃತ್ತಿಕೆ । ಯಲ್ಲಿದೆ ನಿನ್ನನೆಲ್ಲಿಯು ಕಾಣೆನರಸಿ ॥ ಉಳ್ಳ ಮೃತ್ತಿಕೆಯಂತೆ ಶಂಭುಲಿಂಗವೆ ಜಗ । ವೆಲ್ಲವು ನಿನ್ನಂದವಾದುದಿಂತರಿಯೆ ॥ ೩ ॥

ಇತಿ ನಿತ್ಯಪದನಿದರ್ಶನಂ

## ೩೨. ರಾಗ-ಶಂಕರಾಭರಣ

ತಾನೆ ತನ್ನೊಳು ತನ್ನ ನಿಜವ ನೋಡಲು ಪರ । ಮಾನಂದಮಯ ಚಿದಖಂಡರೂಪಹನು ॥ ಪ ॥ ತನುಬಾಹ್ಯವೆಲ್ಲವನರಿವುದರಿಂದೆ । ಮನವಾ ತುಗಳನು ಮೀರಿಹುದರಿಂದೆ ॥ ಇನಿತನಿತೆಂದು ರೂಹಿಸ ಬಾರದಿಹುದರಿಂದ । ಲನುಪಮನಹುದರಿಂದವಿರಳನಹನು ॥ ೧ ॥ ಅಣುಪರಿಮಾಣ ಮಧ್ಯಮ ಪರಿ ಮಾಣಂಗ । ಳೆಣಿಕೆ ತನ್ನೊಡಗೂಡದಿಹುದರಿಂದೆ ॥ ಗುಣ ಜಾತಿ ಕರ್ಮಾದಿ ರಹಿತತ್ವದಿಂದೆ ಕ । ರಣ ವಿಡಿಯದುದರಿಂದದ್ವಯನಹನು ॥ ೨ ॥ ಸಕ ಲಾರ್ಥ ಸಾಧಕನಹುದರಿಂ ತಿಳಿಯಲಾ । ಸಕಲಾರ್ಥ ಸಂಬಂಧಿಯಹುದರಿಂದ ॥ ಸಕಲಾರ್ಥ ದೂರನಹುದರಿಂದೆ ಬಳಿಕಲಾ । ಸಕಲಾರ್ಥನಹುದರಿಂದನ ವಧಿಯಹನು ॥ ೩ ॥ ಗಗನದಂದದಿ ನಿರವಯವನಹುದರಿಂದೆ । ಸ್ವಗತಾದಿ ಭೇದವಿಲ್ಲದ ಕಥದಿಂದೆ ॥ ನಿಗಮವನಂತಮೆಂದೊರೆವುದರಿಂದಾವ । ಬಗೆ ದೋರದಿಹುದರಿಂದಗಣಿತನಹನು ॥ ೪ ॥ ಹವಣಿಸುತಿಹ ದೇಶ ಕಾಲ ವಸ್ತು ಗಳೆಂಬ । ನಿವಹ ಕಲ್ಪನೆ ಮಿಥ್ಯೆಯಹುದರಿಂದೆ ॥ ಭವದೂರನೆನಿಸುವ ಗುರು ಶಂಭುಲಿಂಗದೊ । ಳವಿಭೇದನಹುದರಿಂದವೆ ಪೂರ್ಣನಹನು ॥ .... ॥ ೫ ॥

## ೩೩. ರಾಗ-ತೆಲುಗುಕಾಂಬೋಧಿ

ಆರುಬಲ್ಲರು ನಿಜಾನಂದ ಬೋಧಾಂಬುಧಿ । ಮೇರೆಯನೊಮ್ಮೆ ಕಳೆದು ಮಾಯೆಯ ॥ ಭೂರಿ ವಿಕಾರವೆಲ್ಲವನೊಳಕೊಂಡು ಗಂ । ಭೀರಾದ್ವಯಾತ್ಮಕ

ವಾಗಿಹುದ ॥ ಪ ॥ ದೇಹವಲ್ಲದ ಕರಣೇಂದ್ರಿಯವಲ್ಲದ । ಮೋಹಿಸುವಹವಾದಿಕವಲ್ಲದ ॥ ಬಹಿರಂಗದ ಭೂತವಲ್ಲದಿನ್ನಾವುದ । ನೂಹಿಸಲಂತಲ್ಲದ ವಸ್ತುವ ॥ ೧ ॥ ಸವಣವೈದದ ಪರಿಣಮಿಸದ ಪರಿತಾಪ । ನಿಪಹವಂಟದ ನಿತ್ಯ ಮುಕ್ತವಾದ ॥ ಸವಗುಣವಡಸದ ನಾಸಕ್ತಪಿಲ್ಲದ । ಭವದೂರವೆನಿಸುವ ತತ್ವವನು ॥ ೨ ॥ ಮರವೆ ಹೊದ್ದದ ಮೊದಲರಿವು ಮೋರದ ಮುತ್ತಿ । ಬರಿದಾಗದಿದಿರಿಟ್ಟು ಕಾಣಿಸದ ॥ ಮೆರದೇಕ ರಸವಾದ ತನ್ನೊಳಗಿಂತೆಂಬ । ಕುರುಹಿಲ್ಲದ ಶಂಭುಲಿಂಗವನು ॥ .... .... .... .... .... ॥ ೩ ॥

ಇತಿ ಪೂರ್ಣರೂಪಾನುಭವಃ

---

## ೩೪. ರಾಗ-ಸೌರಾಷ್ಟ್ರ

ನಿಜವನರಿದ ಯೋಗಿಗಾವ ಕರ್ಮದಕಾಟ । ಭಜನೆಯಿಂದಾವ ಪುಣ್ಯದೊಳೊಡಗೂಟ ॥ ಪ ॥ ಕನಸಿನೊಳರಸಿಗೆ ಬಡತನವಾಗೆ ತ । ಜ್ಜನಿತ ದುಃಖವನೆಚ್ಚರೊಳು ನೀಗಿದಂತೆ ॥ ತನಗೆ ಸಂಸೃತಿ ಮಾಯಾವಿಕೃತಿಯಿಂ ತೋರೆ ಮ । ತ್ತನುಭವದಿಂದರಿದೊಡೆ ಪುಸಿಯೆಂದು ॥ ೧ ॥ ಧರೆ ಮೊದಲಾದಖಿಳಾವರಣಾತೀತ । ಪರಮು ನೀದೇಹಾದಿಗಳಿಗನ್ಯ ಜೀವ ॥ ಎರಡಾಗಿ ತೋರೆ ತದ್ಗತಗುಣನೇತಿಯಿಂ । ಪರಿಭಾವಿಸಿದೊಡೇಕ ಬೋಧರೂಪೆಂದು ॥ ೨ ॥ ರವಿಯಂತೆ ಕರ್ಮಸಾಕ್ಷಿಕನಾಗಿ ಬಂಧವಿ । ಲ್ಲವಿರಳನಾಗಿ ಬೇರೈದಲಿಂಬಿಲ್ಲ ॥ ಹವಣಿಸಲಿಲ್ಲಖಂಡಿತವಾಗಿ ತನಗೆ ಸಂ । ಭವವಿಲ್ಲ ಗುರುಶಂಭುಲಿಂಗ ತಾನಾಗಿ ॥ .... .... .... .... .... ॥ ೩ ॥

ಇತಿ ನಿರ್ಲೇಪಃ

## ೩೫. ರಾಗ-ಪಹಡಿ

ಜ್ಞಾನಿಯಿಂದವನರಿಯೆವೆಂಬರನು । ಮಾನವೇಕವನಂಗ ತಾನೆ ಸೂಚಿಸುತಿದೆ ॥ ಪ ॥ ಹಿತವಿದಹಿತವೆಂಬ ತಿಳಿವಿಗೆ ವಿಷಯ ವಿ । ರತಿಯೆ ಸೂಚನೆ ವಿರತಿಗೆ ವಿಶ್ವದ ॥ ನುತಿವೆತ್ತ ಶಮೆ ತಾನೆ ಸೂಚನೆ ಶಮೆಗೆ ಸ । ನ್ಮತಪಾದ ಪರಮುಕ್ತಿಪದದೊಲುಮೆ ಸೂಚನೆ ॥ ೧ ॥ ಪರಮುಕ್ತಿಯೊಲುಮೆಗೆ ಗುರುಸೇವೆ ಸೂಚನೆ । ಗುರುಪಾದ ಸೇವೆಗೆ ವೇದಾರ್ಥ ಸೂಚನೆ ॥ ವರವೇದಾರ್ಥಕೆ ಶರಿರಾದಿ ನೇತಿಯೆ ಸೂಚನೆ । ಶರಿರಾದಿ ನೇತಿಗೆ ತಾನಾರೆಂಬುದೆ ಸೂಚನೆ ॥೨॥

ಆರುನಾನೆಂಬುವಕೆ ಸೋಹಂಭಾವನೆ ಸೂಚನೆ ವಿ। ಚಾರಿತ ಸೋಹಂ ಭಾವನೆಗೆ ಹವಣಿಸದ ॥ ಸಾರಸುಖ ಸೂಚನೆ ಸುಖಕೆ ನಿತ್ಯ ನಿಜ ನಿರ್ವಿ। ಕಾರ ಗುರುಶಂಭುಲಿಂಗವಾಗಿಹುದೆ ಸೂಚನೆ ॥ .... .... ॥ ೩ ॥

ಇತಿ ಜ್ಞಾನಿಚಿಹ್ನಂ

## ೩೬. ರಾಗ-ನಾಟಿ

ನೋಡಿ ತಿಳಿಯಲು ತತ್ತ್ವಮಸಿವಾಕ್ಯದರ್ಥವನೆ। ಕೂಡೆ ನಿಜ ಕೈವಲ್ಯವಹುದು ಗುರುವಿಡಿದು ॥ ಪ ॥ ತನು ಕರಣ ಮೊದಲಾದವನಿತುವನೆ ತಾನೆಂದು। ಜನನಾದಿ ವಿಕೃತಿ ದಳೆದಹಮಿನೊಡ ವೆರೆದು ॥ ತನಗದರ ಬಗೆಪತ್ತಿಬಿಡದಿರ್ಪ ವಿಶ್ವಜೀ। ವ ನೆ ತ್ವಂ ಪದಕೆ ಮುಖ್ಯವಾದರ್ಥ- ವೆಂದು ॥ ೧ ॥ ಮೊದಲೊರೆದ ಚೇತನಾಚೇತನಂಗಳಿಗಾದ। ಮುದವಸುಖ ಮೋಹಾದಿಗಳು ತನ್ನ ದೆಸೆಗೆ ॥ ಪದವಿಡದ ಸಲೆಸಾಕ್ಷಿತುರ್ಯಕೂಟಸ್ಥನೆನಿ। ಸಿದ ತಾನೆ ತ್ವಂ ಪದಕೆ ಲಕ್ಷ್ಯಾರ್ಥವೆಂದು ॥ ೨ ॥ ಪ್ರಕೃತಿಯುಪಹಿತನಾಗಿ ಸಕಲೇಶತಾದಿ ಗುಣ। ನಿಕರ ವಿಡಿದಖಿಳ ಕಾರಣನಾಗಿ ತನಗೆ ॥ ವಿಕೃತಿ ಯೊಂದಿಲ್ಲದಾನಂದಮಯ ಪರಮನೀ। ಸುಕರವಹ ತತ್ಪದಕೆ ಮುಖ್ಯಾ ರ್ಥವೆಂದು ॥ ೩ ॥ ನಿರುಪಮ ನಿರಾಲಂಬ ನಿತ್ಯ ನಿರ್ಮಳ ನಿರಾ। ವರಣ ನಿರುಪಾಧಿಕ ನಿರಂಜನ ನಿರೂಪ ॥ ನಿರತಿಶಯ ನಿರಘ ನಿಸ್ತತ್ವ ಪರಬ್ರ ಹ್ಮವದು। ಪರಿಕಿಪೊಡೆ ತತ್ಪದಕೆ ಲಕ್ಷ್ಯಾರ್ಥವೆಂದು ॥ ೪ ॥ ಆತನಿವನೆಂಬಂತೆ ಭಾಗಲಕ್ಷಣೆಯಿಂದೆ। ನೀತಿಗಳೆದುಭಯದಾಪಾಧಿಗಳನುಳಿದ ॥ ಚೈತನ್ಯವೇಕ ರಸವೆಂಬುದಸಿ ಪದದರ್ಥ। ವೀತೆರದಿ ಗುರುಶಂಭುಲಿಂಗವೆ ತಾನೆಂದು ॥ ೫ ॥

ಇತಿ ಶ್ರವಣಂ

## ೩೭. ರಾಗ-ಸೌರಾಷ್ಟ್ರ

ಚಿತ್ತೊಂದೆ ಪರಮಾರ್ಥದಿಂದದು ಬಹುರೂಪು। ವೆತ್ತುದುಪಾಧಿ ಯಿಂದರಿವುದಿಂತು ॥ ಪ ॥ ಪಲವರೆನಿಸಿ ನಿತ್ಯಪೂರ್ಣರಾದಾತ್ಮರು। ನೆಲಸಿರ ಬೇಕೊಂದು ತನುವಿನೊಳು ॥ ಬಳಿಕದರಿಂದಲ್ಲಿ ಭೋಗವೀತನಿಗೆಂದು। ತಿಳಿದು ನೇಮಿಸಲರಿದಹುದರಿಂದ ॥ ೧ ॥ ಏಕಾತ್ಮನಾಗಲೋರ್ವನಿಗಾದ ಸುಖದುಃಖಾ। ನೀಕವೆಲ್ಲರಿಗಪ್ಪುದೆನಲಾಗದು ॥ ಏಕರವಿ ಕಂಪಾದಿಜಲದೊಳು ಬೇರೆಬೇ।

ರಾ ಕಲ್ಪನೆಯನೆ ತಾಳಿಹುದರಿಂದ ॥ ೨ ॥ ವಾದಿಸಲೇಕಿನ್ನು ಗುರುಶಂಭು ಲಿಂಗದ । ಭೇದಭಾವನೆ ಸತ್ಯವಲ್ಲವೆಂದು ॥ ವೇದದ ನೇಹನಾನಾಸ್ತಿಯೆಂಬುದು ಮೊದ । ಲಾದ ವಾಕ್ಯದೊಳು ಪೇಳಿಹುದರಿಂದ ॥ .... ॥ ೩ ॥

## ೩೮. ರಾಗ-ಕಾಂಬೋಧಿ

ನಂಬು ನೀನೆ ನಿತ್ಯಬೋಧನೆಂಬ ನಿಗಮವನಿನ್ನು । ಹಂಬಲಿಸದಿರು ಮುಕ್ತಿಯಂ ಬಯಸಿ ಬೇರೆ ಯೋಗಿ ॥ ಪ ॥ ತಾನಲ್ಲದ ಭೃಂಗಭಾವನೆಯೊಳ ದರಂದ ವನು । ಮಾನವಿಲ್ಲದಾದುದಂತೆ ಗಡಕೀಟ ನರಿವೆ ॥ ನೀನಾದ ಪರ ಮಾತ್ಮ ತತ್ವವನು ನೀನೆಂದಿರಲಾವ । ಹಾನಿಯುಂಟು ತ್ವಂಬ್ರಹ್ಮಾಸಿಯೆಂದು ಶಾಸ್ತ್ರನಿಹುದಾಗಿ ॥ ೧ ॥ ವೇದವಾಕ್ಯದಿಂದೆ ಜಾತಿ ಸೂತಕಾದಿಯಲ್ಲಿ ನಿಜ । ವಾದ ಬುದ್ಧಿ ಜನಿಸಬಹುದು ಕಂಡ್ಯ ನಿನ್ನನೆ ॥ ಭೇದದೂರನೆನಿಸುವನಾದಿ ವಸ್ತುವೆಂದಿರು ವಿ । ವಾದವೇಕೆ ತ್ವಂ ತದಸಿ ವಚನವಿಹುದರಿಂದ ॥ ೨ ॥ ರಾಮಚಂದ್ರನಲ್ಲಿ ನರನೆಂಬುದಾಗೆ ನಾರದನ । ನೇಮದುಪದೇಶ ವಿಡಿದಾದು ದಚ್ಯುತತ್ವವೆ ॥ ಆಮತದಪರಿ ನಿನ್ನ ಜೀವಭಾವವಳಿದು ನಿ । ಸ್ಸೀಮ ಶಂಭು ಲಿಂಗವಾಗಿರೇಕಮೇವೆನಲ್ ಶ್ರುತಿ ॥ .... .... .... ॥ ೩ ॥

## ೩೯. ರಾಗ-ತೋಡಿ

ಶ್ರೀಗುರು ವಚನವಾಗಳೆ ಮಾಳ್ಪರಚನೆ ನೋಡ । ಲಾಗಿಮೂವಿ ಧವಹುದು ಸಾಧಕರ ಪೂಗದಲ್ಲಿ ॥ ಪ ॥ ಉಪ್ಪಿನೊಳು ಹೀನನಿಗೆ ಪೇಳಿದ ಬ್ರಹ್ಮಬೋಧೆ ಕಾದ ॥ ಕಬ್ಬುನದ ಮೇಲೆರೆದ ನೀರಂತಹುದು ಬರಿವೆ ॥ ೧ ॥ ನಲಿದುಮಧ್ಯಮಗೆ ನಿರೂಪಿಸಿದಾತ್ಮವಿದ್ಯೆ ಕಂಜ ॥ ದೆಲೆದಳೆದ ಜಲದಂತೆ ಮುಕ್ತಾಕೃತಿಯೊಳಿಹುದು ॥ ೨ ॥ ವರವಿಶಿಷ್ಟನೊಳೊರೆದ ಶಂಭುಲಿಂಗದರಿವು ಚಿಪ್ಪು । ವೆರೆದು ಮುತ್ತಾದಂತೆ ವಾರಿಯಹುದು ಸಫಲ ॥ .... ॥ ೩ ॥

## ೪೦. ರಾಗ-ಪಹಡಿ

ಜ್ಞಾನಿ ಮೋಹಿಪುದಂದವೆ ಪರಮ ತತ್ವ । ಜ್ಞಾನಿ ಮೋಹಿಪುದಂದವೆ । ತಾನೆ ನಿತ್ಯಾನಂದ ನಿಜರೂಪನೆನಿಪ ॥ ಪ ॥ ತನು ಮೂರು ಕರಣಾಳಿ ಮನ ಸಾದಿಗಳನು । ತನಗೆ ವಿಲಕ್ಷಣವಹುದೆಂದು ತಿಳಿದ । ಜನನ ಮರಣವನಳಿದ ಜೀವತ್ವವನುಳಿದ ॥ ೧ ॥ ಕನಸು ಬಿಸಿಲುದೊರೆ ಸುರಚಾಪದಂತೆ । ಜನಿಸಿ ತೋರುವ ವಿಶ್ವವಿದು ನೆಲೆಯಲ್ಲಕಾ । ಮನೆಗನ್ಯವಿಲ್ಲವೆಂಬುದ ಮಿಗೆಬಲ್ಲ ॥ ೨ ॥

ಹರುಷವಾರಿಧಿ ಶಂಭುಲಿಂಗವೊಡವೆರೆದು । ಮರಳಿ ಸಂಸೃತಿಯ ವಾಸನೆಯ ನೆರೆಸುಟ್ಟ । ಪರಿಕಲ್ಪನೆಗೆಟ್ಟ ಸಹಜವಳವಟ್ಟ ॥ .... ॥ ೩ ॥

### ೪೧. ರಾಗ-ಸೌರಾಷ್ಟ್ರ

ಎಂದಿನಂತೆ ಜೀವ ಭಾವವಿರಲು ನಿಜನಿಗಮ ಗುರು । ವಿಂದರಿದೊಡೇನು ಮುಕ್ತಿಸುಖಸಾಧ್ಯವಹುದೆ ॥ ಪ ॥ ಎಂದಿನಂತೆ ಕಾಮವೆಂದಿನಂತೆ ಕೋಪವತಿಲೋಭ । ವೆಂದಿನಂತೆ ಮದ ಮೋಹ ಮತ್ಸರ ನಿಕರ ॥ ಎಂದಿನಂತೆ ಭಯ ಶೋಕವೆಂದಿನಂತೆ ಪೂರವಸ್ಥೆ । ಯೆಂದಿನಂತೆ ತೋರ್ಪ ಪಸಿವು ತೃಷೆಗಳಿರುತಿರಲು ॥ ೧ ॥ ಎಂದಿನಂತೆ ದೇಶ ಕಾಲ ಗತಿ ದೇಹದಭಿಮಾನ । ವೆಂದಿನಂತೆ ಕುಲ ಜಾತಿ ನಾಮರೂಪಗಳು ॥ ಎಂದಿನಂತೆ ಜಗವಾರು ವಿಕೃತಿ ಸಂಸರಣವಿ । ದೆಂದಿನಂತೆ ಕರ್ಮವಿಹ ಪರದೊಲವಿರಲು ॥ ೨ ॥ ಎಂದಿನಂತೆ ನವಗುಣವೆಂದಿನಂತೆ ಮಮಕಾರ । ವೆಂದಿನಂತೆ ನಿಂದೆ ವಂದನೆ ಕುಂದು ಕುಶಲ ॥ ವೆಂದಿನಂತೆ ತೋರುವಿವಂಂದೆ ವಿಲಕ್ಷಣವಾದಾ । ನಂದ ಬೋಧಾಂಬುಧಿ ಶಂಭುಲಿಂಗವಾಗಿರದೆ ॥ .... .... .... ॥ ೩ ॥

### ೪೨. ರಾಗ-ವಡ್ಡಿಧನ್ಯಾಸಿ

ಎನ್ನೊಡನೆ ಸಮರಸವಿನ್ನು ಬೇಡೆಲೆ । ಮುನ್ನಿನಂತೆ ತನುವೆ ನೀನನ್ಯನೆಗೆ ॥ ಪ ॥ ಪುಸಿನೀನು ನಿಜವಾನು ಮಲವೆರಡರ । ಬೆಸುಗೆ ನೀನತಿ ಶುದ್ಧನಾನು ಕರ್ಮ ॥ ವಿಸರನೇಳಿಗೆ ನೀನು ಸಾಕ್ಷಿಯಾನು ಭಾ । ವಿಸೆ ಬಂಧವದು ನೀನು ಮೋಕ್ಷವಾನು ॥ ೧ ॥ ಜಡವೆನೀನಜಡನೆನಾನು ಬಹುರೂಪು । ವಡೆದಿಹೆ ನೀನೇಕರೂಪ ನಾನು ॥ ಕೆಡುವೆ ನೀನೆಂದೆಂದು ನಾನು ನಿತ್ಯನು । ಕಡೆಗೆ ನೀನಹೆ ಮಣ್ಣು ನಾನೆ ವಸ್ತು ॥ ೨ ॥ ಒಂದವಸ್ಥೆಯೊಳಿರ್ಪೆ ನೀನಖಿಳಾವಸ್ಥೆ । ಯೊಂದಿರುತಿಹೆ ನಾನು ಭೂತ ವಿಕೃತಿ ॥ ಅಂದವೆನಿಪೆ ನೀನು ನಿರ್ವಿಕೃತಿಯಾನು । ಕುಂದು ಹೆಚ್ಚು ನೀನು ಸಮವಾನು ॥ ೩ ॥ ಆರು ವಿಕಾರದ ಬಾಧೆ ಪಡುತಿಹೆ ನೀನು । ಬೇರೆ ನೋಡವಕೆ ನಾನು ದೃಶ್ಯವಾಗಿ । ತೋರುವೆ ನೀನಲ್ಲಿ ನಾನು ದೃಕ್ಕುರುಜೆಗಳ । ಹೇರುವಿಚಾರಿಸೆ ನೀನು ಸೌಖ್ಯವಾನು ॥ ೪ ॥ ಹೇಯುವಹುದು ನೀನು ಕೇಳು ನಾನುಪಾ । ದೇಯಾತ್ಮಕನು ಮಿಥ್ಯೆಮಾಯೆ ನೀನು ॥ ಮಾಯಾರಹಿತ ಶಂಭುಲಿಂಗವಾನಿಂತು । ಕಾಯುವೆ ನೀನಾರು ನಾನದಾರು ॥ .... .... .... ॥ ೫ ॥

ಇತಿ ಹೃದಯಗ್ರಂಥಿಭೇದನಂ

## ೪೩. ಶ್ರೀರಾಗ

ಆಗದಾಗದು ನರವಿವೇಕಿಗೆ ಮುಕ್ತಿ । ನೀಗದೆ ಭೂತಾದಿಪ್ರತಿಬಂಧಕವನು ॥ ಪ ॥ ವಿರತಿಯೊಳಖಿಳಸಂಸರಣವನುಳಿದು ಶ್ರೀ । ಗುರುವಿನಿಂ ನಿಗಮಾರ್ಥವರಿಯಲು॥ ಪರವಪರೋಕ್ಷವಾಗದು ಮುನ್ನಿನಬಲಾದಿ ಸಂ । ಸ್ಮರಣವೆ ಮುಂಬರಿವುದರಿಂದ ॥ ೧ ॥ ಜಡಬುದ್ಧಿ ಜನಸಂಗರತಿ ವಿಷಯಾಸಕ್ತಿ । ಬಿಡದೆ ಮಾಡುವತರ್ಕವಭಿಮಾನ ॥ ಕಡು ಚಪಲತೆಗೂಡಿ ಸುವಿಚಾರವಿರೆ ತತ್ವ । ದೆಡೆ ವೇದ್ಯವಾಗದಿಪ್ಪುದರಿಂದ ॥ ೨ ॥ ಮುಂದೆ ಕೆಲವು ಜನ್ಮವನು ಮಾಡುವಾರಬ್ಧ । ಹೊಂದಿದುತ್ತರ ಲೋಕ ಗತಿಯಾಸೆ ॥ ಕುಂದದೆ ಮನನವಿರಲು ಕಾಣಿಸದು ನಿಜಾ । ನಂದ ವಾರಿಧಿ ಬೋಧವದರಿಂದ ॥ ೩ ॥ ಇಂತು ಮೂದೆರನೆನಿಸುವ ಬಂಧದಿರವನೋ । ರಂತರಿದವನು ತೊಲಗಿಸುವ ॥ ಶಾಂತಿ ಮುಂತಾದ ಸುಗುಣವಿಲ್ಲದಿರೆ ಸಲ್ಲ । ನಂತ ಚಿನ್ನಿಧಿ ದೋರದನರಿಂದ ॥ ೪ ॥ ಬಹು ವಿಧಿಗಳನುಳಿದಾರೈವುತಿರೆ ಪೇಳ । ದಹಿತವಾಪೆಡೆಯೊಳುಳಿವವಲ್ಲಿ ॥ ಸಹಜರೂಪಿನ ಶಂಭುಲಿಂಗವೆ ಗೋಚರ । ವಹುದೆಂಬ ದೃಢವಾಗದುದರಿಂದ ॥ .... ॥ ೫ ॥

ಇತಿ ಪ್ರತಿಬಂಧಕತ್ರಯಃ

## ೪೪. ರಾಗ- ಆಹರಿ

ಕಾಡಲಿನ್ನೇನಭವ ನಿನ್ನ ಕೃಪೆಯಿಂದೆ । ನೋಡಿ ಮಿಗೆ ಮನ್ನಿಸೆನ್ನನು ॥ ಪ ॥ ತನು ಮೂರನಗಲದಿರ್ಪ ರುಜೆಗಳ । ಜಿನುಗಿನುಮ್ಮಳವಿಡಿದು ॥ ಜನಿಸುವಖಿಳ ಬಾಧೆಯ:ನಿಹದೊಳು । ನೆನೆಯಪಂತಿರಿಸೆನ್ನನು ॥ ೧ ॥ ಕಲುಷ ಕರ್ಮವನೆ ಮಾಡಿ ಸುಕೃತವ । ನುಳಿದೊದಗುವ ಚಿಂತೆಗೆ ॥ ನೆಲೆಯಾದ ಪರಲೋಕ ದುಃಖವ । ತೊಲಗಿಸಿ ಸಲಹೆನ್ನನು ॥ ೨ ॥ ನರನು ತೊಡಗಿ ಬ್ರಹ್ಮನು ಕಡೆಯಾದ । ವರೊಳು ನೂರ್ಮಡಿಸಿ ಮಿಕ್ಕಾ ॥ ತ್ರೈ ಹರುಷಂಗಳನು ದಾಂಟಿದ ನಿಜಸುಖ । ಭರಿತನೆಂದೆನಿಸೆನ್ನನು ॥ ೩ ॥ ಪಲವು ಲೌಕಿಕ ವೈದಿಕವಹ ಕರ್ಮ । ಕುಲವನೆಸಗಿ ಮುನ್ನವೆ ॥ ಬಳಿಕ ನಿನ್ನಿರವರಿದೆನಿನ್ನವ । ನೆಳಸಲೀಯದಿರಿಸೆನ್ನನು ॥ ೪ ॥ ಸದುಗತಿಗಳನು ಬೇರೆ ಬಯಸಲೀ । ಯದೆ ಪರತರ ಮುಕ್ತಿಗೆ ॥ ಪದವಾದ ಶಂಭುಲಿಂಗ ನೀನಗ । ಲದೆ ಬೆರಸಿಹುದೆನ್ನನು ॥ .... .... .... ॥ ೫ ॥

ಇತಿ ಪ್ರತಿಬಂಧಕೋಪಶಮನಂ

## ೪೫. ರಾಗ-ಆಹರಿ

ಮನುಜರೊಳೈವರು ಸುಕೃತಿಗಳುಂಟು ಪೇ। ಳ್ವೆನವರನುತ್ತರೋತ್ತರ ಗುಣವಿಡಿದು ॥ಪ॥ ಹಿತವಿದಹಿತವಿದೆಂದರಿಯದೆ ಲೌಕಿಕ। ಯುತನಾಗಿ ಜಾತಿಮಾತ್ರದ ವಿಧಿಗಳನೆ॥ ಪತಿಕರಿಸುತೆ ಭೋಗದಭಿಲಾಷೆಯೊಳು ಜನ್ಮ। ಶತದಿಂದ ಮುಕ್ತನಹನೆ ಕರ್ಮಿಯಹನು ॥೧॥ ಜಗವಿದು ನಿಜ ವಿದರೊಳು ಬಾಹ್ಯಕರ್ಮವೆ। ಮಿಗಿಲೆಂದು ಚತುರಾಶ್ರಮವನೈದಿ ತನಗೆ॥ ಸುಗತಿಯನೆಳ ಸುವವನೆ ಮೂರು ಜನ್ಮದೊ। ಳಗೆ ಮುಕ್ತಿವಡೆವ ಮುಮುಕ್ಷುವೆನಿಸು ವನು ॥೨॥ ಪುಸಿಯೆಂಬವಿಶ್ವವ ನಾತ್ಮನೆ ನಿತ್ಯನೆಂ। ದುಸುರೆ ಸದ್ಗುರು ಕೇಳಿ ಪೊರ ಚಿಂತೆಯಳಿದು॥ ಒಸೆದೊಳಗಾರ್ಸೈಪುಶಿಹನೆ ಯಭ್ಯಾಸಿ ಯೆ। ನಿ ಸುವ ನೆರಡು ಜನ್ಮದೊಳು ಮುಕ್ತನಹನು ॥೩॥ ಲೋಕವೆಲ್ಲವನು ಮರೆದು ಪರ ತತ್ವಾವ। ಲೋಕನದಿಂದೊಳ ಹೊರಗಣ ಕೃತ್ಯಾ॥ ನೀಕವಿಲ್ಲದವನೆ ಯನುಭ ವಿಯೆನಿಸುವ। ನೇಕ ಜನ್ಮದೊಳು ಭಾವಿಸೆ ಮುಕ್ತನಹನು ॥೪॥ ಗುರುಶಂಭು ಲಿಂಗವೆ ತಾನಾಗಿ ಮಿಕ್ಕಿನ। ಪರಿಕಲ್ಪನೆಗಳು ತೋರದೆ ನಿತ್ಯಸುಖದ॥ ಶರನಿಧಿ ಯೆನಿಸಿದನಿಹದೊಳು ಮುಕ್ತನಾ। ಗಿರುತಿರ್ಪನಾರೂಢನೆನಿಸುವನವನು ॥೫॥

ಇತಿ ಅಧಿಕಾರಿಪಂಚಕಂ

## ೪೬. ರಾಗ-ನಾಟಿ

ನಾವರಿಯದಿದನು ನಾನಾ ವಿಕೃತಿವಿಡಿದ ಮಾ। ಯಾವರಣವಿಲ್ಲದನು ಭವದ ಸುಖಸ ಧೆಯ॥ ಸೇವನೆಯ ಸೊಗಸು ತೀವಿರದೆ ಸುಮ್ಮನೆ ತನಗೆ। ಕೈವಲ್ಯವಾದ-ದೆಂಬವನ ಬಗೆ ಪೊಸತು ॥ಪ॥ ಹಿತವಿದಹಿತವೆಂಬ ತಿಳಿ ವಂತೆ ವಿಷಯಾಭಿ। ರತಿಯಂತೆ ಶಮೆಯಂತೆ ಮನಮರುಕವಂತೆ॥ ನುತ ಸುಕೃತವಂತೆ ಸದುಗತಿಗೆ ಮುಖವಿಡದಂತೆ। ಶ್ರುತಿಯೊಳೊಲವಂತೆ ಗುರು ಮತ ರಹಿತವಂತೆ ॥೧॥ ಅರಿವಂತೆ ದೇಹಾದಿಗಳನು ಜೇರಿಡವಂತೆ। ನೆರೆಚಿ ದದ್ವಯವಂತೆ ಜೀವತ್ವವಂತೆ॥ ಮರವೆ ಪುಗದಂತೆ ಸಂಶಯವಳಿಯದಂತೆ ನಿಜ। ಕರಿಗೊಂಡುದಂತೆ ವಿಪರೀತ ಮತಿಯಂತೆ ॥೨॥ ನಿರಭಿಮಾನತೆ ಯಂತೆ ಮೀರದಿಹ ವಿಧಿಯಂತೆ। ಪರಿಪೂರ್ಣ ಕಾಮವಂತೆಣಿಕೆ ಗೆಡದಂತೆ॥ ಗುರುಶಂಭುಲಿಂಗವಾಗಿಹ ಮುಕ್ತಿಪದವಂತೆ। ಮರಳಿ ಭವಮರಣ ಸಂಸೃತಿಯ ಭಯವಂತೆ॥ .... .... .... .... ॥೩॥

### ೪೭. ರಾಗ-ಲಲಿತೆ

ಪರತರವೆನಿಸುವ ಮುಕುತಿಯನೈದುವ । ಪರಿಯನರಸುವವ ನೀಶ್ರವಣಾದಿಗ । ಳಿರವನು ಪಗಲಿರುಳಿನ್ನದೊಲುಮೆಯೊಳು ಪರಿಭಾವಿಸುತಿಹುದು ॥ ಪ ॥ ವಿವಿಧವೆನಿಸುವ ನಿಗಮ ವಾಕ್ಯಗಳಿಗೆ । ಹವಣಿಸಿದಾರುತೆರದ ಲಿಂಗಂಗಳ । ನವಿರತವರಿಯಲು ಪರಮಾತ್ಮರಿಗೈಕ್ಯವೆ ತಾತ್ಪರ್ಯವಿದು ॥ ಭುವನೋತ್ತರವೆಂಪದಧರಿಪುದೆ ಸು । ಶ್ರವಣವಿದಾನಾರೆಂಬುದನೊಂದಿ । ಸುವಿಚಾರಿಸಲೀಯದ ಮೂಲಾಜ್ಞಾನವನೆ ಕೆಡಿಸುತಿಹುದು ॥ ೧ ॥ ತನ್ನನು ಪರದಿಂದನ್ಯವೆನಲು ತನ । ಗನ್ಯತೆಯುಹುದು ಪರತೆಯುದರಿಂ ಜಾ । ಡ್ಯಂ ನಿಜ ವಿಘಟಸಂತೆಂಬನುಮಾನಂ ನೆರೆದುಪಮೆಗಳ ॥ ಚೆನ್ನೆಸೆವಂತಾರೈವುದೆ ಮನನವಿ । ದುನ್ನತ ಪರಮಾನೋ ಬಳಿಕಲ್ಲವೋ । ಯುನ್ನತ ಮಿಹ ಸಂಶಯುವನು ತೊಲಗಿಸಿ ಮನ್ನಣೆ ಗೊಡುತಿಹುದು ॥ ೨ ॥ ಮೊದಲೊರೆದಾ ಶ್ರವಣದಿಂದರೆ ಮನನ । ವದರಿಂ ನಿರ್ಧರಿಸಿದ ಶಿಭುಲಿಂಗ । ಪದದಚಲಿತ ಭಾವನೆಯೆ ನಿದಿಧ್ಯಾಸದ ನಿಜರೂಪವದು ॥ ಪುದಿದಹಮಾದಿಯೊಳಾತ್ಮತೆಯನು ಬಹು । ವಿಧದ ಜಗಕ್ಕೆ ಸದಾಸತ್ಯತ್ವವ । ನೊದವಿಸುತಿಹ ವಿಪರೀತವನಿರಲೀಯದೆ ಬೀಳ್ಕೊಡುತಿಹುದು ॥ .... .... .... .... ॥ ೩ ॥

ಇತಿ ಭಾವನಾತ್ರಯೋಪಶಮನಂ

ಇತಿ ಮನನಂ

---

### ೪೮. ರಾಗ-ದೇಶಿ

ನೋಡಿ ತಿಳಿದಸುಗುಣ ಯೋಗಾನುಸಂಧಾನವನೆ । ಮಾಡುತಿರೆ ಮುಕ್ತಿ ಸುಖಸಿದ್ಧಿಯುಹುದು ॥ ಪ ॥ ಅನಿಲ ಶಿಖಿ ಹೃದಯ ತನುಗೃಹ ನಗರ ದೇಶ ಲೋ । ಕನಿಕಾಯದೊಡನೆ ಪರಿವಿಡಿವಡು ಮೇಲೆ ॥ ಘನ ಪರಂಜ್ಯೋತಿಯೊಳು ಮನವಳಿದಿಹುದೇ ಸ್ಥೂಲ । ವೆನಿಪುದದು ಪಲ್ಲಟವಾಗೆ ಸೂಕ್ಷ್ಮಯೋಗ ॥ ೧ ॥ ತಿಳಿವೆಂಬ ತೆರೆಮಸಗೆ ಮಾಯಾಪುಳಿನ ಸೇತು । ವಳಿಯೆ ಜೀವೇಶರೆಂಬುಭಯ ಭಾವನೆಯ ॥ ಕಳೆವ ಬೋಧಾಂಬುನಿಧಿ ಪಡೆವೇಕರೂಪವನು । ಬಳಕೆಗೊಳಗಾಗದಿರುತಿರೆ ವಿನುತ ಯೋಗ ॥ ೨ ॥ ಪರಮಾತ್ಮವೆಂಬಮೃತಶರಧಿ ಸಪ್ತಾವರಣ । ದಿರವನುಳಿದಖಿಳ ಭುವನವನು ತನ್ನವನು ॥

ಬೆರಸಿ ಬೇರಿಲ್ಲದೊಳಕೊಂಡು ತೆಕ್ಕನೆ ತೀವಿ । ಪರಿಕಲ್ಪನೆಗೆ ಬಾರದಿರಲಧಿಕ ಯೋಗ ॥ ೩ ॥ ಬಳಿಕಾತ್ಮಬೋಧಾಂಬುರಾಶಿ ಕೋಶದವೇರೆ । ಗಳೆದು ಪರತತ್ವವನು ಸಚರಾಚರವನು ॥ ಒಳಕೊಂಡು ವಿಪರೀತಭಾವನಾ ವೀಚಿಗಳ । ನುಳಿದು ಸಲೆಸಹಜ ಸುಖವಿಹುದಮಳಯೋಗ ॥ ೪ ॥ ಶಿವ ಜೀವರೊಡ ನಿರ್ದ ಭೇದಾಪರೋಕ್ಷ ಮೆನಿ । ಸುವ ಜಾಡ್ಯಧರ್ಮಗಳ ನೇತಿಗಳೆದುಳಿದ ॥ ಅವಿರಳ ಚಿದಾನಂದಮಯ ನಾದ ಶಂಭುಲಿಂ । ಗವೆ ತಾನೆನಿಸಿ ತೋರುತಿಹುದೆ ನಿಜಯೋಗ ॥ .... .... .... .... ॥ ೫ ॥

ಇತಿ ನಿದಿಧ್ಯಾಸನ ಪಂಚಯೋಗಃ

---

### ೪೯. ರಾಗ-ಕಾಂಬೋಧಿ

ಪಡೆವುದಾಗದು ನಿಜಸುಖವ ತನ್ನ ತಾ । ನೆಡೆಬಿಡದಾರಯ್ಯ ಲರಿಯದಾತನಿಗೆ ॥ ಪ ॥ ಪೊರಗೊಂದು ರೂಪನಿರೀಕ್ಷಿಸದೆ ಬೇರಾವ । ತೆರದ ಲಕ್ಷ್ಯವ ನೊಳಗರಿದು ಭಾವಿಸದೆ ॥ ಮರೆಯದೆಚ್ಚರವನಚ್ಚಳಿಯದೆ ವಾಸನೆ । ಯುರಿಸದೇಕಾಗ್ರತೆ ಕರಿಗೊಂಡಂಗಲ್ಲದೆ ॥ ೧ ॥ ಇದವೆನಿಸಿಸದೆ ಯಹವೆನಿಸಿ ತೋರದಾ। ವುದನೊಡಗೂಡದನ್ಯತೆ ಯಾಗದುಳಿದ ॥ ಪದವಿದೆಂಬುದನರಿಯದೆ ಮೋ । ಸವಿ । ಲ್ಲದೆ ಸಮರಸ ಭಾವದೊಳು ನಿಂದಂಗಲ್ಲದೆ ॥ ೨ ॥ ಎರಡೆನ್ನದೊಂದೆಂಬ ಬಗೆಯನಿರಿಸದೆ । ಪರವಶವಿರದೆ ಚೇತರಿಸದೇನೊಂದು ॥ ಪೊರಗಾಣಿಸದೆ ಶಂಭುಲಿಂಗವಾಗಿ ತಾ । ನಿರುತಿಹ ನಿಜಮುಕ್ತಿಯನು ಕಂಡಂಗಲ್ಲದೆ ॥ ೩ ॥

### ೫೦. ರಾಗ-ಭೂಪಾಳಿ

ಶ್ರೀಗುರುವೆ ಶರಣು ಶಿವಯೋಗ ಸಂಪದವನೆನ । ಗಾಗುಮಾಡಿದ ನಿಜವಿರಾಗಿ ಜನವಂದ್ಯ ॥ ಪ ॥ ಪೊರಗಣ ಘಟಾದಿ ವಿಷಯವನು ಪಲರೂಪದಿಂ । ದರಿವುತಾಶ್ರೈಸಿದ ಚಿದಾಭಾಸದ ॥ ಕುರುಹು ವಿಡಿದಂತಲ್ಲಿ ಸತ್ಯ ಸಂವಿತ್ತೆನಿಸಿ । ಮೆರೆವ ಪರತತ್ವವದು ನೀನೆಂದು ಪೇಳ್ದ ॥ ೧ ॥ ಒಳಗೆ ವಪುರಸು ಮನೋಮತಿ ನಿದ್ರೆಯೆಂದೆನಿಸಿ । ಕೊಳುತಿರ್ಪವೈದು ಕೋಶವನು ಬೇರಿಟ್ಟು ॥ ತಿಳಿವ ಕೂಟಸ್ಥ ನೀನಾವಿಶ್ವ ಸಾಕ್ಷಿಯಾ । ಗುಳಿದಿಹ ಪರಬ್ರಹ್ಮವೆಂದು ಬೋಧಿಸಿದ ॥ ೨ ॥ ಭೇದಾಪರೋಕ್ಷವೆಂಬೆರಡುಪಾಧಿಯನುಳಿದು । ವಾದಿಸದಖಂಡೈಕ ರಸರೂಪೆನಿಸಿದ ॥ ಬೋಧಾಂಬುನಿಧಿ ಶಂಭುಲಿಂಗವಾಗಿಹ ಮುಕ್ತಿ । ಯಾದಪರಿ ನಿನಗಿದೆಂದೊಲಿದರುಪಿದ ॥ .... ॥ ೩ ॥

## ೫೧. ರಾಗ-ಕಲ್ಯಾಣಿ

ಬೇರೊಂದು ಯೋಗದೊಳು ಬಳಲಬಾನಂದನನೆ । ಸೂರೆಗೊಡುವಾತ್ಮ ನಿಜನಿಷ್ಠರಾಗಿರಿರೊ ॥ ಪ ॥ ಮನದೊಳಾರಬ್ಧ ಕರ್ಮಾಧೀನದಿಂದಿರಪೆ । ಜನಿಸುವಂಗಜ ವಿಕಾರಾದಿ ಗುಣವೆಲ್ಲ ॥ ತನಗೆ ವಿಷಯಂಗಳವನರಿವರಿವೆ ತಾನೆಂಬ । ನೆನಹು ಸಂತತವಳಿಯದಿಹುದೆ ಯೋಗ ॥ ೧ ॥ ಮಹದಾದಿ ವಿಕೃತಿಯೊಡಗೂಡದದ್ವಯ ನಿತ್ಯ । ವಹ ಸಚ್ಚಿದಾನಂದ ಪರಿಪೂರ್ಣವೆನಿಪ ॥ ಸಹಜ ಪರಬ್ರೊಮ್ಮವನೆ ತಾನೆಂಬಮತಿ ಮರೆಯ । ದಿಹುದೆ ವೇದಾಸುಮತವಾದ ಯೋಗ ॥ ೨ ॥ ಕರಣಾದಿ ಗುಣ ವಿಷಯತತಿಗೆ ಸಾಕ್ಷಿಕನೆಂಬ । ಗುರುಶಂಭುಲಿಂಗ ತಾನಾದೆನೆಂಬ ॥ ಪರಿಕಲ್ಪನೆಯನುಳಿದು ತೆರೆಯಡಗಿದಂಬುಧಿಯ । ಪರಿಯಂತೆ ಸಲೆ ಸುಮ್ಮನಿಹುದೆ ನಿಜಯೋಗ ॥ .... ॥ ೩ ॥

## ೫೨. ರಾಗ-ವರ್ಧಿಧನ್ಯಾಸಿ

ಎಂದಿರ್ಪೆನೋ ನಿಜಸುಖದಲ್ಲಿ । ಬ ಷು । ದಂದುಗವೆಲ್ಲವನಳಿದುಳಿದು ॥ ಪ ॥ ಮಡದಿ ಮಕ್ಕಳು ಮಿತ್ರರನುಜರು । ನೆಂಟ । ರೊಡಲೊಡವೆಗಳನೆ ಮೋಹಿಸಿ ॥ ಬಿಡಲಾರದಿಹದೊಳಗಣ ಚಿಂತೆ । ಪಿಂಗಿ । ಪಡೆದು ನಿತ್ಯಾನಂದ ಪದವನು ॥ ೧ ॥ ಭೋಗ ವಿಶೇಷದೊಡನೆ ಸ್ವರ್ಗ । ಲೋಕ । ವಾಗಲೆಂದೆಳಸಿ ಜ್ಯೋತಿಷ್ಟೋಮ ॥ ಯಾಗಾದಿಗಳನೊಂದಿ ರಚಿಸುವ । ಬಾಧೆ । ಪೋಗಿ ಸಕಲಜಗನ್ಮಯನಾಗಿ ॥ ೨ ॥ ದುರಿತಕರ್ಮದ ಕಾಟವಿಲ್ಲದೆ । ತತ್ಪರಿ । ಹಾರ ವಿಷಯವೆಂದೆನಿಸುವ ॥ ಪರಿವಿಡಿದೊಳ ಹೊರಗಣ ಪೂಜಾ । ನೇಮ । ದುರುವಣೆನಿಂದು ನಿರ್ಮಲನಾಗಿ ॥ ೩ ॥ ಮರವೆ ಸಂಶಯ ವಿಪರೀತದ । ಮೂರು ಕುರುಹು ದೋರಲು ಬಳಿಕವರಿಂದ ॥ ಮೆರೆವ ಸುಶ್ರವಣ ಮನನ ನಿಧಿ । ಧ್ಯಾಸ । ದೆರಕವಿಲ್ಲದೆ ಸ್ವತಂತ್ರತೆಯೊಳು ॥ ೪ ॥ ಅವಮತದೊಳಾರು ವಿಧಿಸುವ । ವಿಶ್ವ । ಭಾವನೆಗಳನೊಮ್ಮೆ ಬೆರಸದ ॥ ಪಾವನಾತ್ಮಕ ಶಂಭುಲಿಂಗವ । ಕೂಡಿ । ಜೀವನ್ಮುಕ್ತತೆ ವಿಗೆ ನೆಲೆಗೊಂಡು ॥ ೫ ॥

## ೫೩. ರಾಗ-ನಾದನಾಮಕ್ರಿಯೆ

ತಿಳಿಯಲಹುದೊಲಿದು ಬಿಡಲಹುದು ಮೋಹಿಸದೆ ಭೂ । ತಳದೊಳಾನೆಂದಹಂಕರಿಸದಿಹುದರಿದು ॥ ಪ ॥ ಪ್ರಕೃತಿ ಮಹದಹಮುಚೇತನ ಕರಣನಸು ಭೂತ । ವಿಕೃತಿಗಳನಾ ವಿಶ್ವ ತೈಜಸ ಪ್ರಾಜ್ಞ ॥ ಸಕಲೇಶ ಸೂತ್ರಿ

ವೈಶ್ವಾನರರುಗಳನು ಸಾ । ಕ್ಷಿಕ ಪರಬ್ರಹ್ಮರನು ಶ್ರುತಿ ಗುರುಗಳಿಂದ ॥೧॥ ಧನ ಕನಕ ವಸ್ತ್ರ ಭೂಷಣ ಗಂಧಮಾಲ್ಯ ವಾ । ಹನ ರಮ್ಯವಾಸ ವನಿತಾದಿ ವಸ್ತುಗಳು॥ ಮನವಾರೆ ಮುಂದೆ ತೀವಿರೆ ಭೋಗಿಸುವ ಶಕ್ತಿ । ತನಗಿರ್ದೊಡಂತವೆಲ್ಲವನು ತೃಣವೆಂದು ॥೨॥ ಜ್ಞಾನಿ ತರಹರಿ ಶಾಸ್ತ್ರ ಸುಗುಣಿ ವಿಜಿತೇಂದ್ರಿಯ ನ । ನೂನಮತಿ ಯೋಗಿ ಮುನಿ ವಿಮಲನತಿಮಹಿಮ॥ ದಾನಿಯೆಂದಿಳೆ ತನ್ನ ನೆಳಸಿ ಬಣ್ಣಿಸಿದೊಡಭಿ । ಮಾನಿಸದೆ ನಡೆವುದಚ್ಚರಿ ಶಂಭುಲಿಂಗ॥ .... .... .... .... .... ॥೩॥

## ೫೪. ರಾಗ-ಫಾರ್ಸಿ

ಗುರುವೆ ನಿಮ್ಮಯ ಕರುಣದೊಳಿನ್ನ । ತತ್ವ ದಿರವನರಿದು ನಿತ್ಯ ಸುಖಿಯಾದೆ ॥ಪ॥ ನಾಮ ರೂಪವನಭಿಮಾನಿಸಿ । ಕೊಂಡು । ತಾಮಸ ಮತಿಗೊಳಗಾಗಿರೆ ॥ ಪ್ರೇಮಾಸ್ತಿ ಭಾತಿಯೆಂಬಿವೆ ನಿನ್ನ । ನಿಜ । ಧಾಮವೆಂದೊಸೆದೆಚ್ಚರಿಸಲಾಗಿ ॥೧॥ ತನು ನೇತ್ರ ಮನವೆಂಬಿವೆಲ್ಲವು । ನೋಡೆ । ನಿನಗೆ ವಿಷಯವಾದ ಕತದಿಂದ ॥ ನಿನಗೆ ಬಂಧಕವಿನೆಂದೆನಲುಂಟೆ । ಸಾಕ್ಷಿಕನೆ । ನೀನೆಂದು ತಿಳುಹಲಾಗಿ ॥೨॥ ದೇಹಾದಿಗಳು ಲೋಹ ಕಾಂತವ । ಹೊಂದಿ । ಲೋಹವಂತಿರದೆ ಚಲಿಸುವಂತೆ ॥ ಊಹಿಸೆ ನಿನ್ನ ಸನ್ನಿಧಿಯಿಂದೆ ಚೇಷ್ಟಿ । ಪಾಹಟನೆಂದು ಸೂಚಿಸಲಾಗಿ ॥೩॥ ಪಳುಕುಪಾಧಿಯ ನೊಂದಿತದ್ರೂಪ । ವೆಂಬ । ವೊಲು ನೀನಖಿಳ ತತ್ವಮಯನಾಗಿ ॥ ಬೆಳಗಲಂತದು ನೈಜವಪ್ಪುದೆ । ನಿ । ರ್ಮಳನು ನೀನೆಂದನುಗ್ರಹಿಸಲು ॥೪॥ ಪ್ರಾಣದೊಳಗೆ ಪ್ರಾಣ ಪದವಾಗಿ । ತನ । ಗೂಣೆಯವಿನಿತಿಲ್ಲ ದಪರೋಕ್ಷ ॥ ತಾಣವೆನಿಪ ಶಂಭುಲಿಂಗವ । ಕೂಡಿ । ಜಾಣನಾಗೆಂದು ಬೋಧಿಸಲಾಗಿ ॥ .... .... .... .... ॥೫॥

## ೫೫. ರಾಗ-ಭೈರವಿ

ಬಾಧೆ ತನ್ನೊಳು ತೋರದು । ಪರಮಾರ್ಥ । ಬೋಧೆ ನೆಲೆಗೊಂಡು ನಿಂದ । ಮೇಲೆ ॥ಪ॥ ಆನಂದಮಯನೆ ಜಗವ । ರಚಿಸಿ ವಿಜ್ಞಾನಮಯನೆನಿಸಿ ಕರ್ಮ । ವಿಡಿದು ॥ ಹಾನಿಗೊಳಗಹನಲ್ಲದೆ । ಸಲೆಸಾಕ್ಷಿ । ತಾನೆಂಬ ನಿಜವನರಿದ । ಮೇಲೆ ॥೧॥ ಪರಮ ಜೀವರುಗಳೆಂಬ । ಚೈತನ್ಯ । ವೆರಡನತಿಗಳೆದು ಬೇರೆ । ಬ್ರಹ್ಮ ॥ ತುರಿಯವೆಂಬುಭಯವಳಿದ । ಚಿನ್ಮಾತ್ರ । ದಿರವೆ

ತಾನೆಂದುತಿಳಿದ । ಮೇಲೆ ॥೨॥ ಮರೆದು ಮೊದಲರಿದ ಬಳಿಕ । ಸಹಜ ದೊಳು । ನಿರಿಗೆ ನೆಲೆಯಾವ.ದೆಂಬ । ಮತಿಗೆ ॥ ಪೆರತೆನಿಪ ಶಂಭುಲಿಂಗ । ವಾಗಿತಾ । ನುರೆಮಾನವನು ವಿರಾರಿದ । ಮೇಲೆ ॥ .... .... ॥೩॥

### ೫೬. ರಾಗ-ವಡ್ಡಿ ಧನ್ಯಾಸಿ

ಬಲ್ಲಡುಸಿರಿರಿ ಭಾವಕರು । ನೀವೆಲ್ಲ । ರಿಲ್ಲಿಗುರುಶಿಷ್ಯರೊಳು ಮೊದಲಾವುದರಿವೆ ॥ ಪ ॥ ಪೊರೆವೆನೀತನೆಂಬವನಿಚ್ಛೆ ಮೊದಲೊ । ವಿರತಿ ಚಿತ್ತದವನ ಪರಿಪಾಕ ಮೊದಲೊ ॥ ಕರುಣ ಕಟಾಕ್ಷದವನ ನೋಟ ಮೊದಲೊ । ಶರಣು ಹೊಕ್ಕವನ ಕಿಂಕರ ಭಾವಮೊದಲೊ ॥೧॥ ಮೋಹ ಮುಂಬರಿವವನಾರ್ತಿಕೆ ಮೊದಲೊ । ಕೋಹಮೆಂಬವನ ಬಿನ್ನಪದೇಳ್ಗೆ ಮೊದಲೊ ॥ ಸೋಹಮೆಂದರಿಯೆ.ಂದವನ ಬೋಧೆ ಮೊದಲೊ । ಊಹೆ ದೋರದವನ ನಿಜನಿಷ್ಠೆ ಮೊದಲೊ ॥೨॥ ಮೌನ ಮುದ್ರೆಗೆ ಸಂದವನ ಸನ್ನೆ ಮೊದಲೊ । ತಾನುತಾನಾದವನನುರಾಗ ಮೊದಲೊ ॥ ಏನುವಿಲ್ಲದ ಶಂಭುಲಿಂಗವೆ ಮೊದಲೊ । ಮಾನವಳಿದು ನಿಂದವನ ಮುಕ್ತಿ ಮೊದಲೊ ॥ .... ॥೩॥

ಇತಿ ನಿದಿಧ್ಯಾಸನಂ

---

### ೫೭. ರಾಗ-ನಾದನಾಮಕ್ರಿಯೆ

ಆವ ಬಾಧೆಯನುಂಟು ಮಾಡಬಹುದಖಿಳ ಭೋ । ಗಾವಲಂಬನದೊಳಿರೆ ಶಿವಯೋಗಿಗೆ ॥ ಪ ॥ ರವಿ ಸರ್ವಸಾರವನು ಸವಿದು ನಾನಾ ವಸ್ತು । ನಿವಹವನು ನಲಿದುಂಡು ವಾಯುಸಖನು ॥ ಪವನವೆಲ್ಲವನು ಮೈ ಸೋಂಕಿ ಶುಚಿಯೆನಿಸಿದಂ । ತವಿಭೇದರೂಪ ತತ್ವಜ್ಞಾನಿಗೆ ॥೧॥ ಪಳುಕುಪಾಧಿಯನೊಂದಿ ನಳಿನದಳಮಿರ್ದು ಜಲ । ಗಳು ಮೇಘಜಾಲದೊಡವೆರಸಿ ಗಗನ ॥ ಮಲಿನವಾಗದೆ ಲೇಪಿಸದೆ ನೆನೆದು ಕೆಡದಂತೆ । ತಿಳಿದಾತ್ಮ ನಿಷ್ಠೆನೆಲೆಗೊಂಡಯತಿಗೆ ॥೨॥ ಮರದೊಳಿಹುದನಲ ನಾಮರವನಲನಲ್ಲಿರದ । ಪರಿಯಂತೆ ಸಕಲ ಸಂಸಾರದೊಳಗೆ ॥ ಬೆರೆದಿಹನು ಗುರುಶಂಭುಲಿಂಗವೆ ತಾನಾದ । ಶರಣನಾ ಸಂಸಾರವಿಲ್ಲಾತಗೆ ॥ .... .... .... ॥೩॥

## ೫೮. ರಾಗ-ಸೌರಾಷ್ಟ್ರ

ಪ್ರಾರಬ್ಧಕರ್ಮ ವಾಸನೆಯೊಂದೇ ಸ್ವಾಲ್ಪ ಪ್ರ । ಕಾರವಾಗಿಹುದು ಜೀವನ್ಮುಕ್ತರ ॥ ಪ ॥ ಅರಿದರ್ಮೇಲೊಡಲು ವಿಡಿದು ಭೋಗದೊಳು ಮನ । ವೆರಕವೆಂದೆನಿಸಿ ಪಶುವಿನಂದದಿ ॥ ಮೇರಿವಾತ್ಮನೊಳು ಪ್ರೀತಿಮಾತ್ರವೆ ಕರ್ಮಜೊ । ಳುರಿವ ಸಂಸ್ಕಾರದ ತೀವ್ರವಿದು ॥ ೧ ॥ ಭೋಗಕ್ಕೆ ಮುಖ್ಯತೆ ದೋರೆ ತಾನಾತ್ಮವಶ । ನಾಗಿ ಬಾಲಕನಂತೆ ಭುವನದೊಳು ॥ ರಾಗಿಯೆನಿಸಿ ನಲಿದಾಡುತಿರಲು ಕರ್ಮ । ವೇಗದೊಳಿದು ಮಧ್ಯದಿರವಹುದು ॥ ೨ ॥ ತೊಲಗಿ ಭೋಗವನು ಪರಮಾತ್ಮನೊಡನೆ ಮತಿ । ನೆಲಸಿ ಸುರತಸುಖಿ ಮಿಥುನದಂತೆ ॥ ನಲೆ ನಿಜಾನಂದದಿಂದಿರೆ ಕರ್ಮಗಂಧದ । ಬಲದಿಂದೆ ಮಂದವೆನುತಿಹರದನು ॥ ೩ ॥ ನಿರುಪಮಾದ್ವಯ ನಿತ್ಯ ಪರಿಪೂರ್ಣ ಸುಖಬೋಧ । ತುರಿಯಾತ್ಮನಾಗಿ ನಿಂದನುಗೆಡದೆ ॥ ಪರಮುಕ್ತನಂತೆ ಪದುಳವಿರೆ ಕರ್ಮದ । ವರಸುಪ್ತಭಾವನೆಯೆನಿಪುದು ॥ ೪ ॥ ಇಂತು ಕರ್ಮದ ವೇಗವೆಂತುಫಲಿಸುತಿಹು । ದಂತೆ ಜ್ಞಾನಿಗಳಿರೆ ಪಲವಂದದಿ ॥ ಸಂತಸದೊಳು ಶಂಭುಲಿಂಗವಾಗಿಹ ಮೋಕ್ಷ । ವಂತವರಿಗೆ ಸಮಾನವೇಯಹುದು ॥ .... ॥ ೫ ॥

ಇತಿ ಜೀವನ್ಮುಕ್ತಸ್ಥಿತಿ ಪ್ರಕಾರಃ

## ೫೯. ರಾಗ—ನಾದನಾಮಕ್ರಿಯೆ

ಜ್ಯೋತಿ ಬೆಳಗುತಿದೆ ವಿಮಲ ಪರಂಜ್ಯೋತಿ ಬೆಳಗುತಿದೆ । ಮಾತು ಮನಂಗಳಿಂದತ್ತತ್ತಮೀರಿದ । ಸಾತಿಶಯದ ನಿರುಪಾಧಿಕ ನಿರ್ಮಲ ॥ ಪ ॥ ಶಿವಧರ್ಮನಾಳವೆಂತೆಂಬ ಕಂಭದಮೇಲೆ । ಸುವಿವೇಕ ಹೃದಯಾಬ್ಜ ಪಣತೆಯೊಳು ॥ ಸವೆಯದ ಸದ್ಭಕ್ತಿ ರಸತೈಲ ತೀವಿದ । ಪ್ರವಿಮಲ ಕಳೆಯೆಂಬ ವತ್ತಿವಿಡಿದು ದಿವ್ಯ ॥ ೧ ॥ ಮುಸುಕಿದವಿಷಯ ಪತಂಗ ಬಿದ್ದುರುಳೆ ತಾ । ಮಸಬುದ್ಧಿಯೆಂಬ ಕತ್ತಲೆಯುಳಿಯೆ ॥ ಮಸಗಿ ಸುಜ್ಞಾನವೆಂತೆಂಬ ಮಹಾಪ್ರಭೆ । ಪಸರಿಸಿ ಮಾಯಾಕಾಳಿಕ ಪೊರ್ದದನುಪಮ ॥ ೨ ॥ ಪ್ರಣವಾಕಾರದ ಗುಣಮೂರುಮುಟ್ಟದೆ । ಗಣನೆಗತೀತಾರ್ಥವೆನೆ ತೋರುವ ॥ ಅಣುಮಾತ್ರ ಚಲನೆಯಿಲ್ಲದ ಮೋಕ್ಷ ಚಿಂತಾ । ಮಣಿಯೆನಿಸುವ ಶಂಭುಲಿಂಗವೆ ತಾನಾದ ॥ .... .... .... .... ॥ ೩ ॥

ಇತಿ ಜ್ಞಾನಪ್ರತಿಪಾದನಸ್ಥಲಂ ಸಮಾಪ್ತಂ

॥ ಗದ್ಯ ॥ ಶ್ರೀ ಗುರುಶಂಭುಲಿಂಗದೊಲವಿನಿಂ ಶ್ರೀ ನಿಜಗುಣ ಶಿವ
ಯೋಗೀಂದ್ರ ವಿರಚಿತಮಾದ ಆಬಾಲವೃದ್ಧರಿಗಾಯಾಸವಿನಿ
ತಿಲ್ಲದಂತೆ ಸಮ್ಯಜ್ಞಾನಿಗಳೊಡಂಬಡುವಂತೆ ಸಕಲ ವೇದ
ವೇದಾಂತಾಗಮ ಸ್ಮೃತಿಪುರಾಣೇತಿಹಾಸ ಸೂತ್ರಾದಿ
ಶಾಸ್ತ್ರಸಮ್ಮತದಿಂ ಪುರಾತನ ಗೀತಾನುಗುಣ್ಯಾವೆ
ನಿಸಿ ಕೈವಲ್ಯಪದ್ಧತಿಯೆಂಬ ಪೆಸರನ್ನಿಟ್ಟು ಮೃ
ದುಮಧುರ ಲಕ್ಷಣ ಸಮೇತವಾದ ಪಂಚ
ಸ್ಥಲಪರಿವಿಡಿದುಜೋಡುಗಣನೆಯನುಳ್ಳ
ಸ್ವರವಚನ ಸಂಗ್ರಹಮಂ ಪೇಳ್ದಂ ॥
ಇಂತು ನಿಜಗುಣಶಿವಯೋಗೀಂದ್ರ ವಿರಚಿತವಾದ
ಪಂಚಸ್ಥಲದಿಂ ಕೂಡಿದ

## ಕೈವಲ್ಯಪದ್ಧತಿ ಸಮಾಪ್ತವು

ಮಂಗಳಮಸ್ತು

---

॥ ಓಂ ॥

ಶ್ರೀಗುರುಶಂಭುಲಿಂಗಾಯನಮಃ

# ಪರಮಾನುಭವ ಬೋಧೆ

## ರಾಗ-ನಾದನಾಮಕ್ರಿಯೆ

ಸೂತ್ರ ॥ ಶ್ರೀ ಗುರು ಶಂಭುಲಿಂಗದ ಪಾದಪಂಕಜ ।
ವೀಗೆನ್ನ ಮತಿಗೆ ಮಂಗಳವನು ॥

ಪದ ॥ ಶ್ರೀ ಮಹಾದೇವಂಗೆ ಸೋಮಂಗೆ ಸುಖಪೂರ್ಣ । ಧಾಮಂಗೆ ಸತ್ಯ ಚಿದ್ರೂಪಂಗೆ ॥ ಕಾಮಿತಜನ ಕಲ್ಪಭೂಜಂಗೆ ಶಂಭುವಿಂ । ಗಾವೇಾದ ದಿಂದ ವಂದಿಸುವೆನು ॥ ೧ ॥ ಸರ್ವ ವಿದ್ಯೆಗಳಿಗೆ ಸರ್ವ ಬುದ್ಧಿಗಳಿಗೆ । ಸರ್ವ ಸಿದ್ಧಿಗಳಿಗೆ ಸರ್ವಕ್ಕೆ ॥ ಸರ್ವ ಜೀವರ ತೋರ್ಕೆಗಾದಿ ಕಾರಣವಾದ । ಸರ್ವ ಮಂಗಲೆಗೆಯಾನತನಪ್ಪೆ ॥ ೨ ॥ ಗಣವರನಣಿಮಾದಿ ಗುಣಮಣಿಸಿಂಧು ವಾ । ರಣಮುಖನಭಿಮತಾರ್ಥಂಗಳ ॥ ತಣಿವಂತೆ ಕೊಡುವದನನ್ವಿತನೀ ಕೃತಿ । ಗಣುಮಾತ್ರವೆಡರಿಲ್ಲವೆನೆಮಾಳ್ಕೆ ॥ ೩ ॥ ಚಿನ್ನವಾಭರಣತೆಯಿನ್ನಾಮ ರೂಪಭೇ । ದಂ ನಿಜವೆನಿಸಿದಂತೀಶನ ॥ ಭಿನ್ನಾಭಿಧಾನ ಮೂರ್ತಿಗಳೆನಲೆಸೆವ ಸಂ । ಪನ್ನಗಣಾಳಿ ರಕ್ಷಿಪುದೆನ್ನ ॥ ೪ ॥ ಕರುಣ ರಸದ ಕೋಡಿವರಿವ ಕಟಾಕ್ಷದ । ಪರತತ್ವವರುಪುವಾಲಾಪದ ॥ ವರ ಪುಣ್ಯಮಯ ಶರೀರದ ನಿರಾ ಭಾರಿ ಸ । ದ್ಗುರುವಿರಲೆನ್ನ ಮಾನಸದಲ್ಲಿ ॥ ೫ ॥ ಶುಕ ವಾಮದೇವಾದಿ ಸಕಲ ಮುನೀಶ್ವರ । ನಿಕರವನೊಲವಿಂದೆ ಬಲಗೊಂಡು ॥ ಅಕಲಂಕಮೆನಿಸು ವದ್ವೈತ ತತ್ವವನಿಲ್ಲಿ । ಪ್ರಕಟಿಸುವೆನು ಬೋಧಾ ಗತಿಯಿಂದೆ ॥ ೬ ॥ ಅವರಿವ ರೆನ್ನದೆ ನಿಜವರಿದವರಂಘ್ರಿ । ಗವನತನಾಗಿ ಸಂತಸದಿಂದ ॥ ತವೆ ರಮ್ಯ ವಾದುದೆಂದೆನೆ ಪೇಳ್ವೆನಧ್ಯಾತ್ಮ । ಸುವಿಚಾರಗತಿಯನೀ ಕ್ರಮದಿಂದ ॥ ೭ ॥

ಇಷ್ಟದೇವತಾ ಸಂಪ್ರಾರ್ಥನೆ ನಿರೂಪಣೆ-ಸೂತ್ರ ೧ಕ್ಕೆ ಪದ ೭.

---

ಸೂತ್ರ ॥ ಶ್ರೀ ಯಾಜ್ಞವಲ್ಕ್ಯ ಮೈತ್ರೇಯಿಗೆ ಪೇಳ್ದುದ ।
ನೊಯ್ಯಾರದಿಂದೆ ವರ್ಣಿಸುವೆನು ॥

ಪದ ॥ ಅನಿಮಿತ್ತ ಬಾಂಧವನನುಪಮಾನಂದಾಬ್ಧಿ । ವಿನಯಾದಿ ಗುಣ ಮಣಿ ಮಂಡನ ॥ ಜನನ ವಿದೂರನಧಿಕವಿದ್ಯಾ ಸಂಪನ್ನ । ನೆನಿಸಿ ರಾಜಿಸ

ನಿಜಗುಣಯೋಗಿ ॥ ೧ ॥ ವಿರಚಿಸುವೆನು ಯಾಜ್ಞವಲ್ಕ್ಯ ಮೈತ್ರೇಯಿಯ ॥ ವರಸಂವಾದವನೆ ಕನ್ನಡವಾಗಿ ॥ ಪರಮಾರ್ಥವಿದು ಪರತರವೆಂದು ಪೊಗಳೆ ವಿ । ಸ್ತರವಾಗಿ ಸಾಧಕರರಿವಂತೆ ॥ ೨ ॥ ಅನುಭವ ಗೋಚರವೆನಿಪಂತೆ ಮೋಕ್ಷಾರ್ಥಿ । ಜನಕನುಪಮ ಪರತತ್ವವ ॥ ಮನದೊಲವಿಂದೆ ಪೇಳುವೆ ನಾತ್ಮಕೋವಿದ । ರನುಮಾನಿಸದೆ ಮೆಚ್ಚಿ ತಲೆದೂಗೆ ॥ ೩ ॥ ಏಕಾಂತದರಿ ವನೀ ಲೋಕಕ್ಕೆ ಸ್ವಾತ್ಮಾವ । ಲೋಕನಕ್ಕಿದು ಮುಖ್ಯವೆನಿಪಂತೆ ॥ ಈ ಕೃತಿ ಯೊಳು ಪೇಳ್ವೆನಿದು ಗೌಪ್ಯತರವೆಂದು । ಸ್ವೀಕರಿಪುದು ಮುಮುಕ್ಷುಗಳೆಲ್ಲ ॥ ೪ ॥ ಪರತತ್ವ ಬೋಧೆಯ ನುರುಯೋಗಿಜನರೊಪ್ಪೆ । ವಿರಚಿಸುವೆನು ಸಾರತರ ಮಾಗಿ ॥ ವರಮುಕ್ತಿ ಸಾಧಕರದರಿಂದಿದನೆ ನೋಡಿ । ಹರುಷದಿಂದರಿವುದು ನಿಜವನು ॥ ೫ ॥ ವರವೇದದರ್ಥವನರಿದು ಮಾಡಿದ ಸುಪ್ರ । ಕರಣ ಮನಂತಮುಂಟವರಲ್ಲಿ ॥ ಪರಿಕಿಸಲಿದರಂತೆ ನಿಜವನಿತ್ತು ಪರೋಕ್ಷ । ಕರಿಸಿದು ದಿ ಲ್ಲ ವೆ ಂ ದೆ ನೆ ಪೇ ಳ್ವೆ ॥ ೬ ॥ ಪರಮವಿವೇಕಿಗಳೊಲಿದೊಡಂಬಡುವಂತೆ । ಪರತತ್ವ ಬೋಧೆಯೆಂಬಮೃತದ ॥ ಸರಿಸುರಿವಂತೆ ಕೇಳ್ವರ ಕರ್ಣದೊಳಗಿದ । ನೊರೆವೆ ನಾನುಪನಿಷನ್ಮತದಿಂದ ॥ ೭ ॥ ಪರಮವಿರಕ್ತಂಗೆ ಪ ರ ತ ರ ಶಿಷ್ಯಂಗೆ । ಪರಮಾರ್ಥವರಿವಾತ್ಮ ತನುಜಂಗೆ ॥ ಪರಮ ರಹಸ್ಯದೊಳೊರೆ ವುದು ಕರ್ಮ ತ । ತ್ವರಗಿಗರುಪಲಾಗದಿದನೊಮ್ಮೆ ॥ ೮ ॥ ಪರಮಾನುಭವ ಬೋಧೆ ಯೆನಿಪ ನಾಮವನಿಟ್ಟು । ಹರಷದಿಂದೀ ಪ್ರಕರಣವನು ॥ ವಿರಚಿಸು ವೆನು ಮೃದು ಮಧುರಾರ್ಥ ಲಕ್ಷಣ । ವೆರಸಿ ಕೇಳುವ ಸರ್ವ ಸುಜನರ್ಗೆ ॥ ೯ ॥ ಪದಬಂಧದೊಳ್ಪ್ರಾಸು ಮೊದಲಾದ ಲಕ್ಷಣ । ವಿದರೊಳಿಲ್ಲದೊಡೇನುಚೆಲು ವೆತ್ತ ॥ ಸುದತಿ ರತ್ಯರ್ಥಮುಳ್ಳದರಿಂದ ಮಂಡನ । ವದನುಳಿದಂತೆ ಮೋಹಿ ಸುತಿರ್ಕೆ ॥ ೧೦ ॥ ಎಮಗೆಮ್ಮ ಮತವೆ ಸಾಲ್ಗೆನುತಿದನಾಲಿಸಿ । ದಮಳಾತ ರಿಗೆ ಲೋಕವಾರ್ತೆಯು ॥ ತಮಗೇತಕೆಂದು ಕೇಳಿದ ಸನ್ಯಾಸಿಯವಿಧಿ । ಸಮ ನಿಪುದಿದು ಸರ್ವಜನಸೇವ್ಯ ॥ ೧೧ ॥ ಇದನೊಮ್ಮೆ ಕೇಳಿ ತಿಳಿದೊಡವನೀ ಲೋಕ । ದುದಯಾದಿ ಬಳಿಕಿಂದು ಪರಿಯಂತ ॥ ಒದವಿ ತಾನೆಸಗಿದಖಿಳ ಪುಣ್ಯತತಿಫಲಿ । ಸಿದುದಿಂತು ಪೆರತಿಲ್ಲವೆನೆ ಪೇಳ್ವೆ ॥ .... .... ॥ ೧೨ ॥

ಪ್ರಕರಣಸ್ಥಿತಿ ನಿರೂಪಣೆ—ಸೂತ್ರ ೨ಕ್ಕೆ ಪದ ೧೯.

—:o:—

ಸೂತ್ರ ॥ ವರಮುನಿ ಯಾಜ್ಞವಲ್ಕ್ಯಯನಿಂತು ಮೈತ್ರೇಯಿ ।
ಪರತತ್ವವನು ಬೆಸಗೊಂಡಳು ॥

ಪದ ॥ ಶ್ರೀಮದಾಚಾರ್ಯಶಿಖಾಮಣಿ ಪರಮಾತ್ಮ । ರಾಮನಖಿಳ ವಿದ ನುರುಪುಣ್ಯ ॥ ಧಾಮನುನ್ನತಸುಖನಿಧಿ ಯಾಜ್ಞವಲ್ಕ್ಯದ । ಯಾಮೂರ್ತಿ ಸುಗುಣ ಸಂಪನ್ನನು ॥೧॥ ಮನದೊಲವಿಂದೆ ತನ್ನಿನಿಯೆ ಮೈತ್ರೇ ಯಿಯೋ । ಳಿನಿಸಗಲದೆ ಕೂಡಿ ಸುಖಮಿರೆ ॥ ವನಜಾಕ್ಷಿಯೊಂದುದಿನದೊಳ್ನಿ ನಿದಾಗಲಾ । ಮುನಿಪತಿಯನು ಬೆಸಗೊಂಡಳು ॥೨॥ ವನಿತೆ ಮೈತ್ರೇಯಿ ತನ್ನಿನಿಯನಂ ಭಕ್ತಿಭಾ । ವನೆಯಳವಟ್ಟು ವಂದಿಸಿ ತನ್ನ ॥ ಮನದನುರಾಗ ವಲರುತಿರೆ ಬೆಸಗೊಂಡ । ಲನುಪಮಾದ್ವೈತ ವಿಷಯವನು ॥೩॥ ಪರಮ ವಿರಕ್ತೆ ತಾನುರುಭಕ್ತಿಭಾವ । ವೊಪ್ಪಿರೆ ಪರಬ್ರಹ್ಮ ವಿಷಯವನು ॥ ಸರಸಿಜ ನೇತ್ರೆ ಮೈತ್ರೇಯಿ ಮೆಲ್ನುಡಿ ಮನೋ । ಹರಮಾಗೆ ಬೆಸಗೊಂಡಳೆ ನಿಯನ ॥೪॥ ಒಂದು ದುಃಖದೊಳು ತಾನೊಂದದೆ ಪರಿಪೂರ್ಣಾ । ನಂದ ರೂಪಿಂದೆ ಸಂತತಮಿರ್ಪ ॥ ಅಂದಕುಪಾಯವಿದೆಂದೊಲವಿಂದೆ ನೀ । ನಿಂದೆನ ಗರುಪು ಸನ್ಮುನಿಮುಖ್ಯ ॥೫॥ ಸ್ಮೃತಿಮಾತ್ರದಿಂದೆ ಸಂಸೃತಿಬಂಧವಳಿದು ಸ । ನ್ನುತ ನಿಜಸುಖದೊಳಾನಿರುತಿರ್ಪ ॥ ಹಿತಕಿದೆ ಮತವನ್ಯವಿಲ್ಲವೆಂದೆನಿಪ ಸ । ದ್ಗತಿಯನೆ ಪೇಳೆನಗಮಳಾತ್ಮ ॥೬॥ ವರ ಮುನಿಪತಿ ನಿನ್ನ ಚರಣ ಪಂಕರುಹಕ್ಕೆ । ಶರಣೆಂಬುದಲ್ಲದೆ ಪೆರತೇನು ॥ ಪರಿಕಿಸಲರಿಯೆನಾನದರಿಂದೆ ನೀನತಿ । ಕರುಣದಿಂದೊರೆದು ರಕ್ಷಿಪುದೆನ್ನ ॥೭॥ ಎನಿತು ತತ್ವಾರ್ಥವನೆನಗೆ ಬೋಧಿಸಬೇಹು । ದನಿತೆಲ್ಲವನು ಸವಿಸ್ತರಮಾಗಿ ॥ ಇನಿತು ಸಂದೆಗಮಿಲ್ಲದಂತ ಲಸದೆ ಪೇಳು । ಮುನಿಮುಖ್ಯ ತಿಳಿವಂತೆ ಕೃಪೆಯಿಂದ ॥ .... ॥೮॥

ಪ್ರಶ್ನೆನಿರೂಪಣೆ ಸೂತ್ರ ೩ಕ್ಕೆ ಪದ ೨೭.

---

ಸೂತ್ರ ॥ ಮತಿಯುಂಟೆ ಜಡರಿಗದ್ವೈತವನರಿಯಲ್ಕೆ ।
ಸತಿ ನೀನೆ ಸುಕೃತಿ ಪೇಳ್ವೆನು ಕೇಳು ॥

ಪದ ॥ ಎಂದು ಬಿನ್ನೈಸಿ ವಂದಿಸಿ ಭಕ್ತಿರಸತೀವಿ । ದಿಂದುನಿಭಾಸ್ಯೆ ಮೈತ್ರೇಯಿಗೆ ॥ ಮುಂದುವರಿವ ಮೋಹದಿಂದಲಾ ಮುನಿಪತಿ । ಯೆಂದ ನಿಂತೆಂದು ಸನ್ಮುದದಿಂದೆ ॥೧॥ ಸುದತಿ ಕೇಳೀ ವಿಶ್ವದೊಳಗಿಂತು ನಿನ್ನಂತೆ

ಪದಪಿಂದೆ ಕೇಳ್ದವರಾರುಂಟು ॥ ಸದಮಳಾನಂದಾತ್ಮ ಪದಮುಕ್ತಿ ಪುಣ್ಯವಿ । ಲ್ಲದವರ್ಗದೆಂತು ಪೇಳ್ದೊರಕೊಳ್ಳ್ಗ ॥ ೨ ॥ ಅದರಿಂದೆ ಧನ್ಯೆ ನೀನದರಿಂ ಕೃತಾರ್ಥೆ ನೀ । ನದರಿಂದೆ ನೀನಿಲ್ಲಿ ಕೃತಕೃತ್ಯೆ ॥ ಅದರಿಂದೆ ನಿನಗೆ ಪೇಳ್ವೆನು ಕೇಳು ಮೈತ್ರೇಯಿ । ಪದಪಿಂದದ್ವೈತ ವಿಷಯವನು ॥ ೩ ॥ ನೆರೆ ಕೇಳು ಕೇಳ್ದುದನರಿ ಯರಿದುದನೊಮ್ಮೆ । ಮರೆಯದಿರು ಗುರುಪೇಳ್ದ ತೆರದೊಳು ॥ ತೊರೆ ವಿಷಯವನು ತೊರೆದು ನಿರ್ವಿಷಯದೊಳು । ಕರಿಗೊಂಡು ನಿಲೆ ನೀನೆ ಸುಖಿಯಪ್ಪೆ ॥ .... .... .... .... .... ॥ ೪ ॥

ಮುನಿಸುಬೋಧೆ ನಿರೂಪಣೆ ಸೂತ್ರ ೪೩ಕ್ಕೆ ಪದ ೩೧.

---

ಸೂತ್ರ ॥ ಪರದೊಳಾಕಸ್ಮಿಕವಾದನಾ ಕಲ್ಪಿತ ।
ಪುರುಷನಿಖಿಳ ಭಾವದೊಡಗೂಡಿ ॥

ಪದ ॥ ಏನೊಂದು ತೋರದಜ್ಞಾನವಲ್ಲದ ಸಚ್ಚಿ । ದಾನಂದಾದ್ವಯ ನಿತ್ಯ ಪರಿಪೂರ್ಣ ॥ ಮಾನ ವಿದೂರನಕಲ್ಪಿತನವಿಕೃತಿ । ತಾನೇಕನಚಲನಾ ಪರಮಾತ್ಮ ॥ ೧ ॥ ಅಲ್ಲಿ ನಿಮಿತ್ತವೊಂದಿಲ್ಲದೆ ಸುಖುಸುಪ್ತ । ನಲ್ಲಿ ಕನಸಿನ ಜೀವತ್ವವು ॥ ನಲ್ಲಿಳೆ ಪರಿತೋರ್ಪುದಂತೆ ಪರಬ್ರಹ್ಮ । ದಲ್ಲಿ ಕಲ್ಪಿತನಾದ ನೋರ್ಪನು ॥ ೨ ॥ ಕಾಂತೆ ಕಲ್ಪಿತಜೀವನಿಂತಾತ್ಮಪದದೊಳೋ । ರಂತೆ ತೋರಿದನನ್ಯವಿಲ್ಲೆಂದು ॥ ಭ್ರಾಂತಿರಭ್ರಾಂತ ಪೂರ್ವಕವೆಂಬ ವಚನದಿಂ । ದಂ ತಿಳ ಸತ್ಯಾನುಭವವಿದು ॥ ೩ ॥ ಆ ಕನಸಿನ ಜೀವನೆಂತು ತನ್ನಿಂ ತಾನ ನೇಕ ವಿಕೃತಿಯೊಳೊಂದಿದನಿಂತು ॥ ರಾಕೇಂದು ಮುಖಿ ನೋಡು ಕಲ್ಪಿತ ಪುರುಷನೆ । ಸ್ವೀಕರಿಸಿದನೀ ಭಾವನೆಗಳ ॥ ೪ ॥ ಪರಿಕಿಸು ನೀರೆ ಕಲ್ಪಿತನೆ ಯಹಂಭಾವ । ಪರ ನಜ್ಞಭಾವಸಹಿತನೆಂದು ॥ ಸರಸಿಜದಳನೇತ್ರೆ ಕೇಳಾ ಪ್ರಕೃತಿಭಾವ । ಧರ ನಿದಂಭಾವತ್ರಿತಯದರುಶಿ ॥ ೫ ॥ ವಿದ್ಯಾರೂಪನು ತಾನ ವಿದ್ಯಾತ್ಮಕನು ವಿದ್ಯಾ । ವಿದ್ಯಾಮಯನು ತ್ರಿವಿಕೃತಿಗನು ॥ ಹೃದ್ಯೆ ಕೇಳೀ ಜಗದ್ಬೀಜನು ಬಳಿಕ ಬೋ । ಧಾದ್ಯುತಿಯೆನಿಸುವನವನಿಂತು ॥ ೬ ॥ ಸ್ವಗತಾದಿ ಭೇದವಿಲ್ಲದ ಪರಬ್ರಹ್ಮದೊ । ಳೊಗೆದಿಂತು ತೋರ್ಪನೀನಾನೆಂಬ ॥ ಬಗೆ ಯನೆ ತೋರಿ ತೊಡೆಯೆ ಕಲ್ಪಿತನನಿಲ್ಲಿ । ನೆಗಳಿ ಪೇಳಿದೆನ್ನೈಸೆ ಪೆರತುಂಟೆ ॥ ೭ ॥

ಕಲ್ಪಿತಪುರುಷೋತ್ಪತ್ತಿನಿರೂಪಣೆ ಸೂತ್ರ ೪೪ಕ್ಕೆ ಪದ ೩೮.

---

ಸೂತ್ರ ॥ ಪೇಳುವೆನಾ ದಶಭಾವಲಕ್ಷಣವನು ।
ಕೇಳಿ ನೀನರಿವುದಿಂತಿನಿಯಳೆ ॥

ಪದ ॥ ತನು ಮಾನಸಾದಿಗಳೆನಿಪಲ್ಲಿ ಪರತತ್ತ್ವ । ದನುಭೂತಿಯೊಳು ನ್ಯಾನೆಂದಲ್ಲದೆ ॥ ಅನುದಿನವಿರಲರಿಯದ ಕತದಿಂದೆ ಮಾ । ನಿನಿ ಕೇಳಹು ಭಾವ ಪರನಕ್ಕು ॥ ೧ ॥ ಜೀವ ರೂಪಿನೊಳಾತ್ಮಭಾವವಂ ಮರೆದಿದಂ । ಭಾವದ ಸುಖ ದುಃಖಾದಿಗಳನು ॥ ಆವಗಮರಿವುತಿರ್ಪುದರಿಂದೆ ತಿಳಿಯಜ್ಞ । ಭಾವ ಸಹಿತನೆಂದೆನಿಸುತಿರ್ಕು ॥ ೨ ॥ ಸತಿ ಕೇಳು ತನುಭಾವ ರತಿಯನುಳಿಯದಿರ್ಪ । ಕತದಿಂದೆ ತನುವಿಲ್ಲದೊಮ್ಮೆಯು ॥ ಪ್ರತಿದೋರಲರಿಯನದಾಗಿ ಭಾವಿಸಲಾ ಪ್ರ । ಕೃತಿಭಾವಧರನೆಂದೆನಿಸುತಿರ್ಕು ॥ ೩ ॥ ನಿಯುತದವಸ್ಥೆ ಮೂರನು ಕಾಯ ಕರಣಸಂ । ಚಯವಿಡಿದರಿವ ಕಾರಣದಿಂದೆ ॥ ಪ್ರಿಯತಮೆ ನೀನಿಂತು ತಿಳಿವು ದಿದಂಭಾವ । ತ್ರಯದರುಶಿ ಯವನೆಂದೊಲವಿಂದೆ ॥೪॥ ಅರಿದಹ ಮೆನೆ ವಿದ್ಯಾರೂಪನು ನಿಜವನು । ಮರೆದುದರಿಂದವಿದ್ಯಾತ್ಮನು ॥ ಅರಿವು ಮರವೆಯೆಂಬೆರಡನೊಂದಿ ತೋರೆ ನೀ । ನರಿ ವಿದ್ಯಾವಿದ್ಯಾಮಯನವೆಂದು ॥ ೫ ॥ ವಿಕೃತಿ ಜಾಲಕ್ಕಿವೆ ಮೊದಲೆನಿಪ ಜ್ಞಾನ । ವಿಕೃತಿ ಬೇರಿನ್ನೊಂದು ಮೋಹನ ॥ ವಿಕೃತಿ ಮೇಣರಿಯೆವರ್ತನವಿಕೃತಿಗಳಿಂತು । ವಿಕೃತಿ ತ್ರಯವನ್ನೆ ದಿದವನಕ್ಕು ॥ ೬ ॥ ವಿದ್ಯೆಯೆ ಜ್ಞಾನಮವಿದ್ಯೆಯೆ ಮೋಹನ । ವಿದ್ಯಾವಿದ್ಯೆಗಳೆ ವರ್ತನವಕ್ಕು ॥ ಹೃದ್ಯೆ ಮೈತ್ರೇಯಿ ನೀನೀ ಕ್ರಮದೊಳು ಶುದ್ಧ । ವಿದ್ಯೆಯಿಂದಿವನಿಂತು ತಿಳಿವುದು ॥ ೭ ॥ ಬೀಜದಲ್ಲಿಯೆ ಸಸ್ಯ ಬೀಜ ತುಷಂಗಳಿ । ರ್ಪೋಜೆಯಿಂದೀ ತ್ರಿವಿಕೃತಿಗಳು ॥ ರಾಜೀವದಳನೇತ್ರೆ ಮೈತ್ರೇಯಿ ನೋಡು ನಿ । ರ್ವ್ಯಾಜವಾ ಕಲ್ಪಿತನೊಳಗಿರ್ಕು ॥ ೮ ॥ ಪ್ರಿಯತಮೆ ಮಹದಹಮಾದಿ ವಿಕಾರಸಂ । ಚಯಕೆ ತಾನಾದಿ ಕಾರಣನಾಗಿ ॥ ನಿಯಮದೊಳಿರ್ಪುದರಿಂದೆ ಜಗದ್ಬೀಜ । ಮಯನೆನಿಪನು ಕಲ್ಪಿತನೆ ಕೇಳು ॥ ೯ ॥ ಅಹಂಬುದ್ಧಿ ನೇಣಿನಹಿಗೆ ಬೀಜವಾದಂತೆ । ಮಹದಾದಿ ಜಗಕೆ ತಾನದು ತನ್ನ ॥ ಸಹಮಿರ್ಪ ಬಗೆಯ ನೀನರಿ ಕಲ್ಪಿತನೊಳಿಂತು । ವಿಹಿತ ಮಿದಂಬುಜಲೋಚನೆ ॥೧೦॥ ಮರೆದೊಡೆ ಜೀವಾತ್ಮ ನರಿದೊಡೆಪರಮಾತ್ಮ । ನರಿವುಮರವೆಗಳೆಂಬೆರಡನು ॥ ನೆರೆ ಕೂಡಲಂತರಾತ್ಮನು ನೀರೆ ನೀನಿದ । ನರಿ ಕಲ್ಪಿತನ ಬೋಧಾದ್ಯುತಿಯೆಂದು ॥ ೧೧ ॥ ಜನಪನೆ ಮರೆದಲ್ಲಿವ್ಯಾಧನು ಮಧ್ಯಸ್ಥ । ನೆನಿಪನು ತನ್ನ ತಾನರಿವಲ್ಲಿ ॥ ವನಿತೆ ಮೇಣರಿದಲ್ಲಿ ಜನಪನೆನಿಸುವನೀ । ಯನುವನೀನರಿ ಬೋಧಾ

ದ್ಯುತಿಯೊಳು ॥ ೧೨ ॥ ಅದು ಕಾರಣದೆ ಬೋಧಾದ್ಯುತಿ ನಿಜಾತ್ಮನೆಯ್ದಲ್ಲ । ವದು ತಿಳಿದೊಡೆ ಮಿಥ್ಯೆಯಹುದಾಗಿ ॥ ಸುದತಿ ನೀನೀಕ್ರಮದೊಳು ಕಲ್ಪಿತನ ಭಾವ । ದುದಯಂಗಳಿರವನಿಂತರಿವುದು ॥ ೧೩ ॥ ಕಲ್ಪಿತಪುರುಷ ಸಂಕಲ್ಪನೆ ಯಿಂದೆ ವಿ । ಕಲ್ಪರೂಪಾದ ಜಗತ್ತಿನ ॥ ಕಲ್ಪನೆಯಹುದಿದು ನಿಜವೆಂದು ನೀನರಿ । ಕಲ್ಪಭೂರುಹ ಪಲ್ಲವಾಧರೆ ॥ .... .... ॥ ೧೪ ॥

ಕಲ್ಪಿತನ ದಶಭಾವ ಲಕ್ಷಣ ನಿರೂಪಣೆ—ಸೂತ್ರ ೬ಕ್ಕೆ ಪದ ೫೨.

---

ಸೂತ್ರ ॥ ಜನನಾರಂಭ ಕ್ರಿಯೆ ಪ್ರಕೃತಿ ಯವಿದ್ಯೆಯೆಂ ।
ದೆನಿಸವಾ ಕಲ್ಪಿತನೊಳು ತೋರ್ಕು ॥

ಪದ ॥ ತಿಳಿ ನೀರೆ ನಿಖಿಳ ತೋರ್ಕೆಗೆ ಕಾರಣಾತ್ಮತೆ । ದಳೆದಿಂದಿ ಕಲ್ಪಿತ ಪುರುಷನು ॥ ಒಳಪುಗದರಿವಿನೊಳೊಂದಿ ಭಲ್ಲಾತಕಿ । ಫಳಬೀಜದಂದದಿಂ ದೆಸೆವನು ॥ ೧ ॥ ಅಂತಾ ಜಗತ್ಕಲ್ಪನೆಯೊಳಾ ಕಲ್ಪಿತನಹಂ । ಭ್ರಾಂತಿ ತಾನಾ ರಂಭಕ್ರಿಯೆಯೈಸೆ ॥ ಕಾಂತೆ ನೀನರಿ ಕರ್ಮವನ್ಯವೊಂದಿಲ್ಲವು । ನಂತ ಚಿದ್ಬ್ರಹ್ಮವದ್ವಯವಾಗಿ ॥ ೨ ॥ ಇನಿಯಳೆ ಜ್ಞಾನ ಮೋಹನ ವರ್ತನಾದಿ ಭಾ । ವನೆಗಳಿಗಾದಿ ಕಾರಣವಾಗಿ ॥ ಮಿನುಗುವಹಂಭಾವನೆಯೆ ನೋಡು ಕರ್ಮವೆಂ । ದೆನಿಪುದಾ ಕಲ್ಪಿತಪುರುಷನ ॥ ೩ ॥ ತನ್ನಹಂಭಾವದಿಂದಂ ನಿಜಜ್ಞತ್ವಮಂ । ತನ್ನೊಳು ಮರೆದು ತಾನಜ್ಞನು ॥ ಎನ್ನಲಂತದು ಮೂಲ ಪ್ರಕೃತಿಯಪ್ಪುದು ಮನ । ದನ್ನೆ ಬೇರೊಂದುಂಟೆ ನಿಜದಲ್ಲಿ ॥ ೪ ॥ ಅರಿವು ತಾನಾಗಿರ್ದು ಮರೆದೆ ನಾನೆನ್ನನೆಂ । ದರಿಯಲವಿದ್ಯೆಯೆಂದೆನಿಪುದು ॥ ಪೆರೆನೊಸಲಳೆ ಪಂಚವಿಧ ವಪ್ಪುದದು ತಾನು । ನೆರೆ ತಿಳಿಯಲು ಮಿಥ್ಯೆ ಯೆನಿಪುದು ॥ ೫ ॥ ಅದು ತಮೋರೂಪಿಂದವದು ಮಾಯಾ ರೂಪಿಂದ । ವದುಮೋಹಾಜ್ಞಾನದ ರೂಪಿಂದೆ ॥ ಅದು ಬಳಿಕನೃತದ ರೂಪಿಂದೆ ತೋರ್ಪುದು । ಸುದತಿ ಕೇಳಿದ ನರುಪುವೆನಿಲ್ಲಿ ॥ ೬ ॥ ಕಮಲಾಸ್ಯೆ ಕೇಳಹಂಭ್ರಮೆ ಯಜ್ಞನಾನೆಂಬ । ಭ್ರಮೆ ಜಗದ್ಭ್ರಮೆಗಳು ಪುಸಿಯೆಂದು ॥ ಸುಮನಸರ್ಗಾದೊಡಮರಿದು ಕಾಣಲ್ಕನೆ । ತಮವಪ್ಪುದದು ತಮದಂದದಿ ॥ ೭ ॥ ಇಲ್ಲದುದಾಗಿಯುಮುಳ್ಳುದೆನಿಸಿ ತೋರು । ತೆಲ್ಲೆಲ್ಲಿ ನೋಡೆ ತನ್ಮಯವಾಗಿ ॥ ಬಲ್ಲವರ್ಗಾದೊಡಚ್ಚರಿ ದೋರು ತೀಪರಿ । ಯಲ್ಲಿರ್ಪುದದು ಮಾಯೆ ಮನದನ್ನೆ ॥ ೮ ॥ ತನ್ನ ಹಂಭ್ರಮೆಯು

ನೆಂದುಂ ನೀಗಿ ನಿಲಲೀಯ । ದುನ್ನತವಾದನ್ಯ ರತಿಯನು ॥ ತನ್ನೊಳಿಸಗಿ ಕಾಡುತಿಹುದರಿವುಳ್ಳರು । ಮುನ್ನೋಡಲದು ಮೋಹವೆನಿಪುದು ॥ ೯ ॥ ತಾನಾರು ಜಗವಿದೇನೆಂತಾದುದೀ ತನು । ವೇನೆಂದು ತಿಳಿಯಲಿಕ್ಕೆಡೆಯನು ॥ ತಾನೀಯದೆಲ್ಲರೊಳಿರ್ಪ ಕಾರಣದಿನ । ಜ್ಞಾನವಿದೆಂದು ಭಾವಿಸು ನೀರೆ ॥೧೦॥ ಅರಿವಿಂದೆ ನೋಡಲ್ಕೆ ಪುಸಿಯಾಗಿ ತಾನಾವ । ತೆರದಿಂದೆ ಮರಳಿ ಕಾಣಿಸ ದೆಂದು ॥ ಪರಿಪಟ್ಟು ಪೋಪುದರಿಂದದನೃತವದೆಂ । ದರಿವುದು ಮೈತ್ರೇಯಿ ನಿಜದಿಂದೆ ॥ .... .... .... .... ॥ ೧೧ ॥

ಕಲ್ಪಿತಂಗವಿದ್ಯಾ ಪಂಚಕ ನಿರೂಪಣೆ-ಸೂತ್ರ ೭ಕ್ಕೆ ಪದ ೬೩.

---

ಸೂತ್ರ ॥ ತಿಳಿ ಮೂಲಪ್ರಕೃತಿಯಿಂದಹವಾದಿ ಕಾರ್ಯ ಸಂ ।
ಕುಳವಾದವೆಂದು ಹೆಂಗಳರನ್ನೆ ॥

ಪದ ॥ ಅದು ತಾನನಾದಿ ತೋರ್ಪುದರಿಂದೆ ಘಟದವೋ । ಲದು ಪುಸಿ ಕಲ್ಪಿತಾತ್ಮಕನಲ್ಲಿ ॥ ಒದವಿದ ವಿಕೃತಿ ತಾನಹುದಾಗಿ ಕೆಡುವುದಂ । ತದು ಮೂಲಪ್ರಕೃತಿ ನಿಖಿಳಬೀಜ ॥ ೧ ॥ ಅದು ನಾನಾ ವಿಕೃತಿರೂಪದೆ ತೋರಿ ಪರಿಣಮಿ। ಸಿ ದೊಡೆ ಮೊದಲು ಮಹತ್ತೆಂಬುದು ॥ ಸುದತಿ ಕೇಳುದಿಸಿತಂತದು ತಾನಹಂತ್ರಿತ । ಯದತೋರ್ಕೆಗಾದಿ ಕಾರಣವಕ್ಕು ॥ ೨ ॥ ಗುಣಬುದ್ಧಿ ಮೇಣವಗುಣಬುದ್ಧಿ ದುರ್ಗುಣ । ಗುಣಬುದ್ಧಿಯೊಳು ಮಹತ್ತತ್ವವ ॥ ಗುಣವಂ ತೆತಿಳಿ ಬಳಿಕದನನ್ಯಥಾಜ್ಞಾನ । ದಣು ರೂಪವಾ ಪ್ರಕೃತಿ ನಿಜವೆಂದು ॥೩॥ ಒ ಳ್ಳಿದನಹುದಲ್ಲವೆರಡುಳ್ಳನೆಂಬೀ ಹಂ । ಮೆಲ್ಲಕ್ಕೆ ಬೀಜವಿಂತಿದು ಬೇರೆ ॥ ಇಲ್ಲವಂ ದೆನಿಸಿ ತೋರುವಬುದ್ಧಿ ತಾನೆ ತ । ನ್ನಲ್ಲಿ ಮಹತ್ತೆಂದೆನಿಸುತಿರ್ಕು ॥ ೪ ॥ ಅದ ರಿಂದ ಹಂತ್ರಿತಯದ ತೋರ್ಕೆಯಪ್ಪುದಂ । ತದು ಸಾತ್ವಿಕಾದಿ ಗುಣಂಗಳ ॥ ಉ ದಯಕ್ಕೆ ಹೇತುವದನ್ಯಥಾಜ್ಞಾನದ । ಪದವಾದಿ ಬೀಜವೀ ತ್ರಿಜಗಕ್ಕೆ ॥ ೫ ॥ ಮೊದಲು ವೈಕಾರಿಕವದರಿಂದೆ ತೈಜಸ । ವದರಿಂದೆ ಭೂತಾದಿಯೆನಿಸುವ ॥ ಒದವಿದ ಪೆಸರು ವಡೆದ ಮೂರಹಂಕೃತಿ । ಯುದಯಿಸಿ ತೋರ್ಪವಾ ಕ್ರಮ ದಿಂದೆ ॥ ೬ ॥ ಸಕಲ ವಿಜ್ಞಾನಕ್ಕೆ ನಿಖಿಳ ವಿಕಾರಕ್ಕೆ । ಪ್ರಕೃತಿ ತಾನಾಗಿ ಪೊಳೆಯುತಿರ್ಪ ॥ ಸುಕರದಹಂಕೃತಿ ತಾನೆ ತಿಳಿಯೆ ವೈಕಾ । ರಿಕವಪ್ಪುದದು ಸತ್ವಗುಣಮೂಲ ॥ ೭ ॥ ರಾಗಕ್ಕೆ ಸಕಲ ಸಂಯೋಗಕ್ಕೆ ನಿಜಬೀಜ । ವಾಗಿ

ತೋರ್ಪಹವು ತೈಜಸವೆಂದು ‖ ರಾಗಾಧರಾಂಚಿತೆ ತಿಳಿಯದು ತಾನೆ ರ । ಜೋಗುಣದಾದಿಯೆಂದೆನಿಸಿರ್ಕು ‖ ೮ ‖ ಭೂತಂಗಳಿಗೆ ಜಾಡ್ಯಭೌತಿಕಂಗಳಿ ಗಾದಿ । ಭೂತವೆನಿಸುವಹಂಕಾರವೆ ‖ ಭೂತಾದಿಯೆಂದೆನಿಪುದು ತಮೋಗುಣ ಕದು । ಹೇತುವೆಂದರಿವುದಾಯತನೇತ್ರೆ ‖ ೯ ‖ ಜ್ಞಾನವೆ ಸತ್ತ್ವವಜ್ಞಾನವೆ ತಮವಿನ್ನು । ಜ್ಞಾನಾಜ್ಞಾನಾದ್ವಯಾತ್ಮಕವಾಗಿ ‖ ತಾನಿಹುದದು ರಜವೆನಿ ಪುದೀ ಗುಣಮೂರು । ತಾನೆ ಲೋಕತ್ರಯಂಗಳ ಬಿತ್ತು ‖ ೧೦ ‖ ಮೂರು ಗುಣಗಳೊಳಾ ಮೂರಹಂಕೃತಿ ಜೇರೆ । ಬೇರೊಂದಿ ನಿಂದಾಕ್ಷಣದೊಳು ‖ ಮೂರು ಲೋಕಂಗಳುದಿಸಿ ತೋರುತಿಹವೆಂದು । ನೀರೆನೀನರಿವುದೀ ಕ್ರಮ ದಿಂದ ‖ ೧೧ ‖ ತರುಣಿ ಕೇಳಂತಃಕರಣ ಬಾಹ್ಯೇಂದ್ರಿಯ ಭೂತ । ಪರಿಕರಂ ಗಳೆ ಲೋಕತ್ರಯವಿವು ‖ ಪರಿವಿಡಿಯಿಂದಹಂಕಾರ ತ್ರಿತಯದಲ್ಲಿ । ಸಿರುತ ದಿಂದುದಿಸಿ ತೋರುವವಿಂತು ‖ .... .... .... ‖ ೧೨ ‖

ಮಹದಾದಿ ಜಗದುತ್ಪತ್ತಿ ಕ್ರಮನಿರೂಪಣೆ ಸೂತ್ರ ಲಕ್ಕೆ ಪದ ೭೫.

---

ಸೂತ್ರ ‖ ಭೂತಾದಿಯಿಂದಾದವೈದು ಭೂತಂಗಳಾ ।
ಭೂತದಿಂದಖಿಳ ವಿಷಯವಕ್ಕು ‖

ಪದ ‖ ಭೂತಾದಿಯೆಂಬಹಂಕಾರದಿಂದವೆ ಪಂಚ । ಭೂತಂಗಳುದಿಸಿದ ವವು ತಾವು ‖ ಈ ತೋರ್ಪ ವಿಷಯ ಸಂಭವ ಬೀಜವಪ್ಪವಾ । ಭೂತ ಗಳಂಬರಾದಿಗಳಕ್ಕು ‖ ೧ ‖ ತರಳಾಕ್ಷಿ ಕೇಳಂಬರಾನಿಲಾನಲ ವಾರಿ । ಧರೆ ಯೆಂಬವೈದು ಭೂತಂಗಳು ‖ ಪರಿವಿಡಿದಿಪ್ಪ ವವರಲಕ್ಷಣಂಗಳ । ನೊರೆವೆನಾ ನಿಲ್ಲಿ ನೀನರಿಯಲ್ಕೆ ‖ ೨ ‖ ಇರಲೆಡೆಯಾಗಿ ಸುಷಿರ ರೂಪವಾಗಿ ಸು । ಸ್ಥಿರ ಸೂಕ್ಷ್ಮಮಾಗಿ ಭರಿತವಾಗಿ ‖ ವರಶಬ್ದ ಗುಣಯುತಮಾಗಿರಲದು ತಾನೆ । ನಿರುತದಿಂ ದರಿವುದಂಬರವೆಂದು ‖ ೩ ‖ ಚಲಿಸುವೆಚ್ಚರಿಸುವ ತೊಳಲುವ ರೂಪಿಂದೆ । ಸಲೆ ಶಬ್ದ ಸ್ಪರ್ಶನ ಗುಣದಿಂದೆ ‖ ಬಲಮುಳ್ಳುದಾಗಿರಲದು ವಾಯುವೆಂದರಿ । ಲಲನೆ ಮೈತ್ರೇಯಿ ನೀನೊಲವಿಂದೆ ‖ ೪ ‖ ಬೆಳಗುವ ಸಂತಾಪಿಸುವ ಸಲೆ ಮೇಲಕು । ಜ್ವಳಿಸುವ ಪಚಿಸುವ ನಿಜದಿಂದೆ ‖ ತಿಳಿ ಶಬ್ದ ಸ್ಪರ್ಶನ ರೂಪೆಂಬ ಗುಣದಿಂದೆ । ನಿಳೆ ವಹ್ನಿಯದು ತಾನೆ ಲಲಿತಾಂಗಿ ‖ ೫ ‖ ದ್ರವಣ ಪಿಂಡೀಕರಣಾದಿ ಲಕ್ಷಣದಿಂದೆ । ರವಮುಖ್ಯವಾಗಿ ನಾಲ್ಕೆನಿಸುವ ‖

ವಿವಿಧ ಗುಣಂಗಳಿಂದೆಸೆವುದೆ ಜಲವೆಂದು । ಯುವತಿ ಚಿತ್ತದೊಳವಧರಿ ಪುದು ॥ ೬ ॥ ಅತಿಶಯಮೆನೆ ಧೃತಿ ಕಾಠಿಣ್ಯ ಗೌರವ । ಸ್ಥಿತಿಯೆಂಬ ನಿಜ ದಿಂದೆ ಗಂಧಾದಿ ॥ ನುತಗುಣದಿಂದೆ ತೋರ್ಪುದನೆ ಮೇದಿನಿಯೆಂದು । ಮತಿ ವಂತೆ ನೀನಿಂತು ಬಗೆವುದು ॥ ೭ ॥ ಗಗನಕೊಂದಾ ವಾಯುವಿಗೆಬಳಿಕೆರಡು ವ। ಹ್ನಿಗೆಮೂರು ನಾಲ್ಕುವಾರಿಗೆ ಮತ್ತೆ ॥ ಬಗೆಯಲೈದವನಿಗೆ ರವಮುಖ್ಯ ಗುಣವಿಂತು । ನೆಗಳ್ದಿರ್ಪವೀ ಕ್ರಮದೊಡಗೂಡಿ ॥ ೮ ॥ ರಾಗಾದಿ ದೋಷ ದಾಗರವಾಗಿ ಸುಖ ದುಃಖ । ಭೋಗಕ್ಕೆ ನಿಜಬೀಜ ರೂಪಾಗಿ ॥ ಆಗಳೊಂ ದಿರ್ಪವಾ ಶಬ್ದಾದಿ ವಿಷಯಂಗ । ಳಾ ಗಗನಾದಿಗಳೊಡನಿಂತು ॥ ೯ ॥ ಜಡ ಮಾಗಿ ಖಂಡಿತವಾಗಿ ದೃಶ್ಯತೆಯಾಗಿ । ಬಿಡಲರಿದಾಗಿ ಕ್ಷಣಿಕವಾಗಿ ॥ ಮಡ ದಿ ಕೇ ಳಾ ವಿಶ್ವವಿಷಯಂಗಳಾ ಭೂತ । ದೊಡನಗಲದೆ ಮೋಹಿಸುತ ಮಿರ್ಕು ॥ ೧೦ ॥ ತನುವಿನುದಯ ಭೇದದೊಳು ಸಚೇತನವಚೇ । ತನವೆಂಬೆ ರಡು ರೂಪವೆನೆ ತೋರ್ಪ ॥ ಅನಿತು ವಿಷಯವೆಸೆವವು ಚಿತ್ರಗತಿಯಿಂದೆ । ಜನಕೆ ಸಂಸೃತಿ ಬಂಧಕರವಾಗಿ ॥ .... .... .... ॥ ೧೧ ॥

ಭೂತಗಣೋತ್ಪತ್ತಿ ನಿರೂಪಣೆ-ಸೂತ್ರ ೯ಕ್ಕೆ ಪದ ೮೬.

---

ಸೂತ್ರ ॥ ಬಗೆಯೆ ವೈಕಾರಿಕ ತೈಜಸ ಮಿಶ್ರದಿಂ ।
ದೊಗೆದವಖಿಳ ಕರಣಂಗಳು ॥

ಪದ ॥ ಭಾಮಿನಿ ವಾಕ್ಪಾಣಿ ಪಾದ ಪಾಯೂಪಸ್ಥ । ನಾಮದ ಕರ್ಮೇಂದ್ರಿಯಂಗಳು ॥ ಆ ಮಹಾ ತೈಜಸವೆಂಬಹಂಕೃತಿಯಿಂದೆ । ನೇಮ ದಿಂದುದಯವಾದವು ನೋಡು ॥ ೧ ॥ ನುಡಿವುದು ಪಿಡಿವುದು ನಡೆವುದು ಬಿಡು ವುದು । ಪಡೆವುದು ವಿಷಯಸುಖವನೆಂಬ ॥ ಗಡಣದ ವರ್ತನವರಿಯಲಾ ವಚನಾದಿ । ಯೊಡನೊಂದಿ ಪರಿವಿಡಿದಿರ್ಪವು ॥ ೨ ॥ ಪ್ರಾಣಾಪಾನ ವ್ಯಾನೋ ದಾನ ಸಮಾನವೆಂ । ದೂಣೆಯಮಿಲ್ಲದೈದಸುಗಳು ॥ ಮಾಣದೆ ತೈಜಸದಿಂದು ದಿಸಿದವೆಂದು । ಜಾಣೆ ಮೈತ್ರೇಯಿ ನಿಶ್ಚಯಿಪುದು ॥೩॥ ಧರಿಸಿ ದೇಹವನು ಕಿಟ್ಟ ವನು ವಿಸರ್ಜಿಸಿ । ಕರಗಿದಶನ ರಸವನು ಪೀರ್ದು ॥ ಪಿರಿದುದ್ಧಾರಿಸಿಯನ್ನವನು ಸಮಭಾಗಿಸಿ । ಚರಿಪವಾ ಪರಿವಿಡಿದಸುಗಳು ॥ ೪ ॥ ಶ್ರವಣ ಚರ್ಮಾಕ್ಷಿ ಜಿಹ್ವಾ ಘ್ರಾಣವೆಂಬನಾ । ಮವನುಳ್ಳ ಬುದ್ಧೀಂದ್ರಿಯಂಗಳು ॥ ಹವಣಿಸಿ

ವೈಕಾರಿಕಾ ಹಂತೆಯಿಂದೆ ತೋ । ರುವವು ವೈತ್ರೇಯಿ ಸಂಭಾವಿಸು ॥೫॥ ರವ ಮುಖ್ಯವಾದ ವಿಷಯ ಸಮುದಾಯವ । ತವೆ ಕೇಳ್ವ ನೋಂಕುವಾ ಲೋಕಿಪ ॥ ಸವಿವ ವಾಸಿಸುವ ವಿಜ್ಞಾನ ವರ್ತನ ವಿಡಿ । ದವಿರತವೆಸೆವವಾ ಕ್ರಮದಿಂದೆ ॥೬॥ ಸತಿ ಕೇಳು ತೈಜಸ ವೈಕಾರಿಕದ ಮಿಶ್ರ । ಗತಿಯೊಳ್ಮ ನೋಬುದ್ಧ್ಯಹಮು ಚಿತ್ತ ॥ ಅತಿಶಯ ಜ್ಞಾತೃವೆಂದೆನಿಸುವ ಕರಣ ಸಂ । ತತಿ ಪರಿಪಾಟಿಯಿಂದೊಗೆವವು ॥೭॥ ನೆನಹು ನಿಶ್ಚಯ ಗರ್ವ ಧಾರಣವರಿ ವೆಂಬಿ । ವನು ಬಿಡದಾ ಕ್ರಮದೊಡಗೂಡಿ ॥ ಅನಿತು ಕರಣವಿರ್ಪವರಿದೆನೆ ಜಯಿಸಲ್ಕೆ । ತನು ವಿಕೃತಿಗೆ ವೊಟ್ಟವೊದಲಾಗಿ ॥೮॥ ಪೇಳಿದೀ ಭೂತ ಪಂಚಕವ ದಶೇಂದ್ರಿಯ । ವಾಲೋಕಿಸಲ್ಪ್ರಾಣ ಪಂಚಕ ॥ ಮೇಳವೈದಂತಃ ಕರಣವೆಂಬ ಬಹುತತ್ವ । ಜಾಲದೊಬ್ಬುಳಿ ತೋರತನುವಕ್ಕು ॥೯॥ ಇನಿತು ತತ್ವಾನುರೂಪಿತವಾದ ತನು ತನ್ನ । ದೆನಿಪ ತಾನೆಂಬವೆರಡು ಹಂತೆ ॥ ತನಗುಳ್ಳವನು ತಾನೆ ಕಲ್ಪಿತಪುರುಷನ । ಪ್ಪನು ಕೇಳು ತನ್ನಜ್ಞ ಭ್ರಮೆ ಯಿಂದೆ ॥೧೦॥ ಬೀಜವೇ ವೃಕ್ಷವಾ ಬೀಜಮುವಾದ ವೋ । ಲೀ ಜಗಜ್ಜೀವ ರೂಪಿತನಾಗಿ ॥ ರಾಜಿಸುತಿರ್ಪನಂತಾ ಕಲ್ಪಿತನು ಜಗ । ದ್ವೀಜ ಭಾವಾನ್ವಿತ ನದರಿಂದೆ ॥೧೧॥ ಕಾದ ಕಬ್ಬುನದೊಂದು ಘಟ್ಟೆಯೊಳಗಣಿತ । ಮಾದ ಕಿಡಿಗಳುದಯಿಸುವಂತೆ ॥ ಭೇದರೂಪಿನ ಜಗಜ್ಜೀವರಾ ಕಲ್ಪಿತ । ನಾ ದೋರ್ವನಲ್ಲಿ ಮಸಗಿತೋರ್ಕು ॥೧೨॥ ಕೊರಡಿನ ಚೋರನಿಂದಾದ ಭಯಾದಿಕ । ದಿರವದು ನಿಜವೆನಲೆಸೆವಂತೆ ॥ ಪರಮಾರ್ಥವೆನಿಸುತೀ ಜಗ ವಿಂತು ಕಲ್ಪಿತ । ಪುರುಷನಿಂದಾದುದಂಗನೆ ಕೇಳು ॥ .... ॥೧೩॥

ಬಾಹ್ಯಾದಿ ಕರಣೋತ್ಪತ್ತಿ ನಿರೂಪಣೆ-ಸೂತ್ರ ೧೦ಕ್ಕೆ ಪದ ೯೯.

---

ಸೂತ್ರ ॥ ತಿಳಿಯನ್ನ ರಸವೇಳು ಧಾತುವೆನಿಸಿ ಗರ್ಭ ।
ದೊಳು ಜನಿಪುದು ತೋರತನುವಿದು ॥

ಪದ ॥ ಪರಮನ ಸತ್ತು ಚಿತ್ತೆಂದೆರಡವು ತಾವೆ । ತರುಣಿ ಕೇಳ್ ಪ್ರಕೃತಿ ಪುರುಷರೆಂದು ॥ ಪರಿವಿಡಿಯಿಂದೆ ದ್ವೈತಾದ್ವೈತವೆನಿಸುಗೆಂ । ದೊರೆವ ವಾಗಮ ವೇದತತಿಗಳು ॥೧॥ ವರವರೂಲ ಪ್ರಕೃತಿ ಪುರುಷರಿಂದೆ ವಿಕರಿಸಿ । ಚಿರವೆನೆ ಮಹದಹಮಂಬರ ॥ ಮರುದಗ್ನಿ ಜಲವಸುಮತಿಗಳೆಂಬೀ ತತ್ವ ।

ಪರಿಕರಮುದಿಸುಗಾ ಕ್ರಮದಿಂದೆ ॥ ೨ ॥ ಅವನಿಯಿಂದೋಷಧಿ ನಿವಹ ಸಂಜನಿಸಿದ| ವಪವರೊಳನ್ನಂಗ ಳುದಿಸುತಿರ್ಕು ॥ ಯುವತಿ ನೀನರಿವುದು ಬಳಿಕನ್ನ ವದನನು । ಭವಿಪರಾ ತಾಯಿತಂದೆಗಳಲ್ಲಿ ॥ ೩ ॥ ಅವರನುಭವಿಸಿದನ್ನವೆ ಸಪ್ತ ಭಾಗದಿಂ । ದವೆ ಸಪ್ತದಿನಕುದರಾಗ್ನಿಯ ॥ ವ್ಯವಹಾರದಿಂದೆ ಪಚಿಸಿ ಸಪ್ತ ಧಾತು ಸಂ । ಭವಿಸುಗುವವರೊಡ ಲುಗಳೊಳು ॥ ೪ ॥ ಮೊದಲು ರುಧಿರವಹು ದದರಿಂದೆಮಾಂಸವಂ । ತದರಿಂದೆ ಮೇಧಸ್ಸುವದರಿಂದೆ ॥ ಉದಿಪುದು ನರವದರಿಂದಸ್ಥಿ ಮಜ್ಜೆಯಂ । ತದರಿಂದೆ ರೇತಮಿಂತೊಗೆವವು ॥ ೫ ॥ ಸಸಿನೆ ಕೇಳೇಳುದಿನಕೆ ಪುರುಷನೊಳನ್ನ । ರಸವದು ರೇತವಹುದು ಮತ್ತೆ ॥ ಬಿಸಜಾಕ್ಷಿ ರೇತವೆನಿಸಲಾರದಬಲೆಯೊ । ಳಿಸೆವುದು ರಕ್ತರೂಪಿಂದದು ॥ ೬ ॥

ಸಪ್ತಧಾತೂತ್ಪತ್ತಿ ಪ್ರಕಾರ ನಿರೂಪಣೆ-ಸೂತ್ರ ೧೧ಕ್ಕೆ ಪದ ೧೦೫

---

ಸೂತ್ರ ॥ ಜನನಿ ಜನಕರ ಮೇಳನದಿಂದೆ ತನುವಿದು ।
ಜನಿಸುಗುಮಾಜೀವನೊಡಗೂಡಿ ॥

ಪದ ॥ ಭೂತವಿಕೃತಿ ಕರ್ಮಪಾಕದಿಂ ಪುರುಷನೊ। ಳೋತುಮುನ್ನುದಿಸಿ ಜೀವನಪಿಂಡ ॥ ರೇತದೊಡನೆ ಕೂಡಿ ರತಿಯೋಗದೊಳು ಮತ್ತೆ । ಮಾತೆಯುದರದೊಳು ನಿಲುವುದು ॥ ೧ ॥ ಅದು ಬಳಿಕಲ್ಲಿ ದೈವಾನುಕೂಲತೆ ಭೋಗ । ಮೊದವಿದ ಕರ್ಮಾನುಗತಿಯಿಂದ ॥ ಉದರಾಗ್ನಿಯಿಂದೆ ಬೇಯದೆ ಸುರಕ್ಷಿತಮಿಹು । ದಿದು ವೇದವಿದಿತವಂಗನೆ ನಂಬು ॥ ೨ ॥ ರುಧಿರವಧಿಕಮಾಗೆ ಜನಿಪುದು ಪೆಣ್ಣು ಗಂ । ಡುದಿಪುದು ರೇತೋತಿಶಯದಿಂದೆ ॥ ಪುದಿದುಸಮಾನಮಾಗಿರೆ ರೇತೋರಕ್ತವಂ । ತದರಿಂದೆ ಷಂಡನೆನಿಸುವನು ॥ ೩ ॥ ಸತಿ ಕೇಳು ರೇತೋರುಧಿರವೊಂದಿ ಕಲಲದಾ । ಕೃತಿಯಾಗಿ ಮೊದಲದಿನದೊಳಿರ್ಕು ॥ ಪ್ರತಿದಿನವೈದಳಂತದು ಬೊಬ್ಬುಳಿಕೆಯೆನಿ । ಸುತೆ ರಂಜಿಪುದು ವಿಚಿತ್ರತೆಯಿಂದೆ ॥ ೪ ॥ ಬಳಿಕೇಳು ರಾತ್ರಿಗಂತದು ಫೇನದಾಕೃತಿ । ದಳೆವುದು ದಶರಾತ್ರಿಗದು ಮತ್ತೆ ॥ ಪೊಳೆವುದು ಪಿಂಡದಾಕಾರವೆನಿಸಿ ನೀರೆ । ತಿಳಿನೀನಿದನು ವೇದಮತವೆಂದು ॥ ೫ ॥ ಪದಿನೈದು ದಿವಸದೊಳದು ದಂಡಾಕೃತಿಯಹು । ದದರೊಳು ಬಳಿಕೊಂದು ಮಾಸಕ್ಕೆ ॥ ಉದಿಪುದು ಶಿರವತಿಶಯವೆನೆ ಬಾಹುಗ । ಳದರೊಳೆರಡು ತಿಂಗಳೊಳಗಕ್ಕು ॥ ೬ ॥ ಉದರವಹುದು ಮೂರುಮಾಸಕ್ಕೆ

ನಾಲ್ಕು ಮಾ । ಸದೊಳು ಪಾದಾದಿಸರ್ವಾಂಗವು ॥ ಒದವಿ ಬಲಿವುದು ರೋಮಾಳಿಗಳೈದು । ಮಾಸದೊ ಳುದಿಸುವವಂಚಿನಡೆಯಳೆ ॥ ೭ ॥ ಆದರೊಡ ನಾರುತಿಂಗಳೊಳಸ್ಥಿಗಳ ತೋರ್ಕೆ । ಪದಪಿಂದೆ ಮೇಲೇಳು ಮಾಸಕ್ಕೆ ॥ ಒದವಿಚೇತನ ಭಾವದೊಡಗೂಡಿ ಪ್ರಾಣಾದಿ । ಪದಗತಿಗಳು ಪಸರಿಸು ತಿರ್ಕು ॥ ೮ ॥ ಬಳಿಕೆಂಟನೆಯ ಮಾಸದೊಳಗದು ತನಗಲ್ಲಿ । ನೆಲೆಯಾದು ದಾವ ಸೋಜಿಗವೆಂದು ॥ ಗಳಿಲನೆ ಪೊರಮಡಲಾವುದು ಮಾರ್ಗವೆಂ । ದಳಲು ತಿರ್ಪುದು ತನ್ನ ಭ್ರಮೆಯಿಂದೆ ॥ ೯ ॥ ನವಮಾಸವಾಗೆ ಕಾಲತ್ರಯ ಜ್ಞಾನ ಸಂ । ಭವಿಸುಗಾ ಜೀವನಿಗದರಿಂದ ॥ ವಿವರಿಸಿ ನೋಡಿ ಸಕಲವಿಷಯಂಗಳ । ನಿವು ದುಃಖಕರವೆಂದು ತಿಳಿವನು ॥ .... .... ॥ ೧೦ ॥

ಪಿಂಡವಿಸರ್ಜನ ಕ್ರಮ ನಿರೂಪಣೆ-ಸೂತ್ರ ೧೩ಕ್ಕೆ ಪದ ೧೧೫.

---

ಸೂತ್ರ ॥ ಜನನಿಯ ಜಠರದಿಂದುದಿಸಿ ಜೀವಾತ್ಮ ನೀ ।
ತನುವೆ ತಾನೆಂದು ಸಂಸ್ಕರಿಪನು ॥

ಪದ ॥ ಕೇಳು ಮೈತ್ರೇಯಿ ಮೇಲಾ ಜೀವನಲ್ಲಿ ತಾ । ನಾಳೋಚಿಸುತ್ತ ತನ್ನೊಳಗಿಂತು ॥ ಪೇಳಬಾರದ ಹೇಸಿಕೆಯ ದುಃಖದೊಡೆತನ । ಮೇಳ ವೆಂತಾದುದೆಂದಳಲ್ವನು ॥ ೧ ॥ ಮುನ್ನಾದ ದುಃಖವ ನಿನ್ನೊದಗುವ ಬಾಧೆ । ಯನ್ನೆರೆಕಂಡು ತಾನಲ್ಲಿಂದ ॥ ಇನ್ನೆಂದಿಗೆಯು ಪೊರಮಡಲೊಲ್ಲೆನೆಂದು ಜೀ । ವನ್ನಾಡೆ ತನ್ನೊಳು ಭ್ರಮಿಸುಗು ॥ ೨ ॥ ಪೊರಮಟ್ಟಡೆಯು ದುಃಖದುರು ಬದರಿಂದಾನು । ಪೊರಮೊಡಲೊಲ್ಲೆನಿಂತೊಳಗಿರ್ಪೆ ॥ ಬರಿದೆ ಬಾಧಕವಿಂತು ತನಗಾದುದೆಂದವ । ನರಿದಿರೆ ದೈವಾನುಗತಿಯಿಂದೆ ॥ ೩ ॥ ಯುವತಿ ಬೇರೊಂ ದವ ಸತಿಯಾಗುವಂತೆ ವೈ । ಷ್ಣವ ಮಾಯೆ ಮುಸುಗುಗಾ ಕ್ಷಣದೊಳು ॥ ತವೆ ಸೂತಿಯೆಂಬ ಮಾರುತನುರೆ ಪೊಡೆವುದಂ । ತವನಧೋಮುಖವಾಗು ವಂದದಿ ॥ ೪ ॥ ಯೋನಿರಂಧ್ರದೊಳು ನುಸುಳಿ ಪೊರಮಡು ತನ್ನ । ಪಾನ ದಿಂದಾ ತನು ವರ್ಧಿಸಿ ॥ ಮಾನಿನಿ ಕೇಳು ಮತ್ತಾ ಜೀವನಾತನು । ತಾನೆಂದು ಬಗೆದು ಸಂಸ್ಕರಿಪನು ॥ ೫ ॥ ವನಿತೆ ಕೇಳೀ ತನುವಾರು ಕೌಶಿಕಮಯ । ವೆನೆ ಚರ್ಮ ರುಧಿರ ಮಾಂಸಂಗಳು ॥ ಜನನಿಯ ರುಧಿರಾಂಶ ವೆಲು ಮಜ್ಜ ನರ ವಿವು । ಜನಕನದ ರೇತಾಂಶವೆನಿಸವು ॥ ೬ ॥ ಆತನ ರೇತವೆಂಬುದು ಕರ್ಮ

ವೆನಿಪುದು । ಮಾತೆಯ ರುಧಿರವೆಂಬುದು ಮಾಯೆ ॥ ರೇತೋರಕ್ತದ ಮೇಳ ವೆಂಬುದಾಣವಮೆನ । ಲೀತನು ತಾನೆ ಮುಮ್ಮಲಜಾತ ॥ ೭ ॥ ತಿಳಿ ಮೂರ ನೆಯ ಮಾಸದೊಳು ಗರ್ಭವಿರ್ಪೆಡೆ । ಯೊಳು ಪೊಕ್ಕಪಾನ ಮಾರುತನಲ್ಲಿ ॥ ಸುಳಿದು ತತ್ಪಿಂಡವನೊಡೆಯಲ್ಕೆ ಜ ವ ಳಿ ಮ । ಕ್ಕಳುಗಳುದಿಸುತಿರ್ಪ ರಂಗನೆ ॥ .... .... .... .... .... ॥ ೮ ॥

ಪಿಂಡೋತ್ಪತ್ತಿಕ್ರಮ ನಿರೂಪಣೆ-ಸೂತ್ರ ೧೩ಕ್ಕೆ ಪದ ೧೨೩.

---

ಸೂತ್ರ ॥ ತನುವಿದು ತಾನೆಂಬ ಬಗೆಯಿಂದೆ ಜೀವಂಗೆ ।
ಜನಿಸುವವೈದವಸ್ಥೆಗಳಿಂತು ॥

ಪದ ॥ ಜೀವನಿಗೈದವಸ್ಥಾನುರೂಪವೆ ತನ್ನ । ಭಾವಭೇದದೊಳಿಂತು ತೋರ್ಪವು ॥ ಭಾವಕಿ ನಾನವನರಿಯಲೊರೆವೆನು ಸ । ದ್ಭಾವದಿಂದಾಲಿಸಿ ತಿಳಿ ನೀನು ॥ ೧ ॥ ಭೂತವಿಕೃತಿಯಿಂದೆ ಮಾತಾಪಿತರ ರಕ್ತ । ರೇತೋ ಯೋಗದ ಪರಿಣತೆಯಿಂದ ॥ ಜಾತಮಾದೀತನು ತಾನೆನೆ ಜೀವಂಗೆ । ಭೂತಾತ್ಮನೆಂದೆಂಬ ಪೆಸರಕ್ಕು ॥ ೨ ॥ ನೆರೆ ಬುದ್ಧೀಂದ್ರಿಯ ಕರ್ಮೇಂದ್ರಿಯ ವೆಂಬೆರಡು ವರ್ಗ । ವರಿವಮಾಡುವ ವೆಲ್ಲವನು ತಾನೆ ॥ ಅರಿದೆನೆಸಗಿದೆನೆಂಬುದ ರಿಂದೆ ಜೀವಂಗೆ । ಮೆರೆವುದು ಕೇಳಿಂದ್ರಿಯಾತ್ಮತೆ ॥ ೩ ॥ ಮಾನಸಾದಿಗಳೆಸ ಗಿದ ಕರ್ಮತತಿಯನು । ತಾನೆಸಗಿದೆನೆಂಬ ಬಗೆಯಿಂದೆ ॥ ಮಾನಿನಿ ಕೇಳ ಹಂಕರಣಾತ್ಮನೆಂಬಭಿ । ಧಾನವಾ ಜೀವಂಗೆ ಸವನಿರ್ಕು ॥ ೪ ॥ ಜ್ಞಾನಾತ್ಮ ನಾಗಿ ತಾನಿರ್ಪುದನಾ ಕರ । ಣಾನೀಕದಿಂದ ಮರೆದು ತನ್ನ ॥ ತಾನಜ್ಞನೆಂಬು ದರಿಂದೆ ಜೀವಂಗೆ ವಿ । ಜ್ಞಾನಾತ್ಮನೆಂದೆಂಬ ಪೆಸರಕ್ಕು ॥ ೫ ॥ ವಿಜ್ಞಾ ನಾತ್ಮನು ಜೀವನಜ್ಞೋಹಮೆಂಬ ತಂ । ನಜ್ಞಭಾವನೆಯನ್ನು ತಿಳಿದಂದು ॥ ವಿಜ್ಞಾನಾತ್ಮಂ ತಾ ನೆ ಬಳಿಕಂತರಾತ್ಮಕ । ಸಂಜ್ಞೆಯಂ ಪಡೆವನಂತದ ರಿಂದೆ ॥ ೬ ॥ ಭಾವಿಸಲಿಂತಜ್ಞಭಾವನೆಯೊಳು ತೋರ್ಪ । ಜೀವಪಂಚಕವಿದು ಪುಸಿಯೆಂದು ॥ ಭಾವಿಸಿ ತನ್ನ ತಾನರಿಯಲವನು ತಾನೆ । ಭಾವರಹಿತನಾದ ಪರಮಾತ್ಮ ॥ .... .... .... ॥ ೭ ॥

ಜೀವಪಂಚಕ ನಿರೂಪಣೆ-ಸೂತ್ರ ೧೪ಕ್ಕೆ ಪದ ೧೩೦.

---

ಸೂತ್ರ ॥ ಸಕಲಹಂಕ್ರಿಯೆಯಿಂದೆ ಭವಬಂಧವದು ಪ್ರವ ।
ರ್ತಕ ಕರ್ಮವೆನಿಪುದಂಗನೆ ಕೇಳು ॥

ಪದ ॥ ಒಂದೆ ಪ್ರವರ್ತಕ ವೊಂದೆನಿವರ್ತಕ । ವೆಂದು ದ್ವಿಭೇದವಾ ಕರ್ಮವು ॥ ವುಂದಗವುನೆ ಯೆಂಟುತೆರನು ಪ್ರವರ್ತಕ । ವೊಂದೆತೆರನು ನಿವರ್ತಕವುದು ॥ ೧ ॥ ಅವು ತಾವನುಕ್ರಮದೊಳು ಬಂಧ ಮೋಕ್ಷ ಬೀ । ಜವೆನಿಪ್ಪವವು ಭಾವ ಭೇದದಿಂ ॥ ತವೆ ಕೇಳವಿದ್ಯಾ ವಿದ್ಯೆಗಳೆಂದೆನಿಸುಗೀಗ । ಳವರಂದ ವರುಪುವೆನರಿನೀರೆ ॥ ೨ ॥ ಕರ್ಮಿಯೆ ತಾನೆಂದು ಕರ್ಮವಂ ಮಾಡಿಯಾ । ಕರ್ಮದ ಫಲವನುಂಬವನಾಗಿ ॥ ಮರ್ಮವರಿಯದ ಹಂಭಾವದಿಂ ಜೀವನಾ । ಕರ್ಮಾಷ್ಟಕದೊಳು ಚೇಷ್ಟಿಕನಕ್ಕು ॥ ೩ ॥ ತನ್ನಿಂದ ಹಂಭ್ರಮೆ ತನ್ನಿಂದಜ್ಞಭ್ರಮೆ । ತನ್ನಿಂದೆ ಕರಣೇಂದ್ರಿಯ ಭ್ರಮೆ ॥ ತನ್ನಿಂ ದೇಹಭ್ರಮೆ ಮೂರವಸ್ಥೆಯ ಭ್ರಮೆ । ತನ್ನಿಂದವೆಂಟು ತೋರುವವಲ್ಲಿ ॥ ೪ ॥ ಅರಿವು ಮರವೆಯೊಳು ಸ್ಮರಣೇಕ್ಷಣಂಗಳೊಳ್ । ನೆರೆ ಕೃಶತ್ವಾದಿ ವಿಕೃತಿ ಯೊಳು ॥ ಮೆರೆವ ಜೀವತ್ರಯದೊಳಗಹಮೆಂಬುದ । ನರಿ ಕರ್ಮಾಷ್ಟಕವಿವಾ ಕ್ರಮದಿಂದೆ ॥ ೫ ॥ ನಿರ್ಮಳೆ ಕೇಳಿಂತು ಕರ್ಮವಂ ಮಾಡಲಾ । ಕರ್ಮದ ಫಲವೆ ಮೂದೆರನಾಗಿ ॥ ನಿರ್ಮಿಸಿ ಸುಖ ದುಃಖ ಮಿಶ್ರರೂಪಿಂದಲಾ । ಕರ್ಮಿಗೆ ಭೋಗ್ಯವೇದೆನಿಪುದು ॥ ೬ ॥ ತನಗಿಷ್ಟವದು ಸುಖವೆನಿಪುದು ದುಃಖವೆಂ । ದೆನಿಪುದನಿಷ್ಟವೆ ಬಳಿಕಲ್ಲಿ ॥ ವನಿತೆ ಕೇಳಿಷ್ಟಾನಿಷ್ಟದ ಕೂಟ ವದು ಮಿಶ್ರ । ವೆನಿಪುದಿಂತಿವೆ ಫಲತ್ರಯವಕ್ಕು ॥ ೭ ॥ ಭವಬಂಧ ಬೀಜ ವೆಂದಿನಿಸುವ ಕರ್ಮಾಷ್ಟ । ಕವೆ ನಿವರ್ತಕದಿಂದ ನೆರೆಕೆಟ್ಟು ॥ ಹವಣಿಸದಾ ನಂದ ಪದಮುಕ್ತಿ ಜೀವಂಗೆ । ಸವನಿಪುದದನೆನೀನರಿ ಪೇಳ್ವೆ ॥ ॥ ೮ ॥

ಪ್ರವರ್ತಕ ಕರ್ಮ ನಿರೂಪಣೆ—ಸೂತ್ರ ೧೩ಕ್ಕೆ ಪದ ೧೩೮.

---

ಸೂತ್ರ ॥ ಸಕಲಹಂಕ್ರಿಯೆಯಂ ನಿವಾರಿಸಿ ನಿಲೆ ನಿವ ।
ರ್ತಕಕರ್ಮವದರಿಂದೆ ನಿಜಮುಕ್ತಿ ॥

ಪದ ॥ ಅರಿವಿನಿಂದಹಮ ನೀನರಿದೆಯಾ ಹಮ್ಮಿನಿಂ । ದರಿದೆಯಜ್ಞ ತೆಯ ನಂತದರಿಂದೆ ॥ ಅರಿದೆ ತತ್ಕರಣವೆಲ್ಲವನದರಿಂದೆ ನೀ । ನರಿದೆ ಬಾಹ್ಯೇಂ ದ್ರಿಯ ನಿಕರವ ॥ ೧ ॥ ವನಿತೆ ಮೇಣೆಂದ್ರಿಯದಿಂದೈದು ವಿಷಯರೂ । ಪೆನಿ

ಸುತೀ ಪರಿಯೊಳೆಸೆವುತಿರ್ಪ ॥ ತನುವನರಿಂದೆ ಬಳಿಕದು ತಾನೆ ನೀನೆಂದು। ಜನಿಸಿತು ದೃಢಮತಿ ನಿನಗಲ್ಲಿ ॥ ೨ ॥ ತನುವಿದಾನೆಂದಲ್ಲಿ ವಿಶ್ವನೆನಿಸಿ ಸೂಕ್ಷ್ಮ। ತನುವಿನೊಳೊಂದಿ ತೈಜಸನಾಗಿ ॥ ಘನ ಕಾರಣಾಖ್ಯ ತನುವಿನಲ್ಲಿ ಪ್ರಾಜ್ಞನೆಂ। ದೆನಿಸಿ ನೀನಿಂತು ವರ್ತಿಸುವಲ್ಲಿ ॥ ೩ ॥ ತನುವಿನಂತರ್ವರ್ತಿಯೆನಿಪಹಂಭಾವದೆ। ನಿನಗೆ ತೋರಿದವೈದು ವಿಷಯವು ॥ ವನಿತೆ ಕೇಳಾ ತೋರ್ಕೆಗೊಂದು ಕಾರಣವಿಲ್ಲ। ವೆನಿಸಿರ್ಪುದದು ನಿನ್ನ ಭ್ರಮೆಯಿಂದೆ ॥ ೪ ॥ ಶ್ರವಣಾದಿಯಿಂದೆ ಶಬ್ದಾದಿ ಗೋಚರಿಸಿದ। ವವರೊಳೊಂದೊಂದು ವಿಷಯದಲ್ಲಿ ॥ ವಿವರಿಸದುಳಿದಂಬರಾದಿ ತೋರ್ಕೆಗಳ ನೆ। ಲ್ಲವನಾತ್ಮನೊಡನೆ ಭಾವಿಪೆ ನೀನು ॥ ೫ ॥ ಆದರಿಂದೆ ನೀನಿಂತು ಬಗೆದುದು ಪುಸಿ ನಿನ್ನೊ। ಳಿದಮಹಮೆನಿಸುವೀ ವಿಶ್ವವು ॥ ಪುದಿದು ತೋರುತ್ತಿಹುದಾಗಿ ನಿನ್ನೊಳು ನಿನ್ನ। ನೊದವಿ ನೀನಾರಯ್ಯಬೇಹುದು ॥ ೬ ॥ ಅರಿವಿಂದ್ರಿಯಂಗಳಿಂದರಿಯೆ ನಿನ್ನನವನಾವ। ತೆರದಿಂದೆ ಪೊರಗಿಲ್ಲದಾತ್ಮನ ॥ ಮರವೆಕಾರಣವಾಗಿ ಮೋಹಿಸಿ ನೀನಿಂತು। ಬರಿದೆ ಕಲ್ಪಿಸಿದೆ ವಿಷಯದೊಳು ॥ ೭ ॥ ಅರಿವು ನಿನ್ನೊಡಲಾಗಿ ಮರೆದೆನೆಂಬುದು ಮಿಥ್ಯೆ। ಮರೆವೆಯಿಲ್ಲಾಗಿ ತೋರ್ಪಖಿಳವು ॥ ನೆರೆ ಪುಸಿಯಪ್ಪುದಿದನು ನಿನ್ನೊಳರಿ ಬಚ್ಚ। ಬರಿಯುರಿವೆಂದೆ ಸಾರಸಗಂಧಿ ॥ ೮ ॥ ಉಳ್ಳ ಮೃತ್ತಿಕೆಯೊಳಗಿಲ್ಲದ ಕುಂಭಾದಿ। ಯುಳ್ಳಂತೆ ಕಾಣಿಸಿ ಬಗೆಯಿಂದೆ ॥ ನಲ್ಲಳೆ ಪರಿತೋರ್ಪವಂತೆ ಭಾವಿಸಲು ತಂ। ನಲ್ಲಿ ಮೂಜಗವಿದು ಪುಸಿದೋರ್ಕೆ ॥ ೯ ॥ ಇದು ನಿವರ್ತಕಕರ್ಮ ವಿದರಿಂದೆ ಭವಬಂಧ। ದುದಯಮೊಂದಿನಿಸಿಲ್ಲವೆನೆ ಕೆಟ್ಟು ॥ ಸುದತಿ ಕೇಳಾತ್ಮನದ್ವಯ ನಿತ್ಯ ಸದಮಳ। ಚಿದಖಂಡಾನಂದ ಸಂಪದನಕ್ಕು ॥ ೧೦ ॥ ಅಕುಟಿಲೆ ಕೇಳ್ಪ್ರವರ್ತಕ ನಿಷೇಧಂನಿವ। ರ್ತಕವೆನಿಹಿತ ವಿಂತುಭಯಮಾಗಿ ॥ ಮಕರಿಸುವೀ ಕರ್ಮವಳಿದು ನಿಂದಾಕ್ಷಣ। ವಕಲಂಕ ಪರಮಾತ್ಮಕನು ತಾನೆ ॥ .... ॥ ೧೧ ॥

ನಿವರ್ತಕ ಕರ್ಮ ನಿರೂಪಣೆ-ಸೂತ್ರ ೧೬ಕ್ಕೆ ಪದ ೧೪೯.

---

ಸೂತ್ರ ॥ ಸತ್ವಾದಿ ಗುಣಬುದ್ಧಿಯಿಂದವಸ್ಥಾಶ್ರಿತ।
ಯತ್ನವಾ ಜೀವಂಗೆ ದೊರೆಕೊಳ್ಗುಂ ॥

ಪದ ॥ ಬಳಿಕಾ ಪ್ರವರ್ತಕವೆನಿಪ ಕರ್ಮಾಷ್ಟಕ। ದೊಳಗಣ ಮೂರವಸ್ಥೆಗಳನು ॥ ತಿಳಿಪುವೆನದರಿಂದೆ ಭವಬಾಧೆ ಜೀವಾತ್ಮ। ನೊಳು ತೋರ್ಪ

ಬಗೆಯ ನೀನರಿಯಲ್ಕೆ ॥ ೧ ॥ ಮೈತ್ರೇಯಿ ಲೋಕತ್ರಯಾತ್ಮಕ ಜೀವಂಗೆ । ಪಾತ್ರವೆನಿಸಿ ವಿಚಿತ್ರತೆಯಾಗಿ ॥ ಸೂತ್ರಿಸಿ ಸತ್ವಾದಿಗುಣರೂಪಿನಿಂದವ । ಸ್ಥಾತ್ರಯವಿವು ನಿಯಮದೆ ತೋರ್ಕುಂ ॥ ೨ ॥ ಜಾಗರಣಾದಿಗಳಾಗು ಪೋಗಿ ನೊಳು ತಾ । ನಾಗುವ ಪೋಗುವ ತೆರದಿಂದೆ ॥ ಆಗಳಿಂತುರೆ ಕಾಣ್ಬನವಿವೇಕ ದಿಂದೆ ತಾ । ನಾಗದ ಪೋಗದಚಲಿತಾತ್ಮ ॥ ೩ ॥ ಜಾಗರಣಾದಿಗಳಾ ಸತ್ವ ಮುಖ್ಯಮಾ । ದಾಗುಣಮಯ ಬುದ್ಧಿಭ್ರಮೆಯಿಂದೆ ॥ ನೀಗಿರಲರಿದೆಂದೆನಿಸಿ ತೋರ್ಪವವನನು । ರಾಗದಿಂದರಿಯೆ ಪೇಳ್ವೆನು ಕೇಳು ॥ ೪ ॥ ಜ್ಞಾನದಿಂ ಜಾಗ್ರ ವಜ್ಞಾನದಿಂದವೆ ಸುಪ್ತಿ । ಜ್ಞಾನಾಜ್ಞಾನಂಗಳೆರಡು ಮಿಶ್ರ ॥ ತಾನಾ ಗಲದರಿಂದೆ ಕನಸಪ್ಪುದೆಲೆ ವನ । ಜಾನನೆ ತಿಳಿವುದೀ ಕ್ರಮದಿಂದ ॥ ೫ ॥ ಕರಣ ಬಾಹ್ಯೇಂದ್ರಿಯಾದಿಗಳುರೆ ಜೀವನೊಳ್ । ಬೆರೆದೆಚ್ಚರೊಡಗೂಡಿ ರವ ಮುಖ್ಯ ॥ ಪರಿಕರವೆನಿಪ ವಿಷಯದೊಳು ವರ್ತಿಸು । ತಿರೆ ಜಾಗರಣವಪ್ಪ ದದು ನೋಡು ॥ ೬ ॥ ಕರಣಾದಿಗಳು ಮನವೆರೆದುಪರತಿಯೊಳೊಂ । ದಿರಲಾ ಮಾನಸವೊಂದೆ ಭ್ರಮೆಯಿಂದೆ ॥ ಅರಿವಿನವಾಸನಾ ವಿಷಯಮಂ ಕಾಣ್ಬಜಾ । ಗರಣದಭಾವನೆ ಕನಸಕ್ಕು ॥ ೭ ॥ ಕರಣಾದಿ ತತ್ವನಿಕರವೆಲ್ಲವಾ ಮನ । ವೆರಸಿ ಮೂಲಪ್ರಕೃತಿಯೊಳೊಂದಿ ॥ ಪಿರಿದಡಗಿರೆ ಸುಪ್ತಿಯದರೊಳಾತ್ಮನು ತವು । ದಿರವನರಿವ ನೇತ್ರದೋಲಿರ್ಕುಂ ॥ ೮ ॥ ತನಿನಿದ್ರೆಯೊಳಗರಿವವನು ಮಿಲ್ಲಿನ ಲೇನು । ವನುನಾನರಿಯದತಿ ಸುಖದೊಳು ॥ ಇನಿತು ವೇಳೆಯು ಮೊರಗಿರ್ದೆನೆಂದೆಚ್ಚತ್ತು । ನೆನಹದೆಂತಹು ದನುಭವಿಸದೆ ॥ .... ॥ ೯ ॥

ಜೀವಂಗವಸ್ಥಾತ್ರಯ ನಿರೂಪಣೆ–ಸೂತ್ರ ೧೭ಕ್ಕೆ ಪದ ೧೫೮.

---

ಸೂತ್ರ ॥ ಮೈತ್ರೇಯಿ ಕೇಳವಸ್ಥಾತ್ರಯವಾತ್ಮಂಗೆ ।
ಗಾತ್ರ ಮೂರರೊಳೊಂದಿ ತೋರ್ಪವು ॥

ಪದ ॥ ನಿಯಮದವಸ್ಥಾತ್ರಯವನು ಬಿಡದೆ ತನು । ತ್ರಯದಿಂದೆ ಕಾಣ್ಬನಾ ಜೀವನು ॥ ಪ್ರಿಯತಮೆ ನಿನಗೆ ನಾನೊಲವಿಂದಲಾತನು । ತ್ರಯ ದಂದವರುಪುವೆನಾಲಿಸು ॥ ೧ ॥ ಐದು ಭೂತಂಗಳೀರೈದಿಂದ್ರಿಯ ಪ್ರಾಣ । ವೈದು ಕರಣವೈದೆನಿಸುತಿರ್ಪ ॥ ಭೇದವಡೆದ ಪಂಚವಿಂಶತಿ ತತ್ವದಿಂ । ದಾದು ದಬಲೆ ತೋರತನುವಿದು ॥ ೨ ॥ ತನುವಿದು ತಾನಾರು ವಿಕೃತಿಯನುಳ್ಳದು । ವನಜಾಸ್ಯೆಕೇಳಾ ವಿಕೃತಿಗಳು ॥ ಜನಿಯುಸ್ತಿ ಪರಿಣತಿ ವರ್ಧನ ಕ್ಷಯ ಮೃತಿ ।

ಯೆನಿಸುತಖಿಳ ವಿಷಯದೊಳಿರ್ಕು ‖ ೩ ‖ ಜನಿಸಿದಂತಬಂಟನಿಸಂತುರಿ ಬೆಳೆದುದೆಂ । ದೆನಿಪಂತೆ ಯೌವನಮಾದಾತೆ ‖ ಪುನರಪಿ ವೃದ್ಧತೆಯಾದಂತೆ ಕೆಟ್ಟುದೆಂ । ದೆನಿಪಂತೆ ವಿಕೃತಿಗಳಿವು ತೋರ್ಕು ‖ ೪ ‖ ಇನಿತು ವಿಕೃತಿಯು ಳ್ಳದೀ ತನುವಿದು ತನ್ನ । ದೆನಿಪ ತಾನೆಂಬಹಂಭ್ರಮೆಯಿಂದೆ ‖ ಜನಿಸುಗುಮಾ ತನುಧರ್ಮವಾ ಜೀವನಿ । ಗನುದಿನವೆಡೆವರಿಯದೆ ನೋಡು ‖ ೫ ‖ ನಿಯತದಿಂದರಿಯನ್ನಮಯ ಕೋಶಮಾಪ್ರಾಣ । ಮಯಮನೋಮಯ ವಿಜ್ಞಾನಾನಂದ ‖ ಮಯವೆಂಬ ಕೋಶವೈದೀ ದೇಹದೊಳ್ಭ್ರಾಂತಿ । ಮಯನಾದ ಜೀವಂಗೆ ತೋರ್ಪವು ‖ ೬ ‖ ಸ್ಥಿತಿಚೇಷ್ಟೆ ಸಂಶಯಗತಿ ವಿಚಿತ್ರಜ್ಞಾನ । ತತಿ ವಿಷಯಾನಂದದಭಿರತಿ ‖ ಪ್ರತಿದಿನಮಿಂತು ಜೀವನಿಗಕ್ಕುಮಾ ಕ್ರಮ । ದತಿಶಯದಿಂದೆಡೆವರಿಯದೆ ‖ ೭ ‖ ಇಂತು ಜೀವಭ್ರಾಂತಿಯಿಂದವೆ ತೋರದೇ । ಹಂತೋರ್ಪುದಿಂದ್ರಿಯವಶವಾಗಿ ‖ ಮುಂತೊದಗುವ ಸೂಕ್ಷ್ಮತನುಭಾವವಾಗಳಾ । ಭ್ರಾಂತಿಯಿಂದವೆ ಕಾಣಿಪುದು ನೋಡು ‖ ೮ ‖ ಇನಿಯಳೆ ತೋರ ತನುವಿನ ಶಕ್ತಿಗಳೆನಿ । ತನಿತರಿಂದವೆ ಸೂಕ್ಷ್ಮತನುವದು ‖ ಜನಿಪುದು ಮನಮೊಂದರಿಂದವಾ ಜೀವಂಗೆ । ಘನವಿಚಿತ್ರಾನುರೂಪಿತಮಾಗಿ ‖ ೯ ‖ ಬೀಜದೊಳಗೆ ವೃಕ್ಷವಡಗಿ ಪ್ಪೈದೋರದಿ । ರ್ಪೋಜೆಯಿಂದಖಿಳ ಕರಣವೆಲ್ಲ ‖ ರಾಜಿಪವಿದ್ಯೆಯೊಳಡಗಿರಲದುತಾನೆ । ರಾಜೀವನೇತ್ರೆ ಕಾರಣದೇಹ ‖ ೧೦ ‖ ಭಾರೂಪ ಜೀವಾತ್ಮನಾರಬ್ಧ ಭೋಗಕ್ಕೆ । ಕಾರಣವಿಾ ತನುತ್ರಯಮಿವು ‖ ಆರಯ್ಯೆ ಸತ್ವ ತಮೋಗುಣ ಮಿಶ್ರದಿಂ । ದೋರಂತೆ ತೋರಿ ಮೋಹಿಸುತಿರ್ಕು ‖ .... .... .... .... ‖ ೧೧ ‖

ಜೀವಂಗೆ ತನುತ್ರಯನಿರೂಪಣೆ-ಸೂತ್ರ ೧ಲಕ್ಕೆ ಪದ ೧೯.

---

ಸೂತ್ರ ‖ ಜೀವನೋರ್ವನೆ ತನುತ್ರಯದೊಳಾ ಭ್ರಮೆಯಿಂದೆ ।
ಭಾವಿಸೆ ಮೂದೆರನೆನಿಪನು ‖

ಪದ ‖ ಜೀವನೋರ್ವನೆ ವಿಶ್ವ ತೈಜಸ ಪ್ರಾಜ್ಞನೆಂ । ದಾವಗಮಿಾ ಪೆಸರ್ವಡೆವನು ‖ ಭಾವೆ ಕೇಳಾ ಮೂರುತನು ಜಾಗ್ರದಾದ್ಯವ । ಸ್ಥಾ ವಿಷಯತ್ರಯದೊಡಗೂಡಿ ‖ ೧ ‖ ತೋರಶರೀರಿ ವಿಕಾರಿ ಮೂಲೋಕ ಸಂ । ಚಾರಿ ವೈಕಾರಿಕಾಹಂಕಾರಿ ‖ ಚಾರು ಸಂಸಾರಿ ಮಾಯಾಧಾರಿ ವಿಷಯಾನು । ಕಾರಿ ವ್ಯಾಪಾರಿಯಾವಿಶ್ವನು ‖೨‖ ಅಖಿಳೇಂದ್ರಿಯೇಶ್ವರ ನಖಿಳಗನಖಿಳಾತ್ಮ । ನಖಿಳ

ಕಾರ್ಯಕ್ಷಮ ನಖಿಳಜ್ಞ ॥ ಅಖಿಳತತ್ತ್ವಾವೃತ ನಖಿಳಶಕ್ತಿಯನುಳ್ಳ । ನಖಿಳೇಶನೆನಿಪನಾ ವಿಶ್ವನು ॥ ೩ ॥ ಮನವೊಂದರಿಂದೆ ಮುನ್ನಿನ ಜಾಗರಣದವಾ । ಸನೆಯ ವಿಷಯವೆಲ್ಲವನು ಸೂಕ್ಷ್ಮ ॥ ತನುವಿಡಿದರಿವ ವಿಶ್ವನ ಪಡಿಬಿಂಬವೆಂ । ದೆನಿಪಂಗೆ ತೈಜಸವೆಸರಕ್ಕು ॥ ೪ ॥ ಜಾಗರಣ ಸ್ವಪ್ನ ಭೋಗದಿಂದಲಸಿ ತಾ । ನಾಗಳಾ ತೋರ್ಕೆಗಳಿಲ್ಲವ ॥ ನೀಗಿ ಕಾರಣದೇಹದೊಡನೊಂದಿ ಸುಖರೂಪ । ನಾಗಿರ್ಪವನು ತಾನೆ ಪ್ರಾಜ್ಞನು ॥ ೫ ॥ ತನುಭೇದದಿಂದಹಂ ಕರಣಭೇದಪೆ ಗುಣ । ದನುಭೇದದಿಂದವಸ್ಥಾ ಭೇದ ॥ ಜನಿಪುದರಿಂದೋರ್ವ ಜೀವಂಗೆ ಮೂವಿಧಿ । ಯೆನಿಪುದಿಂತರಿ ಜೀವತ್ರಯವನು ॥ .... ॥ ೬ ॥

ಜೀವತ್ರಯ ನಿರೂಪಣೆ-ಸೂತ್ರ ೧೯ಕ್ಕೆ ಪದ ೧೭೫.

---

ಸೂತ್ರ ॥ ಜೀವಂಗೆ ಪಂಚಪಾಶಂಗಳಾ ಕ್ಲೇಶಂಗ ।
ಳಾವಗವಿರ್ಪವಾ ಬಗೆಯಿಂದೆ ॥

ಪದ ॥ ಜೀವಂಗೆ ಬರ್ಪ ನಾನಾವಿಧ ದುಃಖಕ್ಕೆ । ತಾವಾದಿಯಾದೈದು ಕ್ಲೇಶವು ॥ ಭಾವದ ಬಗೆಯಿಂದೆ ತೋರ್ಪುವು ಮೈತ್ರೇಯಿ । ದೇವಿ ಕೇಳವನಿನಗೊರೆವೆನು ॥ ೧ ॥ ಒಂದವಿದ್ಯಾಕ್ಲೇಶ ವೊಂದಸ್ಮಿತಕ್ಲೇಶ । ವೊಂದೊಂದುರಾಗವಾ ದ್ವೇಷವು ॥ ಒಂದು ಕೇಳಭಿನಿವೇಶಕ್ಲೇಶವೈದಿವ । ರಂದವನರುಪುವೆ ನೆಲೆನೀರೆ ॥ ೨ ॥ ವನಿತೆಯನಾತ್ಮ ವನಿತ್ಯವಶುಚಿ ದುಃಖ । ವೆನಿಸುವೀ ದೇಹಾದಿಯೊಳು ಮತ್ತೆ ॥ ಜನಿಸಲಾತ್ಮತೆ ನಿತ್ಯ ಶುಚಿ ಸುಖವೆಂಬಭಾ । ವನೆ ತಾನವಿದ್ಯೆಯೆಂದೆನಿಪುದು ॥ ೩ ॥ ತನುವಿನೊಳಗೆ ದರುಶನಶಕ್ತಿಯೇಕತ್ವ । ವೆನಿಸಿ ತಾನಖಿಳಹಂಭಾವದ ॥ ಜನನಕ್ಕೆ ಬೀಜವಾಗಿರಲಂತದಸ್ಮಿತೆ । ಯೆನಿಪುದೆಂದರಿವುದಂಬುಜವಕ್ತ್ರೆ ॥ ೪ ॥ ಸುಖದ ಬೆಂಬಳಿಗೊಂಡು ಸುಖವಲ್ಲದಿರ್ದೊಡಾ । ಸುಖವ ನಿಶ್ಚಯಿಸಿ ವಿಷಯದೊಳು ॥ ಸುಖಮಯವೆಂದು ತೊಡರಿ ಬಿಡದಿರ್ಪ ತ । ತ್ಸುಖಬುದ್ಧಿ ರಾಗವೆಂದೆನಿಪುದು ॥ ೫ ॥ ರಾಗವಿಂತಿದು ಸರ್ವಭೋಗಕ್ಕೆ ಬೀಜವಾ । ಭೋಗವೇ ಕಾಮಾದಿರಿಪುಗಳ ॥ ಆಗಿಂಗೆ ಮೂಲವಾ ರಿಪುಗಳಿಂದವೆದುಃಖ । ವಾಗಿ ಸಂಸೃತಿಗೆ ರಾಗವೆಮುಖ್ಯ ॥ ೬ ॥ ದುಃಖಕ್ಕೆ ಬೇಸತ್ತು ದುಃಖವಮಂ ಕಳೆಯಲಾ । ದುಃಖದಿಂದಾದ ವಿಷಯಸುಖ ॥ ದುಃಖವೆಂದಿರದದು ಕೆಡಲೊಂದು ನೆವದಿಂದೆ । ದುಃಖಿಸಲಾ ದ್ವೇಷವೆನಿಪುದು ॥ ೭ ॥

ಎನಿತರಿವಿರಲೇನು ತನಗೆ ದುರಾಗ್ರಹ । ವನುದಿನವೊಂದರೊಳ್ಪಿಡದಿರ್ಪ ॥ ತನವದು ತಾನೆ ನೋಡಭಿನಿವೇಶಕ್ಲೇಶ । ವೆನಿಪುದೆಂದಕಲಂಕಶಶಿಮುಖಿ ॥೮॥ ಇವು ಪಂಚಕ್ಲೇಶವೆಂದೆನಿಪವಾ ಜೀವಂಗೆ । ಭವದುಃಖಬಂಧನವಿವರಿಂದ ॥ ತವೆ ತೋರ್ಪುದವನುಳಿದಾಕ್ಷಣದೊಳು ಮುಕ್ತಿ । ಸವನಿಪುದೆಂದು ನಂಬೆಲೆ ನೀರೆ ॥ .... .... .... ॥೯॥

ಜೀವಂಗೆ ಕ್ಲೇಶಪಂಚಕ ನಿರೂಪಣೆ–ಸೂತ್ರ ೨ಂಕ್ಕೆ ಪದ ೧೮೪.

---

ಸೂತ್ರ ॥ ತನುವಿದಾನೆಂದೆಂಬ ಬಗೆಯಿಂದೆ ಜೀವಂಗೆ ।
ಜನಿಸವಾ ತಾಪತ್ರಯಂಗಳು ॥

ಪದ ॥ ಆಧ್ಯಾತ್ಮಿಕವು ಮತ್ತಮಾಧಿಭೌತಿಕ ಬಳಿ । ಕಾಧಿದೈವಿಕವೆಂಬ ಪೆಸರಿನ ॥ ಬಾಧೆ ತಾಪತ್ರಯವಹುದೆಂದು ತಿಳಿ ಪಲ್ಲ । ವಾಧರೆ ಮೈತ್ರೇಯಿ ಮುದದಿಂದ ॥೧॥ ತನುವಿನ ರುಜೆ ಮನಸಿನ ವೇದನೆಗಳಾಗೆ । ತನಗಿದಾ ಧ್ಯಾತ್ಮಿಕವೆನಿಸುವ ॥ ಘನತಾಪವದು ತನು ತಾನೆಂಬ ಭ್ರಮೆಯಿಂದೆ । ಜನಿಸುತಿರ್ಪುದು ಜೀವನೊಳು ನೋಡು ॥೨॥ ಸಕಲ ಭೂತಂಗಳಿಂದುದಿಸಿ ತೋರುವ ದುಃಖ । ನಿಕರಮುದಾಧಿ ಭೌತಿಕವಕ್ಕು ॥ ಅಕಲಂಕ ಮತಿ ಕೇಳು ಶೀತ ವಾತಾತಪ । ಪ್ರಕರದಿಂದಾದ ನೋವದುತಾನು ॥೩॥ ನರಕ ನಾಕಂಗಳಿಂದಮರರುತ್ಪಾತದಿಂ । ದೊರಕೊಳ್ವ ದುಃಖವಂತದು ತಾನು ॥ ಉರುತರವೆನಿಪಾಧಿ ದೈವಿಕ ತಾಪವೆಂ । ದರುಣಾಬ್ಜಗಂಧಿ ನೀನರಿವುದು ॥೪॥ ತನುರುಜೆಯಾಗರ ವತಿದುಃಖಸಾಗರ । ವನುತಾಪಕ್ಲೇಶಾದಿಗಳ ಗೊತ್ತು ॥ ತನು ಮೂಲವದರಿಂ ದಖಿಳದುಃಖವೆಲ್ಲಕ್ಕೆ । ತನುಭಾವವಳಿಯೆ ದುಃಖದ ಕೇಡು ॥೫॥ ತನುವಿದುಳ್ಳನ್ನೆವ ರನಿಮಿಷರ್ಗಾದೊಡ । ಮನಿವಿತ್ತವಾ ಕ್ಲೇಶ ಭಯ ತಾಪಂ ॥ ಜನಿಪುದಾಗಿಯೆ ತನುವತಿ ಕಷ್ಟವರಿದಂಗೆ । ತನು ಭಾವವಳಿದು ನಿಂದೊಡೆ ಸುಖ ॥೬॥ ಭ್ರಮಿಸಿ ದೇಹದೊಳಹಂಮಮತೆ ಜನಿಸಲದು । ಸುಮನಸರ್ಗೆಯು ದುಃಖಕರಮಾಗಿ ॥ ಸುಮತಿ ಕೇಳೀ ತನು ತಾನವಿಚಾರಿತ । ರಮಣೀಯವಹುದನುಭವಿಸಿದ್ಧ ॥೭॥ ತನುಧರ್ಮವನು ಮೂಢಜನವೈದೆ ತನ್ನದೆಂ । ದೆನಿತಿರ್ಪುದೈಸೆ ತಾನಲ್ಲದ ॥ ಇನಿತು ಕೀಟಾದಿ ವಿಷಯಧರ್ಮವೆಂದೆಂದು । ತನಗಾದುದುಂಟೆ ಭಾವಿಸಿ ನೋಡು ॥೮॥

ಆದರಿಂದೆ ಪ್ರಕೃತಿಧರ್ಮದೊಳೊಂದು ತನಗಿಲ್ಲ । ವಿದುಸಿದ್ಧವಪ್ಪುದೇಕೆಂದೊಡೆ ॥ ಪುದಿದು ತೋರುವ ದೇಹವಿದು ತಾನು ತನ್ನದ । ಲ್ಲದ ಕತದಿಂದೆ ನೋಡಿನಿಯಳೆ ॥೯॥ ಎನೆ ಕೇಳ್ದವನಿತೆ ತನ್ನಿನಿಯಂಗೆ ಪೊಡವಟ್ಟು । ತನುಧರ್ಮಾದಿಗಳಿಲ್ಲದಂದವ ॥ ತನಗರಿವಂತಲಸದೆ ಪೇಳು ಮುನಿಲಲಾ । ಮನೆಯೆಂದು ಬೆಸಗೊಂಡಳೊಲವಿಂದ ॥೧೦॥ ಜಾಗರಣಾದಿ ತ್ರಿವಿಧದೊಡವೆರೆದೆಂಟು । ಭಾಗೆಯನುಳ್ಳ ಪ್ರವರ್ತಕ ॥ ಯೋಗದಿಂದಿಂತು ವರ್ತಿಪ ಜೀವನಿಗೆ ಪೇಳ್ವೆ । ನೀಗಳಂಗನೆ ನಿವರ್ತಕವನು ॥೧೧॥ ಇದು ನಿಜಗುಣಯೋಗಿ ಮುದದಿಂದೆ ತಿಳಿಯ ಪೇ । ಳಿದ ಯಾಜ್ಞವಲ್ಕ್ಯ ಮೈತ್ರೇಯಿಯ ॥ ಒದವಿದ ಸಂವಾದದೊಳಗೊಂದನೆಯ ಸಂಧಿ । ಸದಮಳ ಪರಮಾನುಭವ ಬಂಧಿ ॥೧೨॥

ತಾಪತ್ರಯಾದಿ ಪ್ರವರ್ತಕ ಕರ್ಮನಿರೂಪಣೆ–ಸೂತ್ರ ೨೧ಕ್ಕೆ ಪದ ೧೯೬.

ಅಂತು ಸಂಧಿ ೧ಕ್ಕೆ ಸೂತ್ರ ೨೨ಕ್ಕಂ ಪದ ೧೯೬ಕ್ಕೆ

ಮಂಗಳಮಸ್ತು

---

ಶ್ರೀ ಗುರು ಶಂಭುಲಿಂಗಾಯನಮಃ

## ೨ನೇ ಸಂಧಿ

ಸೂತ್ರ ॥ ಜಡಪಂಚ ಭೂತಧರ್ಮಗಳಿಲ್ಲವಾತ್ಮಂಗೆ ।
ಮಡದಿ ನೋಡಜಡನಪ್ಪುದರಿಂದ ॥

ಪದ ॥ ಶ್ರೀಮಹಾದೇವಂಗೆ ಸೋಮಂಗೆ ಸುಖಪೂರ್ಣ । ಧಾಮಂಗೆ ಸತ್ಯ ಚಿದ್ರೂಪಂಗೆ ॥ ಕಾಮಿತಜನ ಕಲ್ಪಭೂಜಂಗೆ ಶಂಭುವಿಂ । ಗಾವೋದದಿಂದೆ ವಂದಿಸುವೆನು ॥೧॥ ಶ್ರೀ ಯಾಜ್ಞವಲ್ಕ್ಯ ಮಹಾಯೋಗೀಶನು ತನ್ನ । ಜಾಯೆ ಮೈತ್ರೇಯಿಗೆ ಮುದದಿಂದ ॥ ಕಾಯಾದಿ ಧರ್ಮವಾತ್ಮನಿಗಿಲ್ಲವೆಂಬುದ । ನೊಯ್ಯಾರದಿಂದರುಪಿದನಿಂತು ॥೨॥ ನರವೆಲು ಮಾಂಸತೊವಲು ರೋಮವೆನಿಸುವ । ಧರೆಯ ಕಠಿಣಧರ್ಮವೈದಿವು ॥ ನಿರುತದಿಂದಾತ್ಮನಿಗಿಲ್ಲವೆಂದಬಲೆಸು । ಸ್ಥಿರಮತಿಯೊಳು ವಿಚಾರಿಸು ನೀನು ॥೩॥ ಸಲೆ ಮೂತ್ರಪಿತ್ತ ರೇತೋರಕ್ತ ಕಫವೆಂಬ । ಜಲದ ದ್ರವಾಂಶದ ಗುಣವೈದು ॥ ಲಲಿತಾಂಗಿ ನಿರ್ಮಲಾತ್ಮನಿಗಿಲ್ಲವೆಂದು ನೀ । ನಲಘುಮತಿಯೊಳವಧಂ

ವುದು ॥ ೪ ॥ ವನಿತಾಸಂಗತಿ ಕ್ಷುಧೆ ತೃಷ್ಣೆ ನಿದ್ರಾಲಸ್ಯ । ವೆನಿಸುವವೈದುಷ್ಣ ದಂಶದ ॥ ಅನಲನಗುಣ ಮಿವಾತ್ಮನಿಗಿಲ್ಲವೆಂದು ಮಾ । ನಿನಿರನ್ನೆ ತಿಳಿ ಮನ ದೊಲವಿಂದೆ ॥ ೫ ॥ ಪರಿವ ಪಾರುವ ನಿರೋಧಿಸುವ ಸುಳಿವ ನಿಲ್ವ । ಪರಿವಿಡಿ ದೈದಿಂತು ಚಲನಾಂಶ ॥ ಮರುತನ ಗುಣಮಿವಾತ್ಮನಿಗಿಲ್ಲವೆಂದು ನಿ । ರ್ಧರಿಸು ನೀನಿಂದುಸನ್ನಿಭವಕ್ತ್ರೆ ॥ ೬ ॥ ಕಾಮ ಕೋಪ ಲೋಭ ವ್ಯಾಮೋಹ ಭಯ ವೆಂಬ। ನಾಮದಿ ಪರಿವಿಡಿದೊಪ್ಪುವ ॥ ವ್ಯೋಮದಮೂರ್ತದಂಶಿಕವೈದುಗುಣ ಮಿವು । ಕಾಮಿನಿ ತಿಳಿ ಚಿತ್ತಿಗಿಲ್ಲೆಂದು ॥ .... .... ॥ ೭ ॥

ಆತ್ಮಂಗೆ ಭೂತಧರ್ಮ ನಿರಾಕರಣ ನಿರೂಪಣೆ-ಸೂತ್ರ ೧ಕ್ಕೆ ಪದ ೭.

---

ಸೂತ್ರ ॥ ವಾಯುಗುಣಂಗಳಾತ್ಮನಿಗಿಲ್ಲವೆಂದು ವೈ ।
ತ್ರೇಯಿ ನಿರ್ಧರಿಸುನಿಶ್ಚಲವಾಗಿ ॥

ಪದ ॥ ಅನಲಯೋಗದೊಳನ್ನವನು ಜೀರ್ಣಿಸುವ ದೇಹ । ವನು ಜೀಪ್ಸಿಸುವ ಧರಿಸುವ ಧರ್ಮ ॥ ವನಿತೆ ಕೇಳ್ಪ್ರಾಣವಾಯುವಿನದಾತ್ಮನಿಗಿಲ್ಲ । ವನುದಿನ ವಚಲನಪ್ಪುದರಿಂದ ॥ ೧ ॥ ಕುಡಿವುಂಬ ಕೆಳಯಿಂಕೆನಡೆವ ಮಿಣ್ಮೂ ತ್ರವ । ಬಿಡುವ ನೋಯಿಸುವ ಧರ್ಮಂಗಳು ॥ ಮಡದಿಯಪಾನವಾಯುವಿನ ವಲ್ಲದೆ ಭಾವಿ । ಪೊಡೆಯಾತ್ಮನೊಳಗಿಲ್ಲವಣುಮಾತ್ರ ॥ ೨ ॥ ಅಂಗದೊಳನ್ನ ಪಾನಂಗಳ ರಸವೆಲ್ಲ । ವಂಗತಿಯಿಂದೆ ಪಸರಿಸುವ । ಹಿಂಗದೀ ಧರ್ಮವ್ಯಾನಾ ನಿಲನಿಗೆ ತಿಳಿ । ಯಂಗನೆಯಾತ್ಮನಿಗಿಲ್ಲೆಂದು ॥ ೩ ॥ ಸೀನು ಬಿಕ್ಕಳು ಬೇನ ತಾನುದ್ಗಾರಂಗಳು । ದಾನ ವಾಯುವಿನ ಗುಣಂಗಳು ॥ ಮಾನಿನಿ ನಿರ್ವಿ ಕಾರಾತ್ಮನಿಗಿಲ್ಲೆಂದು । ನೀನೊಲವಿಂದವೆ ನಿಶ್ಚಯಿಸು ॥ ೪ ॥ ಎಲ್ಲೆಲ್ಲಿ ನಾಡಿ ಯುಂಟಲ್ಲಲ್ಲಿ ಸಮವೆನ । ಲುಳ್ಳನ್ನರಸ ಭಾಗೆಯನುಮಾಡಿ ॥ ನಿಲ್ಲದೈದಿಪ ಗುಣವದು ಸಮಾನಕ್ಕಲ್ಲ । ದಿಲ್ಲವಾತ್ಮಂಗೆ ನೋಡಸಿಯಳಿ ॥ .... ॥ ೫ ॥

ಆತ್ಮಂಗೆ ಪ್ರಾಣಾದಿವಾಯು ಧರ್ಮ ನಿರಾಕರಣ ನಿರೂಪಣೆ
ಸೂತ್ರ ೨ಕ್ಕೆ ಪದ ೧೨.

ಸೂತ್ರ ॥ ಕರ್ಮೇಂದ್ರಿಯಂಗಳ ಧರ್ಮವಾತ್ಮನಿಗುಂಟೆ ।
ಕರ್ಮ ವಿದೂರನಪ್ಪುದರಿಂದ ॥

ಪದ ॥ ಜಡಶಬ್ದೋದಯಮಾಗೆ ನುಡಿವುದಖಿಳವನು । ತಡೆಯುದಂತದು ವಾಗಿಂದ್ರಿಯಧರ್ಮ ॥ ನುಡಿಯಾತ್ಮನೊಳಗಿಲ್ಲವೆಂದು ನೀನರಿ ಯಂಚೆ । ನಡೆ

ಯಳಿ ವೇದಸಮ್ಮತದಿಂದ ॥ ೧ ॥ ಜಡವಸ್ತುಗಳನಿಂತು ಪಿಡಿವುದು ಬಿಡುವುದು । ಮಡದಿ ಕೇಳ್ಪಾಣೀಂದ್ರಿಯದ ಧರ್ಮ ॥ ಬಿಡದೆವಿಚಾರಿಸಿ ನೋಡಲಾ ಜಡಧರ್ಮ । ದೊಡಗೂಟವಿಲ್ಲವಾತ್ಮನೊಳೊಮ್ಮೆ ॥ ೨ ॥ ಜಳಧಿ ಮುಂತಾದ ನಿಖಿಳಭೂತದೆಡೆಯೊಳು । ಸುಳಿದು ನಿಲ್ಪುದು ಪಾದೇಂದ್ರಿಯಧರ್ಮ ॥ ತಳಿರಡಿಯಳಿ ನೋಡಲದರ ಸೋಂಕಿಲ್ಲಾತ್ಮ । ನೊಳು ಪೂರ್ಣನಚಲನಪ್ಪುದರಿಂದ ॥ ೩ ॥ ಒಡಲ ಮಲವನೊಮ್ಮೆ ಪಿಡಿವುದು ಬಿಡುವುದು । ಜಡಪಾಯುಧರ್ಮವಲ್ಲದೆ ಮತ್ತೆ ॥ ಒಡಲಿಲ್ಲ ಮಲವಿಲ್ಲದಾತ್ಮನೊಳದನೆಂತು । ನುಡಿಯಲಪ್ಪುದು ತೋರಮುಡಿಯಳೆ ॥ ೪ ॥ ಅಂಗನಾ ಪುಲ್ಲಿಂಗ ಸಂಗತಿಯೊಳು ಕರಣಂಗಳಿಗಾನಂದವೆಸಗುವ ॥ ಹಿಂಗದೀ ಗುಣವೆ ಗುಹ್ಯೇಂದ್ರಿಯಧರ್ಮವಾತ್ಮಂಗಿಲ್ಲವೆಂದು ಭಾವಿಸು ಭಾವೆ ॥ .... .... ॥ ೫ ॥

ಆತ್ಮಂಗೆ ಕರ್ಮೇಂದ್ರಿಯಧರ್ಮ ನಿರಾಕರಣ ನಿರೂಪಣೆ–ಸೂತ್ರ ೩ಕ್ಕೆ ಪದ ೧೭.

---

ಸೂತ್ರ ॥ ಬುದ್ಧೀಂದ್ರಿಯಂಗಳಗುಣವಿಲ್ಲವಾತ್ಮಂಗೆ ।
ಶುದ್ಧಚಿನ್ಮಾತ್ರನಪ್ಪುದರಿಂದ ॥

ಪದ ॥ ವೇದ ಪುರಾಣಾಗಮಾವಳಿಯನು ಗೀತ । ವಾದ ನಾದಗಳನಾಕರ್ಣಿಸ ॥ ಚೋದನೆ ಕರ್ಣೇಂದ್ರಿಯದ ಧರ್ಮವಾತ್ಮಂಗೆ । ಭೇದಿಸಲಣುವಿಲ್ಲವದುತಾನು ॥ ೧ ॥ ಮೃದು ಶೀತ ಕಠಿಣಾದಿಕದ ಸೋಂಕುಗಳನರಿ । ವುದುತಾನೆ ಚರ್ಮೇಂದ್ರಿಯದಧರ್ಮ ॥ ಇದು ದೇಹರಹಿತನಾದಾತ್ಮನಿಗಿಲ್ಲವೆಂಬುದು ವೇದಸಿದ್ಧವಪ್ಪುದು ನಂಬು ॥ ೨ ॥ ಪ್ರಿಯವಾದ ನೃತ್ಯ ವಿಚಿತ್ರ ವಿಕೃತವೇಷ । ಚಯದರುಶನವೆಂಬುದೆಲ್ಲವು ॥ ನಯನೇಂದ್ರಿಯದ ಧರ್ಮವಾತ್ಮನಿಗಿಲ್ಲೆಂದು । ಪ್ರಿಯತಮೆ ಮತಿಮುಟ್ಟಿತಿಳಿ ನೀನು ॥ ೩ ॥ ನಲವಿಂದೆ ಮಧುರಾದಿ ಪಲವು ರಸಂಗಳ । ನಲಸದಾಸ್ವಾದಿಪ ತನವಿದು ॥ ಲಲನೆ ಜಿಹ್ವೇಂದ್ರಿಯಧರ್ಮವದಾತ್ಮಂಗೆ । ಸಲೆ ದೊರಕೊಳಲರಿಯದು ಸತ್ಯ ॥ ೪ ॥ ಪಲವು ಸುಗಂಧದ ಪಲವು ದುರ್ಗಂಧದ । ಪಲವುಭೇದಂಗಳನರಿವುದು ॥ ಸಲೆ ನಾಸಿಕೇಂದ್ರಿಯಧರ್ಮವಾತ್ಮನಿಗಿಲ್ಲ । ವೆಲೆಕೋಮಲಾಂಗಿಭಾವಿಪುದಿಂತು ॥೫॥

ಆತ್ಮಂಗೆ ಜ್ಞಾನೇಂದ್ರಿಯಧರ್ಮ ನಿರಾಕರಣ ನಿರೂಪಣೆ
ಸೂತ್ರ ೪ಕ್ಕೆ ಪದ ೨೨.

ಸೂತ್ರ ॥ ಕರಣಧರ್ಮಂಗಳ ಬೆರಿಕೆಯಾತ್ಮಂಗಿಲ್ಲ।
ಕರಣರಹಿತನಾಗಿ ಹರಿಣಾಕ್ಷಿ ॥

ಪದ ॥ ನೆನಹು ಸಂಕಲ್ಪ ವಿಕಲ್ಪ ವಿಮತಿ ಮುಖ್ಯ । ವೆನಿಪೆಲ್ಲವಾ ಮನೋಗುಣವೈಸೆ ॥ ವನಿತೆ ಕೇಳಿಲ್ಲಾತ್ಮನಿಗೆ ಮನೋದೂರನೆಂ । ದೆನುತಾಗ ಮದ ವಾಕ್ಯವಿಹುದಾಗಿ ॥ ೧ ॥ ಎನಿತು ಸಂಶಯವಾಗಲನಿತನು ನಿಶ್ಚಯಿಸು । ವನುವಿದು ಬುದ್ಧಿಯ ಗುಣವೈಸೆ ॥ ಘನಸಂವಿದಾತ್ಮನದಲ್ಲವೆಂಬುದು ಸತ್ಯ । ವನಘೆ ಮೈತ್ರೇಯಿ ನಂಬಿದ ನಿಂತು ॥ ೨ ॥ ತನುಮುಖ್ಯದೊಳು ಘಟಾದಿಕ ದೊಳಗಾನೆನ್ನ । ದೆನುತಿರ್ಪುದಹಮಿನ ಗುಣವಕ್ಕು ॥ ಜನನ ವಿದೂರನಾದಾ ತ್ಮನಿಗಿಲ್ಲೆಂದು । ವಿನಯವಾರಿಧಿ ತಿಳಿವುದು ನೀನು ॥ ೩ ॥ ಕರಣನಿಕರವರಿ ದನಿತನೆಲ್ಲವನವ । ಧರಿಪುದು ಚಿತ್ತಮೊಂದರ ಗುಣ ॥ ಪರಮಾತ್ಮನೊಡನದು ಬೆರಸದೆಂದೆಲೆ ಹೆಂಗ । ಳರಸಿ ಮೈತ್ರೇಯಿ ನಿರ್ಧರಿಪುದು ॥ ೪ ॥ ಜೀವನಾ ನಜ್ಞ ನಾನಾ ದೇವನಾನೆಂಬ । ಭಾವನೆ ಜ್ಞಾತೃವಿನ ಗುಣವದು ॥ ಕೋವಿದೆ ಕೇಳು ನಿಜಾತ್ಮನಿಗಿಲ್ಲೆಂಬು । ದಾವೇದವಿಹಿತವೆನಿಸುವರ್ಥ ॥ .... ॥ ೫ ॥

ಆತ್ಮಂಗೆ ಅಂತಃಕರಣಧರ್ಮ ನಿರಾಕರಣ ನಿರೂಪಣೆ-ಸೂತ್ರ ೫ಕ್ಕೆ ಪದ ೨೭.

---

ಸೂತ್ರ ॥ ತನುವಿಷಯಾದಿಗಳನು ಚೇಷ್ಟಿಸುವಗುಣ ।
ವನಿಲನದಲ್ಲದಾತ್ಮನೊಳಿಲ್ಲ ॥

ಪದ ॥ ತನುವಿನ ರುಜೆ ಚಲನಾದಿಗಳಿವು ನೋಡ । ಲನಿಲನ ವಿಕೃತಿ ಗಳಲ್ಲದೆ ॥ ಘನ ಚಿತ್ಪರಾತ್ಮನಿಂದಾದ ಕರ್ಮಾಕರ್ಮ । ಜನಿತವಲ್ಲೆಂದು ಕಾಣಲುಬೇಕು ॥ ೧ ॥ ನಾಗ ಕೂರ್ಮನು ಕೃಕರನು ದೇವದತ್ತನಂ । ತಾಗ ಳುಮಾ ಧನಂಜಯನೆಂಬ ॥ ಭಾಗೆ ವಡೆದು ವಾಯು ವಾಗಿಂದ್ರಿಯಾದಿ ಚೇ । ಷ್ಟಾಗುಣಂಗಳವಾತ್ಮಗಿಲ್ಲಾಗಿ ॥ ೨ ॥ ಜಾಣೆ ಕೇಳ್ಪ್ರಾಣಾದಿ ವಾಯು ಶಬ್ದಾದಿಗ । ಳಾಣತಿ ವಿಡಿದು ಕರಣಾದಿಯ ॥ ಮಾಣದೆ ಚೇಷ್ಟಿಸುತಿರ್ಪವಾ ವಿಕೃತಿಯಂ । ಬೂಣೆಯ ವಣುವಿಲ್ಲವರಿವಿಂಗೆ ॥ ೩ ॥ ವೈರಂಭ ಮುಖ್ಯ ಪ್ರಭಂಜನಂತರ್ಯಾಮಿ । ಯಾರೈ ಮಹಾಪ್ರಾಣವೆನಿಪ್ಪದು ॥ ಮಾರುತಂಗಳೆ ಮನಸಾದಿ ವಿಕಾ । ರಾನು ಕಾರಿಗಳಾತ್ಮನಲ್ಲಂಗನೆ ॥ .... .... ॥ ೪ ।

ಆತ್ಮಂಗೆ ಬಾಹ್ಯಾದಿಕರಣ ಚೇಷ್ಟಾ ಧರ್ಮತ್ವ ನಿರಾಕರಣ
ನಿರೂಪಣೆ-ಸೂತ್ರ ೬ಕ್ಕೆ ಪದ ೩೧.

ಸೂತ್ರ ॥ ಕರಣಂಗಳಲ್ಲಿ ತೋರಿದ ದುಃಖನಿಕರವಾ ।
ಕರಣರಹಿತ ಸುಖಾತ್ಮನೊಳುಂಟೆ ॥

ಪದ ॥ ಮನದೊಳ್ಬುದ್ಧಿಯೊಳು ಸಂಶಯನಿಶ್ಚಯದೆ ಮಿಗೆ । ಜನಿಸುಗಾ ದುಃಖವಹಮಿನೊಳು ॥ ಘನಗರ್ವದಿಂದುದಿಪುದು ಸಂವಿದಾತ್ಮನೊ । ಳನಿತಿಲ್ಲ ವದು ಮತ್ತಗಜಯಾನೆ ॥ ೧ ॥ ಚಿತ್ತದೊಳ್ಭ್ರಾಂತಿಯಿಂದಜ್ಞತೆಯಿಂದೆ ಜ್ಞಾ । ತೃತ್ವದೊಳುದಿಸುಗಾ ದುಃಖವು ॥ ಮತ್ತೆ ತದ್ಭ್ರಮೆಯಿಂದೆ ವಿಷಯಂ ಗಳೊಳು ಜನಿ । ಸುತ್ತಿರ್ಪುದದು ಸುಖಾತ್ಮನೊಳುಂಟೆ ॥ ೨ ॥ ನೆನೆ ಮನೋ ಬುದ್ಧ್ಯಾದಿ ಜನಿತ ದುಃಖಂಗಳಾ । ತ್ಮನವಲ್ತು ಕರಣರಹಿತನಾಗಿ ॥ ವನಿತೆ ಬಳಿಕ ವೈರಂಭಾದಿ ವಾಯುವಿನ ವ । ರ್ತನದಿಂದಲಹವಿದು ನಿಜವಕ್ಕು ॥ ೩ ॥ ಎಲ್ಲತೋರ್ಕೆಗಳೊಳಗಲ್ಲಲ್ಲಿ ಸುಖ ದುಃಖ । ವೆಲ್ಲವನುಂಬುದು ಮನವೈಸೆ ॥ ನಲ್ಲಳೆ ತನ್ನನುಭವವಲ್ತು ತನಿನಿದ್ರೆ । ಯಲ್ಲಿ ತಾನಿರ್ದುಮದಿಲ್ಲಾಗಿ ॥ ೪ ॥ ಅನುಭೂತವಿಷಯವನುರೆ ಮರೆವುದು ಮತ್ತೆ । ನೆನೆವುದು ಮನವು ಸಂಭಾ ವಿಸೆ ॥ ಅನುಭವಿಪುದು ನೆನೆಯುವದಿಲ್ಲವಾತ್ಮಂಗೆ । ತನುರಹಿತನು ನಿರ್ವಿಷಯ ಯಾಗಿ ॥ ೫ ॥ ಸಕಲಕರ್ಮಂಗಳ ನಖಿಳಕರ್ಮೇಂದ್ರಿಯ । ನಿಕರಂಗಳೆಸಗುವ ವಲ್ಲದೆ ॥ ಅಕಲಂಕನೆನಿಸು ವಚಲಿತಾತ್ಮನಾ ಕರ್ಮ । ಪ್ರಕರಂಗಳೊಡವೆರಸು ವನಲ್ಲ ॥ ೬ ॥ ಸಕಲ ಭೇದಾನುಭಾವನೆಯೆ ಬುದ್ಧೀಂದ್ರಿಯ । ನಿಕರದವೀ ದೃಶ್ಯಚಯದೊಳು ॥ ವಿಕರಿಸ ದರಿವಿನೊಳಿಲ್ಲ ವದ್ವಯವಾಗಿ । ಮಕರಧ್ವಜಾ ಸ್ತ್ರಾನುಗುಣನೇತ್ರೆ ॥ ೭ ॥ ಯುವತಿ ಕೇಳಖಿಳಕರಣ ವೃತ್ತಿಯಾತ್ಮ ಸಂ । ಭವಯತ್ನವಲ್ತು ಸನ್ನಿಧಿಯಿಂದ ॥ ತವೆ ತನ್ನ ತಾನಹುದೆಂದು ನೀನರಿಕಣ್ಗೆ । ಕೆವೆಯಾಟ ದಸುಗತಿಗಳ ಪಾಂಗು ॥ .... .... ॥ ೮ ॥

ಆತ್ಮಂಗೆ ಸಕಲ ದುಃಖಾನುಭವ ನಿರಾಕರಣ ನಿರೂಪಣೆ

ಸೂತ್ರ ೭ಕ್ಕೆ ಪದ ೩೯.

—o—

ಸೂತ್ರ ॥ ಸೋರ್ಮುಡಿಯಬಲೆ ಷಡೂರ್ಮಿ ಗುಣಾದಿಗ ।
ಳೋರ್ಮೆಯುಮಿಲ್ಲ ವಚ್ಚರಿವಿಂಗೆ ॥

ಪದ ॥ ಜರೆ ಮೃತಿಯೊಡಲಿಂಗೆ ಹರಣಕ್ಕೆ ಕ್ಷುಧೆ ತೃಷ್ಣೆ । ಪರಿಶೋಕ ಮೋಹವಾಬುದ್ಧಿಗೆ ॥ ಅರಿವರ್ಗವಾ ಮನಸಿಗೆ ನಿಸ್ತರಂಗ ಚಿ । ಚ್ಛರಧಿಯೊಳವು

ತೋರಲರಿವವೆ ॥ ೧ ॥ ಜ್ಞಾನ ಸಮಾಧಿ ತದ್ಧ್ಯಾನ ಜಪಾದಿ ವಿ । ಧಾನ ಪೂಜಾದಿ ಸತ್ಕ್ರಿಯೆ ನೀತಿ ॥ ಮೌನ ದಾಯಾದಿಗಳಾ ಸತ್ವಗುಣಧರ್ಮ । ವಾ ನಿಜಜ್ಞಪ್ತಿಯೊಳನಿತಿಲ್ಲ ॥ ೨ ॥ ರಾಗ ತದ್ವಿಷಯೋಪಭೋಗ ಶೃಂಗಾರ ಕಾ । ಮ್ಯಾಗಮ ಕರ್ಮಾದಿಕುಳವೆಲ್ಲ ॥ ಆಗಳುವಾ ರಜೋಗುಣಧರ್ಮ ವಾತ್ಮನೊ । ಳೀಗೈದುದಿಲ್ಲವೆಂದರಿವುದು ॥ ೩ ॥ ವಾದ ದುರ್ವಿಷಯ ಪ್ರಮಾದ ಕಲುಷ ವಿಮೋ । ಹೋದಯಾವಿದ್ಯಾದಿಕಂಗಳು ॥ ಭೇದಿಸಾತ್ಮನೊಳಿಲ್ಲವಾ ತಮೋಗುಣಧರ್ಮ । ವಾದುದೆ ನೈಜವಿದೆಲೆ ಸಾಧ್ವಿ ॥ ೪ ॥ ಮನದನ್ನೆ ಕೇಳ್ಮೂರುತನು ಗುಣ ತನುವಿನೊ । ಳೆನಿತುಧರ್ಮಂಗಳುಂಟನಿತೆಲ್ಲ ॥ ಘನ ಚಿತ್ಪರಾತ್ಮನೊಳಿಲ್ಲವೆಂತೆಂದೊಡೆ । ತನುವಿಲಕ್ಷಣನಾದ ಕತದಿಂದೆ ॥ ೫ ॥ ಪರಿವ ಮುಗಿಲ್ಗಳ ಪರಿಯನಿಂದುವಿಗೆಂಬ । ಮರುಳಂತೆ ಸುಖದುಃಖಾದಿ ಗಳನು ॥ ಪರಿಕಿಸದವಿಕಾರ ದರಿವಿಗೆಂಬವರರೆ । ಮರುಳರಲ್ಲವೆ ನೋಡು ಮೈತ್ರೇಯಿ ॥ .... .... .... .... ॥ ೬ ॥

ಆತ್ಮಂಗೆ ಷಡೂರ್ಮಿ ಗುಣಧರ್ಮ ನಿರಾಕರಣ ನಿರೂಪಣೆ
ಸೂತ್ರ ಲಕ್ಕೆ ಪದ ೪೫.

---

ಸೂತ್ರ ॥ ಜಗವಿದೆಲ್ಲವು ಪುಸಿಯಾಗಿ ಕನಸಿನಂತೆ ।
ಮಗುಳೆ ತೋರ್ಪುದು ಬಾಧಿಸದು ನೋಡು ॥

ಪದ ॥ ಮೈತ್ರೇಯಿ ಕೇಳವಸ್ಥಾತ್ರಯವೆಸೆವತ । ನುತ್ರಯವಾ ಜೀವ ತ್ರಯವೆಂಬ ॥ ಈ ತ್ರಿವಿಧಾತ್ಮಕವಪ್ಪುದು ತಾನೆ ಜ । ಗತ್ರಯವಿದು ಕಲ್ಪಿತವೆ ಯಕ್ಕು ॥ ೧ ॥ ಇದು ನಾಮಭೇದದಿಂದಿದು ರೂಪಭೇದದಿಂ । ದಿದು ಕರ್ಮ ಭೇದದಿಂದೆಸೆವುದು ॥ ಇದು ಜಗದ್ಭೇದತ್ರಯಾತ್ಮಕ ವರಿವಿನೊ । ಳಿದುಪುಸಿ ಕಲ್ಪಿತವಹುದಾಗಿ ॥ ೨ ॥ ತಳಭಾವನೀಲತೆ ಮಲಿನತ್ವವೆಂಬಿವಾ । ಗಳು ನಭ ದೊಳು ಮಿಥ್ಯೆವೆನಿಪಂತೆ ॥ ಕಳಹಂಸ ಗಮನೆ ಕೇಳೀ ಜಗತ್ರಯವಿಂತು । ತಿಳಿ ದಂದು ತನ್ನೊಳು ಪುಸಿಯಕ್ಕು ॥ ೩ ॥ ಪಗೆಗೆಟ್ಟು ನೆನೆಹಿಗಾ ಬಗೆದೋರು ತಿರ್ಪಂತೆ । ಜಗವಿಂತಿದೆಲ್ಲವು ಪುಸಿಯಾಗಿ ॥ ಮಗುಳೆ ಮುನ್ನಿನ ಪರಿಯೊಳು ಕಾಣಿಪುದು ತನ್ನ । ಬಗೆಯೊಳು ಬಾಧಿಸಲರಿಯದು ॥ ೪ ॥ ಕನಸಿನ ನಿಗಳ ಬಂಧನ ವೆಚ್ಚತ್ತರಿದನೊ । ಳನಿತು ಬಾಧಿಸದೆ ಕಾಣಿಸುವಂತೆ ॥ ನೆನಸಿನ

ನಿಖಿಳ ಪ್ರಪಂಚವಾ ಪರಿಯೊಳು । ತನಗೆ ತೋರ್ಪುದು ಬಾಧಕವೆಯಲ್ಲ ॥೫॥ ಅದು ತನ್ನಿಂದವೆತಾನೆ ಕೆಡುವದವಿದ್ಯೆಯಿಂ । ದೊದವಿದ ವಾಸನಾಪದವಾಗಿ ॥ ಅದು ತನ್ನೊಳುರೆ ಕೆಟ್ಟು ಪೋಗಲಾ ಕೆಡದುಳಿ । ದುದು ಶುದ್ಧ ಪರಬೊಮ್ಮ ವದುತಾನೆ ॥ ........ ........ ॥ ೬ ॥

ಆತ್ಮಂಗೆ ಜಗದ್ಬಾಧಾ ನಿರಾಕರಣ ನಿರೂಪಣೆ–ಸೂತ್ರಕ್ಕೆ ಪದ ೫೧.

---

ಸೂತ್ರ ॥ ಗಣಿಸಿದವಸ್ಥೆ ಮೂರಳಿದ ತುರಿಯವದು ।
ಗುಣಗಂಧಾವಸ್ಥೆ ಯಾತ್ಮನೆಯಲ್ಲ ॥

ಪದ ॥ ಜಗವಿದು ದಿಟವೆಂಬ ಬಗೆಯೆ ಜಾಗರಣವಾ । ಜಗವನು ಪುಸಿಯೆಂಬುದದು ಸ್ವಪ್ನ ॥ ಜಗವಿದನೇನೆಂದು ನೋಡದಿರವೆ ಸುಪ್ತಿ । ವ್ಮಗ ಮದಗಂಧಿ ತಿಳಿವುದಿಂತು ॥ ೧ ॥ ಇವು ಮೂರವಸ್ಥೆ ಬಾಹ್ಯವೆನಿಪ್ಪದೃಶ್ಯಂಗ । ಳಿವನುರೆ ತನಗನ್ಯವಹುದೆಂದು ॥ ವಿವರಿಸಿ ಕಾಣ್ಬಾತನಿಗೆ ದ್ರಷ್ಟನೆಂಬನಾ । ಮವು ಸಲ್ಪುದಂಬುಜಾಯತನೇತ್ರೆ ॥ ೨ ॥ ಈ ಯವಸ್ಥೆಗಳನಭ್ಯಾಸಯೋಗದೆ ತೋರ । ಲೀಯದಡಗಿಸಲಾ ದ್ರಷ್ಟಂಗೆ ॥ ಮಾಯಾಖ್ಯ ದೇಹವಾಗಳೆ ಸಮನಿಪು ದೆಲೆ । ಪ್ರಿಯತಮೆ ನೋಡದಂತರ ದೃಶ್ಯ ॥ ೩ ॥ ಮನವಿಡಿದರಿವ ಚೇತನವ ಚೇತನವನೊಂ । ದಿನಿಸಗಲದೆ ಮನವಿವು ತೋರ ॥ ತನುವಿನಲ್ಲಿಯೆ ತೋರ್ಕೆ ಯುಳಿದು ನಿಂದುದೆ ಮಾಯಾ । ತನುಧರ್ಮವದು ತುರ್ಯವೆನಿಪುದು ॥ ೪ ॥ ತೋರುವ ಕಪಟದ ಮೂರವಸ್ಥೆಗಳನು । ತೋರುವರಿವನಡಗಿಸಲೇನು ॥ ತೋರದೆ ನಿಸ್ತರಂಗಾಂಬುಧಿಯಂತಿರೆ । ತೋರುತಿರ್ಪುದು ತುರ್ಯಪದ ವದು ॥ ೫ ॥ ಗುಣಗಂಧಾವಸ್ಥೆ ನಿರ್ಗುಣಪದವಲ್ತು ವ । ತ್ತೆಣಿಸಲಚ್ಚರಿ ಯಾಗಿ ಸತ್ವಾದಿ ॥ ಗುಣದಿಂದೆ ತೋರ್ಪವಸ್ಥಾತ್ರಯವಲ್ಲಿದು । ಗುಣನಿಧಿ ತುರ್ಯವೆಂದೆನಿಪುದು ॥ ೬ ॥ ಅದು ಮಾಯೋಪಾಧಿಯೆಂಬುದವಸ್ಥಾ ವಾಸನಾ । ಪದವಾ ಪ್ರಯತ್ನಂಗಳಿಲ್ಲದೆ ॥ ಉದಿಸುವ ಮೂರವಸ್ಥೆಗಳಳಿ ದುಳಿದಿರ । ವದು ತಾನಭ್ಯಾಸ ಸಂಜನಿತವು ॥ ೭ ॥ ಆ ಮಾಯಾತನು ಧರ್ಮವಾ ನಿಜಾತ್ಮನಿಗಿಲ್ಲ । ವಾ ಮಾಯೆಯನು ಕಾಣ್ಬ ಕತದಿಂದೆ ॥ ಆ ಮಾಯೆ ಕಾಣಿಸಿಕೊಂಬುದಾಗಿಯೆ ಪುಸಿ । ಯಾ ಮಹಾ ದೃಶಿಮಾತ್ರವದು ಸತ್ಯ ॥ ೮ ॥ ಪ್ರತ್ಯಗಾತ್ಮನ ಬುದ್ಧಿ ಕೃತ್ಯವೆ ತುರಿಯವ । ದತ್ಯರ್ಥವೆನೆ ತೋರಿ

ಕೆಡುವುದು ॥ ಸತ್ಯವಿದೆಂದು ನಂಬೆಲೆ ನೀನು ಮೈತ್ರೇಯಿ । ಶ್ರುತ್ಯನುಶಾಸನ ವಹುದಾಗಿ ॥ ೯ ॥ ತೋರುವ ವಿಷಯವ ತೋರುವ ದೇಹವ । ತೋರುವದ ರಿವರಿವೆಂದೆಂಬ ॥ ಮೂರುವಾ ಜಾಗರಣಾದಿ ನಾಲ್ಕರೊಳಿಂತು । ತೋರು ತಿರ್ಪುದು ದೃಶಿಮಾತ್ರಕ್ಕೆ ॥೧೦॥ ಎಲ್ಲವಸ್ಥೆಗಳೊಳಗಲ್ಲಲ್ಲಿ ಕಾಣ್ಬನಿ । ಗಿಲ್ಲದೆ ಬೇರೆ ತನ್ಮಯವಾಗಿ ॥ ನಿಲ್ಲದೆ ತೋರ್ಪುವು ಸುಖ ದುಃಖಾದಿಗಳವು । ಬಲ್ಲವ ನೋಡಲ್ಕೆ ಪುಸಿಯಕ್ಕು ॥ ........ ........ ॥೧೧॥

ಆತ್ಮಂಗೆ ಮಾಯಾತನುಧರ್ಮ ನಿರಾಕರಣ ನಿರೂಪಣೆ

ಸೂತ್ರ ೧೦ಕ್ಕೆ ಪದ ೬೨.

---

ಸೂತ್ರ ॥ ತನ್ನ ವಿಶಿಷ್ಟ ಜಾಗರಣದಿಂದರಿಯಲ್ಕೆ ।
ಮುನ್ನಿನವಸ್ಥೆ ನಾಲ್ಕವು ಮಿಥ್ಯೆ ॥

ಪದ ॥ ಆ ನಾಲ್ಕವಸ್ಥೆಯನಾ ನಾಲ್ಕು ತನುವನಂ । ತಾ ನಾಲ್ಕು ತೆರದ ಜೀವರುಗಳ ॥ ಆ ನಾಲ್ಕು ವಿಕೃತಿರೂಪಾಗಿ ಕೆಡುವದನ । ನೂನ ಸಾಕ್ಷಿ ಕನಾತ್ಮನರಿವನು ॥ ೧ ॥ ಶುದ್ಧ ಸಂವಿತ್ತಿನೆಚ್ಚರು ಬೋರಲದರಿಂದೆ । ಸಿದ್ಧ ಮಾದುದೆ ವಿಶಿಷ್ಟವೆನಿಪ್ಪ ॥ ಶುದ್ಧ ಜಾಗರಣವದನು ನೋಡು ಮೈತ್ರೇಯಿ । ಶುದ್ಧಬುದ್ಧಿಯೊಳು ನೀನೊಲವಿಂದೆ ॥ ೨ ॥ ತರುಣಿ ವಿಶಿಷ್ಟಜಾಗರಣದೆನೋಡೆ ಜಾ । ಗರಣಾದಿ ದೃಶ್ಯವೆಲ್ಲವು ಮಿಥ್ಯೆ ॥ ನಿರುತದಿಂದವು ಮಿಥ್ಯೆಯಾಗಲಾ ದ್ರಷ್ಟನಾ । ಪರಿಯೊಳು ಮಿಥ್ಯೆಯಾ ದೃಶಿ ಸತ್ಯ ॥ ೩ ॥ ಅಹಿಬುದ್ಧಿಯದು ನೇಣಿನಹಿ ಕೆಡೆ ಕೆಡುವಂತೆ । ಮಹದಾದಿ ದೃಶ್ಯಂಗಳಳಿವಲ್ಲಿ ॥ ಸಹವಿರದಳಿವ ನಾ ದ್ರಷ್ಟನುಮಾ ಸಾಕ್ಷಿ । ಯಹ ನಿಜದೃಶಿಯುಳಿದಿಪ್ಪುದು ॥ ॥ ೪ ॥

ಆತ್ಮಂಗೆ ಸಕಲ ಸಾಕ್ಷಿತ್ವ ನಿರೂಪಣೆ–ಸೂತ್ರ ೧೧ಕ್ಕೆ ಪದ ೬೬.

---

ಸೂತ್ರ ॥ ಕನಸು ತಾನಿದಿರೆಂದು ಪುಸಿದೋರಿದಂತೆ ನೋ ।
ಡನಿಮಿತ್ತವಾಯ್ತು ವಿಶ್ವಭ್ರಾಂತಿ ॥

ಪದ ॥ ಕನಸುಮಾ ದ್ರಷ್ಟನುಮನಿಮಿತ್ತವೆನೆ ಮಾನ । ವನೊಳಿಲ್ಲದುದೆ ತೋರಿದಂದದಿ ॥ ಮುನಿವಧುಜನಮುಖ್ಯೆ ಕೇಳಾತ್ಮನೊಳು ಕಲ್ಪಿ । ತನುವಿಾ ಜಗತ್ರಯಮುದಿಸಿತ್ತು ॥ ೧ ॥ ಗಣಿಸುಪಾದಾನಕಾರಣ ಸಹಕಾರಿ ಕಾ । ರಣ

ನಿಮಿತ್ತಾಖ್ಯಕಾರಣವೆಂಬ ॥ ಗುಣವಂತೆ ಕಾರ್ಯ ಸಂಭವಕಿಂತು ಮೂರು ಕಾ । ರಣ ಬೇಹುದೆಂದು ಪೇಳುವರೆಲ್ಲ ॥ ೨ ॥ ಸುದತಿ ಕೇಳಿಲ್ಲಿ ಗ್ರಾಹ್ಯವೆ ಯುಪಾದಾನವ । ಪ್ಪುದು ಸಹಕಾರಿ ಸಾಧನವದು ॥ ಒದವಿದ ಕರ್ತೃ ನಿಮಿತ್ತ ವೆನಿಪುದಿದು । ವಿದಿತವಖಿಳ ಕಾರ್ಯದುದಯಕ್ಕೆ ॥೩॥ ಇನಿಯಳೆ ಗ್ರಾಹ್ಯವೆ ಮೃತ್ತಿಕೆ ಸಾಧನ । ವೆನಿಪುದೆ ಚಕ್ರ ದಂಡಾದಿಕ ॥ ವನಜಾಸ್ಯೆ ಕುಂಭಕಾರನೆ ಕರ್ತೃಘಟಕಾರ್ಯ । ವಿನಿತರಿಂದಹುದೆಂದು ವಿಧಿಪರು ॥೪॥ ಇದು ಜಗವಾ ಕಾರಣತ್ರಯವೊಂದರಿಂ । ದುದಿಸಿದುದಿಲ್ಲಾತ್ಮಪದದೊಳು ॥ ವಿದಿತವಾ ಕಲ್ಪಿತ ಭ್ರಾಂತಿ ಜನಿತವಾಗಿ । ಮದಗಜಗಮನೆ ಭಾವಿಸಿನೋಡು ॥೫॥ ಪರಮನ ದ್ವಯ ನಕ್ರಿಯಾತ್ಮನಪ್ಪುದರಿಂದೆ । ವಿರಚಿಪನಲ್ಲವಾ ಕಲ್ಪಿತ ॥ ಪುರುಷನೆ ಪುಸಿ ಯಾಗಿ ಮಾಡಲರಿಯನಿಂತು । ಪರಿಕಿಸೆ ಜಗವಿದು ಪುಸಿದೋರ್ಕೆ ॥೬॥

ಆತ್ಮನಲ್ಲಿ ಜಗನ್ಮಿಥ್ಯತ್ವ ನಿರೂಪಣೆ-ಸೂತ್ರ ೧೨ ಪದ ೭೨.

---

ಸೂತ್ರ ॥ ಪರದೊಳು ಭಿನ್ನಾಭಿನ್ನಾದಿರೂಪದೆ ಪೇಳ ।
ಲರಿದು ತತ್ಕಲ್ಪಿತಪುರುಷನ ॥

ಪದ ॥ ಪರಿಕಿಸಾ ಬ್ರಹ್ಮಕ್ಕೆ ಪರಪಪರವೆನಿಪ್ಪ । ವೆರಡು ರೂಪುಂಟು ಮೀಣವರಲ್ಲಿ॥ ನಿರುಪಾಧಿಕವೆ ಪರರೂಪು ಸೋಪಾಧಿ ಯ । ಪರರೂಪವಹುದು ಚಂದನಗಂಧಿ ॥೧॥ ಪುಸಿಯಲ್ಲವಾ ನಿರುಪಾಧಿಯು ಸೋಪಾಧಿ । ಪುಸಿಯಾ ದವಿದ್ಯೆಯು ಶಬಲವು ॥ ಶಶಿಮುಖಿ ಚೋದ್ಯವಂತದು ಬೋಧ್ಯವದು ವಿಚಾ । ರಿಸಲು ಕಲ್ಪಿತ ಪುರುಷನೆಯಕ್ಕು ॥ ೨ ॥ ಪರನ ಚಿಚ್ಛಕ್ತಿ ತಲ್ಲೀಲೆ ಲಿಂಗಾ ಕೃತಿ । ಪರನಾದವೆಂಬಿವು ಮೊದಲಾದ ॥ ಪರಿಕಲ್ಪಿತಾಖ್ಯವನೇಕಕ್ಕೆ ಕಲ್ಪಿತ । ಪುರುಷನೋರ್ವನೆ ವಿಷಯನುಮಕ್ಕು ॥ ೩ ॥ ಅಂಧಕರಂಟೆ ದುಂದುಭಿ ಸೂರ್ಪ ಮುಸುಲದಂ । ತೆಂದು ಭಾವಿಸಿ ಬೇರೆ ತಿಳಿಯಲ್ಕೆ ॥ ಒಂದು ಗಜವೆ ಲಕ್ಷ್ಯವಾದಂತೆ ಮತಿಭೇದ । ದಿಂದೆ ನಾನತ್ವಮೋರ್ವನಿಗಕ್ಕು ॥೪॥ ಕಲ್ಪನೆ ಪಿಡಿದೋರ್ವ ಕಲ್ಪಿತಪುರುಷನೆ । ಕಲ್ಪಿತ ನಾಮವನೇಕವ ॥ ಕಲ್ಪನೆಯಿಂದ ಪೈದಿದನು ಪುತ್ರಾದಿ ವಿ । ಕಲ್ಪನೆಯುಳ್ಳ ಮಾನವನಂತೆ ॥ ೫ ॥ ಒಂದೆ ಪ್ರಕಾರವಾದರುವಿನೊಳೀ ಪೆರ್ಚು । ಕುಂದಿನ ಬಗೆ ಸಮವಲಿಗೆಯ ॥ ಒಂದಿ ಪೀವರ ನಿಮ್ನಕುಚ ನಾಭಿಯುಳ್ಳವ । ಳೆಂದೆನಿಸುವ ಚಿತ್ರದೋಲಿರ್ಕು ॥ ೬ ॥

ನಿಜತತ್ವವೆನೆ ರಾಜಿಪನು ಕಲ್ಪಿತಾತ್ಮನೀ । ತ್ರಿಜಗದೊಳರಿವನ್ನೆವರಮಿಂತು ॥ ಬಿಜವಾಡನ್ಯಾಯ ಪರೀಕ್ಷೆಗೆ ಮುನ್ನಲಾ । ದ್ವಿಜನೆ ತಾನೆನಿಪ ರಕ್ಕಸ ನಂತೆ ॥೭॥ ಜನನಿಯ ಗರ್ಭದರ್ಭಕನ ಪೋಲಪ್ಪಿನ । ತನುಜನಂತೊಳ ಹೊರಗಿರುತಿರ್ಪ ॥ ನೆನೆಲಾಗದವಿರಳಾನಂತ ಚಿದ್ಘನದೊಳಂ । ಗನೆ ಪುಸಿ ಕಲ್ಪಿತ ಜೀವನ ॥೮॥ ಚೆನ್ನೆ ವೇದಾನುಯುಕ್ತಿಯೊಳು ಪರೀಕ್ಷಿಸೆ । ನನ್ನಿ ಯೆನಿಸುವ ಪರಮನೊಳು ॥ ಭಿನ್ನನು ಮೇಣಭಿನ್ನನು ಭಿನ್ನಾಭಿನ್ನನೆಂ ದೆನ್ನಬಾರದು ಪುಸಿ ಜೀವನ ॥ ೯ ॥ ಭಿನ್ನವೆ ತಮವಭಿನ್ನವೆ ಸತ್ವವೆನಿಪುದು । ಭಿನ್ನಾಭಿನ್ನವೆ ರಜೋಗುಣವಕ್ಕು ॥ ಉನ್ನಿಸಿ ನೋಡಲೀ ಕಾಂಡ ತ್ರಯಂ ಗಳು । ಚಿನ್ನಿಧಿಯೆನಿಪ ತನ್ನೊಳು ಮಿಥ್ಯೆ ॥೧೦॥ ಭಿನ್ನನುವೆಂದು ಕೆಲರು ವಿಚಾರಿಸಿ ಭಿನ್ನಾ । ಭಿನ್ನನುವೆಂದಭಿನ್ನನುವೆಂದು ॥ ಬಿನ್ನಣದಿಂದೆ ತರ್ಕಿ ಪರೀ ವಿಕಲ್ಪನೆ । ತನ್ನೊಳು ಪುಸಿಯೆಂದು ತಿಳಿವನ್ನ ॥೧೧॥ ಉಳ್ಳವನೊಳು ನೋಡಲಿಲ್ಲದವನು ಭಿನ್ನ । ನಲ್ಲ ವಭಿನ್ನರೂಪನುಮಲ್ಲ ॥ ಚಲ್ಲೆಕಂಗಳೆ ಕೇಳು ಭಿನ್ನಾಭಿನಾತ್ಮಕ । ನಲ್ಲವರಿಯೆ ತಾನಿಲ್ಲದನಾಗಿ ॥೧೨॥ ಉಳ್ಳಸ್ಥಾಣುವಿ ನೊಳಗಿಲ್ಲದ ಚೋರನಂ । ತಿಲ್ಲವಾ ಕಲ್ಪಿತಪುರುಷನು ॥ ಉಳ್ಳ ಪರಾತ್ಮಕ ನೊಳು ತೋರಿ ದಿಟಕೆ ತಾ । ನಿಲ್ಲವೆನಿಪನು ನೋಡಿದು ತತ್ವ ॥೧೩॥ ಎನ್ನ ಗಮಿಾ ಪರಿಯೊಳು ನೆರೆ ಪುಸಿಯೆಂದು । ತನ್ನ ತಾನರಿಯದ ಮುನ್ನವೆ ॥ ಸನ್ನಿ ಯೆಂಬಂತೆಸೆದಿರ್ಪನರಿಯೆ ಬಳಿ । ಕನ್ನೀನಾನೆಂಬುದೆಲ್ಲವು ಮಿಥ್ಯೆ ॥ ೧೪ ॥ ಪುಸಿಯಾಗೆ ತನ್ನಿಂದತಾನುಮಿಾ ಜಗಮಿಂತು । ಶಶಿಮುಖಿ ನಿಜಸತ್ಯಮುಳಿ ವುದು ॥ ಒಸೆದು ನೀನದರಿಂದವನು ಮತಿಮುಟ್ಟಿ ಭಾ । ವಿಸು ವೇಷ ವಿಭ್ರಾಂತ ನಟನಂತೆ ॥ ೧೫ ॥ ತಾನೆ ಸೃಜಿಸಿ ನೇಣನದರೊಳಗಹಿಯನು । ತಾನೊಮ್ಮೆ ಕಲ್ಪಿಸಿ ಭೀತಿಸಿ ॥ ತಾನೆ ತಿಳಿದು ಭೀತಿಯುಳಿದು ಬಳಿಕ ತನ್ನ । ತಾನೆ ಸದುಳ ಮಿರ್ಪ ನರನಂತೆ ॥ ೧೬ ॥ ತನ್ನೊಳಾದಜ್ಞಾನವದರಿಂದೆ ಸಂಸೃತಿ । ಯಂ ನಿಜವೆಂದು ದುಃಖವನೈದಿ ॥ ತನ್ನನರಿದು ದುಃಖವನು ನೀಗಿ ಕಲ್ಪಿತ । ನುನ್ನ ತಿಯನು ತಾನೆಪಡೆವನು ॥ ೧೭ ॥ ಕನ್ನಡಿಯೊಳು ತೋರ್ಪ ತನ್ನ ಮಿಥ್ಯಾ ರೂಪಿ । ನಿನ್ನಾಡೆ ತನ್ನನೆ ಕಾಣ್ಬಂತೆ ॥ ಮುನ್ನವೆ ಪುಸಿಯೆನಿಸುವ ಜೀವಾ ತ್ಮಕನಿಂದೆ । ತನ್ನ ತಾನರಿವನಾ ಪರಮಾತ್ಮ ॥ ........ ॥೧೮॥

ಆತ್ಮನಲ್ಲಿ ಜೀವತ್ವ ನಿರಾಕರಣ ನಿರೂಪಣೆ-ಸೂತ್ರ ೧೩ಕ್ಕೆ ಪದ ೯೦.

—:o:—

ಸೂತ್ರ ॥ ಪರಮನದ್ವಯನಾಗಿ ಸನ್ನಿಧಿಯಲ್ಲವಾ ।
ಪುರುಷ ಸನ್ನಿಧಿ ಚೇಷ್ಟೆಯಖಿಳವು ॥

ಪದ ॥ ಇಲ್ಲದ ಪುರುಷನಿಂದಿಲ್ಲದ ಕರಣಾಳಿ । ಗಿಲ್ಲದ ಚೇಷ್ಟೆಸಮ ನಿಪುದೆ ॥ ಉಳ್ಳಂತೆ ಪೇಳೆನಗರಿವಂತಿದನು ತಳು । ವಿಲ್ಲದೆ ಸಕಲ ಸನ್ಮುನಿ ವಂದ್ಯ ॥ ೧ ॥ ಎನೆ ಕೇಳ್ದು ಮುನಿಪನಾ ವನಿತೆಯಂ ಬೋಳೈಸಿ । ಮನದನು ರಾಗವಲರುತಿರೆ ॥ ವಿನಯದಿಂದರುಪಿದ ನಖಿಳದಮಿದಜ್ಞಾನ । ಜನಿತನಾಗಿಯೆ ಮಿಥ್ಯೆಯಹುದೆಂದು ॥ ೨ ॥ ತರಳಾಕ್ಷಿ ಕಲ್ಪಿತ ಪುರುಷಸನ್ನಿಧಿಯಿಂದೆ । ದೊರ ಕೊಂಬುದಖಿಳ ಮಿಥ್ಯಾ ಜಾಡ್ಯ ॥ ಕರಣಾದಿ ವಿಷಯ ವಿಸರಕೆ ತದ್ವ್ಯವಹೃತಿ । ನಿರುತದಿಂದರಿಯಲಂತದು ಪುಸಿ ॥ ೪ ॥ ಅರಿವು ಪರಮನಾಗಿ ಮರವೆ ಕಲ್ಪಿತ ವಾಗಿ । ಯರಿವಿನೊಳ್ಮರವೆ ಘಟಿಸದಾವ ॥ ತೆರದೊಳು ತೋರಮುಡಿಯಳೆ ಮೈತ್ರೇಯಿ ನೇ । ಸರನೊಡವೆರೆಯದ ತಮದಂತೆ ॥ ೪ ॥ ಪರಮನದ್ವಯ ಪೂರ್ಣನಹುದಾಗಿ ಸನ್ನಿಧಿ । ದೊರಕೊಳ್ಳಲರಿಯದು ಕಲ್ಪಿತ ॥ ಪುರುಷನ ಸನ್ನಿಧಿಯಲ್ಲದೆ ಬೇರೊಂದು । ಪರಿ ದೊಗಕೊಳ್ಳದಿಂತಿದು ಸತ್ಯ ॥ ೫ ॥ ಕನ ಸಿನಯಸ್ಕಾಂತವಾ ಕನಸಿನ ಲೋಹ । ವನು ಚಲಿಯಿಸುವಂತೀ ಸಕಲಕ್ಕೆ ॥ ವನರುಹಲೋಚನೆ ಮೈತ್ರೇಯಿ ಕಲ್ಪಿತ । ನೆನಿಪನು ಚೇಷ್ಟಾದಿ ಬೀಜನು ॥೬॥ ಇಲ್ಲದ ಭ್ರಾಮಕ ಮುಳ್ಳಂತೆ ಕನಸಿನೊ । ಳಿಲ್ಲದ ಲೋಹ ಚಲನವನು ॥ ಮೆಲ್ಲಡಿಯಳೆ ಮಾಳ್ಪುದಂತೆ ಕನಸಿನಂತಿ । ದೆಲ್ಲವಾ ಪುರುಷ ಸನ್ನಿಧಿ ಚೇಷ್ಟೆ ॥ ೭ ॥ ಕನಸಿನ ಪುರುಷಂಗೆ ಕನಸಿನಂಗನೆಯಿಂದೆ । ಕನಸಿನ ಪುಲಿ ಯಿಂದೆ ಸುಖ ದುಃಖ ॥ ಜನಿಸುವಂತೀ ನೆನಸಿನ ವಿಷಯಾಳಿಗ । ಳನುಭವ ವಹುದು ಕಲ್ಪಿತನಿಂದೆ ॥ ೮ ॥ ಇಲ್ಲದ ತನ್ನಿಂದವಿಲ್ಲದತಾನಾಗು । ತಿಲ್ಲದಖಿಳ ತೋರಿಕೆಗಳನು ॥ ಉಳ್ಳಂತೆ ಬಗೆವನಾ ಕಲ್ಪಿತನರಿದೊಡೊಂ । ದಿಲ್ಲವಾ ತೋರ್ಕೆ ಚಿತ್ತಲ್ಲದೆ ॥ ೯ ॥ ಬಗೆಯಿಂದೆ ತಾನಾಗಿ ಬಗೆಯಿಂದಿಳೆಯನಾಳಿ । ಬಗೆಯಿಂದೆ ಬಳಿಕಲಾ ಬಗೆಗೆಟ್ಟು ॥ ಬಗೆಯಿಂದೆ ತನ್ನತಾನಹನೆಂದು ಮೈತ್ರೇಯಿ । ಬಗೆ ಸೋಮಶರ್ಮ ಜನಕನಂತೆ ॥ ೧೦ ॥ ಧರೆಯೊಳುದಿಸಿ ವೇಣು ಕವಳಿ ನಾಳಾದಿಕ । ವಿರದೆ ಫಲಿಸಿ ತಾನೆ ಕೆಡುವಂತೆ ॥ ಪರನೊಳೊ ಗೆದು ಕಲ್ಪಿತನು ಬೋಧಮಾಗಲಂ । ತರಿಸದೆ ತನ್ನತಾನಳಿವನು ॥ ೧೧ ॥ ಸುರಪದವೆಳಸಿ ಕುರುಕ್ಷೇತ್ರದೊಳು ನಿಜ । ನರಭಾವವನು ಜನಮುಳಿವಂತೆ ॥ ಪರರೂಪದೊಳು ಮಿಗಿಲರಿವಿಂದೆ ಜೀವಂಗೆ । ಪಿರಿದು ತನ್ನಳಿವಂಗೀಕೃತ

ವಕ್ಸು ‖ ೧೨ ‖ ಕನಸಿನ ತೋರ್ಕೆಯಾ ಕನಸನು ಕಾಣ್ಬಾತ । ನನಿತುಮೆಚ್ಚರಿನೊಳು ಪುಸಿಯಂತೆ ‖ ನೆನಸಿನ ವಿಷಯವಾ ದ್ರಷ್ಟನು ಮೆಂಬ ಭಾ । ವನೆ ಮಿಥ್ಯೆ ತನ್ನ ತಾನರಿದೆಂದು ‖ .... .... .... ‖ ೧೩ ‖

ಆತ್ಮನಲ್ಲಿ ದೃಗ್ದೃಶ್ಯಭ್ರಾಂತಿ ನಿರಸನ ನಿರೂಪಣೆ–ಸೂತ್ರ ೧೪ಕ್ಕೆ ಪದ ೧೦೩.

---

ಸೂತ್ರ ‖ ತಾನುಳ್ಳೊಡುಂಟು ತೋರುವ ಜಗವಿದು ನೋಡು ।
ತಾನಿಲ್ಲವರಿದೆಂದು ನಿಜದಲ್ಲಿ ‖

ಪದ ‖ ಇಂತು ತೋರುವ ಜಗದ್ಭ್ರಮೆಯುಮಾ ತನ್ನಹಂ । ಭ್ರಾಂತಿಯುಮೆಂಬುಭಯವು ಮಿಥ್ಯೆ ‖ ಕಾಂತೆ ಮೈತ್ರೇಯಿ ಭಾವಿಸಿ ನೋಡೆ ಬಳಿಕೇನೊಂ । ದುಂ ತೋರದರಿವೊಂದೆ ಪರಮಾರ್ಥ ‖ ೧ ‖ ತಾನುಂಟು ಜಗಮುಂಟು ತಾನಿಲ್ಲದಿರೆ ಜಗ । ವೇನುಮಿಲ್ಲಾಗಿ ವಿಚಾರಿಸೆ ‖ ತಾನಿಲ್ಲವದರಿಂದೀ ತ್ರಿಜಗದೊಳಿಂತೆಂಬು । ದೇನೇನು ನುಡಿಯಲೊಂದಿನಿಸಿಲ್ಲ ‖ ೨ ‖ ತೋರುವ ದೃಶ್ಯ ದೃಕ್ಕುಗಳೆಂಬುಭಯಮಿಂತು । ತೋರದ ಕತದಿಂದೆ ಪುಸಿಯೆಂದು ‖ ಬೇರೆ ನುಡಿಯಲುಂಟೆ ತಿಳಿ ಬಳಿಕೇನೊಂದು । ತೋರದ ಚಿನ್ಮಯಾತ್ಮನೆ ಸತ್ಯ ‖ ೩ ‖ ಜಡದೃಶ್ಯಮೀ ದೇಹವಜಡ ದೃಶ್ಯನೆ ದ್ರಷ್ಟ । ನೆಡೆವಿಡದಿಲ್ಲದಿಂತುಭಯವು ‖ ಮಡದಿ ಕೇಳ್ತನಗೆ ತೋರದಿರಲ್ಕೆ ತಾನೆಂಬೀ । ನುಡಿಯದೆಂತಹುದು ವಿಚಾರಿಸೆ ‖ ೪ ‖ ತಾನೆಂಬನಾ ದೃಶ್ಯವನು ದ್ರಷ್ಟನನು ಮೇಣು । ತಾನೆಂಬನಿಂತನುಭವಸಿದ್ಧ ‖ ತಾನೆಂಬ ವೇದ್ಯತೆಯಿಂದೆ ನೋಡಲು ಮಿಥ್ಯೆ । ತಾನಲ್ಲನುದು ತಾನೆ ಪರತತ್ವ ‖ ೫ ‖ ಪ್ರಕೃತಿ ಮೊದಲ್ಗೊಂಡು ವಿಕೃತಿ ರೂಪದೆ ತೋರ್ಪ । ಸಕಲ ದೃಶ್ಯಂಗಳನೆಲ್ಲವ ‖ ಅಕುಟಿಲೆ ತನ್ನುವನುರೆ ನೇತಿಗಳೆದು ನಿಂ । ದಕಲಂಕಾದ್ವಯ ಬೋಧಮಯನಾತ್ಮ ‖ ೬ ‖ ಎಂದು ಕರ್ಮವನೊಂದದೆಂದು ಬಂಧನಮಿಲ್ಲ । ವೆಂದು ನಿರ್ಗುಣಿ ನಿರ್ವಿಕಲ್ಪಕ ‖ ವೆಂದು ಸುಖಾದ್ವಯಪೂರ್ಣಚಿತ್ತದು ಬೊಮ್ಮ । ವೆಂದು ನಂಬೆಲೆ ನೀರೆ ನಿಜವಿದು ‖ .... .... .... .... .... ‖ ೭ ‖

ಅದ್ವೈತಾತ್ಮ ನಿರೂಪಣೆ–ಸೂತ್ರ ೧೫ಕ್ಕೆ ಪದ ೧೧೦.

---

ಸೂತ್ರ ॥ ಬಳಿಕಾತ್ಮನಿಗೆ ಬಂಧ ಮೋಕ್ಷಾದಿಯೆಂತೆಂದು ।
ನಳಿನಾಕ್ಷಿ ಬೆಸಗೊಂಡಳಿನಿಯನ ॥

ಪದ ॥ ಎನಲದನುರೆ ನಂಬಿ ವನಿತೆ ಮೈತ್ರೇಯಿಯಾ । ಮುನಿಪಂಗೆ ನಮಿಸಿ ಬಳಿಕ ತನ್ನ ॥ ಮನದೊಲವಿಂದೆ ಬಿನ್ನೈಸಿದಳಾ ಭ್ರಾಂತಿ । ಜನಿಸಿ ತೆಂತಾ ಪರಾತ್ಮನೊಳೆಂದು ॥ ೧ ॥ ಮತ್ತಮಾ ಭ್ರಾಂತಿನಿಮಿತ್ತಮೆಂದೆನಿಸಿ ತೋ । ರುತ್ತಿರ್ಪ ಸುಖದುಃಖ ಬಂಧನ ॥ ಮೊತ್ತದ ಮೋಕ್ಷವಾತ್ಮನೊಳಾವ ತೆರದೊಳಾ । ಯಿತ್ತು ಪೇಳೆನಗೆ ತಾಪಸವಂದ್ಯ ॥ ೨ ॥ ತನುವಿದು ತಾನೆಂಬ ತನು ತನ್ನದೆಂದೆಂಬ । ತನುಧರ್ಮವೆಲ್ಲವು ತನಗೆಂಬ ॥ ಇನಿತು ವಿಭ್ರಾಂತಿ ಯಾತ್ಮನೊಳಾದುದೆಂತು ಸ । ನ್ಮುನಿಮುಖ್ಯ ತಿಳುಪಿ ರಕ್ಷಿಪುದೆನ್ನ ॥ ೩ ॥ ಎನಗಿದು ಕೌತುಕವೆನಿಸಲ್ಕೆ ಬೆಸಗೊಂಡೆ । ನನಿತೆಲ್ಲವನು ಸವಿಸ್ತರಮಾಗಿ ॥ ಮುನಿಪ ನೀನೊಲವಿಂದೆ ತಿಳುಪೆಂದು ಮೈತ್ರೇಯಿ । ವಿನಯವಾರಿಧಿ ನಮಿಸಿದ ಳಂದು ॥ ೪ ॥ ಇದು ನಿಜಗುಣಯೋಗಿ ಮುದದಿಂದೆ ತಿಳಿಯ ಪೇ । ಳಿದ ಯಾಜ್ಞವಲ್ಕ್ಯಶ್ರೀ ಮೈತ್ರೇಯಿಯ ॥ ಒದವಿದ ಸಂವಾದದೊಳಗೆರಡನೆಯದ । ಪ್ಪುದು ಸಂಧಿ ಪರಮಾನುಭವ ಬಂಧಿ ॥ .... .... ॥ ೫ ॥

ಪ್ರಶ್ನೆನಿರೂಪಣೆ-ಸೂತ್ರ ೧೬ಕ್ಕೆ ಪದ ೧೧೫.

ಅಂತು ಸಂಧಿ ೨ಕ್ಕಂ ಸೂತ್ರ ೧೬ಕ್ಕೆ ಪದ ೩೨೧ಕ್ಕಂ

ಮಂಗಳಮಹಾ



ಶ್ರೀಗುರುಶಂಭುಲಿಂಗಾಯನಮಃ

## ೩ ನೇ ಸಂಧಿ

ಸೂತ್ರ ॥ ಭ್ರಾಂತಿಗೆ ಲಕ್ಷಣಮುಂಟೆ ಪರೀಕ್ಷಿಸೆ ।
ಕಾಂತೆ ಕೇಳಂತಾದೊಡಹುದಲ್ತೆ ॥

ಪದ ॥ ಶ್ರೀಮಹಾದೇವಂಗೆ ಸೋಮಂಗೆ ಸುಖಪೂರ್ಣ । ಧಾಮಂಗೆ ಸತ್ಯಚಿದ್ರೂಪಂಗೆ ॥ ಕಾಮಿತಜನ ಕಲ್ಪಭೂಜಂಗೆ ಶಂಭುವಿಂ । ಗಾಮೋದ ದಿಂದೆ ವಂದಿಸುವೆನು ॥ ೧ ॥ ಶ್ರೀಮದಾನಂದಾತ್ಮಾ ರಾಮನೂರ್ಜಿತನಭಿ । ರಾಮನಧಿಕ ದಯಾರಸ ಪೂರ್ಣ ॥ ಕಾಮವಿದೂರನುತ್ತಮ ಯಾಜ್ಞ

ವಲ್ಕ್ಯಮು । ಹಾಮುನಿ ಸುಗುಣಸಂಪನ್ನನು ॥ ೨ ॥ ಮುನಿವರನಿನಿಯಳಿಗನು ರಾಗದಿಂದವಳೆನಿತನು ಬೆಸಗೊಂಡಳನಿತನು ॥ ಅನುಭವ ಗಮ್ಯವೆಂದೆನಿ ಪಂತೆ ತಿಳುಪಿ ಚಿ । ದ್ಘನಮುಕ್ತಿಸುಖದೊಳಿರಿಸಿದನು ॥ ೩ ॥ ಅದು ವರ ಸುಜ್ಞಾನ ನಿರ್ಯೋಗವದು ತಿಳಿ । ಯದಡಿಗಳದಕೆ ಕಾರಣಮಾಗಿ ॥ ಸದ ಮಳಾತ್ಮಕನೊ ಳಾರೋಪಿತಮೆನೆ ಸರ್ವ । ವಿದನು ನಿವರ್ತಿಪೆನೆಲೆ ಕೇಳು ॥೪॥ ತನುವನೆ ತಾನೆಂಬ ತನುತನ್ನದೆಂದೆಂಬ । ತನುಮುಖ್ಯ ಜಗವಿದು ನಿಜವೆಂಬ ॥ ಇನಿತಳವಟ್ಟು ವಿವೇಕವನುಳಿದಜೀ । ತನಭಾವವದು ತಾನೆ ಭ್ರಮೆ ಯಕ್ಕು ॥ ೫ ॥ ಅನುಭೂತವಿದು ತನ್ನಿಂದನನುಭೂತಂ ತಾನಿ । ದೆನಲಿಲ್ಲವಾ ಭ್ರಾಂತಿಯನು ಮತ್ತೆ ॥ ವನಿತೆ ಸದೃಶವಸದೃಶವಹುದೀ ಭ್ರಾಂತಿ । ಯೆನಲಿಲ್ಲ ವಾತ್ಮನೊಳರಿಯಲ್ಕೆ ॥ ೬ ॥ ಗುಣರಹಿತನಿಗೆ ಸಗುಣತನು ತಾನೆಂಬ । ಗುಣ ವಿದು ತಾನೆ ತದ್ಭ್ರಮೆಯಲ್ತೆ ॥ ಗುಣಮಣಿ ಭೂಷಣೆ ತಿಳಿ ನಹಿ ಭ್ರಾಂ ತೇರ್ಲ । ಕ್ಷಣಮಸ್ತಿಯೆಂಬ ವಚನದಿಂದ ॥ ೭ ॥ ಸವಿಕಾರಿಯೆನಿಪೊಡಲನು ನೀನೆಂಬೀ ಭ್ರಾಂತಿ । ಸವನಿಸಲದು ಕಾರಣದೆ ನಿನ್ನ ॥ ಸವಿಕಾರಿಯೆಂಬೆ ವಿವೇಕಿಸದೊಮ್ಮೆನೀ । ನವಿಕಾರಿ ತಿಳಿಯಲ್ಕೆ ನಿಜದಿಂದ ॥ .... ॥ ೮ ॥

ಆತ್ಮಂಗೆ ಭ್ರಾಂತಿ ವಿಲಕ್ಷಣತ್ವ ನಿರೂಪಣೆ-ಸೂತ್ರ ೧ಕ್ಕೆ ಪದ ೮.

---

ಸೂತ್ರ ॥ ಕಂಡುದನೆಲ್ಲವನುಂಡೆನೆಂದೆಲಾತ್ಮ ।
ನುಂಡಾತನಖಿಳವನೆನಬೇಕು ॥

ಪದ ॥ ಸವಿಕಾರಿಯಾಗಿ ತೋರುವ ತೋರಿ ಕೆಡುವ ದೇ । ಹವನೆ ನಾನೆಂದೆಂಬ ಭ್ರಮೆಯಿಂದೆ ॥ ಭವಬಂಧ ನಿವಹ ತಾಪತ್ರಯಾದಿಗಳಿಂತು । ಸಮನಿಸುಗವು ನಿನ್ನೊಳರಿ ಮಿಥ್ಯೆ ॥ ೧ ॥ ಅವಕುಪರತಿಯದು ಸವನಿಸೆ ಸುಖವೆಂಬ । ರವಿವೇಕಿಗಳು ತಮ್ಮ ಬಗೆಯಿಂದೆ ॥ ಕುವಲಯ ದಳನೇತ್ರೆ ಮೈತ್ರೇಯಿ ಕೇಳು ದುಃ । ಖವನೆ ತತ್ಸುಖವೆಂಬರರಿಯದೆ ॥ ೨ ॥ ತನು ವಿರಹಿತ ನವಿಕಾರಿ ಯಚಲಿತನೆಂ । ದೆನಿಸುವಾತ್ಮನಿಗೆ ತತ್ತನುದುಃಖ ॥ ಜನನ ಮರಣ ಶೋಕ ಭಯ ಬಂಧವೆಂಬಿವೆ । ಳ್ಳನಿತಿಲ್ಲವಬಲೆ ಕೇಳರಿದೆಂದು ॥ ೩ ॥ ದುಃಖಾದಿಕವನಿದಿರಿಟ್ಟು ಕಾಣ್ಬಾತನಾ । ದುಃಖಾದಿರೂಪವ ನೆಲೆಗೈದು ॥ ದುಃಖಾದಿಗಳ ನನುಭವಿಸುವನಲ್ಲವಾ । ದುಃಖಾದಿ ತನಗೆ ಕೇಳ್ಪಸಿಯಾಗಿ ॥೪॥

ಕಂಡುದನೆಲ್ಲವನುಂಡೆನೆಂದೆಂಬೊಡೆ । ಕಂಡಶುದ್ಧಾದಿ ವಿಷಯವನು ॥ ಉಂಡಾ ತನಹನದರಿಂದೆ ತಿಳಿಯೆ ಚಿದ । ಖಂಡಾತ್ಮನಿಗೆ ಭೋಕ್ತೃತನಮುಂಟೆ ॥ ೫ ॥

ಆತ್ಮಂಗೆ ಭೋಕ್ತೃತ್ವ ನಿರಾಕರಣ ನಿರೂಪಣೆ—ಸೂತ್ರ ೨ಕ್ಕೆ ಪದ ೧೩.

---

ಸೂತ್ರ ॥ ತೋರುವ ತನುವಿದು ತಾನಲ್ಲವೆಂತೆನೆ ।
ತೋರುವ ಘಟ ಪಟಾದಿಗಳಂತೆ ॥

ಪದ ॥ ತನು ತೋರದಿರೆ ತನುವಿದು ನೀನೆಂದೆಂತೆಂಬೆ । ತನುತೋರ್ಪ ಕತದಿಂದೆ ನೀನೆಂಬೆ ॥ ನಿನಗೆ ತೋರಿತ್ತಾಗಿ ನೀನಲ್ಲವೀತನು । ತನುವಿಂದ ವನ್ಯವಿಂತಿದು ಸತ್ಯ ॥ ೧ ॥ ತನುವಿದಾನೆಂದೋರ್ಮೆ ತನು ತನ್ನದೆಂದೋರ್ಮೆ । ನಿನಗೆ ತೋರ್ಪುದರಿಂದೆ ತನುವಿದು ॥ ಮನದನ್ನೆ ನೀನಲ್ಲವಿದನು ಯುಕ್ತ್ಯನುಮಾನ । ವನುಭವದಿಂದವಧರಿಪುದು ॥ ೨ ॥ ಘಟವ ಕಾಣ್ಬತನಾ ಘಟವಲ್ಲವೆಂತಂತೆ । ಘಟದಂತೆ ತೋರುವ ತನುವಿದು ॥ ಘಟಕುಚೆ ಪರಿಭಾವಿ ಸಲ್ಕೆ ನೀನಲ್ಲ ತ್ತ ಕ । ಪಟವೈಸೆ ನೀನೆಂಬುದಿನು ಯುಕ್ತಿ ॥ ೩ ॥ ಈ ದೇಹ ವಿದು ವಿವಾದಾಸ್ಪದಿ ತಾನಲ್ಲ್ತು । ಭೇವ ಭೀತ್ಯಾದಿ ಜನಕವಾಗಿ ॥ ಕಾದಲೆ ಕೇಳ್ಪರದೇಹದಂತೆಂಬುದು । ವೇದಾಸುಮತವಿಂತಿದನುಮಾನ ॥ ೪ ॥ ಮಲ ಮೂತ್ರ ರೇತೋರುಧಿರ ಪೂಯ ನರ ಮಜ್ಜ । ವೆಲು ಚರ್ಮಮಯವಾದ ತನುವೆತ್ತ ॥ ಸಲೆ ಶುದ್ಧ ಬೋಧಾತ್ಮ ಪದವಾದ ತಾನೆತ್ತ । ಲೆಲೆ ನೀರೆ ನೋಡಿಂತಿದನುಭಾವ ॥ ೫ ॥ ತನುವಿನಂತಿರೆ ದೃಶ್ಯವೆನಿಪುದರಿಂದಿಂದ್ರಿ । ಯ ನಿಕಾಯವಾ ಪ್ರಾಣವಹವಾದಿ ॥ ಇನಿತನು ನೀನಲ್ಲವೆಂದು ಭಾವಿಪುದು ಮಾ । ನಿನಿರನ್ನೆ ಸತ್ಯಾನುಭವದಿಂದ ॥ ೬ ॥ ವನಿತೆ ಮನೋಮತಿಯುಹಮು ಚಿತ್ತಾದಿ ಸಾ । ಧನತೆಯಿಂದವೆ ದೃಶ್ಯವಹವಾಗಿ ॥ ಅನುದಿನಮಿವು ತನಗನ್ಯ ವಲ್ಲದೆ । ತಾನೆಂದೆನಲಿಲ್ಲವರಿ ದೀಪಾದಿಗಳಂತೆ ॥೭॥ ಅರಿವೆನೆಂಬಾಗಳಾ ಮರವೆ ನೆಂಬಾಗಳಾ । ಅರಿವಿನುಳುವೆ ನೀನಲ್ಲದೊಡಾವ ॥ ತೆರದಿಂದೆ ನೀರೆ ನೀನರಿ ದೆಂತು ಪೇಳ್ವೆ ವು । ತ್ತರಿದೆನಾ ಮರದೆನೆಂಬೆರಡನು ॥ ೮ ॥ ಸುಖವಲ್ಲದುದ ನೆಳ್ಳನಿತನೊಲ್ಲನಾಗಿ ತ । ತ್ಸುಖವನೆ ಕೂರ್ತು ತನಗೆ ತೋರ್ಪ ॥ ನಿಖಿಳ ವೆಲ್ಲವು ಪ್ರೀತಿಕರವುಪ್ಪುದದರಿಂದೆ । ಸುಖರೂಪನಾತ್ಮನೆಂಬುದೆ ಸತ್ಯ ॥ ೯ ॥

ಆತ್ಮಂಗೆ ದೇಹಾದಿ ವಿಲಕ್ಷಣತ್ವ ನಿರೂಪಣೆ—ಸೂತ್ರ ೩ಕ್ಕೆ ಪದ ೨೨.

ಸೂತ್ರ ॥ ತನುವಿಗಾತ್ಮನಿಗೆ ಸಂಗತಿಯಿಲ್ಲವೆಂದೆಂದು ।
ವನಿತೆ ಕೇಳ್ಬೆಳಕು ಕತ್ತಲೆಯಂತೆ ॥

ಪದ ॥ ಜಡವಿದುತನು ತಾನಜಡನೆಂತು ಸಂಗತಿ । ಜಡವಜಡಂಗಳಿಗಪ್ಪುದೆ ॥ ಬಡನಡುವಿನ ಬಾಲೆ ಬಗೆವುದು ನೀನಿಲ್ಲಿ । ಸೊಡರು ಕತ್ತಲೆಗಳ ತೆರನೆಂದು ॥ ೧ ॥ ತನುವಿಗಾತ್ಮನಿಗೆಂತು ಪುದುವಿಲ್ಲವೆಂತೆನೆ । ತನುಮೂರ್ತವದು ತಾನಮೂರ್ತನು ॥ ತನು ಭಿನ್ನವದ್ವಯನೆನಿಪನೆ ತಾನಿಂತು । ತನು ಲಯಾವದು ತಾನಲಯನಾಗಿ ॥ ೨ ॥ ತನು ದೃಶ್ಯವಾತ್ಮನೆದೃಶಿರೂಪು ತನು ಮಿಥ್ಯೆ । ಯೆನಿಪುದು ತಾನೆ ಸನ್ಮಾತ್ರನು ॥ ತನು ದುಃಖಪಿಂಡವರಿವೆ ಸುಖಮಯನಾಗಿ । ತನುವಿಗೆ ತನಗೆ ಮೇಳನವಿಲ್ಲ ॥ ೩ ॥ ತನುವಿನೊಡನೆ ಸಂಗವನುದಿನವಿಲ್ಲಾಗಿ । ತನುಧರ್ಮ ಕರ್ಮಂಗಳೊಡಗೂಟ ॥ ಇನಿತಿಲ್ಲವಾತ್ಮಂಗೆ ತಿಳಿದಂದು ಕೇಳೆನ್ನ । ಮನದನ್ನೆ ಮೈತ್ರೇಯಿ ಮುದದಿಂದ ॥ ೪ ॥ ದೇಹವನಿದನನ್ಯದೇಹದಂದದೊಳು ಸಂ । ದೇಹವಿಲ್ಲದೆ ಕಾಣಲರಿಯದ ॥ ಮೋಹಿತಂಗಹುದೆ ನಿಜಾನಂದವದು ಕೋಟಿ । ದೇಹದೊಳುಗ್ರತಾಪಸನಾಗೆ ॥ ೫ ॥

ದೇಹಾತ್ಮರ್ಗನ್ಯೋನ್ಯ ವಿಲಕ್ಷಣತ್ವ ನಿರೂಪಣೆ—ಸೂತ್ರ ೪ಕ್ಕೆ ಪದ ೨೨.

---

ಸೂತ್ರ ॥ ತನುಗುಣವಾತ್ಮನಿಗಿಲ್ಲವೆಂತೆಂದೊಡ ।
ತನುವಾಗಿ ಪರತನುಗುಣದಂತೆ ॥

ಪದ ॥ ದೇಹಾದಿಯನು ಕಾಣ್ಬನಾ ದೇಹಾದಿಕವಲ್ಲತ್ತು । ದೇಹಾದಿಗಳ ಗುಣ ಕರ್ಮವು ॥ ಊಹಿಸಿ ನೋಡು ಮೈತ್ರೇಯಿ ನೀನಿಂತು ನಿ । ರ್ದೇಹಿಯಾದರಿವಿಗಿಲ್ಲಿದು ತಥ್ಯ ॥ ೧ ॥ ತೋರುದನರಿವನಾ ತೋರುವುದಲ್ಲೆಂತು । ಬೇರೆ ಚಿದ್ರೂಪನಾದುದರಿಂದ ॥ ತೋರುವೀ ಸಕಲ ಜಡಂಗಳಧರ್ಮವಾ । ಬೇರೆನಿಸಿದ ಚಿತ್ತಿಗೆನಲುಂಟೆ ॥ ೨ ॥ ತನು ಧರ್ಮವಾತ್ಮನಿಗಿಲ್ಲವಾವನುವಿಂದ । ತನುವಾಗಿ ತಿಳಿ ದೇವದತ್ತನ ॥ ತನುಧರ್ಮವದು ಯಜ್ಞದತ್ತನಿಗಿಲ್ಲನೆಂ । ದೆನಿಪಂತೆ ಮೈತ್ರೇಯಿ ನಿಜದಿಂದ ॥ ೩ ॥ ತನುವಲ್ಲವಿಂದ್ರಿಯವಲ್ಲವಾ ಮತಿಮುಖ್ಯ । ವೆನಿಪ ಕರಣವಲ್ಲವಾತ್ಮನು ॥ ಅನಿತಕ್ಕೆ ಸಾಕ್ಷಿಕನಾದುದರಿಂದೆ ತ । ಜ್ಜನಿತ ಧರ್ಮಂಗಳಾತ್ಮನವಲ್ಲ ॥ .... .... .... ॥ ೪ ॥

ಆತ್ಮಂಗೆ ತನುಧರ್ಮ ನಿರಾಕರಣ ನಿರೂಪಣೆ—ಸೂತ್ರ ೫ಕ್ಕೆ ಪದ ೩೧.

ಸೂತ್ರ ॥ ತೋರುವ ತನುವನು ತಾನೆಂದು ಬಗೆದೊಡೆ ।
ತೋರುವೆಲ್ಲವನು ತಾನೆನಲಕ್ಕು ॥

ಪದ ॥ ವ್ಯೋಮವನನಿಲನ ಪಾವಕ್ನಿ ಜಲವನು । ಭೂಮಿಯನಬಲೆ ನೀನೆಂದೊಡೆ ॥ ನಾಮಾದಿವಿಡಿದು ಕಾಣಿಸಿಕೊಂಬ ಜಗವಿದೆ । ಲ್ಲೇಮಾತು ನೀನೆಂದೆನಿಸುತಿರ್ಕು ॥೧॥ ನೀನಲ್ಲದೊಡಲನು ನೀನೆಂದು ತಿಳಿದೊಡೆ ಮಾನಿನಿ ಘಟ ಪಟಾದಿಗಳನು ॥ ನೀನೆಂದು ಬಗೆಯ ಬೇಹುದು ಜಡ ದೃಶ್ಯತೆ । ತಾನವರೊಳು ಸಮವಹುದಾಗಿ ॥ ೨ ॥ ತಾನಲ್ಲದೊಡಲನು ತಾನೆಂದು ತಿಳಿಯಲಾ । ಶ್ವಾನ ಖರಾದಿಕ ತನುವದು ॥ ತಾನೆಂಬುದೇಕಾಗ ದಿಹುದು ಪೇಳಂಗನೆ । ಹಾನಿ ವೇಣಿದಿಂದ ಪೆರತುಂಟೆ ॥೩॥ ಅನ್ನ ಪಾನದಿ ನಾದ ತನುವ ನೀನೆಂದೆನ್ನ । ಲನ್ನ ಪಾನಂಗಳಿಂದುದಿಸಿದ ॥ ಭಿನ್ನರೂಪಿನ ಮಲ ಮೂತ್ರ ರಕ್ತಾದಿಗ । ಳಂ ನೀನೆಂಬುದು ನಿನಗಾಗದೆ ॥ ೪ ॥ ತನು ಪುಟ್ಟಿ ದೊಡೆ ನೀನು ಜನಿಸಿದೆನೆನೆ ದಿಸ । ದಿನದೊಳು ಶತಕೋಟಿ ತನುಗಳು ॥ ಜನಿ ಸುವವನಿತೆಲ್ಲರೊಳು ನೀರೆ ನೀನು ಸಂ । ಜನಿಸಿದೆನೆಂದೆಂಬುದಲಳವೆ ॥ ೫ ॥ ತನುವಿನ ಮರಣವಿದನು ನಿನಗೆನೆ ಕೋಟಿ । ತನುವಳಿವವು ದಿನ ದಿನದೊಳು ॥ ಅನಿತರ ಮರಣವೆಲ್ಲವನು ಕೇಳಿಲೆಕಾಂತೆ । ನಿನಗೆಂಬುದೇಕಾಗದಿರ್ಪುದು ॥೬॥

ದೇಹಾತ್ಮಭಾವ ನಿರಾಕರಣ ನಿರೂಪಣೆ–ಸೂತ್ರ ೭ಕ್ಕೆ ಪದ ೩೭.

---

ಸೂತ್ರ ॥ ನಿನ್ನದಲ್ಲದ ತನು ಮೊದಲಾದವನು ನಿನ್ನ ।
ವೆನ್ನಲೆಲ್ಲವು ನಿನ್ನವೆನವೇಳ್ಕು ॥

ಪದ ॥ ಇಲ್ಲದ ಕುಲ ಗೋತ್ರವನು ನೀರೆ ನಿನಗೆಂಬೊ । ಡೆಲ್ಲ ಜಾತಿಯ ಕುಲ ಗೋತ್ರವ ॥ ನಿಲ್ಲದೆ ನಿನಗೆಂಬುದಹುದು ದೇಹಾದಿಕ । ದಲ್ಲಿ ನೀನೆಂತು ಭಾವಿಸಿದಂತೆ ॥ ೧ ॥ ಪುಸಿ ನಿನಗಿಲ್ಲದ ಪೆಸರಿಗೋಯೆಂಬೊಡೆ । ಪೆಸರನಂತಂಗಳುಂಟವಕೆಲ್ಲ ॥ ಸಸಿನೆ ನೀನೋಯೆಂಬುತಿರಬೇಹುದಲಸದೆ । ವಸುಧೆಯೊಳುನ್ಮಾದಿನಸನಂತೆ ॥ ೨ ॥ ತನುಗುಣ ಧರ್ಮ ಕರ್ಮವನೆಲ್ಲವನು ನಿನ್ನ । ವೆನುತಿರ್ಪುದಿಂತು ತೋರ್ಪಖಿಳರ ॥ ತನು ಗುಣ ಧರ್ಮ ಕರ್ಮವ ನೆಲ್ಲವನು ನಿನ್ನ । ವೆನುತಿರು ನೀರೆ ನೀನುಸುರದೆ ॥ ೩ ॥ ನಿನ್ನವಲ್ಲದವನು ನಿನ್ನವೆಂದೆಂಬೊಡೆ । ನಿನ್ನವೆಂದೆನ್ನು ಲೋಕದೊಳಂತು ॥ ಭಿನ್ನರೂಪಿಂ

ಜೀವರೆನಿತುಂಟು ಜಗದೊಳು ॥ ಅನಿತೆಲ್ಲವನು ವಿಪ್ರರೆನವೇಳ್ಕುವುದರಿಂದೆ । ತನು ಜೀವರನು ವಿಪ್ರರೆನಲಿಲ್ಲ ॥ ೭ ॥ ಭಾವ ಭೇದಗಳಿಂತು ತೋರುವ ವಿಪ್ರಾದಿ । ಭಾವನೆ ತಾನುವಿಾ ಜಗವೆಂಬ ॥ ಭಾವದ ಬಳಕೆ ಭಾವಕಿ ಭಾವಿಸಲು ಪುಸಿ । ಭಾವಾತೀತನು ತಾನೆ ಪರಮಾತ್ಮ ॥ ೮ ॥ ನಿನಗೆಂತು ನಿತ್ಯ ನೈಮಿತ್ತಿಕ ಕಾಮ್ಯಾದಿ । ಗಣಿಸಿಪ ಕರ್ಮದೊಳಧಿಕಾರವು ॥ ಜನನವಿಲ್ಲದ ನಿಷ್ಕಳಾತ್ಮನಿಗಾಶ್ರಮು । ವಿನಿತಿಲ್ಲವಾಗಿ ತದ್ವಿಧಿ ಮಿಥ್ಯೆ॥ ॥ ೯ ॥

ಆತ್ಮಂಗೆ ಜಾತ್ಯಾಶ್ರಮು ಧರ್ಮ ನಿರಾಕರಣ ನಿರೂಪಣೆ–
ಸೂತ್ರ ೮ಕ್ಕೆ ಪದ ೫೪.

---

ಸೂತ್ರ ॥ ಗಗನದಂತಿರೆ ನಿರವಯುವನೆನಿಸುವಾತ್ಮ ।
ನಿಗೆ ಬಂಧ ಮೋಕ್ಷದ ವಿಧಿಯುಂಟೆ ॥

ಪದ ॥ ನಿರವಧಿ ನಿರುಪಮ ನವಿಕಾರಿ ನಿರ್ಗುಣ । ನಿರುಪಾಧಿ ನಿರ್ಮಲನೆನಿಸುವ ॥ ಪರಮಾತ್ಮಕನು ನಿನಗಾವಾವ ತೆರದಿಂದೆ । ದೊರಕೊಳ್ವಲರಿಯದು ಭವಬಂಧ ॥ ೧ ॥ ನಿನ್ನಿಂದ ಭವಬಂಧವೆನ್ನದಿರನ್ಯರಿಂ । ದೆನ್ನದಿರ್ನಿಜಸು ಸುಖಾದ್ವಯು ॥ ಚಿನ್ನಿಧಿಯಾಗಿ ನಿಷ್ಕಳನಾಗಿ ಪೂರ್ಣತೆ । ಯಿಂ ನಿತ್ಯನಾಗಿರ್ಪ ಕತದಿಂದ ॥ ೨ ॥ ತನ್ನಿಂದ ಬಂಧನೆಂದೊಡೆ ತನುರಹಿತನ । ಭಿನ್ನಾತ್ಮಕನು ತಾನೆ ತನ್ನನು ॥ ತನ್ನಿಂದೆ ಕಟ್ಟಿಕೊಳ್ಳಲು ಶಕ್ಯವಲ್ಲಾಗಿ । ತನ್ನಿಂದ ಬಂಧವೆಂದೆನಲಿಲ್ಲ ॥ ೩ ॥ ಅನ್ಯರಿಂದೆಂಬೊಡನಸ್ಯಾದ್ವಂ ನಾತ್ಮನೊ । ಳನ್ಯರಿಲ್ಲಾಗಿ ಕಟ್ಟುವರಿಲ್ಲ ॥ ಧನ್ಯೆ ಮೈತ್ರೇಯಿ ನೀನಿಂತು ವಿಚಾರಿಸ । ಲನ್ಯರಿಂದವೆ ಬಂಧವೆನಲಿಲ್ಲ ॥ ೪ ॥ ಜಡ ಮೂರ್ತಗಳೊಳು ಬಂಧವದನೊಪ್ಪಲಹುದು ಪೇ । ಳ್ಪಿಡಿದು ನಿನ್ನನು ಹೆಗಗ್ಗೆಯನು ॥ ಜಡಿದು ಕಟ್ಟಿದರಾರು ಚಿದಮೂರ್ತ ಪರಿಪೂರ್ಣ । ದೊಡಲು ನೀನದರಿನೆಲ್ಲವು ಮಿಥ್ಯೆ ॥ ೫ ॥ ಆರು ನಿನ್ನಯ ಕಾಲ್ಗೆ ಕಾರಣವುಳಿದವಿ । ಚಾರದಿಂದವೆ ಸಂಕಲೆಯನಿಕ್ಕಿ ॥ ಭೂರಿ ದುಃಖವನುಣಿಸುವರಿದು ತಿಳಿ ಮಿಥ್ಯೆ । ಯಗಾರ್ಗ್ಗಿ ನೀನದ್ವಯನಹುದಾಗಿ ॥ ೬ ॥ ಪುಸಿಯಾಗಿ ಭವಬಂಧವದು ಮೋಕ್ಷವೆಂಬುದು । ಪುಸಿ ನಿನಗಿದು ನಿನ್ನ ಭ್ರಮೆಯಿಂದ ॥ ಪಸರವಿಟ್ಟಿಸೆವುದು ನಿಜದಂತೆ ನಾಡೆ ಭಾ । ವಿಸಲಿದೆಲ್ಲವು ಮಿಥ್ಯೆ ಯೆನಿಪುದು ॥ ೭ ॥ ಆದರಿಂದೆ ಬಂಧಶಾಸ್ತ್ರದ ಮುಕ್ತಿ ಪೇಳ್ವಶಾ । ಸ್ತ್ರದ ಗತಿದ್ವಯ

ದುದಿಸಿದ ವಿಷಯಂಗಳ । ನಿನ್ನು ನೀನಾಲಸ್ಯವಿಲ್ಲದೆ ॥ ೪ ॥ ಮಾಡದ ಕರ್ಮವ ಮಾಡಿದೆನೆಂಬೊಡೆ । ನಾಡೆಲ್ಲರೆಸಗಿದ ಕರ್ಮವ ॥ ಮಾಡಿದೆನೆನ್ನು ನೀನನುದಿನ ವವರಲ್ಲಿ । ಮಾಡಿದೆನೆನೆ ಹಾನಿ ನಿನಗುಂಟೆ ॥ ೫ ॥ ತನು ವಿಷಯಂಗಳನನು ಭವಿಸುವನೆ ನೀ । ನನುಭವಿಸುವೆನೆಂಬೊಡಿದಿರಿಟ್ಟ ॥ ತನು ವಿಷಯಾದಿಗಳನು ಭವವೆಲ್ಲವು । ವನಿತೆ ನೀನರಿ ನಿನ್ನ ವೆನಿಸುಗು ॥೬॥ ತನುವಿಂದ್ರಿಯಾಳಿ ಮಾನಸ ವಿವು ದುಃಖವ । ನನುಭವಿಸುತಮಿರ್ಪವಲ್ಲದೆ ॥ ವನಿತೆ ನಿನ್ನನುಭವವಲ್ತು ನೀನವಕೆ ಬೇ । ರೆನಿ ಸಿರ್ಪಕತದಿನಿಂತಿದು ಸತ್ಯ ॥ ೭ ॥ ಮನವದು ನೀನಲ್ಲವದ ರನುಭವ ದುಃಖ । ವನು ನಿನಗೆಂದು ನೀನರಿಪಡೆ ॥ ಮನವೆನಿತುಂಟು ಲೋಕ ದೊಳನಿತೆಲ್ಲರೊ । ಳನುಭವಿಸುವ ಬಾಧೆ ನಿನಗಕ್ಕು ॥ .... ॥ ೮ ॥

ಆತ್ಮಂಗೆ ಗೋತ್ರಾದಿ ಭ್ರಾಂತಿ ವಿಲಕ್ಷಣತ್ವ ನಿರೂಪಣೆ-ಸೂತ್ರ೧ಕ್ಕೆ ಪದ ೪೫.

---

ಸೂತ್ರ ॥ ಇಲ್ಲದ ಜಾತ್ಯಾದಿಗಳು ತನ್ನ ವೆನೆ ತೋರು ।
ವೆಲ್ಲ ಜಾತ್ಯಾದಿ ತನ್ನವೆನಿಕ್ಕು ॥

ಪದ ॥ ಜನನ ಮರಣವಿವು ತನಗುಂಟೆ ರೇತದ । ಹನಿಯೊಳಾತ್ಮನು ಸಿಲುಕುವನಲ್ಲ ॥ ತನುವಿರಹಿತ ನಪರಿಮಿತ ನಖಂಡಿತ । ನನುಪಮಾದ್ವೈತ ನಚಲನಾಗಿ ॥ ೧ ॥ ಕನಸಿನೊಳರಸಾಗಿ ಮುಗುಳೆ ತನ್ನಯ ಶಿರ । ವನು ನೀಗಿ ದುದನು ಕಾಣ್ಬಂದದಿ ॥ ಜನನವಾದುದು ಮೃತಿ ತನಗಾದುದೆಂಬ ಭಾ । ವನೆ ವಿಚಾರಿಸಿ ನೋಡೆ ಪುಸಿಯಕ್ಕು ॥ ೨ ॥ ಜನನವಿಲ್ಲದವಂಗೆ ತನುವುಂಟೆ ತನು ವಿಲ್ಲ । ದನಿಗೆ ವರ್ಣಾಶ್ರಮ ಧರ್ಮವು ॥ ಇನಿತನುಸುರಲುಂಟೆ ತಿಳಿದು ನೋಡಲ್ಕೆ ಮಾ । ನಿನಿ ಸಂವಿದಾತ್ಮನೊಳವು ಮಿಥ್ಯೆ ॥ ೩ ॥ ತನು ವಿಪ್ರನೊ ಜೀವಾತ್ಮನೆ ವಿಪ್ರನೊ ಮೇಣು । ತನುಜೀವರುಗಳೊಂದಿ ವಿಪ್ರನೊ ॥ ತನುವಿ ಗಾತ್ಮದಿಗೆ ಕೇಳ್ಃಭಯಕ್ಕೆ ವಿಪ್ರತ್ವ । ವನು ಪೇಳಲರಿದಾಗಿ ಭ್ರಮೆಯದು ॥೪॥ ಭೂತ ಸಂಜಾತಮಾದೀ ತನುವನು ವಿಪ್ರ । ಜಾತಿಯೆಂದೊಡೆ ಭೂತಚಯ ದಿಂದೆ ॥ ಜಾತಮಾದಖಿಳ ಜಾತಿಯ ತನುಗಳು ವಿಪ್ರ । ಜಾತಿಗಳಹವದು ಘಟಿಸದು ॥೫॥ ಜೀವಾತ್ಮನೆ ವಿಪ್ರನೆನೆ ಬಳಿಕಲ್ಲಿ ಕೇ । ಳೀ ವಿಶ್ವದೊಳು ಬಹುವಿಧವಾದ ॥ ಜೀವರೆಲ್ಲರು ವಿಪ್ರರೆನಬೇಹುದದರಿಂದೆ । ಜೀವನೆ ವಿಪ್ರ ನಲ್ಲಿದು ಸತ್ಯ ॥ ೬ ॥ ತನು ಜೀವರೊಂದು ಗೂಟವೆ ವಿಪ್ರನೆಂದೊಡೆ । ತನು

ಜೀವರೆನಿತುಂಟು ಜಗದೊಳು || ಅನಿತೆಲ್ಲವನು ವಿಪ್ರರೆನವೇಳ್ಕುಮದರಿಂದೆ | ತನು ಜೀವರನು ವಿಪ್ರರೆನಲಿಲ್ಲ || ೭ || ಭಾವ ಭೇದ ಾಳಿಂತು ತೋರುವ ವಿಪ್ರಾದಿ | ಭಾವನೆ ತಾನುಮೀ ಜಗವೆಂಬ || ಭಾವದ ಬಳಕೆ ಭಾವಕಿ ಭಾವಿಸಲು ಪುಸಿ | ಭಾವಾತೀತನು ತಾನೆ ಪರಮಾತ್ಮ || ೮ || ನಿನಗೆಂತು ನಿತ್ಯ ನೈಮಿತ್ತಿಕ ಕಾಮ್ಯಾದಿ | ನಿಸಿಪ ಕರ್ಮದೊಳಧಿಕಾರವು || ಜನನವಿಲ್ಲದ ನಿಷ್ಕಳಾತ್ಮನಿಗಾಶ್ರಮ | ವಿನಿತಿಲ್ಲವಾಗಿ ತದ್ವಿಧಿ ಮಿಥ್ಯೆ || || ೯ ||

ಆತ್ಮಂಗೆ ಜಾತ್ಯಾಶ್ರಮ ಧರ್ಮ ನಿರಾಕರಣ ನಿರೂಪಣೆ–
ಸೂತ್ರ ೮ಕ್ಕೆ ಪದ ೫೪.

---

ಸೂತ್ರ || ಗಗನದಂತಿರೆ ನಿರವಯವನೆನಿಸುವಾತ್ಮ |
ನಿಗೆ ಬಂಧ ಮೋಕ್ಷದ ವಿಧಿಯುಂಟೆ ||

ಪದ || ನಿರವಧಿ ನಿರುಪಮ ನವಿಕಾರಿ ನಿರ್ಗುಣ | ನಿರುಪಾಧಿ ನಿರ್ಮಲನೆನಿಸವ || ಪರಮಾತ್ಮಕನು ನಿನಗಾವಾವ ತೆರದಿಂದೆ | ದೊರಕೊಳ್ಳಲರಿಯದು ಭವಬಂಧ || ೧ || ನಿನ್ನಿಂದ ಭವಬಂಧವೆನ್ನದಿರನ್ಯರಿಂ | ದೆನ್ನದಿರ್ನೀನು ಸುಖಾದ್ವಯ || ಚಿನ್ನಿಧಿಯಾಗಿ ನಿಷ್ಕಳನಾಗಿ ಪೂರ್ಣತೆ | ಯಿಂ ನಿತ್ಯನಾಗಿರ್ಪ ಕತದಿಂದ || ೨ || ತನ್ನಿಂದ ಬಂಧನೆಂದೊಡೆ ತನುರಹಿತನ | ಭಿನ್ನಾತ್ಮಕನು ತಾನೆ ತನ್ನನು || ತನ್ನಿಂದೆ ಕಟ್ಟಿಕೊಳ್ಳಲು ಶಕ್ಯವಲ್ಲಾಗಿ | ತನ್ನಿಂದ ಬಂಧವೆಂದೆನಲಿಲ್ಲ || ೩ || ಅನ್ಯರಿಂದೆಂದೊಡನನ್ಯಾದ್ವಯಂ ನಾತ್ಮನೊ | ಳನ್ಯರಿಲ್ಲಾಗಿ ಕಟ್ಟುವರಿಲ್ಲ || ಧನ್ಯೆ ಮೈತ್ರೇಯಿ ನೀನಿಂತು ವಿಚಾರಿಸ | ಲನ್ಯರಿಂದವೆ ಬಂಧವೆನಲಿಲ್ಲ || ೪ || ಜಡ ಮೂರ್ತದೊಳು ಬಂಧವದನೊಪ್ಪಲಹುದು ಪೇ | ಳ್ಪಿಡಿದು ನಿನ್ನನು ಹೆಸಗೈಯನು || ಜಡಿದು ಕಟ್ಟಿದರಾರು ಚಿದಮೂರ್ತ ಪರಿಪೂರ್ಣ | ದೊಡಲು ನೀನದರಿನೆಲ್ಲವು ಮಿಥ್ಯೆ || ೫ || ಆರು ನಿನ್ನಯ ಕಾಲ್ಗೆ ಕಾರಣಮುಳಿದವಿ | ಚಾರದಿಂದವೆ ಸಂಕಲೆಯನಿಕ್ಕಿ || ಭೂರಿ ದುಃಖವನುಣಿಸುವರಿದು ತಿಳಿ ಮಿಥ್ಯೆ | ಯಾರ್ಸೆ ನೀನದ್ವಯನಹುದಾಗಿ || ೬ || ಪುಸಿಯಾಗಿ ಭವಬಂಧವದು ಮೋಕ್ಷವೆಂಬುದು | ಪುಸಿ ನಿನಗಿದು ನಿನ್ನ ಭ್ರಮೆಯಿಂದ || ಪಸರವಿಟ್ಟಿಸೆವುದು ನಿಜವಂತೆ ನಾಡೆ ಭಾ | ವಿಸಲಿದೆಲ್ಲವು ಮಿಥ್ಯೆ ಯೆನಿಪುದು || ೭ || ಅದರಿಂದೆ ಬಂಧಶಾಸ್ತ್ರದ ಮುಕ್ತಿ ಪೇಳ್ವಶಾ | ಸ್ತ್ರದ ಗತಿದ್ವಯ

ಮಿವು ತನ್ನೊಳು ॥ ಪದವಿಡಲರಿಯವೆಂಬುದನರಿದಾತನೆ । ಪದುಳದಿಂದವೆ ತನ್ನ ನರಿದಾತ ॥೮॥ ಪುಸಿ ಕನಸಿನ ಬಂಧವದು ಪುಸಿ ಮೋಕ್ಷವಾ । ಪುಸಿ -ಯಾದ ಕಲ್ಪಿತ ಜೀವಂಗೆ ॥ ಪೆಸರಿಡಲಾವಾವ ತೆರನಾದೊಡೇನದು । ಪುಸಿ ನಿಜಾತ್ಮನೆ ನಿತ್ಯ ಮುಕ್ತನು ॥೯॥ ವೇದವೀ ಮೂರು ಕಾಂಡದೊಳಾವ ತೆರ ದಿಂದೆ । ಬೋಧಿಸಲೇನು ವಿಚಾರಿಸೆ ॥ ಭೇದರೂಪಿನ ಬಂಧ ಮೋಕ್ಷವೆಂಬವು ಪುಸಿ । ವಾದವೇನದ್ವೈತ ಪದದಲ್ಲಿ ॥ .... .... ॥೧೦॥

ಆತ್ಮಂಗೆ ಬಂಧಾದಿ ನಿರಾಕರಣ ನಿರೂಪಣೆ-ಸೂತ್ರ ೯ಕ್ಕೆ ಪದ ೬೪.

---

ಸೂತ್ರ ॥ ತಾನಾಗಿ ತೋರ್ಪುದು ಜಗವಿದು ದೇಹಾದಿ ।
ತಾನೆಂಬಧ್ಯಾಸದ ಬಲದಿಂದೆ ॥

ಪದ ॥ ಕುಂದದೆ ದೇಹಿನಾನೆಂದು ಸಾವಯವನಾ । ನೆಂದು ತೋರುವ ತನ್ನಭ್ರಮೆಯಿಂದೆ ॥ ಪೊಂದಿ ಕಾಣಿಪುದು ಜಗತ್ರಯವ್ವೆದೆ ತ । ನ್ನಂದದಿಂದವೆ ನೋಡಿದವಿಚಾರ ॥೧॥ ತನ್ನ ತದ್ಭ್ರಮೆಯಿಂದೆ ಮುನ್ನವೆ ಜಗವಿದು । ತನ್ನಂತೆ ತೋರ್ಪುದು ದಿಟವೆನೆ ॥ ತನ್ನನೆ ಪುಸಿಯೆಂದು ತಿಳಿದಾ ಕ್ಷಣದೊಳದು । ನನ್ನಿ ಮಿಥ್ಯಾತ್ಮಕವೆನಿಪುದು ॥೨॥ ಕನಸಿನ ನೇಣಹಾವಿನ ಕೊಡಿನತಸ್ಕ । ರನ ಮರೀಚಿಕೆಯೊಲು ತ್ರಿಜಗವು ॥ ಅನುದಿನವರಿಯೆ ತನ್ನೊಳು ಮಿಥ್ಯೆಯೆಂದು ಕಂ । ಡನೆ ದಿವ್ಯಯೋಗಿ ಭುವನದೊಳು ॥೩॥ ತನುವಿದು ತನ್ನೊಳು ಸತಿ ಮಿಥ್ಯಾಧ್ಯಾಸವೆಂ । ದೆನಿಪುದು ರಜ್ಜುಸರ್ಪನ ಪೋಲು ॥ ತನುಧರ್ಮವದು ಪರೀಕ್ಷಿಸಲು ಸತ್ಯಾಧ್ಯಾಸ । ವೆನಿಪುದು ದ್ವಿಜನ ದ್ವಿಜತೆ ಯಂತೆ ॥೪॥ ಇತರೇತರಾಧ್ಯಾಸವೆನಿಪುದು ತನ್ನೊಳ್ಪ್ರ । ಕೃತಿಯಾ ಪ್ರಕೃತಿ ಯೊಳಿರಲು ತಾನು ॥ ರತಿಯಿಂದೆ ಕೇಳೆಂದು ಕಾಂತ ಚಂದ್ರಮನ ಸು । ಪ್ರತಿ ಬಿಂಬ ವೆರಡರೊಂದಿಕೆಯಂತೆ ॥೫॥ ಇತರಾಧ್ಯಾಸವೆನಿಪುದು ನೋಡೆ ತನ್ನೊಳ್ಪ್ರ । ಕೃತಿ ತಾನೆ ಪೊಳೆದು ಕಾಣಿಸುವುದು ॥ ಮತಿವಂತೆ ತಿಳಿ ಮಣಿ ಯೊಳು ವರ್ಣವೆಂತಂತೆ ಸತಿ ಮಿಥ್ಯಾಧ್ಯಾಸವಿಂತಿವು ನಾಲ್ಕು ॥ ॥೬॥

ಆತ್ಮಂಗೆ ದೇಹಾದಿಗಳಧ್ಯಾಸ ನಿರೂಪಣೆ-ಸೂತ್ರ ೧೦ಕ್ಕೆ ಪದ ೭೦.

—:o:—

ಸೂತ್ರ ॥ ಅತ್ಯಂತಾಭಾವವೀ ಜಗವೆಂತು ತನ್ನಲ್ಲಿ ।
ವೃತ್ತಿಕೆಯೊಳು ತೋರ್ಪ ಘಟದಂತೆ ॥

ಪದ ॥ ಈ ವಿಶ್ವವನು ಪ್ರಾಗಭಾವವಾ ಪ್ರಧ್ವಂಸಾ । ಭಾವವನ್ನಿತರೇತರಾಭಾವ ॥ ಭಾವೆ ಕೇಳತ್ಯಂತಾಭಾವವೆಂಬೀ ನಾಲ್ಕು । ಭಾವವನುಳ್ಳುದೆಂದರಿವುದು ॥ ೧ ॥ ಘಟದಂತೆ ತೋರ್ಕೆಗೆ ಮೊದಲಿಲ್ಲ ಘಟವಿಂತು । ಘಟವಾಗಿ ಕೆಟ್ಟಬಳಿಕದಿಲ್ಲ ॥ ಘಟವಿಲ್ಲವದು ವೃತ್ತಿಕೆಗೆ ಬೇರೆ ತಾನೊಂದು । ಘಟವಿಲ್ಲವದರಿಂದೆ ಪುಸಿದೋರ್ಕೆ ॥ ೨ ॥ ತೋರುವಲ್ಲಿಯು ಮಿಂತು ತೋರದಲ್ಲಿಯು ಮಿನ್ನು । ತೋರಿ ಕೆಟ್ಟಲ್ಲಿಯು ಘಟವಿದು ॥ ಬೇರಾಗಿ ವೃತ್ತಿಕೆಯಿಂದೆ ತೋರದು ಸದಾ । ತೋರುತಿರ್ಪುದು ವೃದ್ವಿಷಯುವೊಂದೆ ॥೩॥ ಇಲ್ಲದುದಕ್ಕೆ ತಾನಿಲ್ಲವದುತ್ಪತ್ತಿ । ಯುಳ್ಳುದುಂಟಾಗಿಯುದಕೆ ಮತ್ತೆ ॥ ಇಲ್ಲವೆಂದೆಂದು ಜನನ ಹಾನಿಗಳುವೃದು । ಪಲ್ಲವಪಾಣಿ ನಂಬಿದು ಸತ್ಯ ॥ ೪ ॥ ಆದರಿಂದೆ ವೃತ್ತಿಕೆಯೊಳು ತೋರ್ಪ ಘಟವಿಲ್ಲ । ವದು ಗಗನಾರವಿಂದದ ವೋಲು ॥ ಆದು ಮತ್ತೆ ತೋರದೆಂದೆಂದು ಮಿಂತರಿದಂಗೆ । ಸುದತಿ ಮೈತ್ರೇಯಿ ನೋಡಿದು ಸಿದ್ಧ ॥ ೫ ॥ ಘಟವೆಂತು ವೃತ್ತಿಕೆಯೊಳು ಘಟಸದವೋಲು । ದಿಟದಿಂದೆ ಜಗವಿದು ತನ್ನೊಳು ॥ ಘಟಸ ದತ್ಯಂತಾಭಾವವೆಯಾಗಿ ಕಾಂಚನ । ಘಟಕುಚೆ ತೋರುತಿರ್ಪುದು ಮಿಥ್ಯೆ ॥ ೬ ॥ ಉಳ್ಳಾತ್ಮನೊಳಗೆಂದುಮಿಲ್ಲದ ತ್ರಿಜಗವಿ । ದುಳ್ಳುವೋಲಿಹುದು ಚಿನ್ನದೊಳೆಂದು ॥ ಇಲ್ಲದ ಕಟಕ ಮಕುಟ ಮುದ್ರಿಕಾದಿಗ । ಳುಳ್ಳಂತೆ ತೋರುವ ಬಗೆಯಿಂದ ॥ .... .... ॥ ೭ ॥

ಆತ್ಮನಲ್ಲಿ ಜಗದಭಾವ ನಿರೂಪಣೆ–ಸೂತ್ರ ೧೧ಕ್ಕೆ ಪದ ೭.

---

ಸೂತ್ರ ॥ ಜಗವಿದು ಪುಸಿಯಾಗಿ ಕಾಣ್ಬವನುರೆ ಪುಸಿ ।
ಬಗೆಯುದರಿಂದೆ ಸರ್ವವು ಪುಸಿ ॥

ಪದ ॥ ಬ್ರಹ್ಮವಿವರ್ತವೆಂದೆನಿಸದು ಜಗವಿದು । ಬ್ರಹ್ಮದಕಾರ್ಯವೆಂದೆನಲಿಲ್ಲ ॥ ಬ್ರಹ್ಮವಿಲ್ಲಕ್ಷಣವೆನಲಿಲ್ಲವದು ತಾನು । ಬ್ರಹ್ಮಸ್ಥವೆನಿಸದು ಪುಸಿದೋರ್ಕೆ ॥ ೧ ॥ ಜಗದೊಳು ಸಾಕ್ಷಿ ದೃಷ್ಟಾಂತವನಾತ್ಮವಿ । ದ್ಯೆಗೆ ಪೇಳಬಾರದೇಕೆಂದೊಡೆ ॥ ಬಗೆಗೆ ಗೋಚರವಲ್ಲದನುಪಮಾದ್ವಯವದು । ಜಗವಿದತ್ಯಂತಾಭಾವವೆಯಾಗಿ ॥ ೨ ॥ ಎಂದುಮಿಲ್ಲದ ಜಗವನು ನಿಜವೆಂದು ನೀ । ನಿಂದು

ಬಗೆದ ಬಗೆಯದು ತಾನು ॥ ಅಂದವಲ್ಲದೆ ಪುಸಿಯಾಗಿ ಪೋಪುದು ತಿಳಿ। ದಂದು ನೀನದಕೆ ಸಾಕ್ಷಿಕನಲ್ತೆ ॥೩॥ ಜಗವಿದು ದಿಟವೆಂಬ ಬಗೆಯದೆ ಜೀವಾತ್ಮ। ಜಗವಿದೆಲ್ಲವು ನೋಡೆ ಪುಸಿಯೆಂಬ ॥ ಬಗೆಯಂತರಾತ್ಮನಾ ಬಗೆತನ್ನೊಳ್ಕಿಡೆ ತಾನೆ। ಬಗೆಗಗೋಚರನಾದ ಪರಮಾತ್ಮ ॥೪॥ ಉಳ್ಳ ವೃತ್ತಿಕೆಯೊಳಗಿಲ್ಲದ ದೇವತೆ। ಯುಳ್ಳಂತೆ ಮುಚ್ಚಿ ಮೋಹಿಸುವಂತೆ ॥ ಇಲ್ಲದ ತ್ರಿಜಗ ದ್ವೈತಾತ್ಮನೊಳು ತೋರ್ಪು। ದುಳ್ಳಂತೆ ನೆರೆ ವಿಚಾರಿಸಲುಂಟೆ ॥೫॥ ಜಗವಿಲ್ಲವದರಿಂದೆ ಜಗವ ಕಾಣ್ಬವನುಂಟೆ। ಜಗವನು ಕಂಡವನುಳ್ಳೊಡೆ ॥ ಮೃಗನೇತ್ರೆ ಪುಸಿಯೆಂದು ಪೇಳಲಹುದು ಪೇಳ್ವ। ಬಗೆದೋರದಾಗಿ ಕೇಳ್ವುದು ಮಿಥ್ಯೆ ॥೬॥ ಉಳ್ಳಂಬುನಿಧಿಜಲ ವಿಲ್ಲದ ತೆರೆ ನೊರೆ। ಗೆಲ್ಲಕ್ಕೆ ಮೂಲವೆನಿಸಿದಂತೆ ॥ ಇಲ್ಲದ ಸಕಲ ಜೀವರ ತೋರ್ಕೆಗಳಿಗೆ ತಾ। ನುಳ್ಳ ಪರಾತ್ಮನೆ ನಿಜವಕ್ಕು ॥ .... .... .... .... ॥೭॥

ಆತ್ಮನಲ್ಲಿ ಜೀವಾತ್ಮಭಾವ ನಿರೂಪಣೆ–ಸೂತ್ರ ೧೫ಕ್ಕೆ ಪದ ೮೪.

---

ಸೂತ್ರ ॥ ಸದಸದಾದಿಗಳಿಂದ ಪೇಳಬಾರದಜಗ।
ವಿದು ಮಿಥ್ಯೆ ರಜ್ಜುಸರ್ಪನವೋಲು ॥

ಪದ ॥ ಸತ್ತೆಂದು ಜಗವಿದಸತ್ತೆಂದು ಮೇಣ್ಸದ। ಸತ್ತೆಂದು ವಚಿಸಲಿಕಳವಲ್ಲ ॥ ಉತ್ತಮೆ ಕೇಳಿದು ಪುಸಿ ತನ್ನೊಳಿಂತುತೋ। ರಿತ್ತಹಿ ನೇಣಿನೊಳ್ಪೊಳೆವಂತೆ ॥೧॥ ನೀನಖಂಡಿತನು ನಿನ್ನೊಳಗುದಿಸದು ತನ್ನ। ತಾನೆ ತೋರದು ಜಡ ಜಗವಿದು ॥ ಮಾನಿನಿರನ್ನೆ ಮಿಥ್ಯಾತ್ಮಕವಹುದಿದ। ನೇನೆಂದು ಪೇಳುವಡರಿದಾರ್ಗೆ ॥೨॥ ಅದರಿಂದೆ ತೋರಿದ ಜಗವಿದು ಕನಸಿನಂ। ದದೊಳನಿರ್ವಚನೀಯವಲ್ಲದೆ ॥ ಸುದತಿ ಕೇಳಿದನು ಸದಾದಿಗಳಿಂದಾವ। ಚದುರನು ವಿಧಿಸಿ ನುಡಿಯಲಿಲ್ಲ ॥೩॥ ಇದು ಸತ್ತಾದೊಡೆ ಮೇಣಿಂತಿದಸತ್ತಾದೊಡೆ ಮೇಣಿಂ। ತಿದವೆಂದು ತನಗೆ ತೋರ್ಪುದೆ ಬಂಧ ॥ ಇದವೆಂಬ ತೋರಿಕೆಯುಳಿದುದೆ ಮೋಕ್ಷವೆಂ। ಬಿದು ವಿವೇಕಿಗಳೆಲ್ಲರನುಮತ ॥೪॥ ಇದು ಚೋದ್ಯವಲ್ಲವೆ ಮಾಯೆ ನೋಡಿದೊಡೆ ತೋ। ರ್ಪುದು ನೋಡದೊಡೆ ತೋರಲರಿಯದು ॥ ಅದರಿಂದೆ ಮಿಥ್ಯೆ ನೋಡಿದು ಸತ್ಯವೆಲೆ ಮೂಢ। ರಿದರಂದ ವರಿಯ ಲರಿವರೆಂತು ॥೫॥ ಮನುಜರಾ ಸ್ಥಾಣು ಚೋರನನೆಚ್ಚ

ಕೊಲುಗುವೆ । ಮುನಿದು ಗಂಧರ್ವರ ನಗರವ ॥ ಅನಲನಿ ನುರುಪಲರಿಗುವೆ ತಿಳಿಯದೆ ಮಾ । ನಿನಿ ಮಾಯೆಯನು ಬೇರೆ ಗೆಲಲುಂಟೆ ॥ .... ॥೬॥

ಜಗತ್ತಿನನಿರ್ವಚನೀಯತ್ವ ನಿರೂಪಣೆ-ಸೂತ್ರ ೧೩ಕ್ಕೆ ಪದ ೯೦-

---

ಸೂತ್ರ ॥ ನಿನ್ನ ಚಿದ್ಭ್ರಮೆ ನಿನ್ನ ಮರವೆಗರಿವಿಗೆ ಬೀ ।
ಜಂ ನೀನೆ ಪರಮಾತ್ಮನದರಿಂದೆ ॥

ಪದ ॥ ತನ್ನೊಳಿಲ್ಲದ ಬಗೆಯನು ತಾನೆ ಕಲ್ಪಿಸಿ । ತನ್ನನುಳಿದು ತಾನೆ ಶೋಕಿಸಿ ॥ ತನ್ನ ತಾನರಿದು ತಾನುಳಿವ ದಶಮನಂತೆ । ನಿನ್ನೊಳು ತೋರ್ಪು ದೆಲ್ಲವು ಮಿಥ್ಯೆ ॥೧॥ ಅದರಿಂದೆ ಸತ್ಯನೀನದರಿಂ ಸ್ವಯಂಜ್ಯೋತಿ । ಯದ ರಿಂದೆ ನಿತ್ಯಾಪರೋಕ್ಷನು ॥ ಆದರಿಂದರಿಯೆನು ನಾನಾರೊ ಸೋಹಮೆನಿಪ್ಪು । ದಿದು ನಿನ್ನೊಳೌಪಚಾರಿಕವ್ಯೆಸೆ ॥೨॥ ತನುವಿನೊಳ್ವಿಷಯವನನುಭವಿಸುವ ನಾರೆಂ । ದನಿಮಿತ್ತವಹ ನಿನ್ನ ಭ್ರಮೆಯಿಂದೆ ॥ ಜನಿಸಿತಾತ್ಮವಿಚಾರವದರಿಂದೆ ನಿನಗೆ ಕೇಳ್ । ಘನತರ ಪದವಳವಟ್ಟುದು ॥೩॥ ತನುವೊ ಬುದ್ಧೀಂದ್ರಿಯ ನಿಚಯವೊ ಬಳಿಕಲಾ । ಮನವೊ ಮೇಣರಿವ ಚಿದಾತ್ಮನೊ ॥ ವನಿತೆ ಕೇಳ್ ಕೋಹಮೆನಿಪ ಬಗೆವಿಡಿದು ನೀ । ನನಿತು ಚಿಪ್ಭ್ರಮೆಯ್ಯೆಸೆ ನಿಜವಲ್ಲ ॥೪॥ ಪೊರೆಯೆ ನೀನವರೊಡನನುದಿನವೆಲ್ಲಿಯು । ನಿರಹಂಕಾರನು ನಿರ್ವಿಷಯಿ ನೀನು ॥ ಪರಮ ವಿರಕ್ತನತ್ಯಂತ ಶುದ್ಧನು ಪರಾ । ತ್ಪರ ಬೊಮ್ಮ ಬೋಧ ಸ್ವರೂಪನು ॥೫॥ ಮರದವೋಲ್ ತೋರಿತಾ ಮರವೆ ನಿನ್ನೊಳು ಮಿಥ್ಯೆ । ಯರಿವು ನಿನ್ನೊಡಲಾದ ಕತದಿಂದ ॥ ಒರಿದೆ ಕಲ್ಪಿತವ್ಯೆಸೆ ನಿಖಿಳವೆಲ್ಲವು ನೀನು । ಮರೆಯೆ ನಿನ್ನನು ಸದಾ ದೃಶಿಮಾತ್ರ ॥೬॥ ನಿರುಪಾಧಿಕನು ನಿಷ್ಕ್ರಿ ಯನು ನಿರ್ವಿಕಲ್ಪನು । ನಿರುಪಮನಜ್ಞಾನ ರಹಿತನು ॥ ಪರಿಪೂರ್ಣನದ್ವ ಯನಚಲಿತಾತ್ಮನು ಸುಖ । ಭರಿತನು ನೀನೆ ಕೇಳ್ಪರಮಾತ್ಮ ॥೭॥ ಅದ ರಿಂದೆ ತತ್ತ್ವಮಸೀಶಿಯೆಂಬುದು ಸತ್ಯ । ಪದವೆನಿಪುದು ಪೂರ್ವ ಪಕ್ಷಕ್ಕೆ ॥ ಪುದಿದು ನೀನಾನೆಂಬುದುಂಟೆ ಪರೀಕ್ಷಿಸೆ । ಪದಪಿಂದೆ ವಾಕ್ಯಾರ್ಥ ಬೋಧಕ್ಕೆ ॥೮॥ ಅರಿವ ನಿನ್ನನು ನೀನೆ ಮರೆದೆನೆಂಬುದು ಭ್ರಾಂತಿ । ಪೊರಗೆ ಸದ್ಗುರು ಬೋಧೆಯೊಳು ತೋರೆ ॥ ಮರೆಯುದರಿವ ನಿನ್ನ ನೀನರಿದಾಗಳೆ । ಮರವೆ ಲಯಿಪುದು ನೀನು ಸುಖಮಿರ್ಪೆ ॥೯॥ ರವಿಯಿಂದೆ ರವಿಯ ನಿಂದುವಿನಿಂ

ದಿಂದುವ ನ | ರಿವವೊಲು ತನ್ನನು ತನ್ನ ಬೆಳಗಿಂದ || ಯುವತಿ ತಾನರಿವು ದಿಂತಹುದು ತನಗೆ ತಾನೆ | ವಿವರಿಸೆ ಗೋಚರವೆನಿಸನು ||೧೦|| ತನಗೆ ತೋರುವವೆನಿತನಿತು ಜಡಂಗಳಾ | ತ್ಮನನವು ಕಾಣಲರಿಯವೆಂತು || ಇನಿತ ನಾರೈದು ನೋಡಲು ಕಾಂತೆ ಮೈತ್ರೇಯಿ | ನಿನಗಿಲ್ಲಿ ಸ್ವಪ್ರಕಾಶತೆಯೈಸೆ ||೧೧|| ಅರಿಯಲು ಮರೆಯಲುಮರಿಗುವೆ ಜಡವರ್ಗ | ವರಿಯಲು ಮರೆಯಲು ಬಲ್ಲುದು || ಅರಿವಲ್ಲದನ್ಯವಿಲ್ಲಾಗಿ ತಾನರಿವಪ್ಪ | ನರಿವಪ್ಪನಾಗಿ ಬೊಮ್ಮವು ತಾನೆ ||೧೨|| ಅದರಿಂದೆ ಸಿದ್ಧನೆನಿಸಿಪನು ತನಗೆತಾನಿಂ | ತುದಿಸಿದವೆಲ್ಲವು ಜಡ ಮಿಥ್ಯೆ || ಅದನು ನೀನರಿವೆ ಸಮ್ಯಗ್ಬೋಧಾಗತಿಯಿಂದೆ | ಸುದತಿ ಬೇರಲ್ಲಿ ಸಾಕ್ಷಿಗಳುಂಟೆ ||೧೩|| ಮನಕೆ ವಾಕ್ಕಿಂಗೆ ಗೋಚರವಾಗದನುಪಮ | ನನ ಘನಾನಂದೈಕರಸಪೂರ್ಣ || ಘನಚಿದಾತ್ಮಕನೆ ತಾನೆಂಬುದೆ ನಿಜವಿದು | ಮನು ಮುನಿರುದ್ರಾದ್ಯರನುಭೂತಿ || .... .... ||೧೪||

ಸಂವಿದಾತ್ಮನಿರೂಪಣೆ-ಸೂತ್ರ ೧೪ಕ್ಕೆ ಪದ ೧೦೪.

---

ಸೂತ್ರ || ತರ್ಕವ ನುಡಿವನೆ ತತ್ವವಿದನು ಜಡ |
ತರ್ಕಿಗಳಾದ ಮಾನವರಂತೆ ||

ಪದ || ನುಡಿಗೆ ಗೋಚರವೆನಿಪೊಡೆ ತರ್ಕವೈಸಲೆ | ನುಡಿಗೆ ಗೋಚರ ವಲ್ಲಡೆಯಲ್ಲಿ || ನುಡಿದು ತರ್ಕಿಪುದು ಕುತರ್ಕವಾದುದರಿಂದೆ | ನುಡಿದು ತರ್ಕಿಪನತಿ ಮೂಢನು ||೧|| ಅರುಹಿಸಲ್ಕರಿಹಿಸಲ್ತೆರಹುಂಟೆ ಪೂರ್ಣನಿ | ಗರಿದೆನು ಮರೆದೆನೆಂಬರುಗಳು || ನೆರೆಮರುಳಾಗಿ ಪೋದರುಮೆಂದೊಡಿನ್ನಾವ | ತೆರದಿಂದೆ ತರ್ಕಿ ವಾದಿಸುವನು ||೨|| ಅರಿಯದ ಮೂಢನ ಪರಿಯೊಳಿರ್ಪನು ನಿಜ | ವರಿದ ಮಹಾಪುರುಷನು ತನ್ನ || ಕುರುಹು ದೋರದೆ ತರ್ಕಿಸದೆ ಸುಮ್ಮ ನೆಲ್ಲರ | ತೆರದೊಳುಂಡುಟ್ಟು ಸಂಚರಿಸನು ||೩|| ಪುಸಿ ಜಗತ್ರಯದೊಳು ಪುಸಿತರ್ಕದಿಂದಾದ | ಪುಸಿ ಪರಾಜಯ ವಿಜಯವಿವು || ಪುಸಿಯಹುದದರಿಂದೆ ಪುರುಳುಂಟೆ ತಿಳಿದಂಬು | ಸಸಿನೆ ಕೇಳಾನಂದಮಯಗಾತ್ರೆ ||೪|| ಇದು ತತ್ವ ವೆಂದೋರ್ವ ನದನುಮಲ್ಲೆಂದೋರ್ವ | ನದನುಮಲ್ಲೆಂದು ಬಳಿಕಲೋರ್ವ || ವಿದಿತವಿದೆಂದೋರ್ವನೊದವಿ ಸಾಧಿಸುತಿರ್ಪ | ರದರಿಂದೆ ತರ್ಕದೊಳ್ನಿಜ ವುಂಟೆ ||೫|| ತಿಳುಪ ವೇಳ್ಪುದು ತನ್ನನೊಲವಿಂದೆ ತಿಳಿಯಲ್ಕೆ | ನಳಿನಾಕ್ಷಿ

ಬೆಸಗೊಂಬುದಲ್ಲದೆ ॥ ಉಳಿದಂತದ್ವೈತವಿಷಯವನು ಗುರುಶಿಷ್ಯ । ರೆಳಸಿ ತಿಳಿಯೆ ಮಂದಮತಿಗಳು ॥ .... .... .... ॥ ೬ ॥

ಕುತರ್ಕ ನಿರಾಕರಣ ನಿರೂಪಣೆ–ಸೂತ್ರ ೧೩೭ಕ್ಕೆ ಪದ ೧೧೦.

---

ಸೂತ್ರ ॥ ಇದು ಸತ್ಯಾನುಭವವಿದು ಮಿಥ್ಯಾನುಭವವೆಂ ।
ದೊದವಿ ಬೋಧಿಪನೆ ಸದ್ಗುರುವಕ್ಕು ॥

ಪದ ॥ ಅಂತರಾತ್ಮಾವಸ್ಥೆಯೊಳು ಗುರು ಜೀವಾತ್ಮ । ಕಂತಾನೆ ವಿರತಿಯಿಂದವೆ ಶಿಷ್ಯ ॥ ಕಾಂತೆ ಕೇಳಿಂತಾಗೆ ಗುರುಶಿಷ್ಯ ಸಂಬೋಧೆ । ಯಂತವರೊಳು ಸವನಿಸುತಿರ್ಕು ॥ ೧ ॥ ನಿಜವರಿಯದ ರಘುಜನಿಗಾಭೃಗುಜನೆಂತು । ನಿಜವ ಬೋಧಿಸಿದನಾ ಪರಿಯಿಂದ ॥ ನಿಜವನು ಶಿಷ್ಯಂಗೆ ಗುರುಬೋಧಿಪುದು ತನ್ನ । ನಿಜದೈಕ್ಯವನು ಪರಮಾತ್ಮಕನೆಂದು ॥೨॥ ಗುರು ಸತ್ಯಾನುಭವ ಗೋಚರವೆನೆ ಪೇಳ್ವುದ । ನುರುಭಕ್ತಿಯೊಳು ನಂಬು ಬಳಿಕೊಂದು ॥ ಪರಿಯ ಮಿಥ್ಯಾನುಭವಕೆ ಗೋಚರವನು ನೀ । ನಿರದರಿ ಪುಸಿಯೆಂದು ಶಶಿಮುಖಿ ॥ ೩ ॥ ದ್ವೈತವೆ ಮಿಥ್ಯಾನುಭೂತಿಯೆಂದೊಲವಿನ । ದ್ವೈತವೆ ಸತ್ಯಾನುಭವವೆಂದು ॥ ಶ್ರೌತಾನುಗುಣ ಯುಕ್ತಿಯೊಡಗೂಡಿ ಪೇಳುವ । ರಾ ತತ್ವವನು ಬಲ್ಲ ಸುಖಿಗಳು ॥೪॥ ತಾನಿದಿರೆಂದೆಂಬ ಭಾವವೆ ದ್ವೈತವು । ದಾನಿದಿರೆಂಬೆರಡಳಿದಿರ್ದ ॥ ನ್ಯೂನವೆಳ್ಳನಿತಿಲ್ಲದೆಸೆವ ನೈರ್ಮಲ್ಯ ವಿ । ಜ್ಞಾನವದ್ವೈತವೆಂದೆನಿಪುದು ॥೫॥ ದ್ವೈತವೆ ಜೀವನದ್ವೈತನಂತರನುಮಾ । ದ್ವೈತಾದ್ವೈತಂಗಳೆಂಬೆರಡನು ॥ ನೀತಿಗಳಿದು ಮೇಣವರ ತೋರ್ಕೆಯುಡುಗಿ ನಿಂ । ದಾತನೆ ಪೂರ್ಣಪರಾತ್ಮನು ॥೬॥ ಭ್ರಮೆಯಿಂದೆ ಜೀವನಾಭ್ರಮೆ ಮಿಥ್ಯೆಯೆಂದು ಕೇಳ್ । ಭ್ರಮೆಯಿಂದೆ ತಿಳಿದಂತರಾತ್ಮನ ॥ ಭ್ರಮೆತನ್ನೊಳ್ಕಿಡೆ ತಾನೆ ಪರಮಾತ್ಮನೆಂದಿಂತು । ಸುಮತಿ ಮೈತ್ರೇಯಿ ನೀನರಿವುದು ॥ ೭ ॥ ಗುರು ಶಿಷ್ಯ ಬೋಧೆ ಜಾಗರಣದ ತೋರ್ಕೆ ಜಾ । ಗರಣಾದಿ ಮಿಥ್ಯೆಯೆಂದೆನೆ ಮತ್ತೆ ॥ ಗುರು ಶಿಷ್ಯ ಬೋಧೆಗಳಿವು ನಿಜವಪ್ಪವೆ । ಸರಸಿಜಾನನೆ ಕಲ್ಪಿತವೆ ನೋಡು ॥ ೮ ॥ ಕನಸಿನಂಗನೆಯು ಸಂಗತಿಯಿಂದೆತಥ್ಯವೆಂ । ದೆನೆ ವೀರ್ಯಪತನಾದಿಯಹುದಂತೆ ॥ ವನಿತೆ ಕೇಳ್ ಗುರು ಶಿಷ್ಯಬೋಧೆ ಕಲ್ಪಿತಮಾಗೆ । ಜನಿಸುವ ನಿಜಮುಕ್ತಿಯದು ಸತ್ಯ ॥ .... .... .... .... ॥ ೯ ॥

ಸತ್ಯಾನುಭವ ನಿರೂಪಣೆ–ಸೂತ್ರ ೧೩೮ಕ್ಕೆ ಪದ ೧೧೯.

ಸೂತ್ರ ॥ ಮಾತೃ ಮಾನಾದಿ ತ್ರಿಪುಟಿ ದೋರದಾಗಿಯ ।
ದ್ವೈತಕ್ಕೆ ಪವಣವಿಲ್ಲಿದು ಸಿದ್ಧ ॥

ಪದ ॥ ಭೇದ ಜನ್ಯಂಗಳೆ ನಿಸುವ ಪ್ರತ್ಯಕ್ಷಾದಿ । ಯಾದ ಪವಣವೆಂಬಿವೆಲ್ಲವು ॥ ಭೇದ ಬೋಧಕ್ಕೆ ಪವಣವೈಸೆ ನಿಜವನು । ಬೋಧಿಸುವಲ್ಲಿ ಪವಣವಲ್ಲ ॥೧॥ ತನಗೆ ಪ್ರತ್ಯಕ್ಷಾನುಮಾನೋಪಮಾನಸಂ । ಜನಿಸುವಭಾವವರ್ಥಾಪತ್ತಿ ॥ ಘನಶಬ್ದವೆಂಬಿವು ತಾವಾರು ಪವಣಂಗ । ಳೆನಿಪವನ್ಯವನು ಸಾಧಿಸುವಲ್ಲಿ ॥೨॥ ಇವು ನೇತ್ರ ಧೂಮ ಸಾದೃಶ್ಯ ನಿಷೇಧಾವ । ಯವಪುಷ್ಟಿಯಾಪ್ತೋಕ್ತಿಗಳು ಗೂಡಿ ॥ ಹವಣಿಸಿ ಘಟ ವಹ್ನಿ ಮರೆ ಯಭಾವ ರಾತ್ರಿ । ಸವಿವನ್ನ ಸ್ವರ್ಗಂಗಳಿರವಕ್ಕು ॥೩॥ ಅರಿಯಲ್ಪಡುವದೆ ನೀನರಿ ಸುಪ್ರಮೇಯಾಖ್ಯ । ವರಿವಾತನಾ ಪ್ರಮಾತೃವೆನಿಕ್ಕು ॥ ಅರಿಯೆ ತತ್ಸಾಧನವದು ಕೇಳ್ಪ್ರಮಾಣವೆಂ । ದರಿವುದು ತ್ರಿಪುಟಿಯ ನಿಜವನು ॥೪॥ ಮಾನವೆ ಸತ್ವವಾಮೇಯುವೆ ತಮವದು । ಮಾನಿನಿ ಸತ್ವ ರಜಂಗಳು ॥ ತಾನೊಂದಿನಿಲೆ ಮಾತೃವೆನಿಪುದೀ ಗುಣಗಳೊ । ಳ್ಳೀನರಿಯಾತ್ರಿಪುಟಿಗಳನು ॥೫॥ ಪವಣವಾ ದ್ವೈತಕ್ಕೆ ಪವಣಿಲ್ಲದ್ವೈತಕ್ಕೆ । ಪವಣುಂಟೆ ತ್ರಿಪುಟಿಗಳೆಡೆಯಾಟ ॥ ಸವನಿಸದ ದ್ವೈತಪದದಲ್ಲಿ ಮೈತ್ರೇಯಿ । ತವೆ ವಿಚಾರಿಸಿ ನೋಡು ನಿಜವಿದು ॥೬॥ ಜಡಜಗವದು ಪುಸಿಯಜಡಾತ್ಮ ಸತ್ಯನೆಂ । ಬೆಡೆಯೊಳಬಾಧ್ಯ ಚಿನ್ಮಯನಾಗಿ ॥ ಕೆಡದಿರ್ಪತಾನೆ ಪವಣವೈಸೆ ತಿಳಿಯಲಾ । ಜಡಜಗವದು ಮಿಥ್ಯೆ ಪವಣಲ್ಲ ॥೭॥ ಅನುಭವವದು ಪವಣೆನಿಸದು ಹಮ್ಮಿಲ್ಲ । ದನುಭವವಿಲ್ಲದಕತದಿಂದ ॥ ಘನಕುಡಿಯದನುಳಿದಲ್ಲದೆ ತತ್ವವೆಂ । ದೆನಿಸದು ಸತ್ಯವಿಂತಿದು ನಂಬು ॥೮॥ ಇದು ತಾನೆ ಸುಜ್ಞಾನ ನಿರ್ಯೋಗವಿದು ತಿಳಿ । ಯದವರ್ಗೆ ವರನಿರ್ಗುಣಾಭ್ಯಾಸ ॥ ಪದಗತಿಯನು ಪೇಳ್ವುದಲಸದೆ ಗುರುಗಳು । ಸದಮಳಬೋಧೆ ಸಂಜನಿಸಲ್ಕೆ ॥೯॥ ಮುನಿವರನಿಂತು ಬೋಧಿಸೆ ಕೇಳ್ದನಲವಿಂ । ವನಿತೆಮೈತ್ರೇಯಿ ವಂದಿಸಿ ಮತ್ತೆ ॥ ವಿನಯದಿಂ ನಿಜಪತಿಗೆರಗಿನಿರ್ಗುಣಯೋಗ । ದನುವನೊರೆವುದೆಂದಳೊಲವಿಂದೆ ॥೧೦॥ ಮೂರು ಸಂಧಿಯೊಳಿಂತು ತೋರಿ ಸಾಧ್ಯವನಿನ್ನು । ಬೇರೆಸಾಧನದ ಲಕ್ಷಣವನು ॥ ತೋರುವೆನುತ್ತರವಾಗಿ ತೋರುವ ಸಂಧಿ । ಮೂರರೊಳಚ್ಚರಿವಡುವಂತೆ ॥೧೧॥ ಇದು ನಿಜಗುಣಯೋಗಿ ಮುಗದಿಂದೆ ತಿಳಿಯು ಪೇ । ಳಿದ ಯಾಜ್ಞವಲ್ಕ್ಯ

ಮೈತ್ರೇಯಿಯ || ಒದವಿದ ಸಂವಾದದೊಳು ಮೂರನೆಯ ಸಂಧಿ | ಸದಮಳ ಪರಮಾನುಭವಬಂಧಿ || .... .... .... || ೧೨ ||

ಆತ್ಮಂಗೆ ಪ್ರಮಾಣಾತೀತತ್ವ ನಿರೂಪಣೆ-ಸೂತ್ರ ೧೭ಕ್ಕೆ ಪದ ೧೩೧.

ಇತಿ ಸಂಧಿ ೩ಕ್ಕೆ ಸೂತ್ರ ೧೭ಕ್ಕಂ ಪದ ೧೩೧ಕ್ಕೆ ಸಂಪೂರ್ಣ.

ಅಂತು ಸಂಧಿ ೩ಕ್ಕೆ ಸೂತ್ರ ೫೦ಕ್ಕಂ ಪದ ೩೪೩ಕ್ಕೆ ಸಂಪೂರ್ಣಂ

ಮಂಗಳಮಸ್ತು

---

ಶ್ರೀ ಗುರುಶಂಭುಲಿಂಗಾಯನಮಃ

## ೪ನೇ ಸಂಧಿ

ಸೂತ್ರ || ಗುರು ವಚನವೆ ಶ್ರುತಿ ಗುರು ವಚನವೆ ಸ್ಮೃತಿ |
ಗುರು ವಚನವೆ ಸರ್ವವಿನಿಯಳೆ ||

ಪದ || ಶ್ರೀ ಮಹಾದೇವಂಗೆ ಸೋಮಂಗೆ ಸುಖಪೂರ್ಣ | ಧಾಮಂಗೆ ಸತ್ಯ ಚಿದ್ರೂಪಂಗೆ || ಕಾಮಿತಜನ ಕಲ್ಪಭೂಜಂಗೆ ಶಂಭುವಿಂ | ಗಾವೋದ ದಿಂದೆ ವಂದಿಸುವೆನು || ೧ || ಶ್ರೀ ಪರಾನಂದೈಕನಿಧಿ ಯಾಜ್ಞವಲ್ಕ್ಯ ದ| ಯಾಪೂರ್ಣನಧಿಗತ ಪರಮಾತ್ಮ || ಕಾಪಟ್ಯದೂರ ನೂರ್ಜಿತನಾಗಮೋ ದಯಾ | ಲಾಪನುನ್ನತ ಚಿತ್ಪ್ರದೀಪನು || ೨ || ಯೋಗೀಂದ್ರನಚಲನಧಿಕ ನು ರುತರನನು | ರಾಗದೆ ನಿಜಧರ್ಮಪತ್ನಿಗೆ || ಶ್ರೀ ಗುಣಯುಕ್ತ ಮೈತ್ರೇಯಿಗೆ ನಿರ್ಗುಣ | ಯೋಗಾಭ್ಯಾಸವನೆ ಪೇಳಿದನಿಂತು || ೩ || ಗುರು ವಚನವೆ ಶ್ರುತಿ ಪರಮಾರ್ಥವಿದು ತಾನು | ಗುರುವಿಂದೆ ವೇದ್ಯವೆಲ್ಲವು ನೋಡೆ || ಗುರುವಾಕ್ಯ ವಿಲ್ಲದೆ ತ್ರಿಜಗದೊಳೇನೊಂದು | ದೊರಕೊಳ್ಳಲರಿಯದೆಂತಾರ್ಗೆಯು || ೪ || ಗುರು ವಾಕ್ಯವಿಲ್ಲದೆ ಪರತತ್ವವೆಂತಪ್ಪ | ಪುರುಷರ್ಗೆ ಸಿದ್ಧಿಸದದರಿಂದೆ || ಗುರು ಪಯೋಧರೆ ಕೇಳು ಪರಿಭಾವಿಸಿದೊಡಿಂತು | ಗುರುವಚನವೆ ವೇದವೆನಿ ಪುದು || ೫ || ಗುರು ವಚನವೆ ಶ್ರುತಿ ಗುರು ವಚನವೆ ಸ್ಮೃತಿ | ಗುರು ವಚನವೆ ಪುರಾಣಾಗಮ || ಗುರು ವಚನವೆ ಸಕಲಾರ್ಥ ಸಿದ್ಧಿಗಳಾಗು | ಗುರು ವಚನವೆ ಮೋಕ್ಷಗತಿಹೇತು || ೬ || ಆದರಿಂದೆ ವೇದ ಪುರಾಣಾಗಮ ಸ್ಮೃತಿ | ಪದಸಿದ್ಧಿಗಳ ಬೇರೆಯರಸದೆ || ಸುದತಿ ಸದ್ಗುರು ವಾಕ್ಯವನೆ ನಂಬು

ನೀನತಿ । ಮುದದಿಂದೆ ಬಹುಬುದ್ಧಿಗಳನಿಕ್ಕಿ ॥ ೭ ॥ ಅನುಭವ ಗೋಚರವೆನಿ ಪಂತೆ ಪರತತ್ವ । ವನು ತಾನಿದೆಂದು ಪೇಳ್ವುದರಿಂದ ॥ ಇನಿಯಳೆ ವರಗುರು ವಚನವೆ ಶಾಬ್ದವೆಂ । ದೆನಿಪ ಪ್ರಮಾಣವಪ್ಪುದು ನೋಡಾ ॥ ೮ ॥ ಮನನಕ್ಕೆ ಬೀಜವೆಂದೆನಿಪಂತೆ ಯುಕ್ತಿಗ । ಳನು ಗೋಚರಿಸುವ ಕಾರಣದಿಂದೆ ॥ ವನಜ ಸನ್ನಿಭವಕ್ತ್ರೆ ತಿಳಿಯೆ ಸದ್ಗುರು ವಾಕ್ಯ । ವನುಮಾನವೆಂದೆಂಬ ಪವಣಕ್ಕು ॥೯॥ ಅನುಮಾನದಿರವಿನ ಯುಕ್ತಿ ಚಿಂತನವೆಂಬ । ಮನನವೆ ತನ್ನನುಭವವದು ॥ ಜನಿಪುದಕ್ಕಾದಿಕಾರಣವಾದ ಗುರು ವಾಕ್ಯ । ವನುಭೂತಿಯೆಂದೆಂಬ ಪವ ಣಕ್ಕು ॥ ೧೦ ॥ ಅವಗತಿಕ್ರಮವಿದಾ ಶ್ರವಣವಾ ಮನನವೊ । ಪ್ಪುವ ನಿದಿ ಧ್ಯಾಸನವೆನಿಸುವ ॥ ಇವುತಾವನುಕ್ರಮದೊಳು ಶಬ್ದವನುಮಾನ । ವನುಭೂತಿ ಯಹುದೆಂದುತಿಳಿವುದು ॥ .... .... ॥ ೧೧ ॥

ಗುರು ವಾಕ್ಯಕ್ಕೆ ಸರ್ವ ಸಾಧನತ್ವ ನಿರೂಪಣೆ-ಸೂತ್ರ ೧ಕ್ಕೆ ಪದ.೧೧.

---

ಸೂತ್ರ ॥ ಶ್ರವಣಾದಿ ಶಬ್ದಾದಿಗಳನುವಿಾ ಕರ್ಮಾದಿ ।
ತ್ರಿವಿಧಾವಗತಿಯೊಳರಿಯೆ ಮುಕ್ತಿ ॥

ಪದ ॥ ಪವಣವಹುದು ಶಬ್ದವನುಮಾನವನುಭವ । ವವಗತಿ ಕ್ರಮ ದಿಂದವನ್ಯಕ್ಕೆ ॥ ಯುವತಿ ಕೇಳಧ್ಯಾತ್ಮವೆನಿಪ ನೈಜದೊಳೊಂದು । ಪವಣಿಲ್ಲ ವರಿದೆಂದು ದಿಟವಿದು ॥ ೧ ॥ ಗುರು ವಾಕ್ಯವೆನಿಸುವ ಶ್ರುತಿ ಕರ್ಮಜ್ಞಾನವಾ । ಯೆರಡರ ಮಿಶ್ರರೂಪಾಗಿರ್ಪ ॥ ವರಕಾಂಡತ್ರಯವನೊರೆವು ದವರಿರವನು । ತರುಣಿ ನೀನರಿ ಪೇಳ್ವೆನೊಲವಿಂದ ॥ ೨ ॥ ಕರ್ಮದಿಂದವೆ ಜ್ಞಾನಕರ್ಮ ದಿಂದವೆ ಮೇಣು । ನಿರ್ಮಳ ಜ್ಞಾನದಿಂದವೆ ಮುಕ್ತಿ ॥ ಪೇರ್ವೆಯೊಳಹು ದೆಂಬುದೆಲೆ ತ್ರಿಕಾಂಡಂಗಳ । ಧರ್ಮವಾ ಶ್ರುತಿಸಿದ್ಧವಿದುತಾನು ॥ ೩ ॥ ಪ್ರಿಯುತಮೆ ತಾನಿದಿರೆಂದು ತೋರುವ ಭಾವ । ನೆಯುನುಳಿದೊಡೆ ಮುಕ್ತಿ ದೂರೆವುದು ॥ ನಿಯುತವವದಾಗಿ ನೀನರಿ ಮೋಕ್ಷವಿಷಯಕ್ಕೆ । ಕ್ರಿಯೆಯಾತ್ಮ ಸುವಿಚಾರವೆನಬೇಕು ॥ ೪ ॥ ಅರಿವಿನೊಳ್ಕೂಡಿ ತನ್ನನು ವಿಚಾರಿಸುವಾಗ । ಳರಿವುಮಾ ಸುವಿಚಾರ ಕ್ರಿಯೆಯುದು ॥ ನೆರೆ ಬಿಚ್ಚದಿರೆ ಮುಕ್ತಿಯಹುದೆಂಬು ದದು ಮಿಶ್ರ । ವರಿ ನೀನು ನಿರ್ಮಳ ಮತಿವಂತೆ ॥ ೫ ॥ ಮರವೆಯೆಂಬುದು ಬಂಧ ವರಿವೆ ತನಗೆಮುಕ್ತಿ । ನೆರೆಬಂಧವದು ಪುಸಿ ಪೂರ್ಣಂಗೆ ॥ ಕರೆಮರೆ

ಯೇನೆಂಬ ತಿಳಿವೆ ಸಮ್ಯಜ್ಞಾನ । ವರ ಮೋಕ್ಷವಿಷಯದೊಳಿದು ತಾನೆ ॥ ೬॥ ಈ ಮೂರು ಕಾಂಡವನಾರೈದು ನೋಡಲ್ಕೆ । ತಾಮಸ ರಾಜಸ ಸಾತ್ವಿಕ ॥ ನಾಮದ ಗುಣರೂಪವೆಂಬನುಕ್ರಮದಿಂದೆ । ಸೋಮಸನ್ನಿಭಮುಖಿ ತಿಳಿ ನೀನು ॥ ೭ ॥ ಗುಣಮೂಲವಾದ ಸಗುಣ ಯೋಗವಿಡಿದು ನಿ । ರ್ಗುಣವೆನಿಪಂತರ ಯೋಗವ ॥ ಅಣಿಯರದಿಂದೆ ತಿಳಿದು ನೀರೆ ಕೇಳು ನಿ । ರ್ಗುಣಯೋಗಿಯೆನಿಸುವಾತನೆ ಸಖಿ ॥ ೮ ॥ ಗುಣಯೋಗವರ್ಗವ ನಣಿಮಾದಿಸಿದ್ಧಿಯ । ನೆಣಿಸದೋರ್ವೆಯು ತನ್ನ ಮನದೊಳು ॥ ತೃಣದಂತೆ ಕಂಡು ನಿಂದಾತನು ತಾನೆ ನಿ । ರ್ಗುಣಯೋಗಿ ಶಿಷ್ಯನೆನಿಪನಿಲ್ಲಿ ॥ .... .... ॥ ೯ ॥

ಕಾಂಡತ್ರಯಾರ್ಥ ನಿರೂಪಣೆ–ಸೂತ್ರ ೩ಕ್ಕೆ ಪದ ೨೦.

---

ಸೂತ್ರ ॥ ಗುರುವಿಂದೆ ಪರತತ್ವವದು ದೋಷಂಹಿತವಾ ।
ಗಿರೆ ತಿಳಿವುದು ಶಿಷ್ಯನೆನಿಪನು ॥

ಪದ ॥ ಗುರುಪಾದ ಭಕ್ತಂಗೆ ಪರಮವಿರಕ್ತಂಗೆ । ಪರಿಣತ ಚಿತ್ತಂಗೆ ಶಿಷ್ಯಂಗೆ ॥ ಪರಮಾತ್ಮ ಪದವನು ನಿರಪೇಕ್ಷನೆನಿಸಿ ಸ । ದ್ಗುರುವರನೊಲವಿಂದೆ ತಿಳಿಪುದು ॥ ೧ ॥ ನಿರಹಂಕಾರದೆ ಪರತತ್ವವದನು ದೋಷ । ವಿರಹಿತವೆನೆ ತಿಳಿಪುವನನು ॥ ಗುರುವರನೆಂದು ನಂಬಲು ಬೇಹುದಾನಂದ । ಶರನಿಧಿಯೆನಿಪ ಸುಂದರಗಾತ್ರೆ ॥ ೨ ॥ ತರುಣಿ ಕೇಳಾ ಶ್ರವಣಾದಿ ದೋಷಗಳನು । ವಿರಹಿತವಾಗಿ ವಿಚಾರಿಸಿ ॥ ಪರತತ್ವಪದವನು ಗುರುಬೋಧೆಯಿಂದವ । ಧರಿಪುದು ವರಶಿಷ್ಯನೊಲವಿಂದ ॥ ೩ ॥ ಶ್ರುತಿ ತತ್ತ್ವಮಸಿಯೆನೆ ಮತಿಭೇದದಿಂದವ । ಗತಿಯನಾ ತ್ವಂ ಪದದೊಳಗೋರ್ವೆ ॥ ರತಿಯಿಂದೆ ತಿಳಿಯದ ಕತದಿಂದೆ ಕೇಳೆಲೆ । ಸತಿ ನೀನೆಯದು ದೋಷತ್ರಯವಕ್ಕು ॥ ೪ ॥ ತನುವನಿಂದ್ರಿಯವ ನಸುವಂತಃಕರಣಗ । ಳೆನಿಸಿಪೆ ತಾನೆಂಬುದನುದಿನ ॥ ಇನಿತಗಲದೆ ತನ್ನೊಳಿರ್ಪ ತತ್ಕ್ರಿಯೆಯಿಂದೆ । ತನಗೆ ಶ್ರವಣದೋಷವೆನಿಪುದು ॥ ೫ ॥ ತನುವೊದಲೆನಿಸಿ ತೋರ್ಪನಿತುವನರಿವ ದ್ರ । ಷ್ಟನೆ ತಾನೀ ಯೊಡಲೊಳು ತುರಿಯನು ॥ ಎನಿಸ ವಿಚಾರದರಿಕೆಯುಳ್ಳ ಕತದಿಂದೆ । ಮನನ ದೋಷಾಖ್ಯನಪ್ಪನು ತಾನೆ ॥ ೬ ॥ ಎನಿತು ತೋರ್ಕೆಗಳೊಳಗನಿತು ತಾನಲ್ಲವೆಂ । ದೆನೆ ಕಾಣ್ಬ ಸರ್ವ ದೃಕ್ಕಾನೆಂಬ ॥ ಘನದರಿವಿಂದೆ ನಿದಿಧ್ಯಾಸನಾಖ್ಯಯು । ವೆನಿಸುವ ದೋಷವುಳ್ಳನು

ತಾನೆ ॥ ೭ ॥ ಜಡ ದೃಶ್ಯಾತ್ಮನು ಮೇಣಜಡ ದೃಶ್ಯಾತ್ಮನು ಜಡಾ । ಜಡ ರಹಿತಾತ್ಮನೆಂಬೀ ಮೂರು ॥ ಜಡಭಾವವಳಿದುಳಿದಿರವೆ ದೋಷದೊಳೆಂದು ತೊಡರದ ಪದವದು ನಿಜತತ್ವ ॥ .... .... .... ॥ ೮ ॥

ಆತ್ಮನಲ್ಲಿ ದೋಷತ್ರಯ ನಿರಾಕರಣ ನಿರೂಪಣೆ–ಸೂತ್ರ ೩ಕ್ಕೆ ಪದ ೨೮.

———

ಸೂತ್ರ ॥ ವಿರತಂಗೆ ಕರ್ಮರಹಿತಮಾಗಿ ನಿಜವನು ।
ಗುರು ಬೋಧಿಪುದು ನಾಲ್ಕು ತೆರದಿಂದ ॥

ಪದ ॥ ವರಶಿಷ್ಯರನು ಮುಖಾಂತರ ದಶಾಂತರ ಭಾವಾಂ । ತರ ಬಳಿಕ ನ್ಯೋಪದೇಶಾಖ್ಯ ॥ ಪರಿವಿಡಿಯೀ ನಾಲ್ಕು ವಿಧದ ಬೋಧೆಗಳಂದೆ । ಗುರು ಬೋಧಿಸುವದವಗತಿಯೊಳು ॥ ೧ ॥ ಪ್ರಿಯತಮೆ ಕೇಳ್ ಬ್ರಹ್ಮವಿಷಯ ಮಾಗಿರ್ಪ ಸ । ತ್ಕ್ರಿಯೆಯನೆ ಮಾಡಲಸದಿರೆಂಬ ॥ ನಿಯತದೀ ಬೋಧೆ ಮುಖಾಂತರವಹುದು ನಿ । ಷ್ಕ್ರಿಯನದ್ವಯಾತ್ಮ ನೀನದರಿಂದ ॥ ೨ ॥ ವಿರ ತಿಯನಾತ್ಮಾ ಭಿರತಿಯನಂತರದಿಂದೆ । ಪರಮನದ್ವಯನೆಂದು ತಿಳಿಪುವ ॥ ವರ ಬೋಧೆಯದು ದಶಾಂತರವಹುದೆಂದು ನಿ । ರ್ಧರಿಸಿದು ಶ್ರುತಿಸಿದ್ಧವಹು ದಾಗಿ ॥ ೩ ॥ ಪರಮನೆ ನೀನೆಂಬುವದೆ ಪರೀಕ್ಷಿಸೆ ಭಾವಾಂ । ತರ ಬೋಧೆ ಯೆನಿಪುದು ನಿಜದೊಳು ॥ ಪರಮಾತ್ಮನೆಂದೆಂಬ ತಾನನ್ಯನೆಂದೆಂಬ । ವೆರಡು ಭಾವನೆಗಳು ಪುಸಿಯಕ್ಕು ॥ ೪ ॥ ಅನ್ಯವನೊರೆವುತನನ್ಯವ ನರುಪಲ । ದನ್ಯೋಪದೇಶ ಬೋಧೆಯುನಿಕ್ಕು ॥ ಧನ್ಯೆ ನೀನರಿಯನ್ಯವದು ಪುಸಿ ತಾನೆ ಯ । ನನ್ಯಬೋಧ್ಯನು ದೃಶಿಮಾತ್ರನು ॥ ೫ ॥ ಇಂತೀಪರಿಯ ನಾಲ್ಕು ತೆರದ ಬೋಧೆಗಳನು । ಭ್ರಾಂತಿಬೋಧ ಚತುಷ್ಟಯವೆಂದು ॥ ಕಾಂತೆ ನೀನರಿವು ದೋರಂತೆ ಪರಾತ್ಮನ । ನಂತನದ್ವಿತಿಯು ಚಿನ್ಮಯನಾಗಿ ॥ .... ॥ ೬ ॥

ಬೋಧ ಚತುಷ್ಟಯು ನಿರೂಪಣೆ–ಸೂತ್ರ ೪ಕ್ಕೆ ಪದ ೩೪.

———

ಸೂತ್ರ ॥ ಸಕಲ ವಿಷಯಃವಿರಕ್ತನು ಶುದ್ಧವಿದ್ಯೆಯಿಂ ।
ದಕಲಂಕ ನಿಜವ ತಾನರಿವುದು ॥

ಪದ ॥ ಧನ ಪುತ ಜನನಿ ಜನಕ ವನಿತಾದಿ ತಾ । ನೆನಿಪಲ್ಲಿ ತನಗೆ ವೈರಾಗ್ಯವು ॥ ಜನಿಸಲಂತದು ಗುಣಕಾರ್ಯವದಕ್ಕೆ ಮಾ । ನಿನಿ ಕೇಳ್

ಪಂಚಾಖ್ಯವೆನಿಸುವುದು ॥೧॥ ದೇಹವಿಂದ್ರಿಯವಸು ಮನವಹಮಾದಿಸ । ಮೋಹವಿಂತಿದು ತಾನೆಂಬೆಡೆಯೊಳು ॥ ಸಾಹಸದಿಂದೆ ವಿರಕ್ತಿ ಪುಟ್ಟಿದೊಡೆ ಸಂ । ದೇಹವೇನದುವೆ ತಾಮಸವಕ್ಕು ॥೨॥ ತನು ನೊದಲಾಗಿ ತೋರ್ಪನಿ ತುವನರಿವ ದ್ರ । ಷ್ಟನೆ ತಾನೆಂಬಲ್ಲಿ ವೈರಾಗ್ಯವು ॥ ತನಗೆ ಜನಿತವಾಗಲದನು ರಾಜಸವೆಂದು । ವನಿತೆ ಮೈತ್ರೇಯಿ ನಿಶ್ಚಯಿಪುದು ॥೩॥ ತೋರುವದೃಶ್ಯ ದೃಕ್ಕುಗಳೆಂಬುಭಯವಿವು । ತೋರದರಿವೆ ತಾನೆಂದೆನಿಸಲ್ಲಿ ॥ ತೋರೆ ನಿಶ್ಚಲ ಮಾದ ನಿಜವಿರಾಗತೆಯದು । ನೀರೆ ಸಾತ್ವಿಕವೆಂದೆನಿಸುತಿರ್ಪ ॥೪॥ ನಿರವಿ ಸುವೆನು ಪರಬ್ರಹ್ಮವಾನಪ್ಪೆನೆಂ । ಬರಿವಿನೊಳಗೆ ತನಗುದಿಸಲು ॥ ವಿರತಿ ಕೇಳೆಲೆ ಕಾಂತೆ ಗುಣಗಂಧವದು ತಾನೆ । ಪರಮ ವೈರಾಗ್ಯವೆಂದೆನಿಪುದು ॥೫॥ ಇನಿತರಲ್ಲಿಯ ರಾಗವದು ತಾನವಿದ್ಯೆಯೆಂ । ದೆನಿಪುದಿನಿತರೆಡೆಯೊಳು ಮತ್ತೆ ॥ ತನಗೆ ವಿರಾಗ ಸವನಿಸಲ್ಕೆ ವಿದ್ಯೆಯೆಂ । ದೆನಿಪುದು ಲಲಿತಾಂಗಿ ತಿಳಿ ನೀನು ॥೬॥ ಇನಿತು ತೋರ್ಕೆಗಳಲ್ಲಿ ತನಗೆ ರಾಗ ವಿರಾಗ । ವನಿತು ಪುಟ್ಟಿದೊಡೆ ವಿದ್ಯಾ ವಿದ್ಯೆ ॥ ಎನಿಪುದು ಮಿಶ್ರದಗತಿಯಿಂದೆ ಸಮ್ಮನಿ । ವನಿತಾ ಕದಂಬ ವಂದಿತ ಪಾದೆ ॥೭॥ ವಿದ್ಯೆಯೆಸತ್ವ ಮವಿದ್ಯೆಯೆ ತಮವದು । ವಿದ್ಯಾವಿದ್ಯೆಯೆ ರಜೋ ಗುಣವಕ್ಕು ॥ ಹೃದ್ಯೆಮೈತ್ರೇಯಿ ಕೃತಾರ್ಥೆ ನೀನೆಲೆ ಶುದ್ಧ । ವಿದ್ಯೆಯಿಂದಿನಿತು ವನರಿವುದು ॥೮॥ ಗುಣಕಾರ್ಯವೆಂಬ ತದ್ಗುಣಮಯವೆಂಬ ಮೇ । ಣ್ಗುಣ ಗಂಧವೆಂಬೈದು ವಿರತಿಯೆ ॥ ಗುಣರೂಪವೆನಿಸುವೀ ತ್ರಿವಿಧ ವಿಭಾಗೆ ನಿ । ರ್ಗುಣನಾಗಿ ತನ್ನೊಳಿಂತಿವು ಮಿಥ್ಯೆ ॥೯॥ ವಿದ್ಯೆಯೊಳ್ಕೂಡದವಿದ್ಯೆಯೊಳ್ಬೆರ ಸದೆ । ವಿದ್ಯಾವಿದ್ಯೆಗಳೆಂಬೆರಡರೊಳು ॥ ಪೊದ್ದದೆ ಪರತರವಾಗಿ ತೋರುವ ಶುದ್ಧ । ವಿದ್ಯೆಯಿಂದರಿ ನಿನ್ನ ನೆಲೆನೀರೆ ॥೧೦॥ ಅದು ಶುದ್ಧ ವಿದ್ಯೆ ಮುನ್ನೊ ರೆದ ನಾನಾ ಪ್ರಪಂ । ಚದ ಭೇದವೆಲ್ಲವು ಪುಸಿಯೆಂದು ॥ ಒದವಿ ತಾನರಿವರಿ ವಡಗಿ ಪೂರ್ಣಾನಂದ । ಪದವಾದ ಬರಿಯರಿವಿನ ತೋರ್ಕೆ ॥ .... ॥೧೧॥

ವೈರಾಗ್ಯ ಪಂಚಕ ನಿರೂಪಣೆ-ಸೂತ್ರ ೩೬ಕ್ಕೆ ಪದ ೪೫.

---

ಸೂತ್ರ ॥ ಸತ್ಯಾನುಭವದಿಂದ ನೋಡಲಖಂಡಿತ ।
ನಿತ್ಯ ಪಂಚಾವಯವಪನು ತಾನೆ ॥

ಪದ ॥ ಅದು ಸಚ್ಚಿದಾನಂದವದು ನಿತ್ಯ ಪರಿಪೂರ್ಣ । ವದು ತಾನ ಖಂಡೈಕರಸರೂಪು ॥ ಅದು ಶುದ್ಧ ವಿದ್ಯೆಗೆ ಗೋಚರವೆನಿಪಾತ್ಮ । ವದು ಪಂಚಾ

ವಯವದಿಂದೆಸೆವುದು ॥೧॥ ಮರೆದೆಸಾನೆನ್ನ ನೆಂಬರಿವನಾ ಮರವೆಯ । ನರಿವಾತನುಂಟೆಂಬಿವನು ತಾನೆ ॥ ಅರಿವುದರಿಂದೆ ಸತ್ಪದಸಿದ್ಧಿ ತನಗೆಂದು । ನಿರಿಗುರುಳಬಲೆ ನೀನರಿವುದು ॥೨॥ ತನು ತಾನಲ್ಲೆಂದರಿದನಿತರೊಳ್ನಿಂದ ಜೀ । ತನವೆ ತಾನಲ್ಲವೆಂದರಿದಂದು ॥ ತನಗೆ ಚಿತ್ಪದ ಸಿದ್ಧಿಯದರಿಂದೆ ಘಟಿಸಿತೆಂ । ದಿನಿಯಳೆ ಮತಿಮುಟ್ಟಿ ತಿಳಿ ನೀನು ॥೩॥ ನಿರವಯವನು ನಿರುಪಾಧಿಕ ನಿಸ್ಸಂಗ । ನಿರಘನೆನಿಪ ನಿಜಾತ್ಮನು ತಾನು ॥ ಪೊರೆಯನೆಲ್ಲಿಯು ಮೂವತೆರದಿಂದ ನೋಯನೆಂ । ದಿರೆ ಸುಖಪದವದು ತನಗಕ್ಕು ॥೪॥ ಪುಸಿಯಾಗಿ ಕೆಡುವುದೀ ತ್ರಿಜಗವೆಲ್ಲವು ತಾನೆ । ಪುಸಿಯಲ್ಲವಾಗಿ ಕೆಡುವನಲ್ಲ ॥ ಸಸಿನವಿದೆಂದು ಭಾವಿಸೆ ನಿತ್ಯಪದಸಿದ್ಧಿ । ಬಿಸಜಾಕ್ಷಿ ತನಗೆಂದು ತಿಳಿವುದು ॥೫॥ ಸುದತಿ ಕೇಳಿಂತು ತೋರುವ ಸರ್ವಭಾವವೆಂ । ಬಿದು ತೋರದಳಿದು ಬೇರುಳಿದೇನು ॥ ಉದಿಸದೆ ಬರಿಯರಿವಾಗಿ ನಿಂದುದು ಪೂರ್ಣ । ಪದಸಿದ್ಧಿ ತನಗಿದು ಶ್ರುತಿಸಿದ್ಧ ॥೬॥ ಭ್ರಾಂತನ ವಿಷಯವ್ವೈದಿವು ತಾನೆ ಚಿನ್ಮಾತ್ರ । ನಂತಾಗಿ ಸರ್ವಜ್ಞನೆನಿಸುವ ॥ ಸಂತತಾಖಂಡೈಕರಸರೂಪಸನಾದಾತ್ಮ । ನಂ ತಿಳಿ ಸತ್ಯಾನು ಭವದಿಂದ ॥ .... .... .... ॥೭॥

ಆತ್ಮಂಗೆ ಸದಾದಿ ತಟಸ್ಥ ಲಕ್ಷಣ ನಿರೂಪಣೆ—ಸೂತ್ರ ೩ಕ್ಕೆ ಪದ ೫೨.

---

ಸೂತ್ರ ॥ ಮರವೆ ಪಿಂಗಿದೊಡಾತ್ಮ ವಿದ್ಯೆಯಿಂದಖಿಳವ ।
ನರಿವ ಸದಾದಿರೂಪನು ತಾನೆ ॥

ಪದ ॥ ಪರಮಾತ್ಮಕನೆ ಪಂಚಪದದಿಂದೆ ಭರತನಾ । ಪರಿಯಲ್ಲದೈದು ಮಾಯಾರೂಪು ॥ ಪರಿಕಿಸಲ್ಮಿಥ್ಯೆಯದಾಗಿ ತಾನವರೊಡ । ವೆರೆಯನೆಂದೆಂದು ನಂಬೆಲೆ ಕಾಂತೆ ॥೧॥ ಸತ್ತಲ್ಲವಿದು ಜಾಡ್ಯವಹುದು ಬಾಧಾತ್ಮತೆ । ವೆತ್ತುದು ನಿತ್ಯವೆಂದೆನಿಸದು ॥ ಮತ್ತೆ ಖಂಡಿತವಿದನೃತವೆಂದು ಮಾಯೆ ತೋ । ರುತ್ತಿರದಾಗಿ ಮೋಹಕವಲ್ಲ ॥೨॥ ತಾನಿಲ್ಲದುದು ತೋರಿತೆಂಬೀ ನುಡಿಯೆ ಮಿಥ್ಯೆ । ತಾನಿದನರಿದು ನಿಂದೊಡೆ ತನ್ನ ॥ ತಾನೆ ಸಿದ್ಧಂಗಳು ತನಗೆ ನಿರ್ಮಳ ಸಚ್ಚಿ । ದಾನಂದ ನಿತ್ಯ ಪೂರ್ಣತೆಗಳು ॥೩॥ ಇಲ್ಲದೆ ಚಿನ್ಮಯನಲ್ಲದೆ ಸುಖರೂಪ । ನಲ್ಲದೆ ಶಿತ್ಯನಲ್ಲದೆ ವಿಭು ॥ ವಲ್ಲದೊಡಂಗನೆ ಬೇರೊಂದು ಭಾವನೆ । ಯಲ್ಲಿ ಸರ್ವಜ್ಞತೆ ಘಟಿಸದು ॥೪॥ ಇಲ್ಲದನಿಗೆ ತೋರ್ಕೆ ಘಟಿಪುದೆ ಚಿನ್ಮಯ । ನಲ್ಲ

ದೊಡರಿವನೆ ಸುಖಮೂರ್ತಿ ॥ ಯಲ್ಲದವನು ಸರ್ವ ವಿಷಯಕ್ಕೆಹಿತನೆ ಸಂ। ಫುಲ್ಲ ಪಂಕರುಹ ಸನ್ನಿಭನೇತ್ರ ॥೫॥ ನಿತ್ಯನಲ್ಲದವ ನನಿತ್ಯವನರಿಯನು। ನಿತ್ಯ ನಲ್ಲದೆ ತೋರಲರಿಯನು ॥ ಅತ್ಯರ್ಥವಾಗಿ ಪೂರ್ಣನಿಗಲ್ಲದಿಂತಿದು। ಸತ್ಯವಾತ್ಮಂಗೈದು ಪದಸಿದ್ಧಿ ॥೬॥ ತಿಳಿ ಶೈತ್ಯ ಕಾಂತಿ ಧವಳ ನಿರ್ಮಳಾ ನಂದ। ಕುಳವಿವು ಬೆಳದಿಂಗಳಿರವೆಂಬ ॥ ಪೊಲು ಸಚ್ಚಿದಾದಿಗಳಾತ್ಮರೂಪವು ನೀರೆ। ಬಳಿಕೆನಲಹುದೆ ತದ್ಗುಣವೆಂದು ॥ .... .... ॥೭॥

ಬ್ರಹ್ಮಸ್ವರೂಪಲಕ್ಷಣ ನಿರೂಪಣೆ–ಸೂತ್ರ ೭ಕ್ಕೆ ಪದ ೫೫.

—o—

ಸೂತ್ರ ॥ ಪರಜಾಗ್ರದಾದಿ ನಾಲ್ಕೆನಿಪವಸ್ಥೆಗಳಾತ್ಮ।
ನಿರವೆ ತುರ್ಯಾತೀತವದು ನೋಡು ॥

ಪದ ॥ ಇಂತು ಪಂಚಾವಯವಂಗಳೊಡನೆ ಚೇತ। ನಾಂತರ್ಮುಖತ್ವ ವೆಂದೆನಿಸುವ ॥ ಭ್ರಾಂತಿ ಪೊರ್ದದ ನಾಲ್ಕುವಿಧದವಸ್ಥೆಗಳನೋ। ರಂತೆ ಪೇಳುವೆನಾಲಿಪುದು ನೀರೆ ॥೧॥ ಅರಿಯೆನಾನೆನ್ನನೆಂಬರಿವು ತಾನೆಂದದ। ನುರೆ ಮರೆಯದೆ ಸತ್ಯಗತಿಯಿಂದೆ ॥ ಅರಿಯೆ ಜಾಗರಣವದೆನಿಪುದೆಂದಬಲೆ ನೀ। ನರಿ ಚೇತನಾಂತರ ಮುಖದೊಳು ॥೨॥ ಜಡಭಾವವನು ಪಿಂಗಿದರಿವಿ ನೆಚ್ಚರಿನೊಳ। ಜಡ ದೇಹಿಯಾಗಿ ಕಾಣಿಪುದದು ॥ ಕೆಡಲುಳ್ಳದದರಿಂದೆ ಪುಸಿಯೆಂದು ತಾನರಿ। ದೊಡೆ ಕನಸಾಂತರ ಮುಖದೊಳು ॥೩॥ ಮರವೆ ಯಿಂದೆಚ್ಚರಾದರಿವನು ಪುಸಿಯೆನ। ಲರಿ ಜಾಗರಣ ಕನಸುಗಳವು ॥ ನೆರೆ ತೋರದಾನಂದ ಪದವದು ಸುಷುಪ್ತಿಯೆಂ। ದುರೆ ನಂಬು ನೀನಂಬುಜಾನನೆ ॥೪॥ ನೆನಸು ಕನಸು ನಿದ್ರೆಯೆನಿಪವಸ್ಥೆಗಳು ಚೇ। ತನ ಭಾವಭೇದಂಗಳಿವು ತಾವು ॥ ಜನಿತವಾಗಿಯೆ ಪುಸಿ ತಾನೆ ನಿತ್ಯಾತ್ಮ ನೆಂ। ದೆನೆ ತುರ್ಯವಂತರದೊಳ ಗದು ॥೫॥ ಅದು ಸಚ್ಚಿದಾನಂದವದು ನಿತ್ಯವೆಂಬ ಭಾ। ವದ ತೋರ್ಕೆ ಯುಡುಗ ನಿಂದರಿವನು ॥ ಸದಮಳವೆನಿಪ ತುರ್ಯಾತೀತವದು ನಿಜ। ಪದ ವಾದ ಪೂರ್ಣಾದ್ವಯಾತ್ಮನು ॥೬॥ ತಾನೆಂಬುದಿಲ್ಲ ವನ್ಯತೆಗಾಣಲಿಲ್ಲವಿ। ನ್ನೇನೊಂದನುಸುರಲಿಕ್ಕೆಡೆಯಿಲ್ಲ ॥ ಮಾನ ಮೇಯಾದಿಗಳಿಲ್ಲವಂತಿಂತೆಂಬು। ದೇನುಮಿಲ್ಲೆಂದೆಂಬು ಪರಿಪೂರ್ಣ ॥೭॥ ಕಡೆಯಿಲ್ಲ ಮೊದಲಿಲ್ಲ ತಡೆ ಬಿಡು ಗಡೆಯಿಲ್ಲ। ಪಡಿಯಿಲ್ಲ ಪಟ್ಟಾಂತರವೆಯಿಲ್ಲ ॥ ನುಡಿಯಿಲ್ಲ ನೆನಹಿಲ್ಲವರಿವಿ

ನೆಚ್ಚರು ದೋರ । ಲೆಡೆಯಿಲ್ಲವೆಂದೆಂದು ಪರಿಪೂರ್ಣ ॥೮॥ ಅರಿವಿಲ್ಲ ಮರವೆ ಯಿಲ್ಲರಿವುಮರವೆಯಿಲ್ಲ । ಹರಿವುರಿಯಿಲ್ಲೊಂದು ಕುರುಹಿಲ್ಲ ॥ ಕರೆಮರೆಯಿಲ್ಲ ವಾಸನೆಯಿಲ್ಲವರಿ ಬಚ್ಚ । ಬರಿಯರಿವೆಂದೆಂದು ಪರಿಪೂರ್ಣ ॥೯॥ ಇದು ಪರಮರಹಸ್ಯ ವಿದನರಿದಾತನೆ । ಸದಮಳ ಯೋಗಿಯವನು ತಾ ನೆ ॥ ಪುದಿಯದೀ ಸಕಲ ಭಾವದೊಳು ವರ್ತಿಪನೆಲೆ । ಚದುರೆ ಮೈತ್ರೇಯಿ ನೀನಿದನಂಬು ॥ .... .... .... ॥೧೦॥

ಜೀವನ್ಮುಕ್ತಿ ನಿರೂಪಣೆ—ಸೂತ್ರ ೧ಕ್ಕೆ ಪದ ೬೯.

---

ಸೂತ್ರ ॥ ಪ್ರಾರಬ್ಧ ವಶದಿಂದೆ ಮಾಯಾತ್ಮ ಜೀವಂಗೆ ।
ಶಾರೀರ ಭೋಗವರಿವಿಗಿಲ್ಲ ॥

ಪದ ॥ ವರಯೋಗಿಗೆಂತು ತದ್ವ್ಯವಹಾರವೆಂಬುದು । ದೊರೆವುದು ಪರಿ ಪೂರ್ಣ ರೂಪಂಗೆ ॥ ಕರಚೋದ್ಯವೆನಗಿದು ಮುನಿಪತಿ ನೀನೆ ವಿ । ಸ್ತರದಿಂದೆ ತಿಳುಪೆನಗಲಸದೆ ॥೧॥ ಎನೆ ಯಾಜ್ಞವಲ್ಕ್ಯ ತನ್ನಿನಿಯಳ್ಗೆ ನಿಜವೆನಿ । ಪನುಭವದಿಂದೆ ಯೋಗೀಶಂಗೆ ॥ ಜನಿಪ ಮಾಯಾ ವ್ಯಾವಹಾರಿಕ ಭೋಗವ । ಪ್ಪನುವನಿಂತರುಪಿದನೊಲವಿಂದೆ ॥೨॥ ಪ್ರಾರಬ್ಧ ಭೋಗದಿಂದಾರಯ್ಯಲ ವಿರಳಾ । ಕಾರ ನಿರ್ಲೇಪನೆನಿಪ ಯೋಗಿ ॥ ಸಾರಿಯಜ್ಞಾನ ಗಂಧವನು ಮಿಥ್ಯಾವ್ಯವ । ಹಾರದೊಳೊಂದಿ ಸಂಚರಿಪನು ॥೩॥ ಪ್ರಾರಬ್ಧವೆನಲಹಂ ಕಾರವಂತದು ಸಃವಿ । ಚಾರಿಸಿ ನೋಡಲಿಲ್ಲದುದಾಗಿ ॥ ಆರಬ್ಧ ಭೋಗವಾತ್ಮ ನಿಗಿಲ್ಲವಿದು ತೋರ । ಹಾರದುರೋಜದಿಂಡೆಸೆವಳೆ ॥೪॥ ಇಲ್ಲದ ತ್ರಿಜಗ ದೊಳುಳ್ಳಾತ್ಮ ವ್ಯವಹೃತಿ । ಯುಳ್ಳಂತೆ ತೋರ್ಪುದು ಪುಸಿಯಾಗಿ ॥ ಉಳ್ಳ ಘಟಾದಿಗಳಲ್ಲಿ ಮೃತ್ತಿಕೆ ನೋಡ । ಲುಳ್ಳಂತೆ ವರ್ತಿಸುತಿಹ ಪಾಂಗು ॥೫॥ ಕಟಕಾದಿಗಳು ಪೊನ್ನಿನೊಳು ತೋರ್ಪವಿಲ್ಲದೆ । ಘಟಿಪುದು ಪುಸಿಯಾದ ವ್ಯವ ಹಾರ ॥ ದಿಟದಂತೆ ನೋಡಲಾ ಪರಿಯೊಳೀ ಜಗವಿಂತು । ನಟಿಸುಗಾತ್ಮ ನೊಳದು ಪುಸಿದೋರ್ಕೆ ॥೬॥ ಶ್ರೌತ ಯಾಕ್ತಿಕ ಲೌಕಿಕ ವ್ಯಾವಹಾರಿಕ । ಜಾತದೃಷ್ಟಿಗಳಿಗೆ ಜಗವಿದು ॥ ಮಾತೇನು ತುಚ್ಛವನಿರ್ವಾಚ್ಯವೆಲೆ ತಥ್ಯ । ವೀ ತೋರ್ಪವಾತ್ರವೆಂದೆನಿಸಿರ್ಕು ॥೭॥ ಗಗನ ಕುಸುಮದಂತೆ ಶುಕ್ತಿ ರಜತದಂತೆ । ಮಿಗೆ ಯಾತ್ಮ ನಂತಿಂದ್ರಜಾಲದ ॥ ನೆಗಳಿಕೆಯಂತೆಂದು ಪರಿ

ವಿಡಿದೀ ನಾಲ್ಕು | ಬಗೆಯ ದೃಷ್ಟಾಂತಂಗಳವಕಿಲ್ಲಿ || ೮ || ಉಳ್ಳೊಡುಂಟಾ ಗಿರದಿಲ್ಲೆನೆ ತೋರ್ಪುದು | ನಲ್ಲಳೆ ಕೇಳಿದು ಕಾರಣ || ಸೊಲ್ಲಿಡೆ ತಾನಿದಿರೆಂ ದಿಂತು ತೋರ್ಪುದಿ | ದೆಲ್ಲವರಿಯೆ ಮಿಥ್ಯಾವ್ಯವಹಾರ || ೯ || ಅದರಿಂದೆ ಪೂರ್ಣಾತ್ಮನಿಗೆ ಮಿಥ್ಯಾವ್ಯವಹಾರ | ವದು ನಿಜವೆನೆ ತೋರುತಿರ್ಪುದು || ಒದವಿ ಸಮ್ಯಜ್ಞಾನಲೋಚನದಿಂದೆ ನೋ | ಡಿದಡಿದು. ಪುಸಿಯೆಂದೆ ನಿಸುತಿರ್ಕು || .... .... .... ||೧೦||

ಯೋಗೀಶ್ವರಂಗೆ ಪ್ರಾರಬ್ಧಭೋಗ ವ್ಯವಹಾರ ನಿರಾಕರಣ
ನಿರೂಪಣೆ–ಸೂತ್ರ ೯ಕ್ಕೆ ಪದ ೭೯.

---

ಸೂತ್ರ || ತನುಮೊದಲಾದ ತೋರಿಕೆ ತಮ್ಮ ಕಾರ್ಯಂಗ |
ಳನು ಮಾಡದಿರೆ ಕೆಟ್ಟುದಲ್ಲವೆ ||

ಪದ || ಪುಸಿಯಾಗಿ ಕಂಡನೋಳಸಿತು ಸಂಪ್ರೀತಿಯ | ನೆಸಗಲರಿಯ ದಿರ್ಪ ಕತದಿಂದೆ || ಬಿಸರುಹ ದಳನೇತ್ರೆ ವಿಷಯಾಳಿಗಳಿಗೆ ಭಾ | ವಿಸಿ ನೋಡಲದು ಲಯವಲ್ಲವೆ ||೧|| ತನು ಶ್ವಶತ್ವಾದಿಗಳಿಂದೆ ತಾನೆನಿಸಿ ಮುಂ | ನಿನ ಪರಿಯೊಳು ತೋರದುದರಿಂದ || ತನುವಿಗೆ ಲಯವದು ತಾನೆ ಸಂಶಯ ಮಾದ | ತನುಮಧ್ಯೆ ನೀನಿದನರಿವುದು ||೨|| ನಡೆ ನುಡಿ ಮೊದಲೆನಿಪಡೆ ಯೊಳಾ ವ್ಯವಹಾರ | ದೊಡೆತನವನು ತನ್ನದೆನಿಸುವ || ತೊಡಕನೊಮ್ಮೆಯು ಮಾಡದಿಹುದರಿಂದವೆ ಚಲ್ವ | ಮಡದಿ ಕರ್ಮೇಂದ್ರಿಯ ಲಯವದು ||೩|| ಅನ್ಯತವೀ ತ್ರೈಲೋಕ್ಯದೊಳಗೆ ಭೇದ ಜ್ಞಾನ | ವನು ತನ್ನೊಳೆಸಗಲರಿಯ ವಾಗಿ || ಮನದನ್ನೆ ಮೈತ್ರೇಯಿ ಕೇಳು ಬುದ್ಧೀಂದ್ರಿಯ | ವೆನಿಸುವೈದರ ಲಯವದು ತಾನೆ ||೪|| ತನುವೊ ಜೀವನೊ ಪರಾತ್ಮನೊ ತಾನಾರೆಂ ಬುದೊಂ | ದಿನಿಸಿಲ್ಲದಾನೆ ಪರಾತ್ಮನು || ಎನೆ ಮನೋಲಯವದು ತಾನೆ ಪರಾತ್ಮಭಾ | ವನೆಯುಳವಟ್ಟ ಮಾನಿನಿರನ್ನೆ ||೫|| ಮನದಸಂದೇಹವೆಳ್ಳ ನಿತಿಲ್ಲದಾನೆ ಚಿ | ದ್ಘನರೂಪನಾದ ನಿಜಾತ್ಮನು || ಎನೆ ಪುಸಿ ಬುದ್ಧಿ ನಿಶ್ಚಯ ವೆಂಬುದಿಂತಾಗೆ | ವನಜಾಸ್ಯೆ ಮತಿಲಯವದು ನೋಡು || ೬ || ಘನ ಮಾನಸಾದಿಗಳೊಳಗಹಂಭಾವನೆ | ತನಗೆ ಮುನ್ನಿನ ಪೋಲಿಲ್ಲದುದನು || ಮುನಿಮುಖ್ಯರೆಂಬರಹಂಕೃತಿಲಯವೆಂದು | ವನಿತೆ ನೀನಿದನಿಂತುತಿಳಿವುದು ||೭||

ಜೀವಾದಿ ಸಕಲಹಂಭಾವವಂ ಧರಿಸಲು । ದ್ಭಾವಿಸಲರಿಯದಿರ್ಪುದ ರಿಂದೆ ॥ ಭಾವೆ ಕೇಳದು ಚಿತ್ತದಿರವಿನ ಲಯವೆಂಪು । ಭಾವಜ್ಞರುಗಳವಧರಿಪರು ॥೮॥ ಅಜ್ಞತೆಯೆಂಬುದು ತಜ್ಞರೊಳಿಲ್ಲವೆಂ । ತಜ್ಞತೆ ದೋರದ ಕತದಿಂದ ॥ ಪ್ರಾಜ್ಞರಂತದನೆ ಜ್ಞಾತೃತ್ವದ ಲಯವೆಂದು । ಸುಜ್ಞಾನಿಗಳಿಗೆ ಬೋಧಿಸುವರು ॥೯॥ ದೃಶ್ಯವಿರಲು ತನ್ನನದು ಮರಸುಗುಮಿಂತು । ದೃಶ್ಯವಿಲ್ಲಾಗಿ ಮರಸಲಿಲ್ಲ ॥ ದೃಶ್ಯವಿಲಕ್ಷಣನಿಗೆ ಮರೆಯಿಲ್ಲಾಗಿ । ದೃಶ್ಯ ಮಾಯಾ ಲಯವದು ತಾನೆ ॥೧೦॥ ತಾನುಂಟೆನಿಸುಗುಮಿಾ ವಿಷಯಾಳಿಯುಳ್ಳೊಡೆ । ತಾನೇನನರಿಯದ ಕತದಿಂದ ॥ ಏನುವಿಲ್ಲದಿರಲ್ಕೆ ಮಾನಿನಿ ತಿಳಿಯದು । ತಾನಾತ್ಮಲಯವೆಂದು ನಿಜದಿಂದ ॥ .... .... .... ॥೧೧॥

ಯೋಗೀಶ್ವರಂಗೆ ದೇಹಾದಿ ಲಯ ಪ್ರಕಾರ ನಿರೂಪಣೆ-ಸೂತ್ರ ೧೦ ಪದ ೯೦.

---

ಸೂತ್ರ ॥ ಪೊನ್ನೊಳು ತೊಡಿಗೆಯೆಂತಂತೆ ಜಗತ್ತಿದು ।
ತನ್ನೊಳಿಲ್ಲೆನೆ ಕೆಟ್ಟುದಲ್ಲವೆ ॥

ಪದ ॥ ಜಡನಿಧಿಯೊಳುತೆರೆ ಮಡಕೆಮೃತ್ತಿಕೆಯೊಳು । ಕಡಗವಾ ಕಾಂಚನದೊಳಗೆಂತು ॥ ಮಡದಿ ತನ್ನೊಳು ಜಗವಿದು ಪುಸಿಯೆಂದರಿ । ದೊಡೆ ಯುಗಪಲ್ಲಯವದಕಕ್ಕು ॥೧॥ ಜಳಧಿಯ ತೆರೆ ತೋರುವಡಗುವೆಡೆಯೊಳುತ । ನ್ನೊಳಗೊಂದನೊಂದು ಬಾಧಿಸುವಂತೆ ॥ ಸುಳಿದು ತನ್ನೊಳು ತೋರ್ಪ ವ್ಯವಹಾರವೆಂಬುದು । ತಿಳಿದು ನೋಡಲು ಪುಸಿಯೆನಿಸುಗು ॥೨॥ ತೋರಿದೊಡೇನು ತೋರದೊಡೇನು ಜಗವಿದು । ನೀರೆ ನೀನರಿ ಪುಸಿಯುಹುದೆಂದು ॥ ತೋರಿ ಜಳಧಿಯೊಳಡಗುವ ತೆರೆಯಂತೆ । ಬೇರೇನು ನುಡಿ ಮಿಥ್ಯಾವ್ಯವಹಾರ ॥ .... .... .... .... ॥೩॥

ಪೃಥಕ್ಪ್ರಕೃತಿಲಯಪ್ರಕಾರ ನಿರೂಪಣೆ-ಸೂತ್ರ ೧೧ಕ್ಕೆ ಪದ ೯೩.

---

ಸೂತ್ರ ॥ ಜಗವಿದು ಪುಸಿಯೆಂದು ಮಿಗೆ ತಿಳಿದಾರೂಢ ।
ನಿಗೆ ಸುಖಾದಿ ದ್ವಂದ್ವ ತತಿಯುಂಟೆ ॥

ಪದ ॥ ತನುವಸುವಿಂದ್ರಿಯಗಳಾಗಳಿಲ್ಲಾತ್ಮನಿಗೆ ಸಾ । ಧನವಿಲ್ಲದೆಂತು ವಿಷಯದೊಳು ॥ ತನಗೆ ಮೇಳನವೆಂಬುದಹುದು ವಿಚಾರಿಸ । ಲನಿತುಮಸತ್ಯ

ಮಪ್ಪುದರಿಂದೆ ॥ ೧ ॥ ಪುಸಿ ವಿಷಯಾಳಿಗಳೊಳು ಪುಸಿ ದೇಹಾದಿ । ಪುಸಿ ಜೀವನೊಡಗೂಡಿ ಚರಿಸಲು ॥ ಅಸಮಸದ್ವಯ ಸುಖನಿಧಿ ಸತ್ಯರೂಪನೆ । ನಿಸುವ ಪರಾತ್ಮಂಗೆ ತನಗೇನು ॥ ೨ ॥ ಪುಸಿ ದೇಹಾದಿಗಳಲ್ಲಿ ಪುಸಿ ನಿಯಮಂಗಳ । ಪುಸಿ ಜೀವನಿಗೆ ಕಲ್ಪಿಸುವುದೇಕೆ ॥ ಬಿಸಜಾಕ್ಷಿ ಕೇಳಾತ್ಮನಚಲ ನಚ್ಯುತನು ಸಾ । ಧ್ವಸವಿಲ್ಲದಾನಂದ ಪೂರ್ಣನು ॥ ೩ ॥ ವರವಿವೇಕದೆ ತನಗನ್ಯನೆನಿಸಿ ತೋರ್ಪ । ಶರಿರಾದಿ ಕಡಿದು ಬಿಸುಟು ಬಿಟ್ಟ ॥ ಕರಚರಣದ ತೆರನದರ ಶುಭಾಶುಭಾ । ಚರಣೆಯಿಂದೇ ನಾನು ಫಲಮುಂಟೆ ॥ ೪ ॥ ತಿಳಿವಿನಿಂದುಳಿದ ಮನೋಧರ್ಮಾದಿಕವನು । ನಿಲಿಸಲಾಯಸಗೊಂಬವನು ಬಿಟ್ಟ ॥ ಮಲದ ದುರ್ವಾಸನೆಯನು ಕೆಡಿಸಲ್ಕೆ ಕೋ । ಟಲೆಗೊಂಬ ಗಾಂಪನಿಗೆಣೆಯಕ್ಕು ॥ ೫ ॥ ಮನವನಿಂದ್ರಿಯವನಾಮತಿಯು ನಿರೋಧಿಸ । ನನಿತುಮಸತ್ಯವೆನಿಸುವುವು ॥ ಕನಸಾರಿ ಕಲ್ಲು ಬಿಸಿಲುದೊರೆ ಸುರಧನು । ಘನಜಾಲದಂತೆಂದು ತಿಳಿದಾತ ॥ ೬ ॥ ಲೇಸಿದು ಹೊಲ್ಲವೆಂಬೀಸುಮಾ ಭ್ರಾಂತಿಯಾ । ಲೇಸು ಹೊಲ್ಲೆಯುಮಿವು ಪುಸಿದೋರ್ಕೆ ॥ ಲೇಸಾಗಿ ಕೇಳಿಲೆ ನೀರೆ ಕನಸಿನೊಳು । ಲೇಸುಹೊಲ್ಲೆಂಬ ಭಾವನೆಯಂತೆ ॥ ೭ ॥ ತನುವಿಗಿಂದ್ರಿಯಕೆ ಮಾನಸಕೆ ಚೇತನಕಿಷ್ಟ । ಜನಕೆ ಲೋಕಕೆ ವೇದವಿಧಿಗಳ್ಗೆ ॥ ಇನಿಸು ಕಿಂಕರನಲ್ಲ ವರಯೋಗಿ ನಿಜಬೋಧ । ನನಘನಖಿಳಭಾವರಹಿತನು ॥ ೮ ॥ ನೆನಸಿನೊಳ್ವಿಧಿಗೆ ತೊಳ್ತೆನಿಸಿದಾತನ ಬಗೆ । ಕನಸಿನ ಜನಪಂಗೆ ಬೆರಲಿತ್ತು ॥ ನಿನಗೆ ನಾನೆಲೆ ವೆಲೆಯಾಳೆಂಬವನ ವೃತ್ತಿ । ವನಿತೆ ಹಾಸ್ಯವೆ ಸೋಡು ತಿಳಿದಂದು ॥ ೯ ॥ ನರಕ ನಾಕಾಮೃತ ಮರಣ ಜನನ ಪುಣ್ಯ । ದುರಿತಾದಿಗಳ ಭೀತಿ ತನಗಿಲ್ಲ ॥ ವರಯೋಗಿ ಗುಣಭಾವರಹಿತನಪ್ಪುದರಿಂದೆ । ತರಳಾಕ್ಷಿ ನಂಬಿದು ನಿಜವೆಂದು ॥ ೧೦ ॥ ತನುವಿಗೆ ಮನಕೆ ಚೇತನಕೆ ವಿಷಯವೃತ್ತಿ । ಯೆನಿಪೆಡೆಯೊಳು ಜೀವಭಾವವ ॥ ಇನಿತು ನಿವಾರಣೆಗೈವನೆ ಯೋಗಿಚಿ । ದ್ಘನ ಸಾಕ್ಷಿತಾನೆಂದರಿದ ಮೇಲೆ ॥ ೧೧ ॥ ಪ್ರಕೃತಿಯೆ ಹುಸಿ ನಾನಾವಿಕೃತಿಜಾಲಕ್ಕೆ ಕಾ । ತುಕವನದೆಂತು ಕಾಣ್ಬನು ಯೋಗಿ ॥ ಅಕಲಂಕ ನಿಜವೆ ತಾನಾಗಿ ಮಿಕ್ಕಿನ ಜಡ । ಪ್ರಕೃತಿಗೆ ದಿಟವೇಳ್ವ ಮರುಳಂತೆ ॥ ೧೨ ॥

ಯೋಗೀಶ್ವರಂಗೆ ವಿಧಿ ನಿಷೇಧಾಭಾವ ನಿರೂಪಣೆ

ಸೂತ್ರ ೧೪ಕ್ಕೆ ಪದ ೧೦೫.

———

ಸೂತ್ರ ॥ ಪುಸಿನಿಯಮವನು ಬೋಧಿಸುವನೆ ನಿಜಗುರು ।
ಪುಸೆ ದಿಟವೆಂಬ ಕರ್ಮಿಯ ವೋಲು ॥

ಪದ ॥ ಕನಸಿನ ವಿಕೃತಿಯಂತಿರೆ ನೆನೆಸಿನ ಜಗ । ವನಿವಾರ್ಯವಿಂತು ಕಾಣಿಸುವದು ॥ ವನಿತೆ ಕೇಳ್ಪುಸಿ ನಿಯಮಂಗಳನದರಲ್ಲಿ । ಮುನಿಮುಖ್ಯರೆಂತು ವಿಧಿಸುವರು ॥೧॥ ಪರಮಾತ್ಮನದ್ವಯಾನಂತನಚ್ಯುತನಾಗಿ । ಪರಿಕಿಸೆ ಜಗವಿದು ಪುಸಿಯಾಗಿ ॥ ಪರಮಾರ್ಥವೆಂದು ನಿಯಮವಿಧಿಗಳನಿಲ್ಲಿ । ಗುರುವರನೆಂತು ಬೋಧಿಸುವನು ॥೨॥ ತನುವಿದು ತಾನಲ್ತು ತನು ತನ್ನದಲ್ಲವಾ । ತನು ಮಿಥ್ಯೆಯದರಲ್ಲಿ ವಿಧಿಯಸು ॥ ತನುವಿರಹಿತನಾದಾತ್ಮನಿಗೆಂತು ನಿಜತತ್ವ । ವನು ಬಲ್ಲವನ್ರೊಡಲೊರೆಗುವು ॥೩॥ ತನುವಿಲ್ಲದನಿಗೆ ಕೇಳ್ಮನವಿಲ್ಲದನಿಗೆ ಚೇ । ತನವಿಲ್ಲದನಿಗೆ ನಿಯಮವನು ॥ ತನಗೆ ವಿಧಿಸಿ ಪೇಳಲರಿವರೆ ನಿಜನಿಷ್ಠ । ರೆನಿಸುವ ಪರಮ ಸದ್ಗುರುಗಳು ॥೪॥ ತನುವಿದು ತಾನೆಂಬ ತನು ತನ್ನದೆಂಬ ತೋ । ರ್ಪನಿತು ಜಗವನಿದು ನಿಜವೆಂಬ ॥ ಘನಮೂಢನೆನಿಸುವಾತನೆ ಬೋಧಿಸುವನ್ನೆಸೆ । ತನು ಮನೋನಿಯಮ ವಿಧಿಗಳನು ॥೫॥ ಪರಿಕಿಸಲರಿಯದೆ ನಿರ್ಗುಣಾತ್ಮನ । ಸುರು ಕರ್ಮ ಗುಣಯೋಗಮುಸುರ್ವನು ॥ ಗುರುವರನವನಲ್ತು ಯಮಕಿಂಕರನೆ ಬಾಧಾ । ಕರನಾಗಿ ತಿಳಿ ತೋರಮುಡಿಯಳೆ ॥೬॥ ಪರಮನೆ ನೀನು ನಿಷ್ಕ್ರಿಯನು ನೈರ್ಮಲ್ಯನೆಂ । ದೊರೆವಾತನಧಿಕ ಸದ್ಗುರುವಕ್ಕು ॥ ಮರಳಿ ಜೀವನು ಕರ್ಮಿ ಮಲಿನನೆ ನೀನೆಂಬ । ಗುರು ತಾನೆ ತನಗೆ ಬಾಧಕನ್ನೆಸೆ ॥ .... ॥೭॥

ಯೋಗೀಶ್ವರಂಗೆ ವಿಧಿನಿಯಮಾಭಾವ ನಿರೂಪಣೆ–ಸೂತ್ರ ೧೩ಕ್ಕೆ ಪದ ೧೧೨.

---

ಸೂತ್ರ ॥ ತನ್ನ ಭಾವವೆ ಕರ್ಮ ದೈವ ಬೋಧಾದಿ ಬೀ ।
ಜಂ ನಿಜವೆನೆ ಪರಾತ್ಮನು ತಾನೆ ॥

ಪದ ॥ ಕರ್ಮದಿಂದಖಿಳ ಸಂಸೃತಿ ದುಃಖವಹುದಾಗಿ । ಕರ್ಮವೆ ಬಂಧವಂತದರಿಂದ ॥ ನಿರ್ಮಳ ಮೋಕ್ಷವಾಗದು ನಿಜವಿದು ತೋರ । ಸೋರ್ಮುಡಿಯಳೆ ಕೇಳು ಪರಮಾರ್ಥ ॥೧॥ ಕರ್ಮಿ ಕರ್ಮವನು ಬ್ರಹ್ಮದೊಳರ್ಪಿಸುವುದೆಲೆ । ನಿರ್ಮಳ ಮನದಿಂದವನೆ ವೇದ ॥ ಮರ್ಮವನರಿಯದೆ ಬರಿದೆ ಬಾಹ್ಯದೊಳೆಂತು । ದುರ್ಮತಿ ಮಾಳ್ಪನಾ ಕ್ರಿಯೆಗಳ ॥೨॥ ಕರ್ಮವನಾ ಬ್ರಹ್ಮ

ವನು ಕರ್ಮಿಯೆನು ವಿಗೆ । ನಿರ್ಮಳ ಬುದ್ಧಿಯಿಂದರಿಯದೆ ॥ ದುರ್ಮತಿ ಬಿಡ ದನುದಿನದೊಳು ಮಾಳ್ಪನೀ । ಕರ್ಮನೆನಾ ಬ್ರಹ್ಮಾರ್ಪಣವೆಂದು ॥ ೩ ॥ ಅರಿಯೆತಾನೆಬ್ರಹ್ಮ ಪರಿಯದೊಡರ್ಪಿಸ । ಲರಿಯನಂತದರಿಂದೆ ಕರ್ಮವ ॥ ತೊರೆಯೆಂಬುದರ್ಥವಾ ಶ್ರುತಿಯ ನೀನರಿದೋರ್ಮೆ । ಮರೆಯದಿರೆನ್ನಾತ್ಮ ಸುಖಾರ್ಥಿ ॥ ೪ ॥ ಅರಿವಿಂದೆ ಕಲ್ಪಿಸಲರಿಯದಿರ್ದೊಡೆ ದೈವ । ವರಸಿ ದೊಡೊಳ ಹೊರಗೆಲ್ಲಿಯು ॥ ಕುರುಹಿಡಲಿಲ್ಲಾವ ತೆರದಿಂದಲರಿವೊಂದು । ಪೊರತಾಗಿ ವಿ.ಶ್ವ ತೋರ್ಕೆಗಳುಂಟೆ ॥ ೫ ॥ ಆದರಿಂದೆ ದೈವವಾನೆಂಬುದೆ ಶ್ರುತಿ ಸಿದ್ಧ । ವಿದನುರೆ ನಂಬಿದ ಪುರುಷರ್ಗೆ ॥ ಸದಮಳ ಮುಕ್ತಿಯಪ್ಪುದು ಬೇರೆ ದೈವವೆಂ । ಬುದು ದಿಟಕಿಲ್ಲಿದು ಪರಮಾರ್ಥ ॥ ೬ ॥ ಜ್ಞಾನವೆ ತನ್ನನಜ್ಞಾನ ವನರಿವುದೆಂ । ಬೀ ನುಡಿಗರ್ಥವಿಂತಿದು ತಾನು ॥ ತಾನೆ ತನ್ನಿಂದನ್ಯವೇನು ಮಿಲ್ಲೆಂಬುದು । ನೀನಿದನೆಳಸಿ ನೋಡೆಲೆ ನೀರೆ ॥ ೭ ॥ ಜ್ಞಾನದಿ ನೋಡಲಾ ಜ್ಞಾನದಿಂದನ್ಯವ । ನೇನನು ಕಾಣಲರಿಯನಾಗಿ ॥ ಜ್ಞಾನವೆ ತಾನೆಂಬುದಿದು ಸಿದ್ಧವರಿ ಪರ । ಮಾನಂದರಸ ಪೂರ್ಣಹೃದಯಳೆ ॥ ೮ ॥ ಇಂತು ಕಾಂಡತ್ರ ಯಾರ್ಥಂ ತಾನೆ ತನ್ನನೋ । ರಂತೆ ತನ್ನಿಂದರಿಯೆಂಬುದು ॥ ಕಾಂತೆ ಮ್ನೆ ತ್ರೇಯಿ ಭಾವಿಸು ಕರ್ಮ ದೈವ ಜ್ಞಾ । ನಂ ತನಗಿಲ್ಲ ವದ್ವಯನಾಗಿ ॥ ೯ ॥

ಕಾಂಡತ್ರಯಾರ್ಥ– ವಿಶೇಷ ನಿರೂಪಣೆ–ಸೂತ್ರ ೧ಳಕ್ಕೆ ಪದ ೧೨೧.

---

ಸೂತ್ರ ॥ ಕರ್ಮದೆ ಜ್ಞಾನಕರ್ಮದೆ ಮುಕ್ತಿ ಘಟಿಸದು ।
ನಿರ್ಮಳ ಜ್ಞಾನದಿಂದಲ್ಲದೆ ॥

ಪದ ॥ ಈ ತನುತಾನೆಂದೊಡಾತಂಗೆ ವಿಧಿ ಕರ್ಮ । ವೀ ತನು ತಾನಲ್ಲ ವಿದು ಮಿಥ್ಯೆ ॥ ಯೀತೆರದಿಂದವೊಂದನುಭವದಿಂದ ಕಂ । ಡಾತನು ಮಾಳ್ಕುಮೆ ಕ್ರಿಯೆಗಳ ॥ ೧ ॥ ತನುವಾತ್ಮನಲ್ಲವಾತ್ಮನು ತನುವಲ್ಲಾಗಿ । ತನಗೆಂತು ಕರ ಣೀಯವದು ಕರ್ಮ ॥ ಜನನವಿಲ್ಲಾಗಿ ವಿಪ್ರಾದಿ ಭಾವನೆಯಿಲ್ಲ । ವೆನಿಪ ಚಿನ್ನ ಯನೆತಾನಹನಾಗಿ ॥ ೨ ॥ ಒಡಲಿಂದ ಕರ್ಮವನೆಡೆವಿಡದೆಸಗಲ್ಕೆ । ಕೆಡಲರಿ ಯದು ಬಂಧವದರಿಂದ ॥ ಕುಡುತೆಗಂಣಬಲೆ ನೀನರಿವುದು ಕರ್ಮವೆಂ । ದೊಡೆ ಮೋಕ್ಷವಿಲ್ಲವಿಂತಿದು ಸತ್ಯ ॥ ೩ ॥ ಜನವೆಲ್ಲವಿಳೆಯೊಳಗನುದಿನದೊಳು ಕರ್ಮ । ವನು ಮಾಳ್ಪುದನಿತರಿಂದವೆ ಬಂಧ ॥ ವಿನಿತು ಪಿಂಗಿರದಾಗಿ ವನಜಾಸ್ಯೆ

ಮೋಕ್ಷ ಸಾ । ಧನವೆಂಬುದಹುದೆ ಪೇಳ್ಕ್ರಿಯೆಯಿಂದ ॥ ೪ ॥ ಅರಿವಿನೊಳ್ಕೂಡಿ ತನ್ನರಿವಿಂದೆ ಕರ್ಮವ । ನರಿವುಳ್ಳವರ್ಮಾಡಿದೊಡೆ ಮುಕ್ತಿ ॥ ನೆರೆ ಸಿದ್ಧಿಸುವದೆಂದು ನುಡಿವರು ಲೋಕದೊ । ಳರೆಮರುಳುಗಳಾದ ಜನರೆಲ್ಲ ॥ ೫ ॥ ರವಿಗೆ ತಾಮಸಕೆ ಪಾವಕನಿಗೆ ಶೀತಕ್ಕೆ । ಹವಣಿಸದೆಂದು ಮೇಳನವದು ॥ ಯುವತಿ ಕೇಳಿಲೆ ಸಮುಚ್ಚಯ ಪಾವತೆರದಿಂದೆ । ಸವನಿಸದಾ ಜ್ಞಾನ ಕ್ರಿಯೆಗಳ್ಗೆ ॥ ೬ ॥ ಬ್ರಹ್ಮದೊಳರ್ಪಿತವಾಗಲಿಯೆಂದೊಡೆ । ಬ್ರಹ್ಮಣಿ ಸ್ವಾಹೇತಿಯೆಂದೊಡೆ ॥ ಬ್ರಹ್ಮ ವಿಜ್ಞಾನಮುದಿಸದಿರ್ಪ ಕತದಿಂದೆ । ಬ್ರಹ್ಮಾರ್ಪಣದೊಳು ಕೇಳ್ಪರುಳಿಲ್ಲ ॥ .... .... , .... ॥ ೭ ॥

ಕಾಂಡತ್ರಯ ವಿಷಯಭಾಗನಿರೂಪಣೆ-ಸೂತ್ರ ೧೫ಕ್ಕೆ ಪದ ೧೦೮.

---

ಸೂತ್ರ ॥ ಪರಿಯದು ಕರ್ಮದಿಂದಬಲೆ ಸಂಸೃತಿ ತನ್ನ ।
ನರಿದೊಡೆ ಮುಕ್ತಿ ಮರೆಯೆ ಬಂಧ ॥

ಪದ ॥ ಅನೃತವೀ ಜಗವೆಂದ ಬಳಿಕಾದ ಕರ್ಮವೆ । ಕನಸಿನೊಳುದಿಸಿದ ತನುಜಂಗೆ ॥ ಮನವಾರೆ ಜಾತಕರ್ಮವನು ಸಂಭ್ರಮದಿಂದೆ । ನೆನಸಿನೊಳಗೆ ಮಾಳ್ಪತೆರನಂತೆ ॥ ೧ ॥ ತನುಭಾವವಳಿಯೆ ನಿರ್ಮಳ ಮುಕ್ತಿ ಕರ್ಮವೆ । ತನುಮೂಲವದರಿಂದೆ ಬಂಧನ ॥ ತನಗೆಂತು ಮೋಕ್ಷ ಸಾಧನವಹುದಾ ಕರ್ಮ । ವಿನಿಯಳೆ ಕೇಳಿದು ಪರಮಾರ್ಥ ॥ ೨ ॥ ಛಲವನುಳಿದು ಕಾಂತೆ ಕೇಳು ನೀನೆಲೆ ಕರ್ಮ । ಫಲಮುತ್ಪಾದ್ಯ ಪ್ರಾಪ್ಯ ವೈಕಾರ್ಯ ॥ ಬಳಿಕ ಸಂಸ್ಕಾರ್ಯವೆಂಬೀ ನಾಲ್ಕು ತೆರನಿವ । ರೊಳಗೊಂದುಮಲ್ಲವಾ ನಿಜಮುಕ್ತಿ ॥ ೩ ॥ ಘಟಪುರ ತಂಡುಲ ಮುಕುರವೆಂಬಿವನು ಸಂ । ಘಟಿಸಿ ಮಾಡಿದನೈದಿದನು ಮತ್ತೆ ॥ ಪಟುವೆನೆ ಪಚಿಸಿದನುರೆ ಬೆಳಗಿದನೆಂಬ । ನಟಣೆ ತತ್ಫಲ ನಾಲ್ಕರನುಭಾವ ॥ ೪ ॥ ಅದರಿಂದಮಿದರೊಳಾವುದು ಮನಲಿಲ್ಲವಾ । ಸದಮಳ ನಿಷ್ಕಳ ವಿಭು ನಿತ್ಯ ॥ ಪದವಾದ ಮೋಕ್ಷವದು ಕರ್ಮದಿಂದಮೆಂ । ಬುದು ಪುಸಿ ತನ್ನನರಿಯೆ ಮುಕ್ತಿ ॥ ೫ ॥ ಸೊಡರಿಂದವಲ್ಲದೆ ಕೆಡದು ಕತ್ತಲೆಯಂತೆ । ಮಡದಿ ಕೇಳ್ಕೋಟಿ ಸತ್ಕ್ರಿಯೆಯಿಂದ ॥ ಕೆಡಲರಿಯದು ಬಂಧವದು ತನ್ನನರಿದೊಡೆ । ಕೆಡುಗುಮಿಂತಿದು ಸಿದ್ಧವಸಿಯಳೆ ॥ ೬ ॥ ಕೊರಡಿನ ಚೋರ ಭೀತಿಯು ಮುದ್ದುಗುಡಿದೊಡೆ । ಪರಿವುದೆ ತಿಳಿದಲ್ಲದಿಳೆಯೊಳು ॥ ಪರಿಭವ ಕಾರಣಾವಿದ್ಯೆ

ಕೆಡದು ತನ್ನ । ಪರಿಯನರಿಯದೆ ಸತ್ಕ್ರಿಯೆಯಿಂದ ॥ ೭ ॥ ಒಂದು ಕರ್ಮದೆ ಮೋಕ್ಷವೆಂದೊಡುಳಿದ ಕರ್ಮ । ವಂದುನಿರರ್ಥ ವೆಲ್ಲವರಿಂದೆ ॥ ಎಂದೊಡೋ ರ್ವನಿಗಳವಡದು ತದ್ವಿಧಿಯದ । ರಿಂದೆ ಮುಕ್ತಿಗೆ ಸಾಧನವೆಯಲ್ಲ ॥ ೮ ॥ ತನಗೆಲ್ಲ ಕರ್ಮದೊಳಿನಿಸೇನು ಕರ್ತೃವಿ । ಲ್ಲನೆ ಕಂಡಾತನೆ ಯೋಗಿಯೆನಿ ಪನು ॥ ವನಿತೆ ಕೇಳೇನಾಸು ಕರ್ತವ್ಯ ಮುಂಟೆಂದು । ತನಗರಿದವ ನರೆಮರು ಳಲ್ತೆ ॥ ೯ ॥ ಅರಿವಿನಹಂಭಾವ ಕ್ರಿಯೆ ಪರಿದಲ್ಲದೆ । ಪರಿಯದು ಭವಬಂಧ ವೆಂಬಲ್ಲಿ ॥ ನೆರೆದಿಂಗಳಿಣೆ ಮೊಗದಳೆ ಕೇಳು ವರಯೋಗಿ । ಮರದೊಮ್ಮೆ ಮಾ ಳ್ಪನೆ ಕ್ರಿಯೆಗಳ ॥ ೧೦ ॥ ತನಗೆ ಧರ್ಮಾಧರ್ಮವೆರಡು ಮಧರ್ಮವೆಂ । ದೆನಿ ಪವು ಜನನವೀವುದರಿಂದೆ ॥ ಮುನಿವನಿತಾ ಜನ ವಂದಿತೆ ತತ್ಕರ್ಮ । ವನು ಬಲ್ಲವರ್ಮಾಡಲೊಲಿವರೆ ॥ ೧೧ ॥ ಮೊದಲು ಪುಣ್ಯದ ಫಲವದು ತಾನೆ ಬಳಿಕ ಪಾ । ಪದ ಫಲವಾ ಪಾಪ ಫಲವದು ॥ ಮೊದಲು ದುಃಖವ ನೀವು ದದು ತಾನೆ ತಿಳಿಯಲ್ಕೆ । ತುದಿಯಳೊಂದಿಸುವದು ಸುಖದಲ್ಲಿ ॥ ೧೨ ॥ ಉಪ ಭೋಗ ಕಾಲದೊಳತಿಶಯ ಸುಖವದು । ನಿಪತಿತಂಗತಿ ದುಃಖವೆಲೆ ಮತ್ತೆ ॥ ಉಪಮಿಸೆ ನಾಕದೊಳಹುದೀತಿವೆರಡರ । ವಿಪರೀತವೈಸೆ ನರಕದೊಳು ॥ ೧೩ ॥

ಜ್ಞಾನೋತ್ಕರ್ಷ ನಿರೂಪಣೆ–ಸೂತ್ರ ೧೬ಕ್ಕೆ ಪದ ೧೪೧.

———

ಸೂತ್ರ ॥ ಶ್ರುತಿ ನೀನೆ ವಿಪ್ರನೆಂದೆನೆ ಮಾಳ್ಕೆ ವಿಧಿಗಳ ।
ಶ್ರುತಿ ಬ್ರಹ್ಮವೆನೆ ಮಾಳ್ಪುದಹುದೆಂತು ॥

ಪದ ॥ ತನಗೆ ಕರ್ಮದಿನಾದ ಭವಬಾಧೆಯದರಿಂದೆ । ಘನವಪ್ಪುದಲ್ಲದೆ ಪರಿಯದು ॥ ವನಿತೆ ಕೇಳೆಲೆ ದುಃಖಮೊಗೆದುದರಿಂದದೆ । ಘನವಪ್ಪುದದು ಪಿಂಗದಿಹಪಾಂಗು ॥ ೧ ॥ ಅನಲನಿಂದಾದ ನೋವದು ಮೇಣನಲನಿಂದೆ । ಘನವಹುದದು ಕೆದಲರಿಯದು ॥ ಇನಿಯಳೆ ನೋಡು ಕರ್ಮದೊಳಾದ ಭವ ವದು । ಘನವಕ್ಕು ಮಳಿಯದಾ ಕ್ರಿಯೆಯಿಂದ ॥ ೨ ॥ ತನುವೆ ನೀನೆಲೆ ಮನು ಜನೆ ನೀನು ವಿಪ್ರ ನೀ । ನೆನೆ ಶ್ರುತಿ ಕರ್ಮವೆ ಕರಣೀಯ ॥ ತನುಜಾತಿ ರಹಿತ ನೀನಾ ಪರಬ್ರಹ್ಮವೆಂ । ದೆನಲೆಂತು ರಚಿಪನಾ ಕ್ರಿಯೆಗಳ ॥ ೩ ॥ ತನುವಿದು ತಾನೆಂಬ ತನು ತನ್ನದೆಂದೆಂಬ । ತನು ಮೂಲವಾಗಿ ರಚಿಸುವದು ॥ ತನುವಿ ಲಕ್ಷಣ ನಿತ್ಯಮುಕ್ತನೆ ತಾನೆಂಬ । ವನು ಮಾಳ್ಪನೆಂತು ತತ್ಕ್ರಿಯೆಗಳ ॥ ೪ ॥

ತನುವಿದು ತಾನುಮಿ ಜಗವಿದು ನಿಜವೆಂಬ । ಮನುಜಂಗೆ ಕರ್ಮವೆ ಕರ ಣೀಯ ॥ ತನುವೊದಲೆನಿಸುವಿದನು ಪುಸಿಯೆಂದೆಂಬ । ವ ನದೆಂತು ಮಾಳ್ಪನಾ ಕ್ರಿಯೆಗಳ ॥ ೫ ॥ ದುರಿತವನುರೆ ಪರಿಹರಿಸುವೆಡೆಗೆ ಕರ್ಮ । ಕರಣೀಯ ವತಿ ಶಯದುಷ್ಕೃತಿ ॥ ಕರವದು ತಾನೆಂದು ತಿಳಿದ ನಿರ್ಮಳ ಬುದ್ಧಿ । ವರನೆಂತು ಮಾಳ್ಪನಾ ಕ್ರಿಯೆಗಳ ॥ .... .... .... ॥ ೬ ॥

ಯೋಗೀಶ್ವರಂಗೆ ಕರ್ಮಾಧಿಕಾರ ನಿಷೇಧ ನಿರೂಪಣೆ-

ಸೂತ್ರ ೧೭ಕ್ಕೆ ಪದ ೧೪೭.

---

ಸೂತ್ರ ॥ ಕರ್ಮದೆ ಭವದುಃಖ ವೆಂತೆಸಗುವನು ನಿ ।
ಷ್ಕರ್ಮಿ ನಿತ್ಯಾನಂದ ನಿಜಯೋಗಿ ॥

ಪದ ॥ ಭವಬಂಧವಳಿಯದ ಭವಿಯೆನಿಸುವ ನನು । ದಿವಸ ವೆಸಗುವೀ ಕರ್ಮಂಗಳು ॥ ಭವದುಃಖ ಬೀಜವದಹುದೆಂದು ತಿಳಿದನು । ಭವಿಯೆಂತು ಮಾಳ್ಪನಾ ಕ್ರಿಯೆಗಳ ॥ ೧ ॥ ತನು ಮಾನಸೇಂದ್ರಿಯಾದಿಗಳಿಗಧಿಕ ಬಾಧೆ । ಜನಿಸುಗುವಮಾ ಕರ್ಮ ಕೃತಿಯಿಂದ ॥ ಇನಿತನೆಲ್ಲವನು ತನ್ನನುಭವದಿಂದರಿ । ದನದೆಂತು ಮಾಳ್ಪನಾ ಕ್ರಿಯೆಗಳ ॥ ೨ ॥ ಮನದಿಂದೆ ಕರ್ಮವನೆನೆದೊಡೆ ದುಃಖ ಸಂ । ಜನಿಪುದೆಂದೆನೆ ಕರ್ಮವದು ನೋಡೆ ॥ ಇನಿತುಮಾನಂದ ಜನಕ ವಲ್ಲಮೆಂದು ಬ । ಲ್ಲನದೆಂತು ಮಾಳ್ಪನಾ ಕ್ರಿಯೆಗಳ ॥ ೩ ॥ ಏತೆರದಿಂದೆ ದುಃಖಾತಿಶಯವೆ ಕರ್ಮ । ಜಾತವೀ ತ್ರೈಲೋಕ್ಯದೊಳು ಪರಿ ॥ ಪೂತಮಾನಸೆ ಕೇಳು ಸುಖವಿಲ್ಲವೆಂದರಿ । ಚೇತಕ್ಕೆ ಮಾಳ್ಕುಮಾ ಕ್ರಿಯೆಗಳ ॥ ೪ ॥ ಎಳ್ಳಿನ ನಿತು ಸುಖವಿಲ್ಲವಂತದು ಬಿಟ್ಟ । ದಲ್ಲಿಂದೆ ಪಿರಿದೆನಿಸುವ ದುಃಖ ॥ ವುಳ್ಳುದಾ ಗಿಯೆ ಕರ್ಮತತಿಯೊಳು ತಿಳಿ ಪುರು । ಳಿಲ್ಲೆಂತು ಮಾಳ್ಕುಮಾ ಕ್ರಿಯೆಗಳ ॥೫॥ ಇಲ್ಲದೊಡೆಯು ಸುಖಮುಳ್ಳಾಸೆಯನು ತೋರಿ । ಬಲ್ಲರ ನಾನಾಗೊಲೆಯೊಳು ನಿಂತು ॥ ಕೊಲ್ಲದೆ ಬಿಡದಿಳೆಯೊಳು ಕರ್ಮವದರಿಂದೆ । ಪೊಲ್ಲೆಂತು ಮಾಳ್ಪನಾ ಕ್ರಿಯೆಗಳ ॥ ೬ ॥ ಇಂತು ಕರ್ಮವನೆಸಗಿದೊಡೆ ಬಾಧೆಯದು ದಿ । ಗಂತಮಾ ಗಿರೆ ಪಸರಿಪುದಾಗಿ ॥ ಕಾಂತೆಯೊಂದಿನಿಸು ದುಃಖವನು ಸೈರಿಸದವ । ನೆಂತು ಮಾಳ್ಪನು ಪೇಳು ಕ್ರಿಯೆಯನು ॥ ೭ ॥ ಪರಮನೆ ನಿರವಯವನು ಪರಿಪೂ ರ್ಣನು । ನಿರುಪಾಧಿಕನು ನಿರುಪಮನಾಗಿ ॥ ಪರಿಕಿಸುಪಾಯಮೊಂದಿನಿಸಿಲ್ಲವೆನೆ

ಯೋಗಿ । ವರನೆಂತು ಮಾಳ್ಪನಾ ಕ್ರಿಯೆಗಳ ॥ ೮ ॥ ತಾನುಳ್ಳೊಡುಂಟು
ಕರ್ಮಾನೀಕವರಿದೆಂದು । ತಾನೆಂಬುದಿಲ್ಲವಂತದರಿಂದ ॥ ಆನಂದನಿಧಿಯಾದ
ನಿಜನಿಷ್ಠನೆನಿಪಾತ । ನೇನೆಂದು ಮಾಳ್ಪನಾ ಕ್ರಿಯೆಗಳ ॥ .... ॥ ೯ ॥

ಯೋಗೀಶ್ವರಂಗೆ ಕರ್ಮೋಪರತಿ ನಿರೂಪಣೆ–ಸೂತ್ರ ೧೮ಕ್ಕೆ ಪದ ೧೫೬.

---

ಸೂತ್ರ ॥ ಮುನಿಪತಿ ನಿರ್ಗುಣಾಷ್ಟಾಂಗ ಯೋಗವನಿಂತು ।
ವನಿತೆ ಮೈತ್ರೇಯಿಗೆ ತಿಳುಪಿದ ॥

ಪದ ॥ ಇದುತಾನೆ ಸುಜ್ಞಾನ ನಿರ್ಯೋಗವಿದು ತಿಳಿ । ಯದವರ್ಗೆ
ಮುದದಿಂದೆ ಗುರುಗಳು ॥ ಅದಕೆ ಕಾರಣವೆನಿಸುವ ನಿರ್ಗುಣಾಷ್ಟಾಂಗ । ಪದ
ವಿಂತುಟೆಂದು ಬೋಧಿಸುವುದು ॥ ೧ ॥ ಎನೆ ಕೇಳ್ದು ಮೈತ್ರೇಯಿ ವಿನಯ
ವಿನತೆಯಾಗಿ । ಮುನಿಪಂಗೆ ನಿರ್ಗುಣಾಷ್ಟಾಂಗದ ॥ ಅನುವನೆನಗೆ ಪರಿವಿಡಿದರು
ಪೆನಲು ತಂ । ನಿನಿಯಳ್ಗೆ ತಿಳುಪಿದನವನಿಂತು ॥ ೨ ॥ ಮೊದಲೊಳು ಯಮ
ವನಂತದರಿಂದೆ ನಿಯಮವಂ । ತದರಿಂದಾಸನವ ನಂತದರಿಂದ ॥ ಒದವಿದ
ಪ್ರಾಣಾಯಾಮವ ಪ್ರತ್ಯಾಹಾರವ । ನದರಿಂದೆ ಕೇಳು ಮನ್ಮನದನ್ನೆ ॥ ೩ ॥
ಅದರಿಂದೆ ಧಾರಣೆಯದರಿಂದೆ ಧ್ಯಾನವಂ । ತದರಿಂದೆ ಪರಸಮಾಧಿಗಳನು ॥
ಪದಪಿಂದೆ ತಿಳಿ ನೀನು ನಿರ್ಯೋಗ ಜ್ಞಾನಸಂ । ಪದಕಿಂತಿವಾದಿಕಾರಣ
ವಕ್ಕು ॥ .... .... .... ॥ ೪ ॥

ನಿರ್ಗುಣಾಷ್ಟಾಂಗ ನಾಮಕ್ರಮ ನಿರೂಪಣೆ–ಸೂತ್ರ ೧೯ಕ್ಕೆ ಪದ ೧೬೦.

---

ಸೂತ್ರ ॥ ಚೈತನ್ಯ ಯೋಗವೆ ನಿರ್ಗುಣಾಷ್ಟಾಂಗವಾ ।
ಚೈತನ್ಯ ಕ್ರಿಯೆಯುಳಿದುದೆ ಬೊಮ್ಮ ॥

ಪದ ॥ ತನು ಮಾನಸೇಂದ್ರಿಯ ವಸುನಿಕಾಯಾದಿಗ । ಳೆನಿಸಿತೋರ್ಪ
ಖಿಳ ವಿಷಯದೊಳು ॥ ತನಗೆ ವಿರತಿ ಪುಟ್ಟಿದೊಡೆಯದೆ ಯಮವೆಂದು । ಘನ
ನಿತಂಬಿನಿ ನೀನು ತಿಳಿವುದು ॥ ೧ ॥ ತನಗೆಲ್ಲ ವಿಷಯದೊಳುದಿಸಿದ ವಿರತಿ
ಕೇಳ್ । ಮನದಲ್ಲಿ ನಿಲಲದು ದೃಢವಾಗಿ ॥ ಮುನಿಜನರೊಲುಮೆಯ ನಿಯಮ
ವೆನಿಪುದೆಂದು । ವನಿತೆ ಮೈತ್ರೇಯಿ ನೀನರಿವುದು ॥ ೨ ॥ ರತಿಯುಮಾ ವಿರತಿ
ಯುಮಖಿಳವಿಷಯದೊಳ । ತ್ಯತಿಶಯದಿಂದಮಿಲ್ಲೆನೆ ಕೆಟ್ಟು ॥ ಮತಿಯೊಳು

ದಾಸೀನ ಸ್ಥಿತಿಯಾಗಲಾಸನ । ಗತಿಯದು ತಾನೆಂದು ತಿಳಿ ನೀರೆ ॥ ೩ ॥ ತನು ಮೊದಲಾಗಿ ತೋರ್ಪನಿತಸು ಪುಸಿಯೆಂದು । ತನಗಲ್ಲಿ ಚೇಷ್ಟೆಯಳಿದು ನಿಲ್ಲೆ ॥ ಅನಿಲ ನಿರೋಧನವದು ತಾನೆ ವೈತ್ರೇಯಿ । ಮುನಿಮತವೆಂದು ನಿಶ್ಚಯಿಪುದು ॥ ೪ ॥ ಪುಸಿಯಾದ ಜಗವಿದು ಪುಸಿದುಃಖಕರವೆಂದು । ಪುಸಿನೋಟವನು ತೆಗೆದುದರಿಂದ ॥ ಒಸೆದರಿವಂತರ ಮುಖವಾಗಲಡಕೆ ತಾ । ನೆಸೆವುದು ಪ್ರತ್ಯಾಹರಣನಾಮ ॥ ೫ ॥ ಅರಿವಂತರವೆಯಾಗಿ ಪೊರಗೇನಾರಯ್ಯದಂ । ತರಿವಿನೊಳಡಗಿ ಸುಸ್ಥಿರಮಾಗಿ ॥ ಕರಿಗೊಂಡು ನಿಲಲದು ಧಾರಣೆಯೆಂದು ನೀ । ನರಿವುದು ಕೈರವಾಯತ ನೇತ್ರೆ ॥ ೬ ॥ ಭಾವದ ಬಳಕೆ ಬೇರುದಿಸದೆ ಪರಿಪೂರ್ಣ । ಕೇವಲ ಚೈತನ್ಯ ತಾನೆಂದು ॥ ಭಾವಿಸುತಿರಲದುತಾನೆ ತದ್ಧ್ಯಾನ ಮೆಂ । ದಾವಗಮಿದನೆ ಭಾವಿಸು ಕಾಂತೆ ॥ ೭ ॥ ಭಾವಕಿ ಶುದ್ಧ ಚಿತ್ತಾನೆಂದು ತೋರುವೀ । ಭಾವನೆ ತನ್ನೊಳು ಲಯವಾಗಿ ॥ ತೀವಿ ನಿಜಾನಂದದುಳುಮೆಯಾದರಿವಿನ । ಭಾವನೆ ಸುಸಮಾಧಿಯೆನಿಪುದು ॥ ೮ ॥ ಅದು ತಾನೆ ತುರ್ಯವೀ ನಿರ್ಗುಣಾಷ್ಟಾಂಗ ಯೋ । ಗದ ಕಾರ್ಯವಹುದಾಗಿ ಪುಸಿಯದು ॥ ವಿದಿತಮೆಂದರಿದದನುರೆ ಮರೆದುಳುಮೆಯಾ । ದ ದು ತುರ್ಯಾತೀತವಂತದು ನಿಜ ॥ ೯ ॥ ವನಿತೆ ಸುಪತಿ ತುರ್ಯಪದದೊಳಡಗಿದಹ । ಮೆನಿಸುವೆಲ್ಲಾ ವಿಷಯದ ತೋರ್ಕೆ ॥ ಇನಿಸಿಲ್ಲದಾನಂದ ನಿಜವಾಗಿ ತಾನಿರ್ಪು । ದನುಭವಸಿದ್ಧವೀತಿದು ನಂಬು ॥ .... .... .... .... ॥ ೧೦ ॥

ನಿರ್ಗುಣಾಷ್ಟಾಂಗ ಯೋಗ ನಿರೂಪಣೆ—ಸೂತ್ರ ೨೦ಕ್ಕೆ ಪದ ೧೭೦.

---

ಸೂತ್ರ ॥ ಯುವತಿ ಮೈತ್ರೈದು ಭಾವನೆ ನಿರಾವರಣಮೊ ।
ಪ್ಪುವ ನಿಸ್ಸಮಾಧಿಯೆ ಪರಬ್ರಹ್ಮ ॥

ಪದ ॥ ಅರಿವು ತಾನೆಂದಿದನರಿಯೆ ಜಾಗರಣವಾ । ನರಿಯೆ ನಾನಾರೆಂಬರಿವು ಸ್ವಪ್ನ ॥ ನೆರೆ ತನ್ನ ನರಿವೆಂದರಿಯದಿರಲದು ಸುಪ್ತಿ । ಮರೆಯದಿರಿವನಂಬುಜಾನನೆ ॥ ೧ ॥ ಬರಿಯರಿವಾನೆಂಬ ತಿಳಿವು ತನ್ನೊಳು ತೋರಿ । ಕರಿಗೊಂಡು ದೃಢಮಾಗಲದು ತುರ್ಯ ॥ ನೆರೆ ಮರೆದದನು ನಿಂದೊಡೆ ತುರಿಯಾತೀತ । ವರಿ ನಿಜವದು ತಾನೆ ಪರಮಾತ್ಮ ॥ ೨ ॥ ಪರಮಾತ್ಮ ನಾನೆಂದು ಪರಿಕಿಸೆ ಜಗವಿದು । ಪರಮಾರ್ಥದಿಂದವೆ ಪುಸಿಯೆಂದು ॥ ಪರಮಾನುಭವ

ದಿಂದರಿದು ನಿಲಲದು ನಿರಾ । ವರಣ ಸಮಾಧಿಯೆಂದೆನಿಪುದು ॥ ೩ ॥ ಇದು ಪರಬ್ರಹ್ಮವೆಂದಿದು ಸತ್ಯವೆಂದು ತಾ । ನಿದರಲ್ಲಿ ನಿಶ್ಚಲೀಕೃತಮಾಗಿ ॥ ಪದ ಪಿಂದೆ ನಿಲೆ ನಿರ್ಮಲಾಂಗಿ ನೀನರಿದು ನಂ । ಬಿದು ನಿಸ್ಸಮಾಧಿಯೆಂದೆನಿಪುದು ॥ ೪ ॥ ಬರಿಯರಿವಿನೊಳು ಭಾವನೆ ಲಯಿಸಿ ಬೇರೆ ಸು । ಪರಿಯದಂತಡಗಿ ತಾನಿರಲದು ॥ ಮರೆಯದರಿಯದವಿರಳ ಪರಬ್ರಹ್ಮವೆಂ । ದರಿದಿಹುದಂಗನೆ ಸುಖದೊಳು ॥ ೫ ॥ ಇದನಾವನರಿದು ನಂಬಿದನವನದರಿಂದೆ । ಯೊದವಿ ನಿರ್ಗುಣ ಯೋಗಿಯೆನಿಪನು ॥ ಸುದತಿ ಕೇಳಿದು ತಾನೆ ಸುಜ್ಞಾನ ನಿರ್ಯೋಗ । ದುದಯಕ್ಕೆ ಪರಮ ಕಾರಣವಕ್ಕು ॥ .... .... ॥ ೬ ॥

ನಿಜಾನುಭವ ಯೋಗ ನಿರೂಪಣೆ-ಸೂತ್ರ ೨೧ಕ್ಕೆ ಪದ ೧೭೬-

---

ಸೂತ್ರ ॥ ತಾನಖಂಡಾದ್ವೈತಚೈತನ್ಯವೆಂದು ತ ।
ದ್ಧ್ಯಾನಾದಿಗಳನೆಂತು ಮಾಳ್ಪನು ॥

ಪದ ॥ ಪರಿಕಿಸದ್ವೈತಕ್ಕೆ ಪರಮಾರ್ಥವೆನೆ ನೋಡೆ । ಕರಣೀಯವಿನಿಸಿಲ್ಲವದರಿಂದ ॥ ಸರಸಿಜಮುಖಿ ತಿಳಿದಂಗೆ ತದ್ಧ್ಯಾನಾದಿ । ಪರಿಕರದೊಳು ಕೃತವಹುದೆಂತು ॥ ೧ ॥ ಧ್ಯಾತೃ ತದ್ಧ್ಯಾನವಾ ಧ್ಯೇಯವೆಂಬೀ ಭ್ರಾಂತಿ । ದ್ವೈತಕ್ಕೆ ಸಲ್ಪುದ್ವೈಸಲ್ಲದೆ ॥ ಖ್ಯಾತವಾದದ್ವೈತಪದದೊಳು ಘಟಿಸದೆಂ । ದೋತು ನೀನರಿ ತಾನೆ ಚಿದಖಂಡ ॥ ೨ ॥ ತಾನೆ ತನ್ನಿಂದನ್ಯವೇನುಮಿಲ್ಲಾಗಿ ತ । ಧ್ಯಾನ ಸಮಾಧಿ ಸತ್ಕ್ರಿಯೆಗಳ ॥ ತಾನೆಂತು ಮಾಡಲರಿಯನದ್ವಯನು ತನ್ನ । ತಾನೆ ನಿಜಾನಂದ ಚಿದಖಂಡ ॥ ೩ ॥ ಎರಡೆಂಬೀ ಭೇದಭಾವನೆಗಕ್ಕುಮಾಧ್ಯಾನ । ವೆರಡಳಿದದ್ವೈತ ನಿಜದೊಳು ॥ ದೊರಕೊಳ್ಳಲರಿಯದಾವನುವಿಂದೆ ತಾನೆ ಸು । ಸ್ಥಿರತರವೆನಿಸುವಚಿದಖಂಡ ॥ ೪ ॥ ತಾನಿದಿರೆಂಬರಿವೇನಾನುಮುಳ್ಳೊಡಾ । ಧ್ಯಾನಾದಿ ಕರ್ತವ್ಯವಲ್ಲದೆ ॥ ತಾನಲ್ಲದನ್ಯವಿಲ್ಲಾಗಿ ತದ್ಧ್ಯಾನವಿ । ಲ್ಲಾನಂದನಿಧಿ ತಾನೆ ಚಿದಖಂಡ ॥ ೫ ॥ ತಾನುಳ್ಳೊಡುಂಟು ತದ್ಧ್ಯಾನಾದಿ ತನ್ನೊಳು । ತಾನೆಂಬುದಿಲ್ಲಾಗಿ ತಿಳಿದಂದು ॥ ತಾನೆಂತು ಮಾಳ್ಪನಾ ಧ್ಯಾನಾದಿಯನು ತನ್ನ । ತಾನೆ ತಾನನುಪಮ ಚಿದಖಂಡ ॥ ೬ ॥ ಇದು ತಾನೆ ನಿರ್ಗುಣಾಭ್ಯಾಸವಿಂತಿದು ತಿಳಿ । ಯದಪುರುಷರ್ಗಿದು ಜನಿಸಲು ॥ ಒಡವಿ ಸಗುಣ ಯೋಗವನು ಗುರುವರರು ಸಂ । ಮುದದಿಂದೆ ಬೋಧಿಪುದಲಸದೆ ॥ ೭ ॥

ಎನೆ ಕೇಳ್ದು ಮೈತ್ರೇಯಿ ವಿನಯದಿಂಬವೆ ತನ್ನ । ಮನದನ್ನನಿಗೆ ಮತ್ತೆಮಣಿ ದಂದು ॥ ಮುನಿಪತಿ ಸಗುಣಯೋಗಾಂಗವನೆನಗೆ ಪೇ । ಳೆನುತ ಬಿನ್ನೈಸಿದ ಳೊಲವಿಂದ ॥ ೮ ॥ ಇದು ನಿಜಗುಣಯೋಗಿ ಮುದದಿಂದೆ ತಿಳಿಯ ಪೇ । ಳಿದ ಯಾಜ್ಞವಲ್ಕ್ಯ ಮೈತ್ರೇಯಿಯ ॥ ಒದವಿದ ಸಂವಾದದೊಳು ನಾಲ್ಕನೆಯ ಸಂಧಿ । ಸದಮಳ ಪರಮಾನುಭವ ಬಂಧಿ ॥ .... .... ॥ ೯ ॥

ನಿಜಸ್ಥಿತಿ ನಿರೂಪಣೆ-ಸೂತ್ರ ೨೨ಕ್ಕೆ ಪದ ೧೮೫.

ಇತಿ ಸಂಧಿ ೪ಕ್ಕೆ ಸೂತ್ರ ೨೨ಕ್ಕಂ ಪದ ೧೮೫ಕ್ಕೆ ಸಂಪೂರ್ಣಂ.

ಅಂತು ಸಂಧಿ ೪ಕ್ಕೆ ಸೂತ್ರ ೭೩ಕ್ಕಂ ಪದ ೬೨೭ಕ್ಕೆ

ಮಂಗಳಮಸ್ತು

---

ಶ್ರೀ ಗುರು ಶಂಭುಲಿಂಗಾಯನಮಃ

## ೫ನೇ ಸಂಧಿ

ಸೂತ್ರ ॥ ಸಗುಣ ಯೋಗಾಷ್ಟಾಂಗವನು ತನು ಮನಸಾ ।
ದಿಗಳೊಡನೊಂದಿ ಪೇಳ್ವೆನು ಕೇಳು ॥

ಪದ ॥ ಶ್ರೀ ಮಹಾದೇವಂಗೆ ಸೋಮಂಗೆ ಸುಖಪೂರ್ಣ । ಧಾಮಂಗೆ ಸತ್ಯಚಿದ್ರೂಪಂಗೆ ॥ ಕಾಮಿತಜನ ಕಲ್ಪಭೂಜಂಗೆ ಶಂಭುವಿಂ । ಗಾಮೋದ ದಿಂದೆ ವಂದಿಸುವೆನು ॥ ೧ ॥ ಶ್ರೀಮದನಂತ ವಿದ್ಯಾಮೂರ್ತಿ ಭಕ್ತಚಿಂ । ತಾ ಮಣಿ ಸುಜ್ಞಾನಶರನಿಧಿ ॥ ತಾಮಸದೂರನುತ್ತಮ ಯಾಜ್ಞವಲ್ಕ್ಯ ಮ । ಹಾ ಮುನಿಪತಿ ದಯಾಪೂರ್ಣನು ॥ ೨ ॥ ಅನುರಾಗದಿಂದೆ ತನ್ನಿನಿಯಳ ಮನ ಕಹು । ದೆನೆ ಸಗುಣಾಷ್ಟಾಂಗಯೋಗವ ॥ ವಿನುತ ವೇದಾಗಮಾದಿಗಳನುಮತ ವಾಗಿ । ಮುನಿಜನರೊಪ್ಪೆ ಪೇಳಿದನಿಂತು ॥ ೩ ॥ ಯಮ ನಿಯಮಂಗಳನಾ ಸನ ಪ್ರಾಣ ಸಂ । ಯಮ ಪ್ರತ್ಯಾಹಾರ ಧಾರಣೆಗಳ ॥ ವಿಮಳ ತದ್ಧ್ಯಾನ ಸಮಾಧಿಗಳಿರವನೀ । ಕ್ರಮದಿಂದ ಪೇಳ್ವೆನಾಲಿಸು ನೀರೆ ॥ ೪ ॥ ಯುವತಿ ಕೇ ಳೆಂಟಾರು ನಾಲ್ಕೆರಡಂಗವಾ । ದಿವರೊಳೆಲ್ಲಾಗಳಭ್ಯಾಸಿಪ ॥ ಅವರುಗಳಧಮ ಮಧ್ಯೋತ್ತಮೋತ್ತಮರೆನಿ । ಸುವರನುಗತಿವಿಡಿದಿದು ನಿಜ ॥ ॥ ೫ ॥

ಸಗುಣಯೋಗಾಷ್ಟಾಂಗನಾಮ ಕ್ರಮ ನಿರೂಪಣೆ-ಸೂತ್ರ ೧ಕ್ಕೆ ಪದ ೫.

ಸೂತ್ರ ॥ ಯಮದಶಗುಣವಿಲ್ಲದವನಿಗೆ ನಿಜಮುಕ್ತಿ ।
ಸಮನಿಸದಬಲೆ ಕೇಳಿದು ಸತ್ಯ ॥

ಪದ ॥ ತನು ಮನೋವಚನ ಕರ್ಮನಿಕಾಯದಿಂದೋರ್ಮೆ । ಜನರಿಗೆ ನೋವನಡರಿಸದೆ ॥ ವಿನಯದಿಂದಿರಲದು ತಾನೆಯಹಿಂಸೆ ಯೆಂ । ದೆನಿಪುದು ನೂಪುರಾಂಚಿತಪಾದೆ ॥೧॥ ಇದು ಪರಮಾರ್ಥವಿಂತಿದು ಧರ್ಮ ವಿದು ಸೇವ್ಯ । ವಿದು ಪರಹಿತವಿದು ಸಮುಚಿತ ॥ ಇದು ನೀತಿಮತವೆನಲಖಿಳಾತ್ಮ ರೊಳು ನುಡಿ । ವುದು ಸತ್ಯವೆನಿಪುದಂಗನೆ ಕೇಳು ॥೨॥ ತನಗೆನಿತಾಪತ್ತು ಜನಿಸಿಪೊಡೇನಲ್ಲಿ । ತನುಮನೋ ವಚನದೊಳನ್ಯರ ॥ ಧನದಾಶೆ ತೋರದಿ ರಲು ತಾನದಸ್ತೇಯ । ವೆನಿಪುದು ಗುಣಮಣಿ ಭೂಷಣೆ ॥೩॥ ಭುವನದೊಳುಳ್ಳ ಸ್ತ್ರೀನಿವಹದೊಳೆಂತು ಸಂ । ಗವನೊಲ್ಲದಿರುತಿರಲದುತಾನೆ ॥ ಯುವತಿ ನೀನರಿ ಬ್ರಹ್ಮಚರಿಯವೆನಿಪುದು ಸಾ । ಧ್ಯವೆ ನೋಡು ಸಾಮಾನ್ಯ ಜನಕಿದು ॥೪॥ ಋತುಮತಿಯಾದ ಕಾಲವನು ಮೀರದೆ ನಿಜ । ಸತಿಯೊಳು ರತಿಸುಖ ಪಡೆ ವುದು ॥ ನುತ ಬ್ರಹ್ಮಚರಿಯವೆನಿಪುದೆಂದು ತಿಳಿ ನೀನು । ಶ್ರುತಿಮತವಿದು ಸಾರಹೃದಯಳೆ ॥೫॥ ಸ್ತುತಿ ನಿಂದ್ಯಗಳೊಳು ಸಂತಸವಿಲ್ಲ ನೋವಿಲ್ಲ । ವತಿ ಶಯವೆನೆ ತನಗೆನಿಸುವ ॥ ಸ್ಥಿತಿಯನೆ ಕ್ಷಮೆಯೆಂದು ತಿಳಿವುದು ನೀನತಿ । ಹಿತ ವಿದು ಸಕಲ ಸಜ್ಜನರಿಗೆ ॥೬॥ ಧನ ಧಾನ್ಯ ಸುತ ಮಿತ್ರ ವನಿತಾದಿ ಹಾನಿ ಯೊ । ಳಿನಿತರಾಗಮನದೊಳಗೆ ತನ್ನ ॥ ಮನಕೆ ವಿಕೃತಿದೋರದಿರಲವೆ ಧೃತಿ ಯೆಂದು । ವನಿತೆ ನೀನವಧರಿಸೊಲವಿಂದೆ ॥೭॥ ಪಗೆಕೆಳೆ ಸತಿಸುತಾದಿಗಳಲ್ಲಿ ಕ್ಲೇಶಂಗ । ಳೊಗೆಯೆ ರಕ್ಷಿಪೆನೆಂಬ ಮತಿ ತನ್ನ ॥ ಬಗೆಯೊಳುದಿಸಲದು ದಯೆ ಯೆಂದು ತಿಳಿ ನೀನು । ನಗೆಮೊಗದರಸಿ ಸಂತಸದಿಂದ ॥೮॥ ಸಕಲ ನಿವೃತ್ತಿ ಗಳೊಳು ಪ್ರವೃತ್ತಿಗಳೊಳು । ಸಕಲ ಧರ್ಮಾಧರ್ಮದೆಡೆಯೊಳು ॥ ಸಕಲ ವಿಷಯದೊಳು ಸಮಬುದ್ಧಿಯದು ಶನ । ಗಕಲಂಕವೆನಿಸುವಾರ್ಜವವಕ್ಕು ॥೯॥ ಉದರಾರ್ಥವನ್ನದಿಂದಪರಾರ್ಧ ಮುದಕದೊ । ಳ್ಪದಿದಿರಲೆಂಬ ಸದ್ವಿಧಿಯು ದು ॥ ಸುದತಿ ಕೇಳೆಲೆ ಮಿತಾಹಾರವೆನಿಸುಗುಮಿಂ । ತಿದು ಯೋಗವೃತ್ತಿ ಯೊಳಗೆ ಮುಖ್ಯ ॥೧೦॥ ಉದಕ ಮೃತ್ತಿಕೆಗಳಿಂದವೆ ತನ್ನ ತನುವಿನೊ । ಳುದಿಸಿದ ಮಲವಿಶುದ್ಧತೆಯಾಗಿ ॥ ಸುದತಿ ಕೇಳ್ಬಾಹ್ಯಶೌಚವೆನಿಪುದದು ಪುಣ್ಯ । ಪದಸಿದ್ಧಿಗಳನಾಗು ಮಾಳ್ಪುದು ॥೧೧॥ ಮನದೊಳೊಂದಿನಿಸು ಪೊಲ್ಲನೆ

ಯನು ನೆನೆಯದೆ । ಜನರಿಗೊಲವನೆ ಬಯಸುತಿರ್ಪ ॥ ಅನುವಳವಡೆ ತನ್ನೊ
ಳಂತರ ಶೌಚವೆಂ । ದೆನಿಪುದು ವೇದಾನುಮತದಿಂದೆ ॥ .... ॥೧೨॥

ಯಮಾಂಗದಶಕ ನಿರೂಪಣೆ–ಸೂತ್ರ ೨ಕ್ಕೆ ಪದ ೧೭.

———

ಸೂತ್ರ ॥ ತಾಪಸವೃತ್ತಿ ಮುಂತಾದ ಗುಣಗಳಿಂ ।
ದಾ ಪರಮುಕ್ತಿ ಸಿದ್ಧಿಸುವದು ॥

ಪದ ॥ ಯಮ ದಶವಿಧವನೀ ಪರಿಯೊಳು ತಿಳುಪಿ ನಿ । ಯಮದೊಳು ದಶಗುಣ ಭೇದವ ॥ ಕ್ರಮದಿಂದೆ ಪೇಳ್ವೆನಾನೆಲೆ ನೀರೆ ನೀನವ । ನಮಳಬುದ್ಧಿಯೊಳವಧರಿಪುದು ॥೧॥ ಉಪವಾಸ ಕೃಛ್ರ ಚಾಂದ್ರಾಯಣಾದಿಗಳಿಂದ । ವಪರಿಮಿತ ಕ್ಲೇಶದೊಳು ತನ್ನ ॥ ವಪುರಿಂದ್ರಿಯಂಗಳನುರೆ ನಿರೋಧಿಸಲದು । ತಪವೆಂಬ ನಿಯಮ.ವೆಂದೆನಿಪುದು ॥೨॥ ದೊರಕಿದ ಲಾಭವೆನಿತು ತನಗನಿತನೆ । ಪರಿಣಮಿಸುವ ಬುದ್ಧಿ ಘಟಿಸಲು ॥ ಹರುಷ ಲಕ್ಷಣಮಾದ ಪರಮ ಸಂತೋಷವೆಂ । ಬರು ಮುನಿವರರದ ನೆಲೆನೀರೆ ॥೩॥ ಇದು ಧರ್ಮವಿದಧರ್ಮವಿದು ಕಾರ್ಯವಿದಕಾರ್ಯ । ವಿದು ನಿಜವೆಂದಾಗಮೋಕ್ತದಿ ॥ ಪದಪಿಂದೆ ತಿಳಿದು ನಂಬಿರಲದಾಸ್ತಿಕ್ಯವೆಂ । ಬುದು ಕೇಳು ಕಂಜದಳಾಂಬಕಿ ॥೪॥ ಧನ ಧಾನ್ಯ ವಸ್ತ್ರ ವಾಹನ ವನಿತಾದಿಗ । ಳನು ನೀತಿಯುಡಗದೆ ಸತ್ಪಾತ್ರ ॥ ಜನಕನುರಾಗದಿಂದೀವುದೆ ದಾನವೆಂ । ದೆನಿಪುದು ಮಿಸುನಿವಣ್ಣದಗಾತ್ರೆ ॥೫॥

ನಿಯಮ ಚತುರ್ಭೇದ ನಿರೂಪಣೆ–ಸೂತ್ರ ೩ಕ್ಕೆ ಪದ ೨೨.

—:೦:—

ಸೂತ್ರ ॥ ಶಿವನೆ ತಾನೆಂದು ಮಾನಸದೊಳು ಪೂಜಿಸ ।
ದವನಿಗೆ ಭವಬಂಧವಳಿವುದೆ ॥

ಪದ ॥ ತನು ವಚೋ ಮಾನಸವಿನಿತರಿಂದೀಶ್ವರಾ । ರ್ಚನೆ ಮೂರು ತೆರನಲ್ಲಿ ಕ್ರಮದಿಂದ ॥ ವನಿತೆ ಕನಿಷ್ಠ ಮಧ್ಯೋತ್ತಮವೆನಿಸಿ ಭ । ಜನೆ ನುತಿ ಚಿಂತನೆ ವಿಡಿದಿರ್ಕು ॥೧॥ ತನುವಿನಂದವೆ ಸಿರಿ ವಚನದಿಂದವೆ ಸಗ್ಗ । ದನು ಭೂತಿ ಮುಗುಳೆ ಮಾನಸದಿಂದ ॥ ಘನ ಮುಕ್ತಿ ತನಗಹುದಾಗಿ ಪೂಜಾಫಲ । ವೆನಿಸುಗುಮಿಂತು ಮೂದೆರನೆಂದು ॥೨॥ ಅದರಿಂದೆ ಮೋಕ್ಷಾರ್ಥಿಹೃದಯದೊಳೀಶ್ವರ । ಪದವನರಿದು ಸಲೆ ಜಾನಿಸಿ ॥ ಪದಪಿಂದೆ ಭಜಿಸಿ ಕೈವಲ್ಯವನೈದ

ಬೇ । ಹುದು ಕೇಳು ಕಾಂತೆ ನಿಶ್ಚಯವಿದು ॥ ೩ ॥ ಪಳುಕಿನ ಮಿಂಚಿನ ಬೆಳ ದಿಂಗಳಿನ ತಾರೆಗಳ । ರನ್ನ ವೆಳಗಿನಂತೆಭವನ ॥ ತಿಳಿದು ಸೋಹಂಭಾವವಳ ವಟ್ಟು ಮೋಕ್ಷಾರ್ಥಿ । ಗಳು ದೇಹರದೊಳು ಜಾನಿಸುವದು ॥ ೪ ॥ ಬಿಂದು ನಾದ ವ್ಯೋಮ ಮಂತ್ರ ಭುವನ ಮೂರ್ತಿ । ಯೆಂದಾರು ತೆರದಿಂದಲಭವನ ॥ ಕುಂದದೆ ನೆನೆದರ್ಚಿಪುದು ನಿಜ ಹೃದಯಾರ । ವಿಂದದೊಳ್ಪಲ ಭೇದಯುತ ರೊಲ್ದು ॥ .... .... .... .... ॥ ೫ ॥

ಈಶ್ವರಪೂಜಾ ನಿಯಮ ನಿರೂಪಣೆ--ಸೂತ್ರ ೪೬ಕ್ಕೆ ಪದ ೨೭.

---

ಸೂತ್ರ ॥ ಮಾಡು ಶಿವಾರ್ಚನೆಯನು ಹೃದಯಾಬ್ಜದೊ ।
ಳಾಡದೆ ಬೇರೊಂದು ಮತವನು ॥

ಪದ ॥ ಮಾಯೆ ಕೊಡ್ಡದ ಬೋಧವನು ಶುದ್ಧಮತಿವಿಡಿ । ದೊಯ್ಯಾರ ದಿಂದ ಭಾವಿಸಿ ತಾನು ॥ ಕಾಯಾದಿ ಕರಣಾಂತರದೊಳು ತದ್ಗುಣಸಮು । ದಾ ಯಾನು ಗುಣದಿಂದೆ ಭಜಿಪುದು ॥ ೧ ॥ ಹರನೆ ಸರ್ವಾಧಾರನೆಂಬುದಾಸನ ವದು । ಪರಿಪೂರ್ಣನೆಂಬುದಾಹ್ವಾನವು ॥ ಹರುಷವಾರಿಧಿಯೆಂಬುದರ್ಘ್ಯವೀ ಜಗವೀಶ । ಚರಣವೆಂಬುದೆ ಪಾದ್ಯವೆನಿಪುದು ॥ ೨ ॥ ಅರಿವೆ ಪಾವನರೂಪ ವೆಂಬುದಾಚಮನೀಯ । ವರಿವೆ ನಿರ್ಮಲವೆಂಬುದಭಿಷೇಕ ॥ ಅರಿವೆ ವಿಶ್ವಾತೀತ ವೆಂಬುದಾಚ್ಛಾದನ । ವರಿವೆ ನಿರ್ಗುಣವೆಂಬುದುಪವೀತ ॥ ೩ ॥ ಚಿತ್ತೆ ಶೋಭ ನವೆಂಬ ತಿಳಿವಲಂಕೃತಿ ತಾನೆ । ಚಿತ್ತೆಂಬ ಬಗೆಯನುಲೇಪನ ॥ ಚಿತ್ತೆ ನಾದಾ ದಿಯೆಂಬುದು ಪುಷ್ಪವತಿ ಕೀರ್ತಿ । ವೆತ್ತುದು ಚಿತ್ತೆಂಬುದದು ಧೂಪ ॥ ೪ ॥ ಪುರುಷಸ್ವಯಂಜ್ಯೋತಿಯೆಂಬುದೆ ದೀಪವಾ । ಪುರುಷನು ನಿತ್ಯತೃಪ್ತನು ಮೆಂಬ ॥ ಪರಿಯೆ ನೈವೇದ್ಯವಾ ಪುರುಷನೆ ಗುಣದೂರ । ದಿರಪೆಂಬುವದು ವೀಳ್ಯವೆನಿಪುದು ॥ ೫ ॥ ತಾನೀಶ ನೀಶತಾನೆಂಬುದಾವೃತ್ತಿಯು । ತಾನೆ ಪರಾ ತ್ಪರನೆಂಬುದು ॥ ಮಾನಿನಿ ಕೇಳು ಪಂದನೆ ತಾನಲ್ಲದೆ ಬೇರೆ । ಯೇನುಮಿಲ್ಲೆನೆ ವಿಸರ್ಜನವದು ॥ ೬ ॥ ಇಂತುಪಚರಿಸು ನಿಜಾತ್ಮದೇವತೆಯ ನೋ । ರಂತೆ ಹೃದಯ ಪೀಠದೆಡೆಯೊಳು ॥ ಸಂತತವನ್ಯಭಾವನೆಯನುಳಿದು ಬಾಹ್ಯ । ಚಿಂತೆ ದೋರದ ಶುದ್ಧಮತಿವಂತೆ ॥ .... .... .... ॥ ೭ ॥

ಈಶ್ವರಪೂಜಾ ನಿಯಮ ಕ್ರಮ ನಿರೂಪಣೆ-ಸೂತ್ರ ೫೬ಕ್ಕೆ ಪದ ೩೪.

---

ಸೂತ್ರ ॥ ಶ್ರುತಿಯ ತಾನರಿಯದೆ ಗುರುಮತವಿಡಿಯದೆ ।
ಗತಿಯನು ಬೇರರಸಿದೊಡುಂಟೆ ॥

ಪದ ॥ ಪವಣತೆ ಮಿಗೆ ವೇದಶಿರವನು ತನ್ನನು । ಭವಕೆ ಬರ್ಪಂತೆ ತಿಳಿವುದನು ॥ ವಿವಿಧ ತಾಪಸ ಮುಖ್ಯರೊಲವಿಂದೆ ಸಿದ್ಧಾಂತ । ಶ್ರವಣವೆಂಬರು ನಿಜವಿದು ತಾನು ॥೧॥ ವೇದ ಲೌಕಿಕ ಮಾರ್ಗದೊಳು ನಿಂದಿಸಲು ಯೋಗ್ಯ । ವಾದ ನಿಷೇಧ ವರ್ತನವನು ॥ ಆದರಿಸದೆ ಬಿಡುವದು ತಾನೆ ಲಜ್ಜೆಯೆಂ । ದೋದಿ ಪೇಳುವರು ಸದ್ಗುರುಗಳು ॥೨॥ ತನಗೆ ಕೇಳಧ್ಯಾತ್ಮದೊಳಗೆ ವಿಹಿತವೆನಿ । ತನಿತುವನರಿದು ಸುಸ್ಥಿರಮಾಗಿ ॥ ಮನದೊಳು ನಂಬಿರಲದು ತಾನೆ ಮತಿಯೆಂದು । ವಿನುತಿಸುವರು ವೇದವಿದರೊಲ್ದು ॥೩॥ ಮಾನಿನಿ ವಾಚಕೋಪಾಂಶು ಮಾನಸವೆಂದು । ತಾನಿಂತು ತ್ರಿವಿಧವಾ ಜಪವಿಧಿ ॥ ಸಾನುರಾಗದೊಳರಿ ನೀನೊಂದು ಸಾವಿರ । ವಾನಂತ ಫಲವವಕನುಗತಿ ॥೪॥ ಇದಿರಿಂಗೆ ಕೇಳಬರ್ಪುದು ವಾಚಕವೆನಿಕ್ಕು । ಮಿದಿರಿಂಗೆ ಕೇಳಬಾರದೆ ತನ್ನ ॥ ರದನಚ್ಛಂದಗಳಲುಗೆ ಮಾಳ್ಪ ಜಪವಿಧಿ । ಯದು ತಾನುಪಾಂಶುವೆಂದೆನಿಪುದು ॥೫॥ ಎನಿತು ಮಂತ್ರದ ಪದವನಿತನೆ ತನ್ನಯು । ಮನದಲ್ಲುಚ್ಚರಿಸಲಂತದು ತಾನೆ ॥ ವನಿತೆ ಕೇಳ್ಮಾನಸ ಜಪವೆನಿಪುದು ಶಾಸ್ತ್ರ । ದನುಮತವದು ಮುಮುಕ್ಷುಗೆ ಬೇಕು ॥೬॥ ಗುರುಮತದೊಳು ವೇದ ಶಿರದ ರಹಸ್ಯವ । ನುರುಭಕ್ತಿಯಿಂದವಭ್ಯಾಸಿಪ ॥ ಪರಿತಾನೆ ಸ್ವಾಧ್ಯಾಯವೆನಿಪುದೆಂದರಿದುನಿ । ರ್ಧರಿಸು ನೀನಿಂದು ಸನ್ನಿಭವಕ್ತ್ರೆ ॥೭॥ ನಿಯತದೆ ಗಾಯತ್ರಿಯನು ಸಪ್ತಾಹೃತಿಯನು । ನಿಯತದೆ ಪ್ರಣವವ ನಜಪೆಯು ॥ ನಿಯತದೆ ಕಾಲತ್ರಯದೊಳು ಜಪಿಸಲದೆ । ಪ್ರಿಯತಮೆ ಸ್ವಾಧ್ಯಾಯ ವೆನಿಪುದು ॥೮॥ ವೇದವನಾಹತ ನಾದಾದಿಯದರಿಂದೆ । ನಾದದ ಬಹುವಿಧಾಭ್ಯಾಸವ ॥ ಆದರದಿಂದೆ ರಚಿಸುತಿರಲದು ತಾನೆ । ವೇದಸ್ವಾಧ್ಯಾಯವೆನಿಸುತಿರ್ಕುಂ ॥೯॥ ಶರಧಿ ನಿರ್ಜರ ಭೇರಿ ಮೇಘದ ಬಹುರವ । ಮುರಜ ಕಹಳೆ ಶಂಖ ಘಂಟಾದಿ ॥ ವರನಾದ ವಾಸ ಕಿಂಕಿಣಿ ವೀಣೆ ಭ್ರಮರಾದಿ । ಸ್ವರವನಾಲಿಪುದೆ ಸ್ವಾಧ್ಯಾಯವು ॥೧೦॥ ಅರಿವುದೆ ವೇದ ವರ್ಧಹಿಕೊಂಬುದದುವೇದ್ಯ । ವರಿವಿಂದೆ ನೋಡಲೀ ಪರಿಯೊಳು ॥ ಕರೆಮರೆಯೇನಿಲ್ಲಿ ತಿಳಿ ನೀರೆ ತನ್ನತಾ । ನರಿಯೆ ಸ್ವಾಧ್ಯಾಯವೆಂದೆನಿಸುಗು ॥೧೧॥ ಗುರುಬೋಧೆಯಿಂದವಧ್ಯಾತ್ಮದ ರಹಸ್ಯ । ಧಿರವಿನ ವಿಧಿಮಾತ್ರವರಿವಲ್ಲಿ ॥ ವರಯತ್ನಪರನೆನಿಸಿದೊಡದೆ ಹುತವೆಂದು ।

ಪರಿಕಿಸು ಪೊಂಜಳೆ ಮೈಯಳೆ ॥ ೧೨ ॥ ಯಮ ನಿಯಮಾನ್ವಿತನೆನಿಪ ಯೋಗೀಶ್ವರ । ನಮಳ ಸುಜ್ಞಾನಾಗ್ನಿಯೊಳು ಮನ ॥ ರಮಿಸುವನಿಖಿಳ ದು ರ್ವಿಷಯಾಳಿಗಳನು ನಿ । ರ್ಮಮತೆಯೊಳ್ಪೇಳ್ವದು ಹವಿಮಾಡಿ ॥ ೧೩ ॥

ನಿಯಮಾಂಗ ಪಂಚಕ ನಿರೂಪಣೆ–ಸೂತ್ರ ೭ಕ್ಕೆ ಪದ ೪೭.

---

ಸೂತ್ರ ॥ ಆಸನ ಸ್ಥಿರವಾಗಿ ಮನವಕ್ಷಿಯುಸುಗೂಡಿ ।
ನಾಸಾಗ್ರದಲ್ಲಿ ನಿಂದೊಡೆ ಮುಕ್ತಿ ॥

ಪದ ॥ ಇವು ತಾವೆ ಯಮ ನಿಯಮಂಗಳಿಂತಿವರಿಂದೆ । ಭವ ಬಾಧೆ ಯಳಿವುದು ಬಳಿಕಿನ್ನು ॥ ಯುವತಿ ಕೇಳಾಸನಗತಿಯ ನೊರೆವೆನು ನಾ । ನವ ರಿಂದೆ ತನುರುಜೆ ಪರಿವುದು ॥ ೧ ॥ ಎಡದ ಹಿಮ್ಮಡದಿ ನಾಧಾರದೆಡೆಯ ನೊತ್ತು । ತೊಡನೆ ದಕ್ಷಿಣದ ಹಿಮ್ಮಡವನು ॥ ಮಡಗಿ ಮೇಹನದ ಮೇಲ್ಗ ಡೆಯೊಳು ರುಜುವೆನಿ । ಪೊಡಲಿಂದವಿರೆ ಸಿದ್ಧಾಸನವದು ॥ ೨ ॥ ತೊಡೆ ಕಿರುದೊಡೆಗಳ ನಡುವೆರಡಂಘ್ರಿಗ । ಳಡಗಿರ್ದು ಸಸಿನಮಾದೊಡಲಿಂದ ॥ ಬಿಡದೆ ಕುಳ್ಳಿರೆ ಸ್ವಸ್ತಿಕಾಸನವಹುದೆಂದು । ಮಡದಿ ನೀನಿದನು ನಿಶ್ಚಯಿಪುದು ॥ ೩ ॥ ತೊಡೆಗಳೆರಡರ ಮೇಲಡರಿ ಮಡಂಗಳು । ಬಿಡದೆ ಕೂಡಿರಲೆಡಬಲನಾಗಿ ॥ ಕಡು ನೇರಿತ್ತಾದೊಡಲಿಂದೆ ಕುಳ್ಳಿರಲದೆ । ಮಡದಿ ಪದ್ಮಾಸನವೆನಿಪುದು ॥ ೪ ॥ ಎಡದ ಪಾದದ ಮಡವಡಿಯಾಗಿನಿಲೆ ಬಲ । ದಡಿಮಡವೆಡದ ತೊಡೆಯಮೇಲೆ ॥ ಮಡಗಿರೆ ರುಜುಕಾಯದಿಂದೆ ಕುಳ್ಳಿರ್ದೊಡೆ । ನುಡಿವರ ದನು ವೀರಾಸನವೆಂದು ॥ ೫ ॥ ತನಗಾವತೆರದಿಂದೆ ಜನಿಪುದು ಧೈರ್ಯವಂ । ತನುವಾಗಿ ಕುಳ್ಳಿರ್ದು ಚಲಿಸದೆ ॥ ಮನವಸುಗಳನು ನಿರೋಧಿಸಲದು ಸುಖಾ । ಸನವೆಂದು ತಿಳಿವುದು ನಳಿನಾಕ್ಷಿ ॥ .... .... ॥ ೬ ॥

ಆಸನ ಸ್ಥಿತಿ ನಿರೂಪಣೆ-ಸೂತ್ರ ೭ಕ್ಕೆ ಪದ ೫೩.

---

ಸೂತ್ರ ॥ ತನುಮೂಲವೆನಿಸುತಿರ್ಪನಿಲ ನಿರೋಧನ ।
ವನಿತೆ ಕೇಳದರಿಂದೆ ಮತಿಶುದ್ಧಿ ॥

ಪದ ॥ ತನುಮೂಲವಸುನಿರೋಧನ ಮುಖ್ಯಗುಣಯೋಗ । ವೆನಿಸುಗು ಮದರಿಂದೆ ಮೊದಲೊಳು ॥ ತನುವಿನೊಳದನರಿಯಲು ಬೇಹುದೆಲೆ ಪುಸಿ ।

ತನುಮಧ್ಯ ಕೇಳದನೊರೆವೆನು ‖ ೧ ‖ ತನುವಿದು ತನ್ನ ತೊಂಭತ್ತಾರು ಬೆರಳುದ್ದ । ವೆನಿಪುದು ಗುದ ಗುಹ್ಯಮಧ್ಯವೆ ‖ ತನುಮಧ್ಯವಹುದಲ್ಲಿ ಜಠ ರಾಗ್ನಿ ನೆಲೆಗೊಂಡು । ತನುದೀಪನಾದಿಕ ಪನುಮಾಳ್ಕು ‖ ೨ ‖ ಅದರಿಂದೆ ಮೇಲೆ ನವಾಂಗುಲದೆಡೆಯೆನಿ । ಪುದು ನಾಭಿಯಲ್ಲಿ ನಾಡಿಯಕಂದ ‖ ಪುದಿ ದು ನಾಲ್ಕಂಗುಲದಾಯತದಿಂದಿರ್ಪ । ದದು ನಿಜಕುಂಡಲಿಯೊಡಗೂಡಿ ‖ ೩ ‖ ಎನಿತು ನಾಡಿಗಳೊಳ ವನಿತುಮಾಕಂದದಿಂ । ಜನಿಸಿಹವಸುಜಾಲದೊಡಗೂಡಿ‖ ಮನವೆಡೆಯಾಡು ವೆಡೆಗಳವರೊಳು ಮುಖ್ಯ । ವೆನಿಪವೆ ಮೂರುನಾಡಿಗಳಲ್ಲಿ ‖ ೪ ‖ ಎಡಬಲವೆನಿಪ ನಾಸಾಪುಟಾಂತರವೈದಿ । ಬಿಡದಿರ್ಪವೀಡೆ ಪಿಂಗಳೆ ಗಳು ‖ ನಡುವೆ ಶಿಖಾಂತಮಾದುದೆ ಸುಷುಮ್ನಾನಾಡಿ । ಮಡದಿ ಕೇಳದು ಯೋಗದೊಳು ಮುಖ್ಯ ‖ ೫ ‖ ಕಾಮಿನಿ ನೀಲೋಲವಿಂದೆ ಭಾವಿಸು ಪೇಳಿ । ದೀ ಮೂರು ನಾಡಿಗಳೊಡಗೂಡಿ ‖ ನೇಮವಿಡಿದು ಮಾಳ್ಪುದಸುನಿರೋಧನ ವನೆಂ । ದಾ ಮುನಿನರರೊಲಿದೊರೆವರು ‖ ೬ ‖ ಕುಂಡಲಿಯುರಗನಾ ಕಂದವ ಸುರೆ ಸುತ್ತಿ । ಕೊಂಡೇಳು ಬಳಸಿನಿಂದವೆ ತನ್ನ ‖ ತುಂಡವನಿಟ್ಟು ಸುಷು ಮ್ನೆಗೆ ನಿಜವಾಲ । ದಂಡಮಿರಲು ಕೆಳಗೆಸೆವುದು ‖ ೭ ‖ ಅಕುಟಿಲೆ ಕೇಳೆಂಟು ಪ್ರಕೃತಿರೂಪಿಂದೆ ಮೋ । ಹಕಮಾಗಿ ಮುಸುಕಿ ಕುಂಡಲಿಯುದು ‖ ಸಕಲ ಜೀವರ ದೇಹಧಾರಣ ಸ್ಥಿತಿಗತಿ। ನಿಕರವನ್ನೈದೆನಡೆಸುತಿರ್ಕು ‖ ೮ ‖ ಅ ಕ ಚ ಟ ತ ಪ ಯ ಶ ವರ್ಗ ನಾಮವನುಳ್ಳ । ಪ್ರಕೃತಿಗ ಳೆಂಟವರಿಂದವೆ ‖ ಸಕಲಾರ್ಥ ಸಾಧಕಮಾಗಿ ಕುಂಡಲಿಯೆ ಮೋ । ಹಕವಪ್ಪುದಖಿಳ ಜೀವರುಗಳ್ಗೆ ‖ ೯ ‖ ಉದರಾಗ್ನಿಯಸುನಿರೋಧನದಿಂದೆ ಪೆರ್ಚೆ ತಾ । ಪದೊಳೆದ್ದು ಕುಂಡಲಿಯುದು ತನ್ನ ‖ ವದನವನಾ ನಾಡಿಯಿಂದಾಗ ತೆಗೆವುದು । ಸುದತಿ ಮತ್ತದನೆಂದು ಮುಸುಕದು ‖ ೧೦ ‖ ಅದರಿಂದೆ ಸಕಲ ನಾಡಿಯಶುದ್ಧಿ ಬೇಹುದು । ಮೊದ ಲೊಳಗಸು ನಿರೋಧನವನು ‖ ಪದುಳದಿಂದೆಸಗುವ ತನಗಿನ್ನು ಪ್ರಾಣಾಯಾ । ಮದಗತಿ ಪೇಳ್ವೆನಾಲಿಸು ನೀರೆ ‖ .... .... .... ‖ ೧೧ ‖

ನಾಡೀಶುದ್ಧಿ ಸೂಚನಾ ನಿರೂಪಣೆ-ಸೂತ್ರ ೧ಕ್ಕೆ ಪದ ೬೪.

---

ಸೂತ್ರ ‖ ರೇಚಕಾದಿತ್ರಯದಿಂದೆ ಮಾಳ್ಪುದು ಸಿದ್ಧಿ ।
ಸೂಚಕಮಾದಸುನಿಯಮವ ‖

ಪದ ‖ ಪದುಳಿಗನಾಗಿ ಚಿತ್ತದೊಳೊಂದು ವಕ್ರವಿ । ಲ್ಲದೆ ಸುಖಾಸೀನ

ನೆನಿಸಿ ಗುರು ॥ ಪದಪಂಕಜವನು ನೆನೆದಸು ನಿರೋಧನವದು । ಸುದತಿ ಕೇ ಳಾರೈದು ಮಾಳ್ಪುದು ॥ ೧ ॥ ಮೊದಲಲ್ಲಿ ಪೂರಕವದರಿಂದೆ ಕುಂಭಕ । ವಧ ರಿಂದೆ ರೇಚಕವನು ಸಮ ॥ ಪದವೆನೆ ಮಾತ್ರೆ ಪನ್ನೆರಡರಿಂದವೆ ಮುಕ್ತಿ । ವಿಧನಾಗಿ ಮಾಳ್ಪುದೀ ಕ್ರಮದಿಂದ ॥ ೨ ॥ ನಡೆಯುಡಗಿಪುದೆ ಪೂರಕವಹು ದಲಸದೆ । ಪಿಡಿವುದೆ ಕುಂಭಕವೆನಿಪುದು ॥ ಬಿಡುವುದೆ ರೇಚಕವೆನಿಪುವು ನಾಸಾಗ್ರ । ದೆಡೆಯೊಳು ಚರಿಸುವ ಮರುತನ ॥ ೩ ॥ ವನಿತೆ ಕೇಳೀರಾರು ಲಘುವೆನಿಪಕ್ಕರ । ವಸು ನಾಲಿಗೆಯೊಳುಚ್ಚರಿಪ ವೇಳೆ ॥ ಎನಿಪುದು ಮಾತ್ರೆ ಷಡ್ಗುಣನೆ ಯಿಂದೆವೆಯಾಡ । ಲನಿತುವೇಳೆಯು ಮಾತ್ರೆಯೆನಿಪುದು ॥ ೪ ॥ ಮುಂದೆ ಪನ್ನೆರಡು ಚವ್ವೀಸ ಛತ್ತೀಸಂಗ । ಳೆಂದೆನಿಸುವ ಮಾತ್ರೆಯೊಡ ಗೂಡಿ ॥ ಮಂದ ಮಧ್ಯೋತ್ತಮವೆಂದು ಪ್ರಾಣಾಯಾಮ । ದಂದವಿರ್ಪುದು ಮೂರು ತೆರನಾಗಿ ॥ ೫ ॥ ನಿಲಿಪುದು ನಾಭಿ ಹೃದಯ ಕಂಠವೆನಿಪೆಡೆ । ಯೊಳ ಗಸು ದೃಢತರವನುಮಾಗಿ ॥ ತಿಳಿಯಲುತ್ತಮ ಮಧ್ಯಮಾಧಮ ಕ್ರಮದೊಳ ಗಳವಟ್ಟ ಮಾತ್ರಾನುವಿಧಿಯಿಂದ ॥ ೬ ॥ ತಿಳಿ ನಾಭಿಕಂದವೆ ಮನೆಯಾಗಿ ನಾಸಾಗ್ರ । ದೊಳು ಸುಳಿವನಿಲನ ಗತಿಯದು ॥ ಒಳಪೊಗುವದಪಾನವೆನಿ ಪುದು ಪೊರಪಡ । ಲೆಲೆ ನೀರೆ ಪ್ರಾಣವೆನಿಸುತಿರ್ಕು ॥ ೭ ॥ ಎಡದಲ್ಲಿ ಪೂರಿಸಿ ನಿಂದೊಡೆ ಬಲದಲ್ಲಿ । ಬಿಡುವುದು ಬಲದಲ್ಲಿ ಪೂರಿಸಿ ॥ ಎಡದಲ್ಲಿ ರೇಚಿಸು ವುದು ಕುಂಭಕದೊಳುರೆ । ತಡೆವುದು ದೃಢವಾಗಿ ಪವನನ ॥ ೮ ॥ ನೆನೆವುದು ಪ್ರಣವಾಂಗ ವೆನಿಸುವಕ್ಕರಮೂರ । ನನಿಲನ ಪೂರಕಾದಿಗಳನು ॥ ಅನುಗೊಳಿ ಸುವ ಕಾಲದೊಳು ಪರಿವಿಡಿದಿಪ್ಪು । ದನುನಯದಿಂದಂಬುಜಾನನೆ ॥ ೯ ॥ ಪದಿನಾರು ದಿವಸವಿತೆಸಗಲ್ಕೆ ಸೌಖ್ಯಸಂ । ಪದದಾಗು ಬಳಿಕೊಂದು ಮಾಸಕ್ಕೆ ॥ ಪುದಿದ ಪಾಪಕ್ಷಯವಹು ದಸುರೋಧನ । ವದರಿಂದೆ ಯೋಗಿಗೆ ಕರಣೀಯ ॥ ೧೦ ॥ ಯಮವಾದಿಯಾದ ನಾಲ್ಕಿವು ಬಾಹ್ಯವೆನಿಪವೀ । ಕ್ರಮ ದಿಂದವನು ಮಾಡೆ ಚಿತ್ತಶುದ್ಧಿ ॥ ಸಮನಿಪುದದರಿಂದೆ ನಿಜಬೋಧೆ ದೃಢ ವಹು । ದಮಳೇಂದುವದನೆನಂಬಿದು ಸತ್ಯ ॥ .... .... ॥ ೧೧ ॥

ಪ್ರಾಣಾಯಾಮ ಲಕ್ಷಣ ನಿರೂಪಣೆ–ಸೂತ್ರ ೯ಕ್ಕೆ ಪದ ೭೫.

---

ಸೂತ್ರ ॥ ಹೊರಗಣವಿಷಯದೊಳೆರಗಿದ ಮನವನು ।
ನೆರೆ ತೆಗೆಯಲನಿಗಹುದೆ ಮುಕ್ತಿ ॥

ಪದ ॥ ಅಂತರಂಗದ ನಾಲ್ಕುಸಾಧನಂಗಳನೊಲ । ವಿಂ ತಿಳುಪುವೆನು ನಾನವರಿಂದೆ ॥ ಶಾಂತಿ ಚೈತನ್ಯ ವಿಶುದ್ಧತೆಯುಹದೆಂದು । ಸಂತಸದಿಂದೆ ನೀನರಿವುದು ॥ ೧ ॥ ತಸಗತಿ ಪ್ರಿಯವಾದ ವಿಷಯ ವೊಂದಿರೆ ಯೋಗ । ವನು ಮಾಡಲೀಯದ ಕತದಿಂದ ॥ ವನಿತೆ ಕೇಳಾ ದೇಶವನು ಪಿಂಗಿ ತೊಲ ಗಲ್ಕೆ । ತನುಪ್ರತ್ಯಾಹಾರವಡೆಸಿಪುದು ॥ ೨ ॥ ನಿರ್ಮಳ ಯೋಗ ಸತ್ಕರ್ಮ ದೊಳ್ನಿಲೆಬಾಹ್ಯ । ಕರ್ಮವೆಲ್ಲವ ಸುಳಿದಿರಲದು ॥ ಕರ್ಮೇಂದ್ರಿಯಕೆ ಪ್ರತ್ಯಾ ಹಾರವೆಂದರಿವುದು । ಧರ್ಮಸಂಪೂರ್ಣಮಾನಸೆ ನೀನು ॥ ೩ ॥ ಓತು ನಿಜಾ ತ್ಮಾನುಭೂತಿಯೊಳಿರೆ ಬಾಹ್ಯ । ಜಾತ ಶಬ್ದಾದಿ ವಿಷಯದಿಂದ ॥ ನೀತಿ ವಿಡಿದು ತೆಗೆಯಲು ಜೇತನೇಂದ್ರಿಯ । ವ್ರಾತಕ್ಕೆ ಪ್ರತ್ಯಾಹರಣವದು ॥ ೪ ॥ ಎಲ್ಲೆಲ್ಲಿ ದುರ್ವಿಷಯಾಳಿಗಳುಂಟವ । ರಲ್ಲಿ ಕೂಡದೆ ನಿಜೇಂದ್ರಿಯವೃತ್ತಿ ॥ ಒಳ್ಳಿತರೊಳು ವರ್ತಿಸುತ್ತಿರಲವಕದೆ । ಬಲ್ಲಳೆ ಪ್ರತ್ಯಾಹರಣವಕ್ಕು ॥ ೫ ॥ ಅನುದಿನವಾತ್ಮಚಿಂತನೆಯಲ್ಲಿ ಸುಸ್ಥಿರ । ವೆನಿಪಂತೆ ಜೇತನೇಂದ್ರಿಯದಿಂದ ॥ ಮನವನು ತೆಗೆಯೆ ಪ್ರತ್ಯಾಹಾರವಪಕೆಂದು । ಮುನಿಮುಖ್ಯರೊಲವಿಂದೆ ನುಡಿವರು ॥ ೬ ॥ ಮನವೇನು ಬಯಸಿದೊಡನಿತೊಂದರಿಂದವಾ । ಮನಕೆ ಸಂತಸವನೊಡರಿಸದೆ ॥ ಜನಿತ ಧೈರ್ಯದೊಳು ನಿಗ್ರಹಿಸಲತದು ತಾನೆ । ಮನಕೆ ಪ್ರತ್ಯಾಹಾರವೆನಿಪುದು ॥ ೭ ॥ ಮನವದೆಲ್ಲಿರ್ದೊಡಾ ಮನದೊಡ ಗೂಡದೆ । ಮನವಿಲಕ್ಷಣನು ನಾನಹೆನೆಂದು ॥ ಅನುದಿನ ವನುಚಿಂತಸೆಯೊ ಳೊಡಗೂಡಿರೆ ! ಮನಕೆ ಪ್ರತ್ಯಾಹಾರವದು ತಾನ್ ॥ ೮ ॥ ತನಗೆ ಬಾಹ್ಯದ ಕರ್ಮವಿನಿತೇನುಮಿಲ್ಲದೆ । ಮನದಿಂದೆ ಕರ್ತವ್ಯವನು ಮಾಳ್ಪ ॥ ಅನುವದು ತಾನೆ ಪ್ರತ್ಯಾಹಾರವೆನಿಪುದಾ । ಮನಕಿದು ಸತ್ಕಮಂಗನೆ ನಂಬು ॥ ೯ ॥ ಅರಿವಾತ್ಮನರಿವಿನೊಳುರೆ ನಿಲುವನ್ನೆಗ । ಮರಿವಂತರಂಗಕರಣದಿಂದ ॥ ಅರಿ ವಿನೊಯ್ಯಾರದೊಳ್ತೆಗೆಯೆ ಪ್ರ ತ್ಯಾ ಹಾ ರ । ಮುವಿಗದಹುದೆಂದು ತಿಳಿ ವುದು ॥ ೧೦ ॥ ಮನದಿವಿಂದ್ರಿಯದಿಂದ ಲೆನಿತನಿತು ಕಾಣ್ಬ । ನನಿತೆಲ್ಲವನು ಕನ್ನ ನಿಜವೆಂದು ॥ ಅನುಚಿಂತನೆಯೊಳಿರ್ಪುದದು ಪ್ರತ್ಯಾಹಾರವೆಂ । ದೆನಿಪು ದರಿವಿಗೆ ನೋಡಿದುಸಿದ್ಧ ॥ .... . .... ॥ ೧೧ ॥

ಪ್ರತ್ಯಾಹಾರ ಪ್ರಕಾರ ನಿರೂಪಣೆ-ಸೂತ್ರ ೧೦ಕ್ಕೆ ಪದ ೮೭.

---

ಸೂತ್ರ || ಮನವನು ನಿರ್ವಿಷಯದೊಳು ನಿಲಿಸದೆ ಸುಂ |
ಮನೆ ಮುಕ್ತಿ ತಪಗೆಂತು ಘಟಿಪುದು ||

ಪದ || ತನು ಕರ್ಮೇಂದ್ರಿಯ ಸಜೀಕ್ಷನ ಪಂಚೇಂದ್ರಿಯ ಬುದ್ಧಿ | ಮನವಾದಿಯೆನಿಸುವೆಲ್ಲವು ತನ್ನ || ಅನುಮತವೆನಿಸಿ ಪದುಳ ಮಿರ್ದೊಡದು ತಾನೆ | ವನಜಾಸ್ಯೆ ಧಾರಣೆಯೆನಿಪುದು ||೧|| ಒದವಿದ ಚತುರಂಗುಲಾಯತ ವೃತ್ತರೂ | ಪದ ಸುಷಿರದ ನಾಭಿಕಂದದ || ಪದದೊಡನಗಲದೆ ಮನವಿರೆ ಧಾರಣೆ | ಯದು ತಾನೆ ತಿಳಿ ಪುಣ್ಯಮಯಗಾತ್ರೆ ||೨|| ಹೃದಯದಂಗುಷ್ಠ ಮಾತ್ರದ ದಹರಾಕಾಶ | ಪದಮಧ್ಯದೆಡೆಯಲ್ಲಿ ಚಲಿಸದೆ || ಸದಮಳ ಮನ ವಿರಲದನೆ ಧಾರಣೆಯೆಂದು | ಸುದತಿ ನೀನರಿದು ನಿಶ್ಚಯಿಪುದು ||೩|| ಭ್ರೂಮಧ್ಯದೊಳು ರಂಜಿಸುವ ಪರಮವ್ಯೋಮ | ನಾಮದ ಚೌಕಮಧ್ಯ ದೊಳೊಂದಿ || ಆ ಮನವಿರಲದೆ ಧಾರಣೆಯೆಂದು ಸ: | ಪ್ರೇಮದಿಂದರಿ ಪೂರ್ಣಶಶಿ ಮುಖಿ ||೪|| ದಳ ಸಾಸಿರಂಗಳಿಂದೆಸೆವ ತ್ರಿಕೋಣಮಾ | ದಲ ಘುತರ ಬ್ರಹ್ಮರಂಧ್ರದ || ನೆಲೆಯೊಳಡಗಿ ಮನವಿರಲು ಧಾರಣೆಯೆಂದು | ಲಲಿತಾಂಗಿ ನೀನವಧರಿಪುದು ||೫|| ಅದರಿಂದೆ ಮೇಲೆಣಿಸಿದೊಡೆ ಪನ್ನೆರ ಡಂಗು | ಲದೊಳಿರ್ಪ ದ್ವಾದಶಾಂತಮಿದೆಂಬ || ಸದಮಳ ಸ್ಥಾನದೊಳಗಲ ದೊಂದಿರೆ ಮನ | ವದು ಧಾರಣೆಯೆನಿಪುದು ||೬|| ಇವು ಪಂಚ ಗುಹೆ ಗಳೆನಿಸುವ ಸುಕ್ಷೇತ್ರವಿಂ | ತಿವು ಮನೋವಿಲಯದೆಡೆಗಳಾಗಿ || ಯುವತಿ ಕೇಳುತ್ತರೋತ್ತರ ಸುಖಗತಿಯುಳ್ಳ | ವಿವನರಿವುದೆ ಧಾರಣೆಗೆ ಮುಖ್ಯ ||೭|| ಮನವೆ ಸಂಸೃತಿ ದುಃಖವನಿತಕ್ಕೆ ಮೂಲವಾ | ಮನವಳಿದೊಡೆ ಮುಕ್ತಿ ಸುಖ ವದು || ಜನಿಸುಗು ಮದರಿಂದಲರಿ ಮುಮುಕ್ಷುಗಳಿಗೆ | ಮನದ ಧಾರಣೆ ಮುಖ್ಯವೆನಿಪುದು ||೮|| ಯಮ ನಿಯಮಾದಿ ಸುಗುಣವೃಂದಯುತನಾದ | ವಿಮಳಾತ್ಮನಿಗೆ ತನ್ನ ಮನವದು || ಭ್ರಮಿಸದೆ ತನ್ನೊಳಂತರವಾಗಿ ತಾನೆವಿ | ಶ್ರಮಿಸಿ ನಿಂದೊಡೆ ಧಾರಣೆಯಕ್ಕು || .... .... ||೯||

ಧಾರಣಾಂಗ ನಿರೂಪಣೆ-ಸೂತ್ರ ೧೧ಕ್ಕೆ ಪದ ೯೫.

— :o: —

ಸೂತ್ರ || ಮಾನಸಾದಿಯನರಿವರಿವೆ ತಾನೆಂದುರೆ |
ಧ್ಯಾನಿಸೆ ಮುಕ್ತಿ ಸಂಭವಿಪುದು ||

ಪದ ॥ ಹೃದಯಾದಿ ದೇಶದೊಳಗೆ ನಿಂದ ಮನವದು । ಪದವಿಡದೇ ನೊಂದು ವಿಷಯಕ್ಕೆ ॥ ಸದಮಳಾತ್ಮನ ಚಿಂತನೆಯೊಳೊಡಗೂಡಿರ । ಲದು ತಾನೆ ಧ್ಯಾನವೆಂದೆನಿಪುದು ॥೧॥ ಮನವಾವತೆರನಾಗೆ ತನಗೇನೆಂದರಿದು ತಂ । ನನೆ ತನ್ನೊಳೆಡೆವಿಡಲಿಲ್ಲದೆ ॥ ಅನುಚಿಂತನಂಗೈಯುತಿರಲದೆತದ್ಧ್ಯಾನ । ವೆನಿಪುದು ಶಾಸ್ತ್ರಾನುಮತದಿಂದ ॥೨॥ ಮನ ತನ್ನ ವಶವರ್ತಿಯೆನಿಸೆ ತಾನದಕೆ ಬೇ । ರೆನಿಸಿ ಮತ್ತೊಂದರೊಳೊಂದದೆ ॥ ಘನ ಚಿದಾತ್ಮಾನುಭಾವದೊಳೊಡ ಗೂಡಿರೆ । ತನಗೆ ತದ್ಧ್ಯಾನವದೆನಿಪುದು ॥೩॥ ಮನವನೊಯ್ಯಾರದಿಂದವೆ ನಿರೋಧಿಸಿದೊಡೆ । ಮನವಳಿದಾನಂದ ಪದವದು ॥ ಜನಿಸಲಲ್ಲಿಯೆ ತನ್ನ ತಾ ನುರೆ ಮರೆದು ನಿಂ । ದನುವೆ ತದ್ಧ್ಯಾನವೆಂದೆನಿಪುದು ॥೪॥ ಅರಿವಿನ ಹಂ ಭಾವವಳಿದು ಮಿಕ್ಕಿನ ತೋರ್ಕೆ । ನೆರೆ ಮಿಥ್ಯೆಯೆಂದು ಕಾಣ್ಬರಿವದು ॥ ಕರಿ ಗೊಂಡು ಮರೆಯದಿರ್ಪುದನೆ ತದ್ಧ್ಯಾನವೆಂ । ದರಿವುದು ನಿ ೯ ನಾ ತ್ಮ ಕೋವಿದೆ ॥ .... .... .... ॥೫॥

ಧ್ಯಾನಾಂಗ ನಿರೂಪಣೆ—ಸೂತ್ರ ೧೨ಕ್ಕೆ ಪದ ೧೯೦.

---

ಸೂತ್ರ ॥ ಭೇದವಳಿದು ನಿಂದ ನಿಲವೆ ಸಮಾಧಿಯೆಂ ।
ದಾದರದಿಂದೆ ಭಾವಿಸು ನೀರೆ ॥

ಪದ ॥ ತನುವನೆ ಸುಸ್ಥಿರದೊಳು ತನ್ನ ಮಾನಸ । ವನು ಭ್ರೂಮಧ್ಯ ದೊಳು ನಿಲಿಸಲಲ್ಲಿ ॥ ನೆನೆಯದೇನೊಂದನಾ ಮನವಾತ್ಮದೊಡನೈಕ್ಯ । ವೆನಿಸೆ ಸಮಾಧಿಯಂತದು ತಾನೆ ॥೧॥ ಮನವಳಿವುದು ತನ್ನ ಮನದಂದವಳಿಯಲಾ ಮನವಳಿದುಳಿದ ನಿಜಾನಂದ ॥ ಘನವೆ ತಾನಾಗಿರಲದು ಸಮಾಹಿತೆಯೆಂದು। ಮನದನ್ನೆ ಮೈತ್ರೇಯಿ ತಿಳಿ ನೀನು ॥೨॥ ಮನವನೊಂದನುವಿಂದೆ ನಿಲಿಸಲಾ ಮನವಳಿ । ದನುಪಮಾನಂದವಾನೆಂಬುದು ॥ ನೆನಹಿನೊಳುದಿಸದೆ ನೆರೆ ಮರೆ ದಿರ್ದಿರ । ವನು ಸಮಾಹಿತೆಯೆಂದು ನುಡಿಪರು ॥೩॥ ಹೊರಗಣ ಬರಿಬಳಕೆ ಯ ಸುಖದುಃಖವ । ನುರೆ ಮರೆದಾನಂದ ಪದವಾದ ॥ ಬರಿಯರಿವಾಗಿ ತಾನಿರೆ ಸಮಾಹಿತೆಯೆಂದು । ಪರಮೆಗುರುಳಿ ನೀರೆ ತಿಳಿ ನೀನು ॥೪॥ ಜೀವ ಪರಮ ರೆಂಬ ಭಾವನೆ ತನ್ನ ಸ । ದ್ಭಾವದಿಂದಳಿದುಳಿದಾನಂದ ॥ ತೀವಿ ತನ್ನೊಳು ತಾನೆ ನೆಲಸಿ ಚಲಿಸಡ ನಿ । ರ್ಭಾವನೆ ಮೌನವೆಂದೆನಿಪುದು ॥೫॥ ಇವು

ನಾಲ್ಕು ಸಾಧನವಂತರವಿವರಿಂದೆ । ತನೆಯರಿನದು ಶುದ್ಧವಹುದಾಗಿ ॥ ಇವ ರಿಂದೆ ಮುಕ್ತಿ ಸಂಭವಿಪುದು ಜೀವನಿ । ಗಿವನಿಂತು ತಿಳಿ ಚಂಡಮತಿ ನೀನು ॥೬॥ ವಿರತಿಯಿಲ್ಲದೆ ಶಂಭುಪದ ಭಕ್ತಿಘಟಿಸದೆ । ಪರಮ ಜೀವೈಕ್ಯವನರಿಯದೆ ॥ ವರ ಸಮಾಹಿತೆ ಸಿದ್ಧಿವಡೆಯದೆ ಸುಮ್ಮನೆ । ದೊರೆವುಗೆ ನಿಜಮೋಕ್ಷವಿದು ಸತ್ಯ ॥೭॥

ಸಮಾಧಿ ಸ್ಥಿತಿ ನಿರೂಪಣೆ–ಸೂತ್ರ ೧೩ಕ್ಕೆ ಪದ ೧೦೭.

———

ಸೂತ್ರ ॥ ಭೇದ ವಭೇದವೆಂದೆರಡವರಲ್ಲಿ ಯ ।
ಭೇದಭಾವನೆಯೊಳೊಂದಿರೆ ಮುಕ್ತಿ ॥

ಪದ ॥ ಶಶಿಮುಖಿ ಕೇಳು ಸರ್ವಾತ್ಮಕವೆಂದು ಮೇ । ಣೆಸೆವನೇತ್ಯಾತ್ಮಕವೆಂದಿಂತು ॥ . ಸೆನ ಸಮಾಧಿಗಳೆರಡರೊಳಾದಿಯ । ದೆಸೆವುದು ನಾಲ್ಕು ರೂಪವನೈದಿ ॥೧॥ ಬಿಸಜಾಕ್ಷಿ ಮಗುಳೆ ನೇತ್ಯಾತ್ಮಕವೆನಿಸುವ । ಸುಸಮಾಧಿ ಯೊಂದೈದು ತೆರನಿಂತು ॥ ಸಸಿನವಿದೆಂದು ನೀನರಿವಂತೆ ನಾನೊರೆ । ದುಸು ರುವೆನವರಂದವನು ಕೇಳು ॥೨॥ ಗುರುಭಕ್ತನೆನಿಸಿ ಸದ್ಗುರುಸನ್ನಿಧಿಯೊ ಳಿರ್ದು । ಪರಮಾನುಭವ ಸುಖಬೋಧೆಯ ॥ ಪಿರಿದು ನಂಬಿಗೆಯೊಡವೆರದ ಲಸದೆ ಕೇಳು । ತಿರಲದೆ ಶ್ರವಣಾಖ್ಯ ಸುಸಮಾಧಿ ॥೩॥ ಅನುಭವಿಗಳೊಳು ತನ್ನನುಭವ ಬೋಧೆಯ । ನನುಭವವಿದು ಸುಖವೆನಿಪಂತೆ ॥ ವಿನಯದಿಂ ನುಡಿದು ತಾನವರಿಂದೆ ಕೇಳ್ವುದ । ದೆನಿಪುದು ಸಂವಾದ ಸುಸಮಾಧಿ ॥೪॥ ಮರ್ಮವನರಿದಾತ್ಮಸುಖದಾದಿಯೆನಿಸುವ । ಕರ್ಮವನಲಸದೆ ಮಾಳ್ಪುದು ॥ ಕರ್ಮ ಸಮಾಧಿಯೆಂದೆನಿಸುಗುಮದು ಬಾಹ್ಯ । ಕರ್ಮೋಪರತಿಯಿಲ್ಲದಾಗದು ॥೫॥ ಸರ್ವ ಭಾವನೆಯಲ್ಲಿ ಸರ್ವಾತ್ಮಕತ್ವದೆ । ಸರ್ವದಾ ಸುಖಸಿದ್ಧಿ ತನಗಾಗೆ ॥ ಸರ್ವವಿವನು ಬ್ರಹ್ಮಮಯವೆಂದು ಕಾಣ್ಬುದೆ । ಸರ್ವಾತ್ಮಕವೆ ನಿಪ್ಪ ಸುಸಮಾಧಿ ॥೬॥ ಎನಿತು ಲೋಕಂಗಳೊಳಗನಿತೆಲ್ಲವನು ತನ್ನೊ । ಳಿನಿತಿಲ್ಲವೆನೆ ಕಾಣ್ಬಬಗೆಯದು ॥ ವನಿತೆ ನೇತ್ಯಾತ್ಮಕವೆನಿಪ ಸಮಾಧಿಯಿಂ । ದೆನುತಿರ್ಪರಖಿಳ ಸನ್ಮುನಿಗಳು ॥೭॥ ಸಾಕಾರವನು ನಿರಾಕಾರವೆಲ್ಲವನು ತಂ । ನಾಕಾರವಾ ನಿಜಪದದೊಳು ॥ ಜೋಕೆಗಾಣಿಸದಿರುತಿರೆ ನೇತ್ಯಾತ್ಮಕ ವೆಂದು । ಸ್ವೀಕರಿಸಾ ಸಮಾಹಿತೆಯನು ॥೮॥ ಧರಣಿ ಜಲಾನಲ ಮರುದಂ ಬರಾದಿ ನಿ । ಕರವಿವು ಗುಣ ಕರ್ಮತತಿಯೊಳು ॥ ಬೆರಸಿ ಕಾಣಿಸಿ ಕೊಳು

ತಿಹವಾಗಿ ಸಾಕಾರ । ದಿರವೆಂದು ತರಳಾಕ್ಷಿ ತಿಳಿ ನೀನು ॥ ೯ ॥ ಜೀವಜ್ಞ ಮತ್ರ್ಯಾದಿ ಭಾವವು ತನ್ನೊಡ । ನಾವಗವೊಂದಿ ತೋರ್ಪುದರಿಂದ ॥ ಕೋವಿದೆ ನೀನವನರಿ ನಿರಾಕಾರವೆಂ । ದೋವಿ ವಿವೇಕಾದಿಮುಖದೊಳು ॥ ೧೦ ॥ ಇದರಿಂದೆ ಯೋಗಿಗೆ ಭವಬಂಧವದು ಪಿಂಗಿ । ತವೆ ಸುಖಾತ್ಮಕ ಮುಕ್ತಿ ಘಟಿಪುದು ॥ ಯುವತಿ ಕೇಳಾ ಯೋಗಿವರನ ಸಂಗತಿಯಿಂದೆ । ಸವನಿಪ್ರಪಖಿಳರ್ಗೆ ಮನದೊಲ್ಮೆ ॥ .... .... .... .... ॥ ೧೧ ॥

ಸಮಾಧಿ ಭೇದ ನಿರೂಪಣೆ–ಸೂತ್ರ ೧೪ಕ್ಕೆ ಪದ ೧೧೪.



ಸೂತ್ರ ॥ ಯೋಗಿಯು ಕುಲಕೋಟಿ ಬಂಧು ಬಾಂಧವ ರನು ।
ರಾಗದಿಂದವೆ ಮುಕ್ತಿ ಪಡೆವರು ॥

ಪದ ॥ ಯೋಗಿ ಪ್ರತ್ಯಾಹಾರವಾಗೆ ತನಗೆ ಸಿದ್ಧಿ । ಯಾಗಳಾಪನ್ನೊಂದು ಕುಲವನು ॥ ರಾಗವಿಂದೊಡಗೂಡಿ ಮುಕ್ತನೆನಿಸುವನಿ । ದಾಗಮ ಸಿದ್ಧವಂಗನೆ ನಂಬು ॥ ೧ ॥ ವರಯೋಗಿ ಧಾರಣತನಗಾಗ ಲದರಿಂದೆ । ನಿರುತ ಮಿಪ್ಪತ್ತೊಂದು ಕುಲವನು ॥ ಹರುಷದಿಂಬವೆ ಮಹಾಭವಶರನಿಧಿಯ ನು । ತ್ತರಿಸಿ ತಾನೈದುವನಮೃತವ ॥ ೨ ॥ ಕುಲವಿಪ್ಪತ್ತೊಂದನಾ ಕುಲಬಂಧುಗಳನು । ವೊಲಿದೊಡಗೂಡಿ ಯೋಗೀಶನು ॥ ವಿಲಸದಮೃತಸಿದ್ಧಿ ಪಡೆವನಾ ಧ್ಯಾನದ । ಬಲದಿಂದೆ ಲಲಿತಾಂಗಿ ನಿಜವಿದು ॥ ೩ ॥ ಕುಲವನೇಕೋತ್ತರ ಶತವನಾ ಕುಲ ಬಂಧು । ಬಳಗವೆಲ್ಲವನುದ್ಧರಿಸಿ ತನ್ನ ॥ ಸುಲಭವೆನಿಪ ಸಮಾಧಿಯು ಸತ್ವದೊಳು ಯೋಗಿ । ಸಲಿದೈದುವನು ಮುಕ್ತಿ ಸುಖವನು ॥ ೪ ॥ ಎರಡವಸ್ಥೆಗಳು ಯೋಗಿಗೆ ಸಮಾಹಿತೆಯೆಂದು । ವರಸಮುತ್ಥಾನವೆಂದಿವನಿಂತು ॥ ತರುಣಿ ನೀನರಿವುದಾಗಮ ದನುಮತವಿದಿ । ದೊರೆವೆ ನಾನಿದು ಸತ್ಯವೆನಿಪಂತೆ ॥ ೫ ॥ ತಾನಿದಿರೆಂದು ಬೇರೇನೆಂದುಮರಿಯದೆ । ಜ್ಞಾನ ಸುಖಾದ್ವಯಪದವಾಗಿ ॥ ತಾನಿರ್ಪುದದು ಸಮಾಹಿತೆಯೆಂಬ ಬಗೆಯದು । ಮಾನಿನಿ ಮುದದಿಂದೆ ತಿಳಿವುದು ॥ ೬ ॥ ಸಕಲಾರಬ್ಧಂಗಳ ನಿಖಿಳೇಂದ್ರಿಯಂಗಳಿಂ । ದಕಲಂಕ ಬ್ರಹ್ಮಾತ್ಮಕವೆಯೆಂದು ॥ ವಿಕರಿಸದುಪಭೋಗಿಪುದು ತಾನೆಯುತ್ಥಾನ । ವಕುಟಿಲೆ ನೀನದನರಿವುದು ॥ ೭ ॥ ಯುಗ ಮಾತ್ರ ದರ್ಶಿಯೆನಿಸಿ ಮುಂದಗತಿಯಿಂದೆ । ಬಗೆಯದೇನೊಂದು ವಿಷಯುವನು ॥ ಮೃಗನೇತ್ರೆ

ಯೋಗಿ ಚರಿಸುವೆಡೆಯೊಳು ಸದಾ । ನೆಗಳುತಿರ್ಪುದು ಸಮಾಹಿತೆಯನು ॥೮॥
ಯೋಗೀಶ್ವರಂಗೆ ಸ್ಥಿತಿ ವಿಶೇಷ ನಿರೂಪಣೆ–ಸೂತ್ರ ೧೫ಕ್ಕೆ ಪದ ೧೨೬.

———

ಸೂತ್ರ ॥ ಯೋಗಿ ಕರ್ಮತ್ರಯವನು ಪೇಳ್ವವಿಧಿಯಿಂದೆ ।
ನೀಗಿ ನಿರ್ಮಳ ಮುಕ್ತಿ ವಡೆವನು ॥

ಪದ ॥ ತನುವನಂತಂಗಳ ಜನನಕ್ಕೆ ಬೀಜವೆಂ । ದೆನಿಸಿ ಬುದ್ಧಿಯೊಳು ಸಂಸ್ಕರಿಸಿರ್ಪ ॥ ಘನಕರ್ಮವದು ಸಂಚಿತಾಖ್ಯದಿಂದೆಸೆವುದು । ಮುನಿ ಮತವಿದು ಸರ್ವ ಶ್ರುತಿಸಿದ್ಧ ॥೧॥ ಆ ಸಂಚಿತಾಖ್ಯ ಕರ್ಮವನೆ ಯೋಗೀಶ್ವರ । ನೋಸರಿಸದೆ ತಾನೆ ರಚಿಸುವ ॥ ಭಾಸುರಾತ್ಮಾನುಚಿಂತನದಿಂದೆ ತೀರ್ಚಿ ವಿ । ಲಾಸದೊಳೊಂದಿ ಸಂಚರಿಪನು ॥೨॥ ವನಿತೆ ಕೇಳಾ ಸಂಚಿತದೊಳಾದ ತನುವಿದ । ರನುವಿಡಿದೀಗಳೀಪರಿಯೊಳು ॥ ತನಗಾದ ಕರ್ಮವದಾರಬ್ಧವೆನಿಪುದು । ವಿನುತ ವೇದಾರ್ಥವಿಂತಿದು ತಾನು ॥೩॥ ಆರಬ್ಧ ಕರ್ಮವಿದನು ಯೋಗಿ ಭೋಗಿಸಿ । ತೀರಿಸುವನು ಚಿಂತೆ ವಡಿಯದೆ ॥ ಆರಯ್ಯೆ ಸುಖ ದುಃಖ ಮಿಶ್ರರೂಪಿಂದೆ ನಿ । ವಾರಿಸ ಬಾರದಾರ್ಗೆಯುಮದು ॥೪॥ ಯೋಗಿ ಮೇಣಿಚ್ಛೆಯನಿಚ್ಛೆ ಪರೇಚ್ಛೆಗ । ಳಾಗಿ ಸರ್ವವನುಪಭೋಗಿಸಿ ॥ ನೀಗುವನಾರಬ್ಧ ಕರ್ಮವನದು ಪೋಗ । ದೇಗೈದು ಬೇರೊಂದು ವಿಧಿಯಿಂದ ॥೫॥ ವಾರಿಜವದನೆ ನೀನೊಲವಿಂದೆ ತಿಳಿವುದಾ । ಪ್ರಾರಬ್ಧದಿಂದ ಸಮ್ಯಜ್ಞಾನ ॥ ಶಾರೀರವಿಡಿದು ಮಾಡಿದ ಕರ್ಮವಿದು ಸುವಿ । ಚಾರಿಸಲಾಗಾಮಿಯೆನಿಪುದು ॥೬॥ ಆಗಾಮಿಯೆನಿಪ ಧರ್ಮಾಧರ್ಮವದು ತಾನು । ಯೋಗಿಯ ನುತಿಸಿ ನಿಂದಿಸಿದರ್ಗೆ ॥ ಪೋಗುತಿರ್ಪುದು ನಿಜವಹುದಾಗಿ ಮುಕ್ತ ;ತಾ । ನಾಗುವನವನಿದು ಶ್ರುತಿ ಸಿದ್ಧ ॥೭॥ ಈ ತೆರದಿಂದೆ ಕರ್ಮಾಳಿಯಳಿದು ಬೇರೆ । ಮಾತೇನು ಯೋಗಿ ನಿಜಾನಂದ ॥ ಚೈತನ್ಯಾದ್ವಯ ಮುಕ್ತಿವಡೆವುದು ಸತ್ಯವೆಂ । ದೋತು ನೀನರಿಸ್ರದಂಬುಜನೇತ್ರೆ ॥ .... ॥೮॥

ಯೋಗೀಶ್ವರಂಗೆ ಕರ್ಮಕ್ಷಯ ಪ್ರಕಾರ ನಿರೂಪಣೆ
ಸೂತ್ರ ೧೬ಕ್ಕೆ ಪದ ೧೩೪.

—:o:—

ಸೂತ್ರ || ಮಗುಳೆ ಸಪ್ತಾವರಣದೊಳೊಂದಿ ಜೀವಾತ್ಮ |
ನಿಗೆ ಯಮಾದಿಗಳು ಮುಕ್ತಿಯನೀಗು ||

ಪದ|| ಯಮನಿಯಮಾದಿಗಳನು ಸಪ್ತಾವರಣದೊ | ಳರ್ಮದವಸ್ಥೆಗಳಿಂದೆ ರಚಿಸಲು || ಸಮನಿಪುದಮೃತವಾ ಕ್ಷಣದೊಳಾ ಜೀವಂಗೆ | ಸುಮತಿ ನಾನವ ನೊರೆವೆನು ಕೇಳು ||೧|| ತನು ಮನೋಬುದ್ಧಿಯಹಮು ಚಿತ್ತ ವಿಜ್ಞಾತೃ | ಘನಮಾಯೆಯೆಂಬವೀ ಕ್ರಮದಿಂದ || ವನಿತೆ ಸಪ್ತಾವರಣಂಗಳೆನಿಪವಿವ | ರನುವನೊಯ್ಯಾರದಿಂದರಿವುದು ||೨|| ಇವರೊಳೊಂದಿರೆ ಜೀವನಿಗೆ ಕರ್ತೃ ಮೊದಲೆನಿ | ಸುವ ನಾಮಕಲ್ಪನಾ ವ್ಯವಹೃತಿ || ವಿವಿಧವಸ್ಥೆಗ ಳನುಗತಿವಿಡಿ ದೊಡನೆ ಸಂ | ಭವಿಸವಾ ಬಹುರೂಪಿ ನಟನಂತೆ ||೩|| ಪೆಸರಿಂ : ಕರ್ತನು ಪೆಸರಿಂದೆ ಜೀವನು | ಪೆಸರಿಂದೆ ಕ್ಷೇತ್ರಜ್ಞಕನು ಸಾಕ್ಷಿ|| ಪೆಸರಿಂದೆ ಕೂಟಸ್ಥ ನರಿಯಲಂತರ್ಯಾಮಿ | ಪೆಸರಿಂದೆ ಪ್ರತ್ಯಗೆನಿಪನಾತ್ಮ ||೪|| ಭ್ರಮೆವಿಡಿದೀ ತನುತಾನೆಂಬ ಬಗೆ ತನ್ನೊ | ಳಮರ್ದಿರ್ಪ ಕತದಿಂದೆ ತಿಳಿಯಲ್ಕೆ || ಯಮ ನಿಯಮಂಗಳೆರಡು ದೃಢತರಮಾಗಿ | ಕ್ರಮದಿಂದೆ ಕರ್ತಂಗೆ ಕರಣೀಯ ||೫|| ಮನವೆ ತಾನೆಂಬುದಿರಲು ತನ್ನೊಳಸು ನಿರೋ | ಧನವದ ನೆಸಗಲಾಸನಮಿವು || ವನಿತೆ ಕೇಳನುದಿನವಲಸದೆ ಚಲಿಸದ | ತನದಿಂದೆ ಜೀವಂಗೆ ಕರಣೀಯ ||೬|| ಅತ್ಯರ್ಥಮಾಗಿ ಬುದ್ಧಿಯನು ತಾನೆಂಬುದು | ಸತ್ಯಮಾಗಿರೆ ತನ್ನೊಳದರಿಂದ || ಪ್ರತ್ಯಾಹರಣವೆ ಕ್ಷೇತ್ರಜ್ಞಾಖ್ಯನಿಗೆ ನಿತ್ಯ | ಕೃತ್ಯವಾಗಿರ್ಪುದಂಗನೆ ಕೇಳು ||೭|| ತನಗಹಂಕೃತಿ ರೂಪವಹುದಾಗಿ ಸಾಕ್ಷಿಯೆಂ | ದೆನಿಸುವಾತನು ಧಾರಣೆಯ ನೈದಿ || ಅನುದಿನ ವಗಲದೆ ರಚಿಸವೇಳ್ಪುದು ನೀರೆ | ವಿನುತ ವೇದಾನುಶಾಸ ನವಿದು ||೮|| ತನಗೆ ಚಿತ್ತವೆ ರೂಪವೆನಿಸೆ ಕೂಟಸ್ಥನಾ | ವನುವಿಂದೆ ಕೇಳು ತದ್ಧ್ಯಾನವ || ಇನಿಸಗಲದೆ ಮಾಡಬೇಹುದಾ ಚಿತ್ತವೆ | ನೆನಹಿಂಗೆ ಕಾರಣ ವಹುದಾಗಿ ||೯|| ಜ್ಞಾತೃತಾನೆಂಬ ಭಾವನೆಯೊಳಂತರ್ಯಾಮಿ | ಚೈತನ್ಯ ಮಾದ ಸಮಾಧಿಯು || ಚೈತನ್ಯದಿಂದೆ ಮಾಡುವನೆಂದು ತಿಳಿವುದು | ಚೈತನ್ಯ ದುಪರತಿಯದು ತಾನು ||೧೦|| ಕೃತ್ಯವೆಳ್ಳನಿತುಮಿಲ್ಲದೆ ಸುಮ್ಮನಿರ್ಪುದೆ | ಕೃತ್ಯವಾ ಮಾಯೋಪಹಿತನಾದ || ಪ್ರತ್ಯಗಾತ್ಮನಿಗದು ಸತ್ಯವೆಂದೆಲೆ ಕೃತ ಕೃತ್ಯೆ ಮೈತ್ರೇಯಿ ನೀನರಿವುದು .... .... ||೧೧||

ಸಪ್ತಾವರಣ ಯೋಗಾಂಗ ನಿರೂಪಣೆ-ಸೂತ್ರ ೧೭ಕ್ಕೆ ಪದ ೧೪೫.

---

ಸೂತ್ರ ॥ ತನು ಮುಖ್ಯವೆನಿಸುವಾವರಣ ರಹಿತನಾದ ।
ತನಗುಂಟೆ ಪೊರಗೊಳಗಣ ಕೃತ್ಯ ॥

ಪದ ॥ ನಿನಗೆ ಕರ್ತಾದಿ ಜೀವನಿಕಾಯ ಭೇದವಾ । ವನುವಿಂದೆ ಪೇಳ್ದೀಗಳನಿತನು ॥ ಇನಿತಿಲ್ಲದಂತೆ ಲಯಿಸುವ ತೆರನನು ನೀರೆ । ಮನವೊಲಿ ದೊರೆವೆನಾಲಿಸು ನೀನು ॥ ೧ ॥ ತನುವಿದು ತಾನಲ್ಲವದರೊಳಗೊಮ್ಮೆಯು । ತನಗುಂಟೆ ಯಮ ನಿಯಮಂಗಳು ॥ ಎನುತೆ ಭಾವಿಸಿದೊಡೊಂದಿನಿಸು ಕರ್ತೃ ತ್ವವಿ । ಲ್ಲೆನಿಸುಗುವಾತ್ಮನೊಳಿದು ನಿಜ ॥ ೨ ॥ ಮನವೆ ತಾನಲ್ಲವಾ ಮನ ದೊಡನಾಸನ । ವನಿಲ ನಿರೋಧನ ದ್ವಯವಿವು ॥ ತನಗಿಲ್ಲವೆಂದು ತಿಳಿಯೆ ಜೀವಲಯವೆಂದು । ವನಿತೆ ವೈತ್ರೇಯಿ ನೀನರಿವುದು ॥ ೩ ॥ ಬುದ್ಧಿ ತಾನ ಲ್ಲಾಗಿ ಸಿದ್ಧಿಸಲರಿವುದೆ । ಶುದ್ಧ ಪ್ರತ್ಯಾಹಾರವೆನಲಿಲ್ಲ ॥ ಉದ್ಧತನಾದ ಕ್ಷೇತ್ರ ಜ್ಞನ ಲಯವದು । ಸಿದ್ಧಾಂತವಂಬುಜಾನನೆ ನಂಬು ॥ ೪ ॥ ಭಾರೂಪನಾ ದಾತ್ಮನಹಮಲ್ಲವದರಿಂದೆ । ಧಾರಣೆಯಿಲ್ಲೆಂದು ತಿಳಿದಂದು ॥ ಸಾರಿ ನೀನರಿ ಸಾಕ್ಷಿ ವಿಲಯವಿದೆಂಬು ॥ವಿ । ಚಾರಿಸೆ ವೇದಾನುಮತದಿಂದ ॥ ೫ ॥ ಚಿತ್ತವಾ ನಲ್ಲವದರ ಕೂಡೆ ಬೆರಸದ । ಚಿತ್ತು ತಾನೆಂದು ತಿಳಿದ ಮೇಲೆ ॥ ಎತ್ತಣ ಧ್ಯಾನವೆಂದರಿಯೆ ಕೂಟಸ್ಥ ಸಂ । ವಿತ್ತಿಗೆ ಲಯವದು ಲಲಿತಾಂಗಿ ॥೬॥ ಬರಿ ಯರಿವಾನಪ್ಪೆ ನದರಿಂದೆ ನಿತ್ಯವಾ । ದರಿವೆ ನಾನೆನಲು ಸಮಾಹಿತೆ ॥ ಪರಿ ಮುದು ತನಗದರಿಂದ ವಂತರ್ಯಾಮಿ । ದೊರೆಯಲುಪಟ್ಟುದೆಂದರಿವುದು ॥೭॥ ಪ್ರತ್ಯಕ್ಪರಾಗ್ಭೇದ ಕೃತ್ಯವಜ್ಞತೆಯಿಂದೆ । ಕೃತ್ಯಮುಂಟೆನಿಕುಮದಿಲ್ಲಾಗಿ ಕೃತ್ಯವೊಂದಿಲ್ಲವೆಂದೆನಲದರಿಂದವೆ । ಪ್ರತ್ಯಗಾತ್ಮಂಗೆ ವಿಲಯವಕ್ಕು ॥ ೮ ॥ ಇಂತು ಕರ್ತಾದಿ ಭಾವನೆ ತನ್ನೊಳಳಿದಂದು । ಕಾಂತೆ ತಾನೆ ಬ್ರಹ್ಮವೆನಿ ಪುದು ॥ ಸಂತರೆಲ್ಲರ ಮತವಹುದೆಂದು ತಿಳಿವುದೋ । ರಂತೆ ವಿಶ್ವಾಸದೊಡನೆ ಕೂಡಿ ॥ ........ ........ ॥೯॥

ಯೋಗೀಶ್ವರಂಗೆ ಕರ್ತೃತ್ವಾದಿ ಜೀವಭಾವ ನಿಷೇಧ ನಿರೂಪಣೆ
ಸೂತ್ರ ೧೮ಕ್ಕೆ ಪದ ೧೫೪.

---

ಸೂತ್ರ ॥ ಆವರಣಂಗಳನಡಗಿಸಿ ನಿಂದ ನಿ ।
ರಾವರಣವೆ ಪರಬ್ರಹ್ಮವು ॥

ಪದ ॥ ಪೆಸರಿಂನೇಳಾವರಣವನು ಮೂರಾವರ । ಣಸಮಾಧಿ ಯನು ನಿರಾವೃತಿಯಾಗಿ ॥ ಎಸೆವ ಪರಬ್ರಹ್ಮವನು ಮುದ್ರೆಗಳನು ನಾ । ನುಸುರುವೆನಬಲೆ ನೀನಾಲಿಸು ॥ ೧ ॥ ತನು ಮೊದಲಾದ ವಿಷಯ ವಿಂದ್ರಿಯಾಳಿಗ । ಳನಿತನು ಮನದೊಳಾ ಮನವನು ॥ ಘನಬುದ್ಧಿಯೊಳಗ ದ ನಹಮಿನೊಳದನು ಮಾ । ನಿನಿ ಚಿತ್ತದೊಳು ಲಯಿಸುದದನಿನ್ನು ॥೨॥ ಜ್ಞಾತೃವಿನೊಳಗದನುರೆ ಮಾಯಾತನುವಿನೊ । ಳಾತನುವನು ಬ್ರಹ್ಮಪದ ದೊಳು ॥ ಸಾತಿಶಯಾನುಗತಿಯೊಳಡಗಿಸಿ ಶುದ್ಧ । ಚೈತನ್ಯರೂಪದಿಂದಿರು ನೀರೆ ॥ ೩ ॥ ಮನದೊಳಿಂದ್ರಿಯವ ನಾ ಮನವನೆ ಬುದ್ಧಿಯೊ । ಳನಿಸು ದೋಂಕೆಯಿಲ್ಲದಡಗಿಸಿ ॥ ಘನ ಸಚ್ಚಿದಾನಂದಮಯ ಪರಬ್ರಹ್ಮವೆಂ । ದೆನಿಸಿ ನೀನಿರ್ಪುದಂಬುಜ ನೇತ್ರೆ ॥೪॥ ಮನದಿನಾರಯ್ಯದಾ ಮನವನರಿವ ತನ್ನ । ನಿನಿಸುದೋರಿಕೆಯಿಲ್ಲದಡಗಿಸಿ ॥ ಅನುಪಾಧಿಕನುಮೆನಿಸಿದೊಡೆ ತಾನಲ್ಲಿ ಚಿ । ದ್ಘನ ಪರಬ್ರಹ್ಮರೂಪೆನಿಸಿರ್ಕು ॥ ೫ ॥ ಅರಿವೆ ತಾನೆಂದರಿದರಿವೆಂಬುದೇ ನೆಂದು । ವರಿಯದೆ ಬರಿದೆ ತನ್ನಲ್ಲಿಯೆ ॥ ನೆರೆಲೀಯವಾಗಿ ಸ್ಥೈರ್ಯದಿರ್ದುದ ನೊಲಿದು ನೀ । ನರಿ ಪರಬ್ರಹ್ಮರೂಪವದೆಂದು ॥ ೬ ॥ ಕರವೆರಡನುತಳು ಕೆನಿಸಿ ಪಿಡಿದು ಬಿಗಿ । ದಿರಿಸಿ ಮೇಲಂಗುಷ್ಠ ಯುಗವನು ॥ ಚಿರಸುಖಮಿಹು ದದೆ ಶ್ರೀಪಾದ ಮುದ್ರೆಯೆಂ । ದೊರೆವರಖಿಳ ಮನು ಮುನಿಗಳು ॥ ೭ ॥ ಕರಯುಗಮೂರ್ಧ್ವ ಮುಖದೊಳೊಂದಿಸತ್ತಿಸ್ಥೈ । ತಿರೆ ಪಿಡಿದೆಸೆದಿರ್ಪುದದು ತಾನೆ ॥ ವರವಂದನಾ ಮುದ್ರೆಯೆನಿಪುದು ಕೇಳೆನ್ನ । ಹರಣವೆ ಮೈತ್ರೇಯಿ ಮುದದಿಂದ ॥ ೮ ॥ ಬಳಿಕವಂಗುಷ್ಠ ತರ್ಜನಿಗಳ ತುದಿಗೂಡಿ । ಬಲದ ಮೇಲ್ಗೈವಾಮಪಾಣಿಯ॥ ತಳದೊಳೊಂದಿರಲದೆ ಜ್ಞಾನಾಖ್ಯ ಮುದ್ರೆಯೆಂ । ದೆಳಸಿ ಮೈತ್ರೇಯಿ ನೀನರಿವುದು ॥ ೯ ॥ ಪರತತ್ವದೊಳು ಮನೋವಾಯು ವೃತ್ತಿಗಳಡ । ಗಿರೆ ತಾರೆ ನಿಲಲನಿಮಿಷವಾಗಿ ॥ ತರಹರವಾದುದೆ ಶಾಂಭವಿ ಮುದ್ರೆಖೇಚರಿಯೆಂಬ ಮುದ್ರೆ ನೋಡದು ತಾನೆ ॥ .... ॥೧೦॥

ಯೋಗೀಶ್ವರಂಗೆ ಬ್ರಹ್ಮಾನುಸಂಧಾನ ಕ್ರಮನಿರೂಪಣೆ

ಸೂತ್ರ ೧೯೩ಕ್ಕೆ ಪದ ೧೬೪.

---

ಸೂತ್ರ ॥ ಕೇಳು ಬಳಿಕ ಪಂಚಯೋಗವಿವನು ಮಾಡ ।
ಲಾಳಿಲಹುದು ಮುಕ್ತಿಪದವನು ॥

ಪದ ॥ ಒಂದೆರಡಾರೆಂಟು ವರ್ಣದ ಮನುಗಳ । ಛಂದವನರಿದೆಳಸಿದು ದನು ॥ ಕುಂದದೆ ಜಪಿಸುತಿರಲು ಮಂತ್ರಯೋಗವಿ । ದೆಂದು ಪೇಳ್ವರು ಸಂಯಮಿಗಳೆಲ್ಲ ॥ ೧ ॥ ನಾದದ ನಿಜದೊಳಾಗಲಿ ಬಿಂದುವಿನ ರಮ್ಯ । ವಾದ ರೂಪದೊಳಾಗಲಸುಗೂಡಿ ॥ ಭೇದವಳಿದು ಮನವಿರೆ ಲಯಯೋಗವೆಂ । ದೋದಿ ಸೂರಿಗಳು ಸೂಚಿಸುವರು ॥ ೨ ॥ ಹವಣಿಸಿದಷ್ಟಾಂಗದಿಂದೆ ಕರಣ ಮುದ್ರಾ । ನಿವಹದಿಂ ಬರಿಯ ಕುಂಭಕದಿಂದ ॥ ಪವನನ ವಿಜಯವೆ ಹಠ ಯೋಗವಪ್ಪುದೆಂ । ದವಿಚಲ ಮತಿಗಳೂಹಿಸುವರು ॥ ೩ ॥ ಅರಿವಿನಿಂದೊಳ ಹೊರಗಣ ಮೂರು ಲಕ್ಷ್ಯದಿಂ । ದರಿದು ತತ್ವವನು ಮಾನಸವೃತ್ತಿ ॥ ಕರಿ ಗೊಂಡು ನಿಂದೊಡದನೆ ರಾಜಯೋಗವೆಂ । ದರುಹಿ ತೋರುವ ರಚ್ಚಸುಖಿ ಗಳು ॥ ೪ ॥ ಗುರುಶಂಭುಲಿಂಗದರ್ಶನೆ ಯನುಸಂಧಾನ । ವರ ವಿದ್ಯಾ ಭಕ್ತಿ ಸುವ್ರತವೈದು ॥ ನಿರುತದಿಂದಳವಟ್ಟುದನೆ ಶಿವಯೋಗವೆಂ । ದೊರೆವರೊ ಲಿದು ವೇದವಿದುಗಳು ॥ .... .... .... ॥ ೫ ॥

ಯೋಗೀಶ್ವರಂಗೆ ಮಂತ್ರಾದಿ ಯೋಗಪಂಚಕ ನಿರೂಪಣೆ
ಸೂತ್ರ ೨೦ಕ್ಕೆ ಪದ ೧೬೯.

---

ಸೂತ್ರ ॥ ತಿಳಿದು ಸುದೇಶಂಗಳೊಳಗೈದು ಕಾಲದೊ ।
ಳೆಳಸಿ ಮಾಳ್ಪುದು ಸಮಾಹಿತೆಯನು ॥

ಪದ ॥ ಕಮಲಾಕ್ಷಿ ದೇಶ ನಿಯಮವನಾ ಕಾಲನಿ । ಯಮವನಾ ಯೋಗಿಗೆ ವಿಧಿಯಿಂದೆ ॥ ವಿಮಲ ಸಮಾಧಿ ಸುಸ್ಥಿತಿಗೆ ಕಾರಣಮಾಗಿ । ಕ್ರಮ ದಿಂದೆ ಪೇಳ್ವೆನಾಲಿಸು ನೀರೆ ॥ ೧ ॥ ಗಿರಿ ಪುಣ್ಯತೀರ್ಥ ಸಾಗರ ಶಿವಗೃಹ ಗೋಷ್ಠ । ವರನಿಜಭವನಾದಿಗಳು ರಮ್ಯ ॥ ಕರವೆನಿಸಿರಲದೆ ತಿಳಿ ಸುದೇಶಂ ಗಳೆಂ । ದೊರೆವುದಾ ಶ್ರುತಿ ಯೋಗಿಗೊಲವಿಂದ ॥ ೨ ॥ ತಿಳಿಯರುಣೋದ ಯವನು ಸಂಧ್ಯಾತ್ರಯವನು । ಬಳಿಕ ನಿದ್ರಾದಿ ಸಮಯವನು ॥ ಕಳಹಂಸ ಗಮನೆ ಯೋಗಿಗೆ ಸಮಾಹಿತೆಯೊಳು । ಸಲುವೈದು ಕಾಲವೆಂದಿವನಿಂತು ॥ ೩ ॥ ವರಪಂಚ ಕಾಲದೊಳಿರಡು ಮುಹೂರ್ತವಾ । ದರದಿಂದೆ ವಿರತಿಯೊಳಳ ವ ಟ್ಟು ॥ ನಿರುತದೊಳೊಂದಿ ಸಮಾಧಿಯನೆಸಗಲ್ಕೆ । ಪುರುಷಾರ್ಥವಿದು ಯೋಗಿ ಜನಂಗೆ ॥ ೪ ॥ ಇಂತು ಸಮ...ವೈದರೊಳು ಸಮಾಧಿಗಳನೋ ।

ರಂತೆ ಮಾಳ್ಪಧಿಕಾರಿ ಜನರಿಗೆ ॥ ಮುಂತೆ ಮೂದೆರನಾಗಿ ತೋರುವ । ಸೂಚನೆ ಯಂತವನೊರೆವೆನಾಲಿಸು ನೀರೆ ॥ .... .... .... ॥ ೫ ॥

ಯೋಗೀಶ್ವರಂಗೆ ಸಮಾಧಿಕಾಲಕ್ರಮ ನಿರೂಪಣೆ

ಸೂತ್ರ ೨೧ಕ್ಕೆ ಪದ ೧೭೪.

---

ಸೂತ್ರ ॥ ವನಿತೆ ಯೋಗಾಭ್ಯಾಸಿಗಳಿಗಾದಿಯೊಳು ಸೂಕ್ಷ್ಮ ।
ತನು ಸಾದ ಸುಖವಿವು ತೋರ್ಪುವು ॥

ಪದ ॥ ಮಂದ ಮಧ್ಯೋತ್ತಮರೆಂದಿಲ್ಲಿ ಮೂದೆರ । ದಿಂದವಭ್ಯಾಸಿಗಳವರನು ॥ ಇಂದುವದನೆ ತೋರ್ಪ ಸೂಚನಾತ್ರಯದೊಡ । ನೊಂದಿ ಕಾಣಿಸಲರಿವುದು ನೀನು ॥ ೧ ॥ ನಿಯುತವೆನಲು ಸೂಕ್ಷ್ಮತನು ಘಂಟಾದಿಕ ನಾದ । ಚಯ ವಚ್ಚ ಸುಖವಿವಾ ಕ್ರಮದಿಂದ ॥ ಪ್ರಿಯತಮೆ ಮಂದಮಧ್ಯೋತ್ತಮರೊಳು ಚಿಹ್ನ । ತ್ರಯವೆಂದು ನೀನವಧರಿಪುದು ॥ ೨ ॥ ಮಾಸವೀರಾರು ಮಾಸವರಿಯೆ ಮೂರು । ವಾಸವಾ ಮಂದಾದಿ ಮೂವರ್ಗೆ ॥ ಲೇಸೆನಿಪಂತನುಗತಿವಿಧಿಯೊಳು ಯೋಗಾ । ಭ್ಯಾಸವೆ ಕರಣೀಯವಿದು ಸತ್ಯ ॥ ೩ ॥ ನಿಯತದಿಂದಭ್ಯಾಸ ಕ್ರಿಯೆಯನಿಂತೊಲಿ । ದನು ನಯವನುಳಿಯದೆ ಮಾಳ್ಪವರಿಗೆ ॥ ಪ್ರಿಯತಮೆ ಕೇಳಹುದಾಗಲಾರೂಢತೆ । ಕ್ರಿಯೆ ಬಳಿಕೊಂದುಮಿಲ್ಲಿದು ನಿಜ ॥ ೪ ॥

ಯೋಗಾಧಿಕಾರಿ ಭೇದ ಸೂಚನೆ ನಿರೂಪಣೆ–ಸೂತ್ರ ೨೨ಕ್ಕೆ ಪದ ೧೭೮.

---

ಸೂತ್ರ ॥ ಊಟಕ್ಕೆ ವಿಷಯಕ್ಕೆ ಮರುಗುತಿಪ್ಪಾತಂಗೆ ।
ಕೂಟವಪ್ಪುದೆ ಶಿವಪದದೊಳು ॥

ಪದ ॥ ಜಲಜಾಕ್ಷಿ ಮೈತ್ರೇಯಿ ಯಲಸದಭ್ಯಾಸವ । ನೊಲಿದು ಮಾಳ್ಪಾತನಾ ಸ್ತುತಿ ನಿಂದೆ ॥ ಗೆಲವಪಜಯಮಿವರೊಳು ಸಮತಾ ಬುದ್ಧಿ । ನಿಲೆ ಭಿಕ್ಷಾಟನವನಾಚರಿಸನು ॥ ೧ ॥ ಪರಮ ಸಜ್ಜನರ ಸತ್ಪುರುಷರ ಸದ್ಧರ್ಮ । ಪರರ ಭಕ್ತರ ಗೃಹಂಗಳನೈದಿ ॥ ತರಹರದೊಡದೆ ಭೈಕ್ಷೆಯನೊಲವಿಂದವಾ । ಚರಿಸುಗಭ್ಯಾಸದ ದೆಶೆಯೊಳು ॥ ೨ ॥ ಜಲ ತಕ್ರ ದಧಿ ದುಗ್ಧ ಫಲ ಹವಿ ಯನ್ನಾಜ್ಯ । ತಿಲ ಪಿಣ್ಯಾಕಾದಿಗಳೆಲ್ಲವ ॥ ನಲವಿಂದೆ ಯೋಗಿ ಭಿಕ್ಷೆಯೊಳನುಕರಿಪುದು । ಲಲನೆ ಲೇಸಭ್ಯಾಸಗತಿಗಿದು ॥ ೩ ॥ ಮೈತ್ರೇಯಿ ತಿಳಿ ಪಾಣಿಪಾತ್ರೆ

ಯಾಗಲಿ ದಾರು । ಪಾತ್ರೆಯಾಗಲಿ ಮೃದ್ವಿಕೃತಮಾದ ॥ ಪಾತ್ರೆಯಾಗಲಿ ಯೋಗಿವರನಿಗಹುದು ಭಿಕ್ಷಾ । ಯಾತ್ರೆಯೊಳಖಿಳನ್ನವಿದು ಸತ್ಯ ॥ ॥ ೪ ॥

ಯೋಗೀಶ್ವರಂಗೆ ಭಿಕ್ಷಾಟನ ವಿಧಿ ನಿರೂಪಣೆ–ಸೂತ್ರ ೨೩ಕ್ಕೆ ಪದ ೧೬೨.

---

ಸೂತ್ರ ॥ ಯೋಗಾಂತರಾಯಂಗಳಾಗಲ್ಕೆ ಯೋಗಿ ವಿ ।
ರಾಗದಿಂದವನುರೆ ಗೆಲುವುದು ॥

ಪದ ॥ ಯೋಗವಿಘ್ನಂಗಳಾ ಯೋಗದಭ್ಯಾಸದೊ । ಳಾಗಳಾಕಸ್ಮಿಕದೊಳು ತೋರೆ ॥ ಯೋಗಿ ವಿವೇಕ ವಿರಾಗದೆ ತರಹರ । ನಾಗಿ ತಾನಿರಬೇಕು ದವರಲ್ಲಿ ॥ ೧ ॥ ವನಿತೆ ಕೇಳಭ್ಯಾಸ ದೆಶೆಯಲ್ಲಿ ಯೋಗಿಗೆ । ಜನಿಪವಾಜ್ಞಾತೃವಿಕೃತಿಯೆಂದು ॥ ಘನತರ ಜ್ಞಾನ ವಿಜ್ಞೇಯವಿಕೃತಿಗಳೆಂ । ದಿನಿತು ವಿಘ್ನಂಗಳವನು ಪೇಳ್ವೆ ॥ ೨ ॥ ಅಲಸತೆ ರೋಗಸಂಚಲತೆ ವಿಷಯಸಮಾ । ಕುಲತೆ ಸಂಶಯ ವಿಸ್ಮೃತಿಗಳನು ॥ ತಿಳಿವುದು ಜ್ಞಾತೃವಿಕೃತಿಯೆಂಬ ವಿಘ್ನವೆಂ । ದೆಳಸಿ ಮೈತ್ರೇಯಿ ನೀನೊಲವಿಂದ ॥ ೩ ॥ ಗುಣನಿಧಿ ಕೇಳು ನಿರ್ಗುಣವಿರೋಧಿಗಳೆನಿ । ಪಣಿಮಾದಿ ಸಕಲಸಂಪದಮುಖ್ಯ ॥ ಗುಣಯೋಗಸಿದ್ಧಿಗಳೆನಿಪ ವಿಘ್ನಂಗಳಿ । ವೆಣಿಸಲಾ ಜ್ಞಾನವಿಕೃತಿಗಳು ॥ ೪ ॥ ಮನದ ವಿಕಾರ ದುಃಖಾಳಿ ವಿಕಲ್ಪನೆ । ಕನಸು ನಿದ್ರಾತಮೋಭ್ರಮೆಯೆಂಬ ॥ ಇನಿತು ವಿಘ್ನಂಗಳೆ ಜ್ಞೇಯವಿಕೃತಿಯೆಂದು । ಮನದನ್ನೆ ಮೈತ್ರೇಯಿ ತಿಳಿ ನೀನು ॥ ೫ ॥ ಯೋಗವಿಘ್ನಂಗಳಿವನು ಯೋಗಿತದ್ಧ್ಯಾನ । ಯೋಗವಿರತಿ ಗುರುಪದ ಭಕ್ತಿ ॥ ಪೂಗವೆಂಬಿವನಭಿಯೋಗದಿಂ ಗೆಲಿದನು । ರಾಗದೆ ಮಾಳ್ಪುದಭ್ಯಾಸವ ॥ ೬ ॥ ಇದುವೆ ಸಗುಣಯೋಗಮಾರ್ಗ ಸುರಹಸ್ಯ । ವಿದನಿಂತುಂಟೆಂದೊಲಿದರುಪುವ ॥ ಸದಮಳ ಗುರುಲಕ್ಷಣವ ನೆನಗಲಸದೆ ॥ ಮುದದಿಂದೆ ಪೇಳು ಸನ್ಮುನಿಮುಖ್ಯ ॥ ೭ ॥ ಇದು ನಿಜಗುಣಯೋಗಿ ಮುದದಿಂದೆ ತಿಳಿಯಪೇ । ಳಿದ ಯಾಜ್ಞವಲ್ಕ್ಯಶ್ರೀ ಮೈತ್ರೇಯಿಯ ॥ ಒದವಿದ ಸಂವಾದದೊಳಗೈದನೆಯ ಸಂಧಿ । ಸದಮಳ ಪರಮಾನುಭವಬಂಧಿ ॥ .... .... ॥ ೮ ॥

ಯೋಗವಿಘ್ನೋಪಶಾಂತಿ ನಿದರ್ಶನ ನಿರೂಪಣೆ–ಸೂತ್ರ ೨೪ಕ್ಕೆ ಪದ ೧೭೦.

ಇತಿ ಸಂಧಿ ೫ಕ್ಕೆ ಸೂತ್ರ ೨೪ಕ್ಕಂ ಪದ ೧೭೦ಕ್ಕೆ ಸಂಪೂರ್ಣಂ.

ಅಂತು ಸಂಧಿ ೫ಕ್ಕೆ ಸೂತ್ರ ೧೦೦ಕ್ಕೆ ಪದ ೮೧೬ಕ್ಕೆ

ಮಂಗಳಮಸ್ತು.

ಶ್ರೀ ಗುರು ಶಂಭುಲಿಂಗಾಯನಮಃ

## ೬ ನೇ ಸಂಧಿ

ಸೂತ್ರ ॥ ಗುಣಯೋಗವನು ಪೇಳ್ವ ಗುರುಸೇವೆಯಿಂದ ನಿ ।
ರ್ಗುಣ ಮುಕ್ತಿತನಗೆ ಸಂಭವಿಪುದು ॥

ಪದ ॥ ಶ್ರೀ ಮಹಾದೇವಂಗೆ ಸೋಮಂಗೆ ಸುಖಪೂರ್ಣ । ಧಾಮಂಗೆ ಸತ್ಯ ಚಿದ್ರೂಪಂಗೆ ॥ ಕಾಮಿತಜನ ಕಲ್ಪಭೂಜಂಗೆ ಶಂಭುವಿಂ । ಗಾಮೋದ ದಿಂದೆ ವಂದಿಸುವೆನು ॥೧॥ ಶ್ರೀನಿಧಿ ಸಕಲವಿದ್ಯಾಮೂರ್ತಿ ಸುಕೃತಿ ಸು । ಜ್ಞಾನಿಸುಗುಣಿ ಸತ್ಯಮಯವಾಣಿ ॥ ಆನಂದಶರಧಿ ಸನ್ಮುನಿ ಯಾಜ್ಞ ವಲ್ಕ್ಯಮು ನಿ । ಮಾನಿ ದಯಾಪೂರ್ಣ ಹೃದಯನು ॥೨॥ ಮೈತ್ರೇಯಿಗುತ್ಪಲ ನೇತ್ರಿಗೆ ನಿರ್ಮಲ । ಗಾತ್ರಿಗೆ ಸುಗುಣ ಸನ್ಮಣಿಗಣ ॥ ಸೂತ್ರಿಗೆ ಗುರುಭೇದವನು ಕೂರ್ತುಸುಖವನ । ಚೈತ್ರಿಗೆ ಪೇಳ್ದನಿಂತೊಲವಿಂದ ॥೩॥ ಕಾಮಿನಿ ಕೇಳಿಹ ದೊಳು ಸುಖವನು ಬಳಿ । ಕಾ ಮಹಾನರಕ ದುಃಖವನೀವ ॥ ನೇಮವಿಡಿದು ಪೇಳ್ವ ಬಗೆ ವಿಡಿದಿರ್ಪನೆ । ತಾಮಸನೆನಿಸುವ ಗುರುವಕ್ಕು ॥೪॥ ಈ ಜಗತ್ರ ಯದೊಳು ರಾಜಿಪ ಸಾಮ್ರಾಜ್ಯ । ಭಾಜನವೆನಿಸುವ ಗತಿಯನು ॥ ಓಜೆ ಯಿಂದೊರೆಯ ಬಲ್ಲಾತನೆನಿಸುವನು । ರಾಜಾಸ್ಯೆ ರಾಜಸ ಗುರುವೆಂದು ॥೫॥ ಸತ್ವದಿಂದನುಪಾಧಿಕತ್ವವೆನಿಸುವಮ । ಹತ್ವದ ಮುಕ್ತಿಪದವನೀವ ॥ ತತ್ವವಿ ದೆಂದು ತಿಳುಪಬಲ್ಲವನು ತಾನೆ । ಸಾತ್ವಿಕನೆನಿಪ ಸದ್ಗುರುವಕ್ಕು ॥೬॥ ಆಣಿ ಮಾದಿ ಪದವೀವ ಗುಣಯೋಗಮುಳಿದು ನಿ । ರ್ಗುಣಮುಕ್ತಿದೋರುತಿರ್ಪಾ ತನು ॥ ಗುಣಗಂಧಯುಕ್ತ ಪರಮ ಗುರುವೆಂದು ಸ । ದ್ಗುಣನಿಧಿ ನೀನು ನಿಶ್ಚ ಯಿಪುದು ॥೭॥ ನಿರಭಿಮಾನಿಕ ಸುಖಿ ಪರಿಪೂರ್ಣನಖಿಳಜ್ಞ । ನುರುತರ ಕರುಣಾಂಬುನಿಧಿ ಬೋಧ ॥ ಪರನಭಿವಾಂಛೆ ದೋರುವ ಕೃತಕೃತ್ಯನೆ । ಪರಮ ಸದ್ಗುರುವೆಂದು ತಿಳಿ ನೀರೆ ॥ .... .... ॥೮॥

ಗುರುಭೇದ ನಿರೂಪಣೆ–ಸೂತ್ರ ೧ಕ್ಕೆ ಪದ ೮.

---

ಸೂತ್ರ ॥ ತರುಣಿ ಸೂಚಕನು ವಾಚಕನು ಕಾರಕನೆಂದು ।
ಗುರು ಮೂವರವರಂದವನು ಕೇಳು ॥

ಪದ ॥ ನೀಚರರಖಿಳ ವಿಷಯವೃತ್ತಿ ಗೆಡಿಸಿಯಾ । ತ್ಮಾಚಾರಮಾರ್ಗ ವರ್ತಿಗಳಾಗೆ ॥ ಯೋಚನೆ ವಿಡಿದು ಬೋಧಿಸಬಲ್ಲವನು ತಾನೆ । ಸೂಚಕ ಗುರುವೆಂದೆನಿಸುತಿರ್ಕು ॥ ೧ ॥ ಆಚಾರ ನಿಷ್ಠರೆನಿಸುವರ್ಗೆ ಬ್ರಹ್ಮವ । ದಾಚಾರ ವಲ್ಲದೇನಿಲ್ಲೆಂದು ॥ ರೋಚಿಸುವಂತೆ ತಿಳುಹಬಲ್ಲೊಡವನನು । ವಾಚಕ ಗುರುವೆಂದು ಬಗೆವುದು ॥ ೨ ॥ ಸಾರಸ ಮುಖಿಯೆ ವಿಚಾರಿತವಿದು ನೀನೆ । ಪಾರಮಾರ್ಥಿಕ ನಿಷ್ಕ್ರಿಯಾತ್ಮಕ ॥ ಸಾರತರ ಬ್ರಹ್ಮವೆಂದು ಬೋಧಿಸುವನೆ । ಕಾರಕ ಗುರುವೆಂದು ತಿಳಿ ನೀನು ॥ ೩ ॥ ವೇದವೇದಾಂತ ಸಿದ್ಧಾಂತ ಪುರಾಣ ಶಾ । ಸ್ತ್ರಾದಿ ರಹಸ್ಯಾರ್ಥವೆಲ್ಲವ ॥ ಸಾದರದಿಂದೆ ತಿಳಿದು ಬೋಧಿಸಲು ಬಲ್ಲ । ನಾದಯಾಮೂರ್ತಿ ಪರಮಗುರು ॥ ೪ ॥ ಪರಮಾರ್ಥವೆನಿಸಿದ ಪರಮ ವಿರತಿ ಯುಳ್ಳ । ವರ ಶಿಷ್ಯರೊಳು ಪೆರತೊಂದನು ॥ ಪರಿಕಿಸಿ ನೋಡದೆ ಗುರುಬೋಧಿವುದುಪರ । ತರ ತತ್ವವಿಷಯವನೊಲವಿಂದ ॥ ೫ ॥ ವರಶಿಷ್ಯನೆಡೆಯೊಳು ಗುರು ವಾಂಛೆವಿಡಿಯದೆ। ಪರತತ್ವವವನು ಗೋಪ್ಯತರವಾಗಿ ॥ ಒರೆವುದು ದಕ್ಷಿಣ ಕರ್ಣ ವಿವರದೊಳು । ಕರುಣ ರಸಾರ್ದ್ರಭಾವನೆಯಿಂದ ॥ ೬ ॥ ಪರತತ್ವ ವಿಷಯದರಿಕೆಯುಳ್ಳ ಗುರುವನಾ । ದರದಿಂದೆ ವರಶಿಷ್ಯನುರೆ ನಂಬಿ ॥ ಪಿರಿಯ ನಿವನು ಕಿರಿಯನು ಕುಲಜನು ಕುಲ । ವಿರಹಿತನೆಂಬುದನುಳಿವುದು ॥ ೭ ॥ ತನುರಹಿತಾತ್ಮನೊಳಗೆ ತನುಧರ್ಮವಿ । ದನು ನೋಡದನುದಿನದೊಳು ನಂಬಿ ॥ ಘನ ಪರಬ್ರಹ್ಮ ವಿಷಯವನು ತಿಳಿವುದು । ಮುನಿಮತವಿದು ಶಿಷ್ಯನೆನಿಪಂಗೆ ॥ ೮ ॥ ಅವರಿವರೆನ್ನದೆ ಪರತತ್ವವನು ತಿಳಿ । ದವರನೆ ಬಲವಿಡಿದೊಲವೀಂದ ॥ ತವೆ ತನ್ನ ನಿಜವನರಿವು ದನುಮತವಿದು । ಸುವಿಚಾರಿ ಶಿಷ್ಯನೆನಿಸುವಂಗೆ ॥ ೯ ॥ ಪರಮವಿರಕ್ತಿಯೊಂದನೆ ಪರೀಕ್ಷಿಸುವನು । ಗುರು ಶಿಷ್ಯರೊಳು ಜಾತಿ ಕುಲ ವಿದ್ಯಾ ॥ ವರಗುಣ ಗಣವನಾರೈವನೆ ತನುಧರ್ಮ । ದಿರವೆಂದು ತಿಳಿದವನೆಲ್ಲವ ॥ .... .... .... .... ॥ ೧೦ ॥

ಗುರೂಪದೇಶ ತಾರತಮ್ಯ ನಿರೂಪಣೆ-ಸೂತ್ರ ೨ಕ್ಕೆ ಪದ ೧೮.

———

ಸೂತ್ರ ॥ ನಿರಹಂತೆ ಪರಮವಿರಕ್ತಿ ಸದ್ಗುರುಭಕ್ತಿ ।
ದೊರೆದೊಡಾತನೆ ಶಿಷ್ಯನೆನಿಪನು ॥

ಪದ ॥ ಗುರುಭೇದಗತಿಯನಿಂತೊರದೆ ಲೇಸೆನಿಸಿ ಸ । ದ್ಗುರುಪದವನು ಭಕ್ತಿಭರದಿಂದ ॥ ಪಿರಿದು ವಿಶ್ವಾಸದೊಡನೆ ಸೇವಿಸುವ ಶಿಷ್ಯ । ನಿರವನೆನಗೆ

ಪೇಳು ಮುನಿಮುಖ್ಯ ॥ ೧ ॥ ಎಂದು ಬಿನ್ನಯಿಸಿ ವಂದಿಸಿದ ಮೈತ್ರೇಯಿಗಾ । ನಂದದಿಂದಾ ಮುನಿವರನಂದು ॥ ಎಂದನಿಂತೆಂದು ಶಿಷ್ಯನಲಕ್ಷಣವ ನಿನ । ಗಿಂದುವದನೆ ಪೇಳ್ವೆನಾಲಿಸು ॥ ೨ ॥ ಗುರುಭಕ್ತಿ ನಿರಹಮ್ಮು ನಿರಪೇಕ್ಷೆಸ್ಥಿರಣೆ । ಕರಣಾನುಕೂಲತೆ ಪರಿಣಾಮ ॥ ಸುರಸ ಸುಸ್ಥಿರಬುದ್ಧಿ ಸದ್ಗುಣವಿರಲಾತ । ವರಶಿಷ್ಯನೆನಿಸುವ ಲಲಿತಾಂಗಿ ॥ ೩ ॥ ಪರಹಿತ ನಮಳ ನೂರ್ಜಿತ ನಚಲಿತ ಶಾಂತ । ನುರುದಯಾ ಶುಚಿ ಧೀರ ನವಿಕಾರಿ ॥ ಪರಮವಿರಕ್ತನುನ್ನತನೆಂದೆ ನಿಸಿ ತೋರು । ತಿರಲವನೆಲೆ ವರಶಿಷ್ಯನು ॥ ೪ ॥ ಮೃದುವಾಣಿ ಸಾತ್ವಿಕನನುಪ ಮಾನಂದಾಬ್ಧಿ । ಮದ ಮತ್ಸರಾದಿ ವಿದೂರನು ॥ ಪದುಳಿಗ ನಾತ್ಮರತನು ಸತ್ಯನೆಂದೆನಿ । ಸಿದಡಿಲ್ಲಿ ವರಶಿಷ್ಯನೆನಿಪನು ॥ ೫ ॥ ಗುರುಪರಮೇಷ್ಠಿ ಸದ್ಗುರು ಶೌರಿ ಗುರುತಾನೆ । ಗಿರಿಜಾಧಿಪತಿ ಗುರು ಪರತತ್ವ ॥ ಗುರು ವಿಶ್ವವೆಂದು ನಂಬಿರಲವನನು ಕಾಂತೆ । ವರಶಿಷ್ಯನೆಂದು ನೀನರಿವುದು ॥ ೬ ॥ ಗುರು ವೇದ ಶಾಸ್ತ್ರಾಳಿ ಗುರು ದೈವ ತೀರ್ಥಾಳಿ । ಗುರು ಬಂಧು ಬಾಂಧವಾಳಿಗಳೆಂದು ॥ ಗುರುಪಾದವನೆ ನಂಬಿ ಪಿರಿದು ಸೇವಿಸುತಿರೆ । ವರಶಿಷ್ಯನವನಂಬುಜಾನನೆ ॥೭॥ ತನು ಮನೋ ಧನ ಧಾನ್ಯ ವನಿತೆ ವಾಹನ ವಸ್ತ್ರ । ವೆನಿಸುವಖಿಳ ವಸ್ತುಚ ಯುವನು ॥ ಇನಿತು ವಂಚಿಸದೆ ಸದ್ಗುರುವಿನೊಳರ್ಪಿತ । ನೆನಿಪನು ವರಶಿಷ್ಯ ನರಿಯುಲ್ಕೆ ॥ ೮ ॥ ಗುರುವನುಳಿದು ಮಿಕ್ಕವರನಾಸೆಗೈಯದೆ । ಗುರುವಿಗೆ ಪರಿಚರಿಯಂಗಳ ॥ ಪರಮ ವಿಶ್ವಾಸದೊಡನೆ ಮಾಳ್ಪ ಭಕ್ತಿತ । ತ್ಪರನೆನಿ ಪನು ವರಶಿಷ್ಯನು ॥ ೯ ॥ ಗುರುವಾಳ್ದನಾಳು ತಾನೆನಿಸಿರವೇಳ್ಕುಮಾ । ಗುರು ಸನ್ನಿಧಿಯೊಳು ಸಚ್ಛಿಷ್ಯನು ॥ ಮೊರೆವ ಹಂಕೃತಿ ತನ್ನೊಳುಡುಗಿ ತಾನಿರ್ಪನ್ನ । ವರವಿದು ಸತ್ಯವಂಗನೆ ನಂಬು ॥ .... .... .... ॥ ೧೦ ॥

ವರಶಿಷ್ಯ ಲಕ್ಷಣ ನಿರೂಪಣೆ-ಸೂತ್ರ ೩ಕ್ಕೆ ಪದ ೨೮-

---

ಸೂತ್ರ ॥ ಗುರುವರನೊಲವಿಲ್ಲದವನೇನ ನೋದಲು ।
ದೊರೆಯಲರಿಯದು ಸಮ್ಯಜ್ಞಾನ ॥

ಪದ ॥ ಗುರುವಿನೊಳೋವರಿ ಗುರುವಿನೊಳ್ಮರೆ ಮಿಥ್ಯೆ । ಗುರುವಿನೊಳಗೆ ತರ್ಕಪುಸಿನಿಂದೆ ॥ ದೊರಕೊಂಡ ನರನಿಗೆ ನರಕ ತಪ್ಪದು ನೀರೆ । ವರವೇದಶಾಸ್ತ್ರಾನುಮತವಿದು ॥೧॥ ಪ್ರತಿಕೂಲನಭಿಮಾನಿ ಮತಿಹೀನನಸ್ಥಿರ । ನತಿಮೂರ್ಖ

ನುರುತರ ಪಿಸುಣನು ॥ ರತಿಕರನತಿಕ್ರೂರನತಿ ಕ್ಷುದ್ರನೆನಿಪ ದು । ಸ್ಥಿತಿಯು ಳ್ಳವನೆ ನಿರಾಕೃತ ಶಿಷ್ಯ ॥ ೨ ॥ ಅಲಸನು ಪರಪೀಡಕನು ನಿದ್ರಾಪರನತಿ । ಖಳ ನಧಮನು ಕೋಪಿ ಕುಲಹೀನ ॥ ಛಲವುಳ್ಳವನು ಭಕ್ತಿರಹಿತನೆನಿಸು ವನು । ತಿಳಿಯೆ ದುಶ್ಶಿಷ್ಯನೆನಿಸುವನು ॥ ೩ ॥ ಗುರುದೂಷಕನು ಪರಪುರುಷಾ ರ್ಥವಿಲ್ಲದ । ನುರುಲೋಭಿ ದುರುಳನು ಧೂರ್ತನು ॥ ನಿರಸನು ನಿಷ್ಠುರಾಲಾ ಪನು ಚೋರನು । ವರಶಿಷ್ಯನೆನಿಸಲರಿಯನೆಂದು ॥ .... ॥ ೪ ॥

ಅಶಿಷ್ಯ ಲಕ್ಷಣ ನಿರೂಪಣೆ—ಸೂತ್ರ ೪೬ ಪದ ೩೨.

---

ಸೂತ್ರ ॥ ಶ್ರವಣ ಮನನ ನಿದಿಧ್ಯಾಸನವಿಲ್ಲದೆ ।
ಭವಬಂಧವಳಿಯದು ತನಗೆಂದು ॥

ಪದ ॥ ಶ್ರವಣ ಮನನ ನಿದಿಧ್ಯಾಸನವೆನಿಸುವಂ । ತವಿರಳ ಪರತತ್ವ ವಿಷಯವ ॥ ಭವಬಂಧವಳಿಯಲಾ ವರಶಿಷ್ಯರಿಗೆ ಗುರು । ಸುವಿಚಾರ ಮುಖ ದಿಂದೆ ತಿಳಿಪುದು ॥ ೧ ॥ ಪರಮ ಭಕ್ತಿಯೊಳಧ್ಯಾತ್ಮವನು ತನ್ನನುಭವ । ಕರ ಮೆನಿಪಂತೆ ಸದ್ಗುರುವಿಂದ ॥ ನಿರುತವೆನಲು ಕೇಳ್ವ ವರಗುಣವದು ತಾನೆ । ತರುಣಿ ಸುಶ್ರವಣವೆಂದೆನಿಪುದು ॥ ೨ ॥ ಅನುಭವ ಗೋಚರವೆನಿಸುವ ಶ್ರವಣವ । ನನುಮಾನ ಯುಕ್ತಿಗಳೊಡಗೂಡಿ ॥ ಅನುದಿನವೆಡೆವರಿಯದೆ ಚಿಂತಿಪುದದು ತಾನೆ । ಮನನವೆನಿಪುದು ಮಾನಿನಿರನ್ನೆ ॥ ೩ ॥ ಮನನಕ್ಕೆ ಬಂದರ್ಥ ವನುಭವ ಗಮ್ಯವೆಂ । ದೆನಿಸಿ ಸಮಾಹಿತೆಯೊಳು ನಿಂದು ॥ ಜನಿತನಿಶ್ಚಯವದಚ್ಚಳಿ ಯದೆ ನೆಲೆಯಾದು । ದನೆ ನಿದಿಧ್ಯಾಸನವೆನಿಪದು ॥ ೪ ॥ ವನಿತೆ ಸುಶ್ರವಣ ಮನನ ನಿದಿಧ್ಯಾಸನ । ವೆನಿಪಿವ ನನುದಿನವಲಸದೆ ॥ ಮನವೊಲಿದಭ್ಯಾಸ ವನು ಮಾಡುತಿರ್ಪುದು । ತನಗಜ್ಞಭಾವನೆಯಳಿವನ್ನೆ .... ॥ ೫ ॥

ಶ್ರವಣಾದಿತ್ರಯ ನಿರೂಪಣೆ—ಸೂತ್ರ ೫೭ ಪದ ೩೭.

---

ಸೂತ್ರ ॥ ವನಿತಾದಿ ವಿಷಯಂಗಳನು ವಿಷವೆಂದರಿ ।
ದನೆ ಮುಮುಕ್ಷುವೆನಿಪ್ಪನಿನಿಯಳೆ ॥

ಪದ ॥ ವನಜಾಸ್ಯೆ ಕೇಳು ಮುಮುಕ್ಷು ಮುಂತಾದ ಸು । ಜನರ ಲಕ್ಷ ಣವನೊಲಿದು ನಿನ್ನ ॥ ಮನದನುರಾಗವಲರೆ ಪೇಳ್ವೆನಖಿಳ ಸ । ನ್ಮುನಿಮತ

ವೆನೆ ವೇದವಿಧಿಯಿಂದ ॥ ೧ ॥ ಪರಮ ಸುಜ್ಞಾನಾರ್ಥವೆನಿಸಿ ಭಕ್ತಿಯೊಳು ಸ। ದ್ಗುರುವನಾಶ್ರಯಿಸಿ ನಂಬುಗೆ ಗೂಡಿ ॥ ಪರಿಚರಿಯೇಗಳನಲಸದೆ ಮಾಳ್ಪ ಸ । ಚ್ಚರಿತನೆ ಪರಮುಮುಕ್ಷು ವೆನಿಕ್ಕು ॥ ೨ ॥ ಎಂಜಲಿಸಿದೊಡೆಂತು ನಂಜು ಕೊಲ್ವುದು ಕೊಲು । ಗುಂ ಜಗತ್ರಯವನೀ ವಧುವೆಂಬ ॥ ನಂಜು ನೆನಹು ಮಾತ್ರದಿಂದ ವೆಂದದನುಳಿ । ದಂಜದಿರ್ಪವನೆ ಮೋಕ್ಷಾರ್ಥಿಯು ॥ ೩ ॥ ವಿಷ ಯನೆಲ್ಲವನು ದುರ್ವಿಷವೆಂದು ಕಂಡ ಸಿ । ರ್ವಿಷಯಿ ಮುಮುಕ್ಷುವಹನು ಮುಕ್ತಿ ॥ ವಿಷಯದೊಳೆಂದು ನೀನೊಲವಿಂದೆ ತಿಳಿವುದು । ಬಿಸಜಾಸ್ಯೆ ಮೈ ತ್ರೇಯಿ ನಿಜವಿದು ॥ ೪ ॥ ಸುರೆಗುಡಿಪಲ್ಲದೆ ಮರುಳೆನಿಸದು ವಧು । ಸುರೆ ನೋಡಿ ನುಡಿಸಿ ನೆನೆವರನು ॥ ಪಿರಿದು ವಿಕಳತೆ ಗೊಳಿಪುದರಿಂ ದದನೆಂದು । ಪರಿಸದಾತನೆ ಮುಕ್ತಿರತನಕ್ಕು ॥ ೫ ॥ ತನಗೆ ನಿಷ್ಕಂಟಕಮೆನಿಸಿ ರಹಸ್ಯದೊ । ಳನುಕೂಲ ವಿಷಯಮೊಂದೊದಗಲು ॥ ಮನವೆಳಸದೆ ನೀತಿಗಳೆವ ನಿರಾಸಕ । ನೆನಿಪನೆ ಪರಮ ಮುಕ್ಷುವೆನಿಕ್ಕು ॥ ೬ ॥ ಬಯಸಿದೊಡಾಗಿ ಬಯಸದಿರೆ ಪೋಗ ಲು । ಬಯಸುವ ದುಚಿತವದಿಲ್ಲಾಗಿ ॥ ಬಯಸಲಾಗದುವಿಷಯುವನುಮುಮುಕ್ಷು ನಿ । ಶ್ಚಯುವಿದೆಲ್ಲವು ದೈವಗತಿಯೆಂದು ॥ ೭ ॥ ಬಯಸದಿರ್ದೊಡೆ ಸ ಖವಹುದ ಬಯಸೆ ದುಃಖ । ಮಯವದರಿಂದಖಿಳಾರ್ಥವ ॥ ಬಯಸಲಾಗದು ಮುಮು ಕ್ಷುವೆನಿಪನದು ಶಾಸ್ತ್ರ । ಚಯದನುಮತವಿದು ಪ್ರಿಯತಮೆ ॥ ೮ ॥ ವಿಷಯ ವಲ್ಲರಿಯೆ ನಿರ್ವಿಷಯವಾದಾತ್ಮನು । ವಿಷಯಿಗೆ ತೆಂಕಲೆ ದುವನಿಗೆ ॥ ಬಿಸಜ ದಳಾಯತ ಲೋಚನೆ ಕಾಣಲ್ಕೆ । ವಿಷಯವೆನಿಸದವೋ ಲಮರಾದ್ರಿ ॥ ೯ ॥ ಆದರಿನೀ ತ್ರೈಲೋಕ್ಯದೊಳಗೊಂದನೇನನು । ಪದಿಸದೆ ತನ್ನನರಿದು ನಿತ್ಯ ॥ ಪದದೊಳು ಪದುಳದಿಂದೊಡಗೂಡಿ ನೆರೆ ನಿಲು । ವುದೆ ಬುದ್ಧಿ ಮೋಕ್ಷಾರ್ಥಿ ಯೆನಿಪಂಗೆ ॥ .... .... .... .... ॥ ೧೦ ॥

ಮುಮುಕ್ಷು ಲಕ್ಷಣ ನಿರೂಪಣೆ–ಸೂತ್ರ ೬ಕ್ಕೆ ಪದ ೪೭.

———

ಸೂತ್ರ ॥ ದ್ವೈತ ವಿರಕ್ತನದ್ವೈತಾನುರಕ್ತನ ।
ಪ್ಪಾತನಭ್ಯಾಸಿಯೆಂದೆನಿಪನು ॥

ಪದ ॥ ಯಮ ನಿಯಮಾನ್ವಿತನಚಲ ನನಾಲಸ್ಯ । ನಮಿತಾತ್ಮನಿಷ್ಠ ನಾಶ್ರವಣಾದಿ ॥ ಕ್ರಮವಿದನಮಲನಖಿಳತತ್ವ ಭಾವಿ ನಿ । ರ್ಮಮನಾದೊ

ಡಭ್ಯಾಸಿಯೆನಿಪನು ॥ ೧ ॥ ತನಗಾತ್ಮವಿಷಯದೊಳನುಭೂತಿಯಾಯಾಸ । ವಿನಿತಿಲ್ಲದೊದಗಿ ನಿಜಾನಂದ ॥ ಜನಿಸಿ ಸುಸ್ಥಿರಬುದ್ಧಿಯೊಳು ದೃಢವಾಗಿರ । ಲೆನಿಸುವನಭ್ಯಾಸಿಯವನೆಂದು ॥ ೨ ॥ ಸ್ಮೃತಿಯೊಳು ಚಿತ್ರ ವಿಚಿತ್ರ ವಿಷಯದೊಳು । ಗತಿಗಳೊಳಖಿಳ ಸಿದ್ಧಿಗಳೊಳು ॥ ಸತಿ ಕೇಳು ದೇಹಾದಿಯೊಳು ನಿಜವೈರಾಗ್ಯ । ರತನಾದೊಡಭ್ಯಾಸಿಯೆನಿಪನು ॥ ೩ ॥ ಅತಿಶಯದಿಂದಾತ್ಮರತಿ ಶಾಸ್ತ್ರ ರತಿ ಕರ್ಮ । ರತಿ ಬಳಿಕಭ್ಯಾಸದೆಡೆಯೊಳು ॥ ರತಿ ಲೋಕಭಯದೊಳು ವಿರತಿಯುಳ್ಳಾತನೆ । ಸತಿ ಕೇಳಭ್ಯಾಸಿಯೆಂದೆನಿಪನು ॥ ॥ ೪ ॥

ಅಭ್ಯಾಸಿಯ ಲಕ್ಷಣ ನಿರೂಪಣೆ–ಸೂತ್ರ ೭ಕ್ಕೆ ಪದ ೫೧.

—o—

ಸೂತ್ರ ॥ ದ್ವೈತಾದ್ವೈತವನುಳಿದವನನುಭವಿ ಕೃತ್ಯ ।
ಜಾತವಿಲ್ಲದವನಾರೂಢನು ॥

ಪದ ॥ ಸ್ಮೃತಿಮಾತ್ರದಿಂದಾತ್ಮರತಿ ಸುಖವಾಯಾಸ । ಗತಿದೋರದೆಳವಟ್ಟು ಚಲಿಸದೆ ॥ ಮತಿಯೊಳುದಾರತೆ ಸಮತೆ ಚಿತ್ತದೊಳಿರೆ । ಸತಿ ತಿಳಿಯನುಭವಿಯವನೆಂದು ॥ ೧ ॥ ರತಿಯಾತ್ಮ ರತಿಶಾಸ್ತ್ರ ರತಿಕರ್ಮ ರತಿಯೋಗ । ರತಿಲೋಕಭೀತಿವಿರತಿಗಳ ॥ ತತಿಯೊಳು ವೈರಾಗ್ಯಜನಿಸಿದೊಡಾತನೆ । ಸತಿಯನುಭವಿಯೆಂದು ತಿಳಿ ನೀನು ॥ ೨ ॥ ತನು ಮನೋಧನ ಧಾನ್ಯವನಿತಾತ್ಮಜಾದಿಗ । ಳೆನಿಪಲ್ಲಿ ರತಿವಿರತಿಗಳೊಮ್ಮೆ ॥ ಜನಿಸದೆ ನಿಜಭಾವನೆಯೊಳೊಂದಿ ನಿಂದನೆಂ । ದೆನಲವ ನಾರೂಢನೆನಿಪನು ॥ ೩ ॥ ವಿಷಯಂಗಳೊಳು ಭೋಗವಿಷಯಂಗಳೊಳು ತತ್ವ । ವಿಷಯಂಗಳೊಳು ಕರ್ಮಕುಲವೆಂಬ ॥ ವಿಷಯಂಗಳೊಳು ರತಿವಿರತಿಯನುಳಿದ ನಿ । ರ್ವಿಷಯಿಯಾರೂಢನೆನಿಸುತಿರ್ಕು ॥ ೪ ॥ ತನಗೆ ನಿಖಿಳ ಕರ್ಮದೊಳು ವಿಷಯಂಗಳೊ । ಳೆನಿಸು ಸಂಕಲ್ಪ ವಿಕಲ್ಪನೆ ॥ ಜನಿಸದೆ ಸರ್ವ ಸಮತ್ವ ಭಾವನೆಯುಳ್ಳ । ವನು ತಾನೆಯಾರೂಢನೆನಿಪನು ॥ ೫ ॥ ತನಗೊಂದು ಬಾಧೆ ಸಂಜನಿಸದೆ ಕರಣೀಯವಿನಿತಿಲ್ಲವೆನಿಸಿ ಪೂರ್ಣಾನಂದ ॥ ಘನಚಿದಚಲ ನಿರ್ವಿಕಲ್ಪ ನಿರ್ದ್ವಂದ್ವಾತ್ಮ । ನೆನಿಪನಾರೂಢನೆಂದರಿವುದು ॥ .... .... .... ॥ ೬ ॥

ಅನುಭವಿಯಾರೂಢರ ಲಕ್ಷಣ ನಿರೂಪಣೆ–ಸೂತ್ರ ೮ಕ್ಕೆ ಪದ ೫೭.

———

ಸೂತ್ರ ॥ ರಾಗ ವಿರಾಗ ತನ್ಮಿಶ್ರಮುಳ್ಳವರಲ್ಲಿ ।
ಯೋಗಿಸು ಕರ್ಮ ಚಿದ್ಭಕ್ತಿಯ ॥

ಪದ ॥ ರಾಗಿಗೆ ಕರ್ಮದೊಳಧಿಕಾರವಹುದು ವಿ । ರಾಗಿಗೆ ಜ್ಞಾನದೊಳಧಿಕಾರ ॥ ರಾಗ ವಿರಾಗಮುಳ್ಳವನಿಗೆ ನಿಜಭಕ್ತಿ । ಯೋಗದೊಳಧಿಕಾರವೆನಿಸುಗು ॥ ೧ ॥ ಶ್ರುತಿಯೊಳು ಬೋಧಿತವೆನಿಸುವ ಕರ್ಮದ । ಗತಿಯೆರಡಲ್ಲಿ ಪ್ರವರ್ತಕ ॥ ನುತ ನಿವರ್ತಕವಿವು ತಾವಸಶ್ಶ್ರುತಿಯು ಸ । ಮ್ಮತಿಯೆಂದು ಪರಿವಿಡಿದೆಸೆವವು ॥ ೨ ॥ ಭಾಮಿನಿ ಕೇಳು ವರ್ಣಾಶ್ರಮದೊಡನೊಂದಿ । ಕಾಮು ಸಂಕಲ್ಪದ ಮನದಿಂದ ॥ ನೇಮಿಸಿ ಮಾಳ್ಪ ಕರ್ಮಕ್ಕೆ ಪ್ರವರ್ತಕ । ನಾಮವದಹುದು ಸಂಸೃತಿಬೀಜ ॥ ೩ ॥ ಬಯಸದೆ ಮಾಳ್ಪ ಸದ್ವಿಧಿಯೆ ಬ್ರಹ್ಮಾರ್ಪಿತ । ಕ್ರಿಯೆ ನಿವರ್ತಕಮೆನಿಸುಗುಮದು ॥ ಪ್ರಿಯತಮೆ ಸಂಸೃತಿಯನು ನಿವರ್ತಿಪುದು ನಿ । ಶ್ಚಯವಾಶ್ರಮಾನ್ವಿತವಿದು ತಾನು ॥ ೪ ॥ ಅದು ತಾನೆರಡುತೆರನೆನಿಪುದು ಬಾಹ್ಯಾಂತ । ರದ ಸಾಧನದೊಳು ಮಾಳ್ಪುದರಿಂದ ॥ ಅವು ಮುಕ್ತಿ ಸುಖದಾದಿ ಬೀಜವೆಂದೆನಿಪುದು । ಸುದತಿ ಸತ್ಕರ್ಮವೆಂದೆನಿಪುದು ॥ ೫ ॥ ಬಯಸದಿರಲು ಸುಖವಹುದು ಬಯಸಲತಿ । ಶಯವಾಗಿ ದುಃಖವಪ್ಪುದರಿಂದ ॥ ಪ್ರಿಯತಮೆ ಮೋಕ್ಷಾರ್ಥಿಜನರು ಸದ್ವಿಧಿಯನು । ಬಯಸದೆ ಮಾಳ್ಪುದು ನಿಜವಾಗಿ ॥ .... .... .... .... ॥ ೬ ॥

ಕಾಂಡತ್ರಯಾದಿ ಭೇದ ನಿರೂಪಣೆ-ಸೂತ್ರ ೪ಕ್ಕೆ ಪದ ೬೩.

---

ಸೂತ್ರ ॥ ಪರಮುಮುಕ್ಷ್ವಾದಿಗಳಿಗೆ ಕರ್ಮನಿರತವಾ ।
ಪರಮಾರೂಢನಿಗೊಂದು ಕ್ರಿಯೆಯಿಲ್ಲ ॥

ಪದ ॥ ಕರ್ಮವನೆಳಸದೆ ನಿರ್ಮಮತೆಯೊಳು ಸ । ತ್ಕರ್ಮವ ನಾ ಬ್ರಹ್ಮಾರ್ಪಣವೆಂದು ॥ ಮರ್ಮವನರಿದವಧಾನಿಸಿ ಮಾಳ್ಪುದು । ಧರ್ಮವಹುದು ಮುಮುಕ್ಷುವಿಗಿದು ॥ ೧ ॥ ಎನಿತು ಕೃತ್ಯಂಗಳುಂ ಟನಿತನು ತನ್ನಯ । ಮನದಿಂದೆ ನಿಯಮಪೂರ್ವಕವಾಗಿ ॥ ಅನುದಿನದೊಳು ಮಾಳ್ಪುದಭ್ಯಾಸಿಯೆನಿಪಾತ । ನಿನಿಯಳೆ ಬಯಸ ದೇನೊಂದನು ॥ ೨ ॥ ಈ ಕಾಲದೊಳು ತನಗೀಕರ್ಮ ಕೃತಮೆನು । ತಾ ಕಾಲದೊಳು ಸಮಾಹಿತೆಯನು ॥ ಜೋಕೆವಿಡಿದು ಮಾಡಲಭ್ಯಾಸಿಯೆನಿ ಪನಿ । ಗಾ ಕರ್ಮವದು ಕೃತವೆನಿಸುಗು ॥ ೩ ॥ ಇದನೀ ಕಾಲದೊಳು ತಾನೊದವಿ ಮಾಡಲು ಬೇಹು । ದದನಾತನೊಮ್ಮೆ

ನೆನೆದುಬಿಡೆ ॥ ಅದು ತಾನೆ ಸಂಪೂರ್ಣ ಕೃತಕರ್ಮವೆನಿಪುದು । ಸುದತಿ ಕೇಳನುಭವಿಗಿದು ಸತ್ಯ ॥ ೪ ॥ ಆರೂಢನೆನಿಸುವನಾರಬ್ಧ ಲೀಲಾನು । ಸಾರ ದಿಂದೆಸಗಲಾ ಕ್ರಿಯೆಗಳ ॥ ನಾರಿ ನೀನರಿವುದಾತನಿಗೊಂದು ವಿಧಿ ಸುವಿ । ಚಾರಿಸಿ ನೋಡಲಿಲ್ಲಿದು ಸಿದ್ಧ ॥ ೫ ॥ ಮದಿರ ಮದಾಂಧನುಟ್ಟುದನಾರಯ್ಯದ ವೋಲು । ಸುದತಿ ದೇಹಸ್ಥಿತಿಗತಿಯದು ॥ ಒದವಿದಾರಬ್ಧದ ವಶನಾಗಿ ತಾ ನೆಣಿ । ಸದೆ ನಿಂದನಾರೂಢನೆನಿಪನು ॥ ೬ ॥ ಒಡಲನು ಬಿಡುವೆಡೆಯೊಳಗೆ ತದ್ಧರ್ಮದೊ । ಳೊಡಗೂಡ ದೇಶನ ನೆನೆಯದೆ ॥ ತಡಿಯದೆ ತಾನೆ ತಾನೆನಿ ಸಿದೊಡಾತನೆ । ಮಡದಿ ತತ್ಕಾಲಿಕಚರಮನು ॥ .... ॥ ೭ ॥

ಮುಮುಕ್ಷ್ವಾದಿಗಳ ವಿಧಿನಿಯಮ ನಿರೂಪಣೆ

ಸೂತ್ರ ೧೦ಕ್ಕೆ ಪದ ೭೦.

---

ಸೂತ್ರ ॥ ಗುಣವಮೂರರಿಂದೆ ಬೋಧಾದ್ವಯ ದೊಳು ಯೋಗಿ ।
ಗೆಣಿಸಲಾರೆನಿಪವಸ್ಥೆಗಳಕ್ಕು ॥

ಪದ ॥ ವನಜಾಸ್ಯೆ ಬಾಲಕೋನ್ಮತ್ತ ಪಿಶಾಚನೆಂ । ದೆನಿಸುವ ಮೂರ ವಸ್ಥೆಗಳಿವು ॥ ಜನಿಪವಾ ಯೋಗೀಶನೊಳು ನೇತ್ಯಾತ್ಮಕದಿಂದ । ವನುಗತಿವಿಡಿದು ಗುಣಂಗಳು ॥ ೧ ॥ ಅವಿಕಲ್ಪವೆನಿಸಿದರುವಿನಿಂದೆ ವಿಧಿ ನಿಷೇ । ಧವನು ಳಿದಿರ್ಪ ವರ್ತನದಿಂದೆ ॥ ಭುವನವೆಳಸದ ರೂಪಿಂದೆ ಬಾಲಾದ್ಯರೊ । ಪ್ಪುವರ ನುಗತಿವಿಡಿದಂಗನೆ ॥ ೨ ॥ ಇನಿಯಳೆ ಕರ್ಮಿ ಸುಭೋಗಿ ಮೂಢಾತ್ಮಕ । ನೆನಿಸು ವವಸ್ಥಾತ್ರಯಂಗಳು ॥ ಜನಿಪವಾ ಯೋಗಿಗೆ ಸಲೆಸರ್ವಾತ್ಮಕದಿಂದ । ವನುಗುಣವಾಗಿ ಗುಣಂಗಳು ॥ ೩ ॥ ತಿಳಿ ಸತ್ವಗುಣಲೀಲೆಯೊಳು ರಜೋಗುಣ ಲೀಲೆ । ಯೊಳು ತಮೋಗುಣಲೀಲೆಯೊಳಗಿಂತು ॥ ಸುಳಿವನೀ ಜಗದವರೊಡಗೂಡಿ ಯೋಗಿನಿ । ರ್ಮಳನೆನಿಪಾತ್ಮ ಲೀಲೆಯೊಳೊಂದಿ ॥ ೪ ॥ ಎಲ್ಲವು ತಾನೆಂಬ ತಿಳಿವೆ ಸರ್ವಾತ್ಮಕ । ವೆಲ್ಲವು ತಾನಲ್ಲವೆಂಬುದು ॥ ಎಲ್ಲರರಿಯಲು ನೇತ್ಯಾತ್ಮಕವೆನಿಪುದಿಂ । ತಿಲ್ಲಿ ಬೋಧದ್ವಯವಿವು ನೋಡು ॥ ೫ ॥ ವನಧಿತರಂಗವೆಲ್ಲವನು ತಜ್ಜಲವೆಂಬು । ದನಿತನುಮಲ್ಲೆಂಬುದೆಂತಂತೆ ॥ ವನಿತೆ ಕೇಳಾತ್ಮನೆ ಜಗವಹುದಲ್ಲವೆಂ । ದೆನಿಪವಾ ಬೋಧೆಗಳೆರಡಿಂತು ॥ ೬ ॥ ತರುಣಿ ಕೇಳೆಲೆ ವೈಯಾಕರಣಿ ಮೌನಿಗಳೆಂದು । ಪರಿಕಿಸಲಾ ಬೋಧ ದ್ವಯದೊಳು ॥ ಎರ

ಡು ತೆರದೊಳು ವರ್ತಿಪರು ಯೋಗಿಗಳವ । ರಿರವಿಂತುಂಟೆಂದು ನೀನರಿ ಪೇಳ್ವೆ ॥ ೭ ॥ ಅವರಿವರೆನ್ನದೆ ಪರತತ್ವವನು ಬೋಧಿ । ಸುವ ಮನದೊಲ್ಮೆ ಯುಳ್ಳಾತನೆ ॥ ಯುವತಿ ವೈಯ್ಯಾಕರಣಾಖ್ಯನೆಂದರಿ ನೀನು । ಸುವಿಚಾರದಿಂ ದವಿಾ ಜಗದೊಳು ॥ ೮ ॥ ಆರೊಡನಾಡದೆ ಹೋರದೆ ತತ್ವವಿ । ಚಾರವನೊ ಮ್ಮೆಯು ನುಡಿಯದೆ ॥ ಸಾರಸುಖದೊಳಿರ್ಪವನು ಮೌನಿಯಹುದೆಂದು । ನೀರಜನೇತ್ರೆ ನೀನರಿವುದು ॥ ೯ ॥ ಜಲದೊಳಗಿರ್ದುಮಾ ಜಲದೊಡವೆರೆಯದ । ಜಲಜ ಪಲಾಶದಂತಿರೆ ಯೋಗಿ ॥ ನೆಲಸಿರ್ಪನಖಿಳ ಸಂಸೃತಿಯೊಳದನು ಸೋಂಕ । ನೆಲೆ ನೀರೆ ನಿಜವಿದು ಶ್ರುತಿಸಿದ್ಧ ॥ ೧೦ ॥ ಮರುಳೋರ್ವನುರೆ ತಾನೆ ತಿರುಗಿ ಲೋಕವನಿದು । ತಿರುಗುತಿದೆಂದು ಭಾವಿಸುವಂತೆ ॥ ಧರೆಯ ಜನರು ತಮ್ಮ ಪರಿಯೊಳು ವಿಷಯಿಯೆಂ । ಬ ರು ಯೋಗಿವರನನಾ ರಯ್ಯದೆ ॥ .... .... .... .... ॥ ೧೧ ॥

ಯೋಗೀಶ್ವರಂಗವಸ್ಥಾ ವಿಶೇಷ ನಿರೂಪಣೆ-ಸೂತ್ರ ೧೧ಕ್ಕೆ ಪದ ೮೧.

---

ಸೂತ್ರ ॥ ಯೋಗಿಗೆ ಕೊಲೆ ಹೊಲೆ ವಿಧಿ ನಿಷೇಧಾದಿಗ ।
ಳೀಗೈದುವಿಲ್ಲವೆಂತಿರ್ದರು ॥

ಪದ ॥ ಯೋಗಿಯೆಲ್ಲಿರ್ದೊಡಾ ಯೋಗಿಯೆಂತಿರ್ದೊಡಾ । ಯೋಗಿ ಮಾಡದುದನು ಮಾಡಲು ॥ ಯೋಗಿಗೆ ಬಾಧಕವಿನಿಸಿಲ್ಲವೆಂದನು । ರಾಗ ದಿಂದರಿ ರಾಜನಿಭವಕ್ತ್ರೆ ॥ ೧ ॥ ಜ್ಞಾನಾಗ್ನಿಯಿಂದೆ ಕರ್ಮಾನೀಕವನು ಯೋಗಿ । ತಾನಶೇಷಿತಮೆನೆ ಸುಡುವನು ॥ ಮಾನಿನಿ ಮೈತ್ರೇಯಿ ನಿನಗೆ ಸಂದೇಹವಿ । ನ್ನೇನುಂಟು ಶಾಸ್ತ್ರಸಮ್ಮತವಿದು ॥ ೨ ॥ ಉರುವಗ್ನಿಯಿಂದೆ ಕರ್ಪುರವೆಂತು ತಿಳಿ ಬೂದಿ । ವೆರಸಿ ಬೇವಂತೆ ಯೋಗೀಶನು ॥ ಉರುಪುವನ ಖಿಳ ಕರ್ಮವನು ನಿಶ್ಶೇಷಮಾ । ಗಿರೆ ನಿಜಜ್ಞಾನಪಾವಕನಿಂದ ॥ ೩ ॥ ದ್ವೈತಕಾನನವ ನದ್ವೈತಾಗ್ನಿಯೊಳು ಭಸ್ಮೀ । ಭೂತವೆನಲ್ಸುಡುವನು ಯೋಗಿ ॥ ಪೂತಶರೀರಿ ಮೈತ್ರೇಯಿ ನಂಬಿದನಿಲ್ಲಿ । ಮಾತು ಬೇರೇನುಂಟು ತಿಳಿಯಲ್ಕೆ ॥ ೪ ॥ ಆದರಿಂದೆ ಪುಣ್ಯಪಾಪದ ಹೊರಬಿಲ್ಲಾತ್ಮ । ವಿದನೊಳಗನು ತಮ್ಮನರಿಯದ ॥ ವೇದಮುಖರುಗಳನಾಶ್ರಯಿಸಿ ತೋರ್ಪವು ನಿಜ । ವಿದು ನಿರ್ಮಳೇಂದು ಮಂಡಲಮುಖಿ ॥ ೫ ॥ ಇದಕಿದು ತಾನೆ ಪ್ರಾಯಶ್ಚಿತ್ತವೆಂದು

ಮಾ । ಳ್ಪುದು ತನ್ನನರಿಯದ ಮುನ್ನವೆ ॥ ವಿದಿತವಹುದು ನಿಜವಿದು ತಿಳಿದಾತನೊ । ಳದು ಘಟಿಸದು ಶ್ರುತಿಮತದಿಂದ ॥ ೬ ॥ ಪ್ರಿಯರೊಳು ಸುಕೃತವ ನಹಿತರೊಳ್ದುಷ್ಕೃತ । ಚಯವನೊಂದಿಸಿ ಯೋಗಿ ಸುಖದಿಂದ ॥ ನಿಯತವೆನಲು ಮುಕ್ತಿಪದವನೈದುವನು ನಿ । ಶ್ಚಯವಿದು ಶಾಸ್ತ್ರಾರ್ಥವೆಲೆ ನೀರೆ ॥೭॥ ವಂದಿಸಿದೊಡೆ ಪುಣ್ಯವಹುದು ನಿಂದಿಸಿದೊಡೆ । ಬಂದಿರ್ಪುದಾಗಳೆ ಬಹುಪಾಪ ॥ ಇಂದುವದನೆ ಸತ್ಯವಿದು ಯೋಗಿವರನಿಗೆ । ವಂದಿಸು ನಿಂದಿಸದಿರು ನೀನು ॥ .... .... .... .... ॥ ೮ ॥

ಯೋಗೀಶ್ವರಂಗೆ ಕರ್ಮದ್ವಯಾಭಾವ ನಿರೂಪಣೆ

ಸೂತ್ರ ೧೩ಕ್ಕೆ ಪದ ೮.

---

ಸೂತ್ರ ॥ ಅರಸದೆ ಗುಣದೋಷವನು ಯೋಗಿವರನೊಳು ।
ನೆರ ಭಕ್ತಿ ಮಾಡಲಹುದು ಮುಕ್ತಿ ॥

ಪದ ॥ ಗುರುಭಕ್ತನೆನಿಸಿ ನಿರ್ವಿಷಯಿಯೆನಿಸಿ ಕೋಪ । ವಿರಹಿತನೆನಿಸಿ ಬ್ರಹ್ಮಧ್ಯಾನ ॥ ಪರನು ತಾನೆನಿಸಿಹ ನಿಸ್ಪೃಹ ಯೋಗಿ ಸಂ । ಚರಿಪನೀವೃತಪಂಚಕದೊಳೊಂದಿ ॥ ೧ ॥ ಎಲ್ಲಿ ಪುಣ್ಯಾರಣ್ಯವೆಲ್ಲಿ ನದಿಯತೀರ । ವೆಲ್ಲಲ್ಲಿ ಶೋಭನಾಶ್ರಯಮುಂಟು ॥ ಅಲ್ಲಲ್ಲಿ ಯೋಗಿ ಸಮಾಹಿತೆಗೈವುತೆ । ಸಲ್ಲೀಲೆಯಿಂದೆ ಸಂಚರಿಪನು ॥ ೨ ॥ ಎಲ್ಲಿರ್ಪನೊಲಿದು ಯೋಗೀ ಶ್ವರನಲ್ಲಿಯೆ । ಯೆಲ್ಲತೀರ್ಥಾಳಿದೈವಂಗಳು ॥ ಎಲ್ಲ ಪುಣ್ಯಗಳಪ್ಪವದರಿಂದೆ ತದ್ಯೋಗಿ । ಯಲ್ಲಿ ಪಡೆವುದೆಲ್ಲಾ ಸುಖವನು ॥ ೩ ॥ ಬೇರೆ ತೀರ್ಥವನಿಲ್ಲಿ ಬೇರೆ ದೈವವನಿಲ್ಲಿ । ಬೇರೆ ಪುಣ್ಯವನಿಲ್ಲಿ ಬಯಸದೆ ॥ ನೀರೆ ಯೋಗೀಶ್ವರನೊಳು ಭಕ್ತರೆನಿಪರ್ಗೆ । ಸೂರೆಯುಪ್ಪುದು ಮುಕ್ತಿಸುಖವದು ॥ ೪ ॥ ಯೋಗಿಯೆ ತೀರ್ಥವಾ ಯೋಗಿಯೆ ದೈವವಾ । ಯೋಗಿಯೆ ಸಕಲವು ತನಗೆಂದು ॥ ಯೋಗಿಯನುರೆ ನಂಬಿ ಸಲೆಸೇವಿಪರ್ಗೆ ತಾ । ನಾಗದೇಕಿರ್ಕುಮುನ್ನತಮುಕ್ತಿ ॥ ೫ ॥ ಮನದನುರಾಗವಲರಿ ನೆನೆ ನಡೆ ನೋಡು । ವಿನಯದಿಂದೊಡನಾಡು ನುಡಿ ಯೋಗಿ ॥ ಜನವನರ್ಚಿಸು ಬಣ್ಣಿಸೆಲೆ ನೀರೆ ನಿಜಮುಕ್ತಿ । ಜನಿಪುದು ದುರಿತಾಳಿ ಪರಿವುದು ॥ ೬ ॥ ತನಗೆ ಮಹಾಪಾಪವೆನಿತು ಕೊಳ್ಪೊಡನಿತು ತೊ । ಟ್ಟನೆ ಕೆಟ್ಟು ವರಮುಕ್ತಿದೊರಕೊಳ್ಗು ॥ ವನಿತೆ ಕೇಳೆಲೆ

ಯೋಗಿವರನ ಮೆಲ್ಲಡಿದರು । ಶನ ಮಾತ್ರದಿಂದಿದು ಪರಮಾರ್ಥ ॥ ೭ ॥ ಗುಣ ದೋಷದೆಣಿಕೆ ತನ್ನೊಳಗಿಲ್ಲದಿರ್ಪ ನಿ । ರ್ಗುಣಯೋಗಿವರನ ದೇಹದ ಕರ್ಮ ॥ ಗಣದೊಳು ಗುಣದೋಷವರಸಲಿಲ್ಲೆಂದು ಸ । ದ್ಗುಣನಿಧಿ ಮೈತ್ರೇಯಿ ತಿಳಿ ನೀನು ॥ .... .... .... .... ॥ ೮ ॥

ಯೋಗೀಶ್ವರಂಗೆ ಸರ್ವಾಧಿಕ್ಯ ನಿರೂಪಣೆ–ಸೂತ್ರ ೧೩ಕ್ಕೆ ಪದ ೯೭.

—:೦:—

ಸೂತ್ರ ॥ ಲೋಲಲೋಚನೆ ಯೋಗಿವರನ ವರ್ತನವದು ।
ಬಾಲಕ ವಿಕೃತದಂತೆನಿಪುದು ॥

ಪದ ॥ ತನಗಭಿಮಾನವೊಂದಿನಿಸಿಲ್ಲವದರಿಂದೆ । ಮುನಿಕೃತವದು ಫಲ ವಿಲ್ಲದೆ ॥ ಪನಿತೆ ನೀಸರಿ ವಂಧ್ಯಾರತಿಯಂತೆ ಬರಿದಪ್ಪ । ದೆನುತಿರ್ಪವಖಿಳ ಶಾಸ್ತ್ರಂಗಳು ॥ ೧ ॥ ನರಕ ನಾಕಾದಿ ವಿಷಯವಲ್ತು ಕಾಮನ । ವಿರಹಿತ ಯೋಗಿ ಮಾಡಿದಕರ್ಮ ॥ ಹರಿಣಾಕ್ಷಿ ತಿಳಿಯದು ಬಾಲಕೋನ್ಮತ್ತರಾ । ಚರಣೆಯುಂತಿರೆ ವ್ಯಥಾಯವೆಯಕ್ಕು ॥ ೨ ॥ ಕರಡಿಗೆಯಿಂದೆ ಕರ್ಪುರವನು ಕಳೆದೊಡಾ । ಪರಿಮಳವಿಹುದು ಕರ್ಪುರವಿರ್ಪ ॥ ಪರಿಯಂತೆ ತಿಳಿಯಲ ವಿದ್ಯೆಯುಂಟೆನಿಪುದು । ನಿರವಿದ್ಯನೊಳಗದು ಪುಸಿದೋರ್ಕೆ ॥ ೩ ॥ ವರಯೋಗಿ ಯೊಳು ತೋರ್ಪ ಕರಣಧರ್ಮಾವಳಿ । ಪುರಿದಿಟ್ಟ ಬಿತ್ತಿನ ಪರಿಯಂತೆ ॥ ಮರಳಿ ಭವಾಂಕುರಕ್ಕದು ಹೇತುವಲ್ಲೆಂದು । ತರುಣಿ ನೀನರಿವುದಿ ದ ವಿವಾದ ॥ ೪ ॥ ಜಡದೇಹಾದಿಗೆ ತಾನು ಪೆರತೆಂದು ಕಂಡನೊ । ಳ್ಪೊಡರ ದ ವಿದ್ಯೆ ಮುನ್ನಿನ ಪೋಲು ॥ ಬಿಡುಗಡೆಯಾದಹಿ ಚರ್ಮದಂತೆಂದುಮೆ । ಲ್ಲಡಿ ಯಳೆ ತಿಳಿ ತತ್ವವಹುದಿದು ॥ .... .... .... ॥ ೫ ॥

ಯೋಗೀಶ್ವರಂಗೆ ನಿರ್ಲೇಪಕತ್ವ ನಿರೂಪಣೆ–ಸೂತ್ರ ೧೪ಕ್ಕೆ ಪದ ೧೦೨.

———

ಸೂತ್ರ ॥ ತನು ವಿಯೋಗದೊಳೀನ ನೆನೆವನಂತಹನಾಗಿ ।
ತನಗಲ್ಲಿ ನಿಜದೆಚ್ಚರಿರಬೇಕು ॥

ಪದ ॥ ಯೋಗಿಗೆ ನಿಜತನು ತ್ಯಾಗದೊಳ್ವಿಧಿಯಿಲ್ಲ । ದಾಗದು ಮೋಕ್ಷ ವಂತದರಿಂದೆ ॥ ರಾಗಾಧರಾಂಚಿತೆ ಕೇಳು ತದ್ವಿಧಿಯನಾ । ನಾಗಮೋಚಿತ ವೆನಲೊರೆವೆನು ॥ ೧ ॥ ತನುವಿಯೋಗದೊಳಾವುದನು ನೆನೆವನದಾಗಿ । ಜನಿ

ಸುವನದರಿಂದೆ ವರಯೋಗಿ ॥ ಇನಿತನ್ಯಭಾವನೆಯನು ಬಿಟ್ಟು ನಿಜತತ್ತ್ವ। ವನೆ ಸೋಹವೆಂದು ಜಾನಿಸುವದು ॥ ೨ ॥ ತನುವನಿರಿಸಿ ಸುಖಾಸನದೊಳ್ಪ್ರಾಣಾನಿಲ । ನನು ಕೂಡಿ ತನ್ನ ಮಾನಸವನು ॥ ತನಗೆ ತೋರದತೆರನೆನಿಸಿ ಭ್ರೂಮಧ್ಯದೊ । ಳನುನಯದಿಂದೆ ಬಂಧಿಸಿ ಮೇಲೆ ॥ ೩ ॥ ಅರಿವನು ತನ್ನರಿವಿನೊಳಡಗಿಸಿ ತನ । ಗರಿಕೆ ದೋರದೆ ಚಿದದ್ವಯದೊಳು ॥ ಕರಿಗೊಂಡು ಪರಮಸುಖದೊಳಿರಲೀ ಕ್ರಮ । ವರಿಯೆ ದೇಹತ್ಯಾಗ ವಿಧಿಯುಕ್ಕ ॥ ೪ ॥ ಅಲ್ಲಿಲೇಸಿಲ್ಲಿಲೇಸೆನಲಿಲ್ಲವೀ ಕ್ರಮ । ದಲ್ಲಿ ದೇಹತ್ಯಾಗವಾಗಲು ॥ ಎಲ್ಲಿಯಾದರುಮೇನು ಪರಮಯೋಗಿಗೆ ಮುಕ್ತಿ । ಯಲ್ಲದೆ ಬೇರೊಂದು ಗತಿ ಯುಂಟೆ ॥ ೫ ॥ ತಿಳಿಯೆ ನಿಜಾಕಾಶದೊಳು ಘಟಾಕಾಶವ । ಚ್ಚಳಿಯದಾ ಘಟಭಿನ್ನವಾಗಲು ॥ ಘಳಿಲನೈದುವಪಾಂಗು ವರಯೋಗಿತನುವಿಂತಿ । ಒಳಿಯೆ ಬ್ರಹ್ಮದೊಳೊಂದಿ ಸುಖಿಸಿರ್ಕು ॥ ೬ ॥ ಇಂದುವಿನೊಳು ಮತಿಬೇಕು ಮುಮುಕ್ಷುಗೆ । ಸಂದೇಹವಿಲ್ಲದಭ್ಯಾಸಿಗೆ ॥ ವೊಂದಿರಬೇಹುದು ರವಿಯೊಳು ಬುದ್ಧಿ ಕೇ । ಳಂದುಗೆಯುಡಿಯು ಚಂದನಗಂಧಿ ॥ ೭ ॥ ಅವಯುವದೊಳ್ಬ್ರಹ್ಮವಿವರದಲ್ಲಿಯೆ ಬುದ್ಧಿ । ಸವನಿಸು ಗನುಭವಿಗಿದು ಸಿದ್ಧ ॥ ಯುವತಿ ಕೇಳಿಂತು ಮೂವರಿಗೆ ನಿರ್ಯಾಣದೊ । ಳವಿಕಲ್ಪವಾದ ಸದ್ವಿಧಿಗಳು ॥ .... ॥ ೮ ॥

ಯೋಗೀಶ್ವರಾದಿಗಳ ದೇಹತ್ಯಾಗ ಕ್ರಮನಿರೂಪಣೆ
ಸೂತ್ರ ೧೫ಕ್ಕೆ ಪದ ೧೧೦.

---

ಸೂತ್ರ ॥ ದೇಹವಾನಲ್ಲೆನ್ನ ದಲ್ಲೆಂದೊಡಾಗಳಾ ।
ದೇಹದತ್ಯಾಗವಾತನಿಗಕ್ಕು ॥

ಪದ ॥ ಪರಮಾರೂಢನತನು ಮೊದಲಾದವೆಲ್ಲವು । ಪರಿಭವ ವಡೆದವಂತವರಲ್ಲಿ ॥ ಚರಿಸುತಿರ್ಕಾತ ನವರಕರ್ಮಾದಿಗಳೊಡ । ವೆರಸದೆ ತಾನೆಂದು ಪರಿಪೂರ್ಣ ॥ ೧ ॥ ಪರಮಾರೂಢನತನು ಮನವಸು ಲಯದಲ್ಲಿ । ನಿರವಿಸಲಹುದೆ ಬೇರೊಂದನು । ವರಸೇತು ಬಂಧದೆಡೆಯೊಳುಂಟೆ ಗತಿ ನೀರೆ । ಪರಮಾತ್ಮನಾತನೆ ಪರಿಪೂರ್ಣ ॥ ೨ ॥ ಎಂಬು ಸದ್ಗುರುವರನಿಂದ ತನ್ನನು ದಿಟ । ದಿಂದ ತಾನರಿದನಾಕ್ಷಣದೊಳು ॥ ಸಂದೇಹವೇನು ತತ್ತನುವಿಗದೆ ತ್ಯಾಗ । ವೆಂದು ಮೈತ್ರೇಯಿ ನಂಬಿದು ತತ್ವ ॥ ೩ ॥ ಒಂದೆ ಜನನವನುಭವಿಗೆ ಯಭ್ಯಾಸಿಗೆ ।

ಸಂದಿರ್ಪವೆರಡು ಜನ್ಮಂಗಳು ॥ ಮುಂದೆ ಮುಮುಕ್ಷುಗೆ ಜನಿಮೂರು ಚರಮನಿ । ಗೆಂದು ಸಂಭವವಿಲ್ಲವರಿ ಮುಕ್ತಿ ॥ ೪ ॥ ಪಲಕಾಲಮಿರ್ದು ನಾಕದೊಳುಂಡು ಸುಖವನು । ನಲಿದಿಲ್ಲಿ ಸತ್ಕುಲದೊಳು ಪುಟ್ಟಿ ॥ ಬಳಿಕ ಮುಕ್ತಿಯನೈದುತಿಹ ರೆಂದು ತಿಳಿವುದು । ಲಲನೆ ಮುಮುಕ್ಷ್ವಾದಿಗಳನಿಂತು ॥ ೫ ॥ ಅನುರಾಗದಿಂದೆ ಮಾಳ್ಪುದು ದೇಹಸಂಸ್ಕಾರ । ವನು ವಿಧಿಯೊಳು ಮುಮುಕ್ಷ್ವಾದಿಯ ॥ ತನುಗಳನಗ್ನಿ ಭೂ ನದೀ ವನ ವೃಕ್ಷಾದಿ । ಯೆನಿಪಲ್ಲಿ ಸಂಸ್ಥಾನಗತಿಯಿಂದ ॥ ೬ ॥ ಪರಮಾರೂಢನಿಗೊಂದು ವಿಧಿಯಿಲ್ಲದಂತಿರ್ಕೆ । ಹರಪೂಜಾಶ್ರಾದ್ಧಾದಿ ಸಂಸ್ಕಾರ ॥ ವಿರಚಿಪುದೊಲಿದು ಮುಮುಕ್ಷ್ವಾದಿಮೂವರ್ಗೆ । ವರಪುತ್ರಮಿ ತ್ರಾದಿ ಹಿತವರು ॥ .... .... .... .... ॥ ೭ ॥

ಯೋಗೀಶ್ವರಾದಿಗಳ ತನುಸಂಸ್ಕಾರ ಕ್ರಮನಿರೂಪಣೆ

ಸೂತ್ರ ೧೬ಕ್ಕೆ ಪದ ೧೧೭.

---

ಸೂತ್ರ ॥ ಭಕ್ತಿಮಾತ್ರವನು ಮಾಡಿದೊಡೆ ಕೇಳಂಗನೆ ।
ಮುಕ್ತಿಯನೊಲಿದೀವನೀಶನು ॥

ಪದ ॥ ಇದು ಸಗುಣಕ್ರಮವಿದು ತಿಳಿಯದವರ್ಗೆ । ಸದಮಳ ಗುರು ಶಂಭುಲಿಂಗದ ॥ ಪದಭಕ್ತಿಯನು ನೆಟ್ಟನೊರೆದು ನಂಬುಗೆದೋರಿ । ಪದುಳ ವನೀವುದು ಗುರುಗಳು ॥ ೧ ॥ ಸಗುಣ ನಿರ್ಗುಣವೆಂಬವೆರಡು ರೂಪಿಂದೀಶ । ನಗಣಿತ ಸಿದ್ಧಿ ಮುಕ್ತಿಗಳನು ॥ ಬಗೆಯ ಭೇದವನರಿದೀವುದು ನಿಜವೆಂದು । ನಿಗಮಾಗಮಾದಿಗಳೊರೆವವು ॥ ೨ ॥ ಭಕ್ತವಾತ್ಸಲ್ಯನೆನಿಪ ಶಂಭುಃಪದವನು ಭಕ್ತಿಯಿಂದಾಶ್ರಯಿಸಿ ಬೇರೊಂದು ॥ ಯುಕ್ತಿಗಲಿಯದೆ ಸುಮ್ಮನೆ ಭಜಿಪುದು ಪರ । ಮುಕ್ತಿಯನೊಲಿವ ಸಜ್ಜನರೆಲ್ಲಾ ॥ ೩ ॥ ಸುಲಭೋಪಾಯವನೊಂದ ನೊಲಿದರುಪುವೆನು ನಿ । ರ್ಮಳಮುಕ್ತಿಗೆಳಸುವ ಸುಜನರ್ಗೆ ॥ ನಲಿದೀಶ ಶರಣೆಂಬುದಿದು ತಾನೆ ಸಾಲ್ಗಿನ್ನು । ಪಲವುಪದೇಶದೊಳ್ಪುರುಳಿಲ್ಲ ॥ ೪ ॥ ಯೋಗ ವಿಚಾರ ವಿರಾಗ ವಿದ್ಯಾ ಕರ್ಮ । ಪೂಗಾದಿ ಬಹುಕೋಟಲೆಗಳನು ॥ ನೀಗಿ ನಿರ್ಮಳ ಶಿವಭಕ್ತಿಯೊಂದಿರೆ ಮುಕ್ತ । ನಾಗುವನವನಿದು ಪರಮಾರ್ಥ ॥ ೫ ॥ ಕಲಿಯುಗದೊಳು ಶಂಭುಸುಲಭನೆನಿಪನಾಗಿ । ನಲಿದು ತತ್ಪದಯುಗ ಭಕ್ತಿಯು ॥ ನೆಲಸೆ ಮಾನಸದೊಳಿನಿಸು ವೇಳ್ಕೆಯದು ಮುಕ್ತಿ । ಲಲನೆಯನ

ವನೊಡ ವೆರಸುಗು ॥ ೬ ॥ ಕರಕಂಜವೆತ್ತಿ ಪ್ರತಿಜ್ಞೆಯನೀಶನು । ವರವೇದವ ರಿಯೆ ಮಾಡಿದನಿಂತು ॥ ಪರಮ ವಿಶ್ವಾಸದೊಡನೆ ತನ್ನನೈದಿದ । ಪುರುಷರ್ಗೆ ಭವಬಾಧೆ ಪೊರತೆಂದು ॥ ೭ ॥ ತನುವಿಯೋಗದೊಳೊಮ್ಮೆ ನೆನೆಯೆ ನೆನೆಯು ದಿರ । ಲನುರಾಗದಿಂದೆನ್ನ ಭಕ್ತರ್ಗೆ ॥ ಘನಮುಕ್ತಿಯನು ತಾನೆ ನೆನೆದೀವೆ ನೆಂದು ಮಾ । ನಿನಿರನ್ನೆ ಸತ್ಯನೊಳ್ಪುಷಿಯುಂಟಿ ॥ ೮ ॥ ಅನಿಮಿತ್ತ ಬಂಧು ದಯಾಳು ಶಂಕರನೀಶ । ಕನಘನಾನಂದವಾರಿಧಿ ತನ್ನ ॥ ನೆನಹು ಮಾತ್ರ ದೊಳು ಮುಕ್ತಿಯನೀವನೆಂದು ಸ । ಜ್ಜನರು ನಂಬಿಹುದು ಸುಸ್ಥಿರಮಾಗಿ ॥೯॥ ಕುಂದದಿಹುದು ದೋಷ ವಿಧಿ ಕಲಿಯುಗದೊಳ । ಗೊಂದೊಳ್ಳಿತ್ತಿಲ್ಲಿಂತು ಮರಿಯಲ್ಕೆ ॥ ಮುಂದಗಮನೆ ಶಿವಪದದ ನೆನಹು ಮಾತ್ರ । ದಿಂದಕ್ಕುಮಖಿಳ ರ್ಗೆ ವರಮುಕ್ತಿ ॥ ೧೦ ॥ ಅದರಿಂದೆ ಭಕ್ತಿಮಾತ್ರದೆ ಶಂಭು ನಿಜಮುಕ್ತಿ । ಪದ ವನೀವುದು ತಥ್ಯವಹುದಾಗಿ ॥ ಪದುಳದಿಂದನ್ಯವನೆಳಸದೆ ಸದ್ಭಕ್ತಿ । ಯೊದವು ಳ್ಳವನೆ ಮುಕ್ತನಿದುಸಿದ್ಧ ॥ .... .... .... ॥ ೧೧ ॥

ಶಿವಭಕ್ತ್ಯಾಧಿಕ್ಯ ನಿರೂಪಣೆ–ಸೂತ್ರ ೧೭ಕ್ಕೆ ಪದ ೧೨೮.

---

ಸೂತ್ರ ॥ ಸರ್ವವೆಲ್ಲವನು ಚಿದಾತ್ಮಭಾವನೆಗಂಡು ।
ಸರ್ವಸಮತ್ವದಿಂದಿರೆ ಭಕ್ತಿ ॥

ಪದ ॥ ರಾಗಾದಿ ಗುಣದೋಷ ಪೂಗವನುಳಿ ದನು । ರಾಗದಿಂದವೆ ಶಂಭು ಶರಣೆಂದು ॥ ನೀಗಿ ಕಳೆವುದು ಸಂಸಾರದ ಬಾಧೆಯ । ಸಾಗಮವರಿ ದಚ್ಚ ಸುಖಿಗಳು ॥ ೧ ॥ ಶಿವನನು ತನ್ನೊಡನವಿನಾ ಭಾವನೆಯೊಳು । ಸುವಿ ಚಾರದಿಂದೆ ಕಾಣ್ಬಾತಂಗೆ ॥ ಭವಬಂಧವಳಿಗು ಮನ್ನರಿಗೆ ಸಂಸೃತಿಯೆಂದು । ಪವಣವೆನಿಪವೇದವೊರೆವುದು ॥ ೨ ॥ ತಿಳಿ ತತ್ತ್ವಮಸಿಯೆಂದು ಬಳಿಕ ತ್ವಂತದಸಿ ಯೆಂ । ದೆಳಸಿ ನಿಗಮವಾಕ್ಯವೊರೆಯುಲು ॥ ಕಳಹಂಸಗಮನೆ ಜೀವೇಶ್ವರ ಭೇದವ । ನುಳಿದೇಕ ರಸವೆಂದು ನಿಜದಿಂದ ॥ ೩ ॥ ಒಂದು ವಿಷಯವು ಬೇರೆಂದು ಭಾವಿಸದೀಶ । ನೆಂದನುಚಿಂತನೆ ಗೈವುದು ॥ ಇಂದು ಸನ್ನಿಭ ಮುಖಿ ಯಾತ್ಮೈವೇದಂ ಸರ್ವ । ಮೆಂದು ನಿಗಮ ವಾಕ್ಯವಿಹುದಾಗಿ ॥ ೪ ॥ ಸಮತೆಯಿಂದಲಿ ಸರ್ವವಿದನೀಶಮಯವೆಂದು । ಸುಮತಿಯೊಳೊಮ್ಮೆ ಭಾವಿ

ಸುವರ್ಗೆ ॥ ಕಮಸೀಸುವಪ್ಪ ಕೈವಲ್ಯವಹುದು ಸತ್ಯ । ವಮಳೇಂದುವದನೆ ನಂಬಿದನಿಂತು ॥ .... .... .... .... ॥೫॥

ಸದ್ಭಕ್ತಿ ಲಕ್ಷಣ ನಿರೂಪಣೆ-ಸೂತ್ರ ೧೮ಕ್ಕೆ ಪದ ೧೩೩.



ಸೂತ್ರ ॥ ಆ ತತ್ತ್ವಮಸಿಯೆಂಬ ವಾಕ್ಯದರ್ಥವನು ನೀ ।
ನೀ ತೆರದಿಂದರಿವುದು ನೀರೆ ॥

ಪದ ॥ ಪದನಲ್ಲಿ ಮೂರು ಪರಾತ್ಮರೈಕ್ಯವೆಯದ । ಕೊದವಿ ದರ್ಥಂಗ ಳಂತವು ಮತ್ತೆ ॥ ಸುದತಿರನ್ನಳೆ ವಾಚ್ಯ ಲಕ್ಷ್ಯವೆಂದಿತ್ತೆರ । ನಿದರಂದವಿಂತೆಂ ದು ತಿಳಿ ಪೇಳ್ವೆ ॥೧॥ ತನು ಮೊದಲಾಗಿ ತೋರ್ಪನಿತನೆ ತಾನೆಂದು । ಜನ ನಾದಿಯುಳ್ಳ ಹಮ್ಮಿನೊಳೊಂದಿ ॥ ತನಗೆ ತನ್ನಗೆಪತ್ತಿ ಬಿಡದೆ ವಿಜ್ಞಾನ ಮ । ಯನೆತ್ವಂ ಪದಕೆ ವಾಚ್ಯವೆನಿಪರ್ಥ ॥೨॥ ಮೊದಲು ಚಿಜ್ಜಡವೆನಿಸಿದ ಜೀವ ಹಂತೆಯ । ಮುದವಸುಖಾದಿ ತನ್ನೆಡೆಗೆಂದು ॥ ಪದವಿಡದವಿಕಾರಿ ತುರಿಯ ಕೂಟಸ್ಥಾತ್ಮ । ವದು ತ್ವಂ ಪದಕೆ ಲಕ್ಷ್ಯವಾದರ್ಥ ॥೩॥ ಪ್ರಕೃತಿ ಮೇಳನ ದಿಂದೆ ಸಕಲೇಶನೆನಿಸಿ ಮೋ । ಹಕವಿಲ್ಲದಖಿಳ ಕಾರಣವಾಗಿ ॥ ವಿಕೃತಿ ತನಗೆ ಪೊರ್ದದಾನಂದಮಯನೆ ಭಾ । ವಕಿ ತತ್ಪದಕೆ ವಾಚ್ಯವಹುದರ್ಥ ॥೪॥ ನಿರುಪಮಾದ್ವಯ ನಿತ್ಯ ನಿರವಧಿ ನಿಸ್ತತ್ವ । ನಿರಘ ನಿರ್ಮಲ ನಿರಾಲಂಬನು ॥ ನಿರುಪಾಧಿ ನಿಸ್ಸಂಗ ಪರಿಪೂರ್ಣ ಪರಬೊಮ್ಮ । ದಿರವೆ ತತ್ಪದಕೆ ಲಕ್ಷ್ಯಾರ್ಥ ವು ॥೫॥ ಆತನೆ ಈತನೆಂಬಂತೆ ವಾಚ್ಯಾಂಶವ । ನೀತಿಗಳೆದು ಲಕ್ಷ್ಯದ್ವಯ ದೊಳು ॥ ಚೈತನ್ಯವೇಕವೆಂಬುದೆ ಯಸಿಪದಕೆ ವಿ । ಖ್ಯಾತಿ ಮೈತ್ರೇಯಿ ವಾ ಚ್ಯಾರ್ಥವು ॥೬॥ ಬಳಿಕವಾ ಲಕ್ಷ್ಯಾರ್ಥಗಳ ಭೇದವಪರೋಕ್ಷ । ಗಳು ಮಾಯಾಪರಿಕಲ್ಪನೆಗಳೆಂದು ॥ ಉಳಿಮೆಯಖಂಡೈಕ ರಸಚಿತ್ತೆ ನೀನೆಂದು । ತಿಳಿವುದಿಂತಸಿಪದ ಲಕ್ಷ್ಯಾರ್ಥ ॥೭॥ ತಿಳಿದಿಂತು ವಾಕ್ಯದರ್ಥವನದರೊಳು ಬುದ್ಧಿ । ನೆಲೆಗೊಂಡು ಚಲಿಸದೆ ದೃಢವಾಗಿ ॥ ಬಳಿಕೊಂದು ವಿಮತಿದೋ । ರದೆ ನಿಜಾನಂದವ । ಚ್ಚಳಿಯದಿಹುದೆ ಮುಕ್ತಿ ಕೃತಕೃತ್ಯೆ ॥ .... ॥೮॥

ವಾಕ್ಯಾರ್ಥ ನಿರ್ಣಯ ನಿರೂಪಣೆ-ಸೂತ್ರ ೧೯ಕ್ಕೆ ಪದ ೧೪೧

ಸೂತ್ರ ॥ ತತ್ತ್ವಮಸೀತಿ ವಾಕ್ಯದೊಳು ಬೇರೊಂದು ಭೇ ।
ದತ್ವವಿಲ್ಲೆಂದು ನಂಬೆಲೆ ನೀರೆ ॥

ಪದ ॥ ಒಂದು ಪೂವಿಗೆ ಸ್ವರ್ಗವೆಂದು ಪೇಳುವ ವಾಕ್ಯ । ದಂದದಿಂದಾ ಪರಾತ್ಮನು ತಾನೆ ॥ ಎಂದು ಬೋಧಿಪುದು ಮುಕ್ತಿಯೊಳತಿಶಯು ರತಿ । ಯಂ ದೋರುವರ್ಥವಾದವೆಯಲ್ಲ ॥೧॥ ಪ್ರತಿಮೆಯಂ ದೇವತಾಕೃತಿಯೆಂಬ ವೋ ಲ್ಲತ್ತನ್ನ । ನತಿಶಯಿಪ ಪರಬೊಮ್ಮವೆನುತಿರ್ಪ ॥ ಶ್ರುತಿಯನು ಬುದ್ಧಿಶುದ್ಧತೆ ಗಾದುಪಾಸನ । ರತಿ ಪರವಲ್ಲವೆಂಬುದೆ ಸತ್ಯ ॥೨॥ ಮನುಜನನಿಂದ್ರನೆಂದೆ ನುತೆ ಬಣ್ಣಿಸುವಂತೆ । ಘನಪರಂಜ್ಯೋತಿ ಸ್ವರೂಪನು ॥ ಸನುಮತವಾಗಿ ತಾನೆಂಬ ನಿಗಮವಿದ । ನೆನಲಿಲ್ಲವೈಸೆ ಸನ್ನುತಿಯೆಂದು ॥೩॥ ಆಳನೊಲಿದರ ಸೆಂದು ಬೋಳೈಸುವಂತೆ ವೇ । ದಾಳಿ ನಿರ್ಗುಣ ಚಿತ್ತಿನೊಳು ತನ್ನ ॥ ಮೇಳ ವೆಂಬುದನು ಕಾಲೋಚಿತ ವಿಡಿದೊಮ್ಮೆ । ಪೇಳಲಿಲ್ಲೌಪಚಾರಿಕವಾಗಿ ॥೪॥ ಅನಲನೀಮಾಣವಕನು ಯೆಂಬ ನುಡಿಯಂತೆ । ತನಗೆ ತತ್ಪದಯೋಗವನು ಪೇಳ್ವ ॥ ವನಿತೆ ವೇದಾಂತವಿದನು ಗುಣಸಾದೃಶ್ಯ । ವೆನಲಿಲ್ಲವೆಂಬುದೆ ಪರ ಮಾರ್ಥ ॥೫॥ ಕೊಡನಿಗಾ ಮೃತ್ತಿಕೆಯೊಡನೇಕವಹುದೆಂಬ । ನುಡಿಯಂತೆ ತನಗೆ ಪರಮನೊಳು ॥ ಬಿಡದೊಂದು ತನವೆಂಬುದಿದು ಕಾರ್ಯಕಾರಣ । ವಿಡಿದುದಲ್ಲೆಂದು ಕಾಣಲುಬೇಕು ॥೬॥ ಹವಣಿಸಿ ನೀಲೋತ್ಪಲವಿದೆಂಬ ವಚನ ದಂ । ತವಿರಳ ಸೌಖ್ಯವಾರಿಧಿಯನು ॥ ತವೆ ತನ್ನ ನಿಜವೆಂಬುದಿದು ತಾನುಗುಣ ಗುಣಿ । ತ್ವವನುಂಟು ಮಾಡದೆಂದರಿವುದು ॥೭॥ ಇದು ತಾನೆ ಗೋಪಿಂಡವೆ ನಿಪಂದದೊಳು ನಿತ್ಯ । ಸದಮಳಾನಂದ ಚಿತ್ಪದವನು ॥ ಒದವಿ ತಾನೆಂದೊರೆ ವುದು ಜಾತಿ ವ್ಯಕ್ತಿ ದೋ । ರ್ಪುದನಾಗಿ ತಿಳಿಯಲಂತದು ಮಿಥ್ಯೆ ॥೮॥ ಕ್ಷೀರ ದಧಿಗೆ ಕಣವಾರಿಗೇಕತ್ವವೆಂ । ದಾರೈವ ಚಂದದಿಂದವೆ ತನ್ನ ॥ ಸಾರಬೋ ಧದ ಸಮರಸವೆಂಬುದಿಲ್ಲಿ । ವಿಕಾರದಿಂದಂಶದಿಂದುಸುರದು ॥೯॥ ಬಿಂಬದಿಂದಾ ಪಡಿಬಿಂಬವನ್ಯವೆಯಾಗ । ದೆಂಬಂತೆ ಪರವಸ್ತುವನು ತಾನೆ ॥ ಎಂಬುಪನಿಷ ದುಕ್ತಿಯನು ವಿಚಾರಿಸಿ ನೋಡೆ । ಬಿಂಬ ಪ್ರತಿಬಿಂಬ ವಾದವೆಯಲ್ಲ ॥೧೦॥ ನಾನಾವಿಕಲ್ಪವಿನ್ನೇನು ಜೀವೇನಾತ್ಮ । ನಾನು ಪ್ರವಿಶ್ಯವೆಂದೆನೆ ಶ್ರುತಿ ॥ ಸಾ ನುರಾಗದೆ ಶಂಭುಲಿಂಗವೀ ತನುವಿನೊ । ಳಾನೆಂದೆನಿಸಿ ಕೊಳುತಿಹುದಾಗಿ ॥೧೧॥

ವಾಕ್ಯಾರ್ಥ ಪ್ರತಿಪತ್ತಿ ನಿರಾಕರಣ ನಿರೂಪಣೆ-ಸೂತ್ರ ೨೦ಕ್ಕೆ ಪದ ೧೫೨.

——

ಸೂತ್ರ ॥ ವರಮುನಿಪತಿ ನಿನ್ನ ಕರುಣದಿಂದನುಪಮ ।
ಹರುಷವಾದುದು ನೋಡಲೆನಗಿಂದು ॥

ಪದ ॥ ಇಂತು ಮೈತ್ರೇಯಿಗೆ ನಿಜತತ್ವದಿರವನೋ । ರಂತೆ ಬೋಧಿಸಿ ನಿತ್ಯಸುಖದೊಳು ॥ ಸಂತತವಗಲದಿರ್ಪಂತಿರಿಸಿದ ನೊಲ । ವಿಂ ತಾನೆ ದಯ ದೊಳು ಮುನಿಪನು ॥ ೧ ॥ ಪಲವು ಶ್ರುತಿಗಳಿಂದೆ ಪಲವನುಭವದಿಂದೆ । ಪಲವು ದೃಷ್ಟಾಂತ ಯುಕ್ತಿಗಳಿಂದೆ ॥ ನಲಿದು ಬೋಧಿಸಿದನಾ ಮುನಿ ನಿಜಸತಿ ತನ್ನ । ನಿಲವದ್ವಯಾತ್ಮನೆಂದರಿವಂತೆ ॥ ೨ ॥ ತಿಳಿದು ತತ್ವಾರ್ಥವೆಲ್ಲವನು ಮೈತ್ರೇಯಿ ನಿ । ರ್ಮಳ ನಿಜಪತಿಗೆ ಸಂತಸದಿಂದ ॥ ಸಲೆ ನಿತ್ಯಸುಖದೊಳು ನೆಲಸಿ ತಾನಿ ರ್ಪುದ । ನೊಲಿದು ಬಿನ್ನೈಸಿದಳನುವಾಗಿ ॥ ೩ ॥ ಯತಿಪ ಸದ್ವಿದ್ಯಾಧಿಪತಿ ಕೇಳು ನೀನೆನ್ನ । ನತಿಶಯಿಸಿ ದಯದಿಂದೆ ತಿಳುಪಲ್ಕೆ ॥ ಕೃತಕೃತ್ಯಳಾದೆ ನಾನಮಳ ಚಿತ್ಸುಖದಲ್ಲಿ । ಮತಿ ನಿಂದುದೆನಗೆ ನಿಶ್ಚಲಮಾಗಿ ॥ ೪ ॥ ಮುನಿಪತಿ ನಿನ್ನ ದಯಾವಲೋಕನದಿಂದೆ । ಜನನಾದಿ ಬಾಧೆಯನುಳಿದೆನು ॥ ಅನುಪ ಮಾನಂದ ಚಿದ್ಘನ ಪೂರ್ಣಪದವಾದೆ । ನಿನಿತು ಸಂದೇಹವಿಲ್ಲದುದರಿಂದ ॥೫॥ ಮತಿಗೆ ಗೋಚರಮಾಗೆ ನುತಿಗೆ ಗೋಚರವೈಸೆ । ಮತಿಗೆ ಗೋಚರವಲ್ಲವದು ನಿನ್ನ ॥ ಅತಿಶಯವೆನಿಸುವ ಮಹಿಮೆಯುದನು ಬೇರೆ । ನುತಿಸಲೆನ್ನಳವೆ ಸನ್ಮುನಿ ಮುಖ್ಯ ॥ ೬ ॥ ಎಂದು ಮೈತ್ರೇಯಿನಿಸ್ಸಂದೇಹ ಸದ್ಭಕ್ತಿ । ಯಿಂದೆ ಸಾಷ್ಟಾಂಗ ಪೂರ್ವಕವಾಗಿ ॥ ವಂದಿಸಿ ನಿಜಪತಿ ಮುನಿ ಯಾಜ್ಞವಲ್ಕ್ಯ ಯ । ನಂದೊ ಲವಿಂದೆ ಕೀರ್ತಿಸಿದಳು ॥ ೭ ॥ ಅತಿಶಯಮೆನೆ ರೂಪವತಿ ಗುರುಭಕ್ತಿ ನಿ । ಯತ ನಿಜಶಾಂತಿ ವಿರತಿಯುಕ್ತೆ ॥ ನುತಗುಣಚರಿತೆ ಸನ್ಮತಿವಂತೆ ಮೈತ್ರೇಯಿ । ಪತಿಗೂಡಿ ಸುಖದೊಳೊಂದಿರ್ದಳು ॥ .... .... ॥ ೮ ॥

ಮೈತ್ರೇಯಿಯ ವಿಜ್ಞಾಪನ ನಿರೂಪಣೆ-ಸೂತ್ರ ೨೧ಕ್ಕೆ ಪದ ೧೭೦.

---

ಸೂತ್ರ ॥ ಸಕಲ ಮಂಗಲವಕ್ಕೆ ಸಕಲ ಜನಂಗಳಿ ।
ಗಕಲಂಕ ಶಂಭು ಸತ್ಕೃಪೆಯಿಂದ ॥

ಪದ ॥ ಶ್ರೀ ಕೃಪಾಕರನೆನಿಸುವ ನಿಜಗುಣಯೋಗಿ । ಲೋಕಹಿತಾರ್ಥ ವೆನಲು ಪೇಳ್ದ ॥ ಈ ಕೃತಿ ಪರಮಾನುಭವಬೋಧೆಯಹುದಾಗಿ । ಸ್ವೀಕರಿಸ ದರುಂಟೆ ಜಗದೊಳು ॥ ೧ ॥ ಇದು ವೇದವೇದಾಂತದೊಳು ಗೌಪ್ಯವಾದರ್ಥ ।

ವಿದು ಪುರಾಣ ಸ್ಮೃತಿಗಳಸಾರ ॥ ಇದು ಪರಮಾರ್ಥದ ತಿರುಳು ತತ್ವರಹಸ್ಯ । ವಿದು ಪ್ರಾಕೃತವೆಯಲ್ಲ ತಿಳಿಯಲ್ಕೆ ॥ ೨ ॥ ಇದನನುರಾಗದಿಂದೋದುವ ಜನ ರಿಗೆ । ಪದಪಿಂದೆ ಕೇಳ್ವ ಸಾಧಕರಿಗೆ ॥ ಮುದದಿಂದೆ ತಿಳುಪುವ ಬುಧರಿಗೆ ನಿಜ ಮುಕ್ತಿ । ಪದಸಿದ್ಧಿಪುದು ಶಂಭುಕೃಪೆಯಿಂದ ॥೩॥ ಋತುಗಣನೆಯ ಸಂಧಿ ಸೂತ್ರ ವಿಪ್ಪತ್ತೆರ । ಡತಿಶಯಮೆನಿಸಿ ತೋರುವ ನೂರು ॥ ನುತ ವೆತ್ತ ಪದವೆ ಪಂಚೈ ಸೀತಿ ಮಿಗಿಲಾದ । ಶತ ನವದಿಂದವಿಾ ಕೃತಿಪೂರ್ಣ ॥ ೪ ॥ ಇದು ನಿಜಗುಣ ಯೋಗಿ ಮುದದಿಂದೆ ತಿಳಿಯಪೇ । ಳಿದ ಯಾಜ್ಞವಲ್ಕ್ಯ ಮೈತ್ರೇಯಿಯ ॥ ವೊದವಿದ ಸಂವಾದದೊಳಗಾರನೆಯ ಸಂಧಿ । ಸದಮಳ ಪರಮಾನುಭವ ಬಂಧಿ ॥ .... .... .... .... ॥ ೫ ॥

ಪರಿಶಿಷ್ಟ ನಿರೂಪಣೆ-ಸೂತ್ರ ೨೦ಕ್ಕೆ ಪದ ೧೮೫.

---

ಗದ್ಯ ॥ ಸ್ವಸ್ತಿ ಸಮಸ್ತ ಸುರವಿಸರ ಮಕುಟಮಣಿಗಣಕಿರಣ
ಪ್ರಚುರ ಪ್ರವಾಹ ತರಂಗಿಣೀ ತಟ ವಿರಾಜಿತ ಪದರಾಜೀವ
ಯುಗಳ ಶ್ರೀ ಶಂಭು ಸತ್ಕೃಪಾ ಕಟಾಕ್ಷ ಸಾಂದ್ರ
ಚಂದ್ರಿಕಾ ಸಂಕ್ರಾಂತ ನಿರಸ್ತ ನಿಖಿಲ ಸಂಸಾರಶ್ರಮ
ವಿಸ್ಫಾರಿತ ನಿಜಾನಂದಾಸ್ವಾದನಾಸಕ್ತ ಚಿತ್ತೋ
ಪೇತ ನಿಜಗುಣಾಹ್ವಯ ಶಿವಯೋಗಿನಾ ವಿರಚಿ
ತಮಪ್ಪ ಪ ರ ಮಾ ನು ಭ ವ ಬೋ ಧೋ
ನಾ ಮ ಪ್ರ ಕ ರ ಣ ದ ಲ್ಲಿ
ಅಂತು ಸಂಧಿ ೬ಕ್ಕೆ ಸೂತ್ರ ೧೨೦ಕ್ಕಂ ಪದ ೯೮೫ಕ್ಕೆ
ಮ ಂ ಗ ಳ ಮ ಸ್ತು .

---

ಪರಮಾನುಭವಬೋಧೆ ಸಮಾಪ್ತ.

ಸೂಚನೆ :—

ಈ ಮುದ್ರಣದಲ್ಲಿ ೯೮೭ ಪದಗಳು ಮಾತ್ರ ಇರುವುವು. ಇನ್ನುಳಿದ ೩ ಪದಗಳನ್ನು ದೊರಕಿಸಿಕೊಡಲು ಮಹಾಶಯರಲ್ಲಿ ವಿಜ್ಞಪ್ತಿ.

---

ಶ್ರೀಗುರುಶಂಭುಲಿಂಗಾಯನಮಃ

# ಪರಮಾರ್ಥ ಗೀತೆ.

---

## ಪ್ರಥಮಗತಿ.

## ಪ್ರತಿಜ್ಞಾದಿ ನವಕಂದ

ಪ್ರತಿಜ್ಞಾಕಂದ ॥

ಶ್ರೀಗುರು ನಿಜಶಿಷ್ಯಂಗಸು ।
ರಾಗಂ ಮಿಗೆ ಮುಕ್ತಿಮಾರ್ಗಮಂ ತಿಳುಪಿದನದ ॥
ನೀಗಾನಿಂತೀ ಕನ್ನಡ ।
ಮಾಗಿರೆ ಸಲೆ ಶಂಭುಲಿಂಗದೊಲವಿಂದುಸುರ್ವೆಂ ॥ ೧ ॥

ಅಧಿಕಾರಿ ಲಕ್ಷಣ

ಮುನ್ನವೆ ಭಕ್ತಿ ಕ್ರಿಯೆಯಿಂ ।
ದನ್ನೆರೆ ಪರಿಶುದ್ಧಮಾದ ಬುದ್ಧಿಯನಾಳ್ವ ಸ ॥
ಮುನ್ನತಸದ್ಗುಣಗಣಸಂ ।
ಪನ್ನರ್ಗೆ ನಿಜಸ್ವರೂಪಮಿದರೊಳ್ಸಾಧ್ಯಂ ॥ ೨ ॥

ಸಂಬಂಧ

ಪದ ಲಕ್ಷಣಮಿಲ್ಲದೊಡಿಂ ।
ತಿದು ಸೇವ್ಯಂ ಧರೆಯೊಳರ್ಥಮುಳ್ಳುದರಿಂದಂ ॥
ವಿದಿತಂ ಪೊನ್ನುಳ್ಳಂ ಗುಣ ।
ದೊದವಾವುದುಮಿಲ್ಲದಿರ್ದೊಡವಂ ಗುಣಿಯಲ್ತೆ ॥ ೩ ॥

ಒಂದೊಂದನರ್ಥ್ಯಾಚಿಯರ ।
ತ್ನಂ ದೊರಕೊಳಲೊಲ್ಲದವರೊಳೊಂದಂ ಗ್ರಹಿಸುವ ॥
ನಂದದಿ ನಿಜಮತದಿಂ ಬೇ ।
ರೊಂದನುಮಾನಿಸದಿದಂ ವಿಚಾರಿಸೆ ಜಗದೊಳ್ ॥ ೪ ॥

ಪ್ರಯೋಜನ

ಅದು ಕಾರಣದಿಂ ತನಗಾ ।
ವುದು ಭವದುಃಖವನೆ ಕೆಡಿಸಿ ನಿತ್ಯ ಚಿದಾನಂ ॥
ದದ ಘನಪದವಂ ಕಾಣಿಪು ।
ದದುವೇ ಗುರುಮತವು ತಿಳಿಯಲದೆ ಸುಶ್ರಾವ್ಯಂ ॥ ೫ ॥

ತನಗಾಯುಸ ವಿನಿತಿಲ್ಲದೆ ।
ಘನ ಮುಕ್ತಿಯನೀವ ಮತವನುಳಿದು ಮಹಾ ಯಾ ॥
ತನೆ ಗೈಯುವರೊಲಿದಾತಂ ।
ಗನುವಕ್ಕುಂ ದ್ರವಿಡಮುಂಡಕನ್ಯಾಯಮಿದುಂ ॥ ೬ ॥

ವಿಷಯಸೂಚನೆ-

ತನ್ನ ನಿಜಸ್ಥಿತಿಯರಿಯದೆ ।
ಮುನ್ನಿನ ಭವದಾಗುಹೋಗುಗಳನಾರೈಯದೆ ॥
ಇನ್ನೊದಗುವ ಗತಿಗಾಣದೆ ।
ಬಿನ್ನಣ ಮುಳ್ಳೆಡೆಯೊಳುಣ್ಣ ಲಂತವನೆಗ್ಗಂ ॥ ೭ ॥

ತನ್ನ ನಿಜಾನು ಸರಣದಿಂ ।
ದುನ್ನಿಸುವದು ವೇದ ದೈವ ಗುರುಕುಲವದರಿಂ ॥
ಮುನ್ನವೆ ತನ್ನಂ ತಿಳಿದೊಡ ।
ವಂ ನಿಜದಿಂ ನೋಡೆ ವೇದ ದೈವ ಗುರು ಜ್ಞಂ ॥ ೮ ॥

ಅದು ಕಾರಣದಿಂ ತಾನಿ ।
ಲ್ಲದೊಡೇನುಂ ತೋರದಾಗಿ ತನ್ನಂ ಮೊದಲರಿ ॥
ವುದು ಪರತತ್ವಂ ಬೇರೆಂ ।
ಬುದು ಘಟಿಸದದೇಕಮೋವೆನಲ್ ಶ್ರುತಿನಿಕರಂ ॥ ೯ ॥

---

ಗೀತೆ ॥ ಶ್ರೀಗುರುವಿಗೆ ಶಿಷ್ಯನು ಪೊಡಮಟ್ಟು । ರಾಗಂ ಮಿಗೆ ಭಕ್ತಿಯೊಳಳವಟ್ಟು ॥ ತನ್ನ ನಿಜಸ್ಥಿತಿ ತಾನೇನೆಂದು । ಮುನ್ನಿನ ಪರಿಭವವೆಂತಾ

ಯ್ತೆಂದು ॥ ಇನ್ನಿದು ಪರಿವದುಪಾಯುವಿದೆಂದು । ನನ್ನಿಯ ನೆನೆಗೀಗಳೆ ಪೇಳೆಂದು ॥ ಬಿನ್ನಯಿಸಿದೊಡೆ ಗುರೂತ್ತಮನೆಂದು । ಮನ್ನಿಸಿದನು ಶಿಷ್ಯನೊಳಿಂತೆಂದು ॥ ಕೇಳೆಲೆ ವಾಸಿಷ್ಠಾದಿಗಳಲ್ಲಿ । ಪೇಳಿದ ತತ್ತ್ವಾರ್ಥವನಿಂದಿಲ್ಲಿ ॥ ಸಿನ ಗರುಪುವೆನಾನೀ ಗೀತೆಯೊಳು । ತನುಜನೆ ಕೇಳ್ವೈ ತಿಳಿದೊಲವಿನೊಳು ॥ ೧ ॥ ಸುಜನ ಶಿರೋಮಣಿ ಶಿಷ್ಯನೆ ನಿನ್ನ । ನಿಜವೂಹಿಸಬಾರದು ಸಂಪನ್ನ ॥ ಅದು ವಚನಕೆ ಗೋಚರಮಲ್ಲೆಂದು । ಅವು ಮಾನಸಕೆ ವಿಷಯಮಲ್ಲೆಂದು ॥ ಪೇಳುತ್ತಂ ಮತ್ತೊಂದನುವಿಂದ । ಕೇಳುಪದೇಶಿಸಬೇಕದರಿಂದ ॥ ಸತ್ಯಂ ಜ್ಞಾನಸುಖಾತ್ಮಕನೆಂದು । ನಿತ್ಯಂ ಪರಿಪೂರ್ಣಂ ತಾನೆಂದು ॥ ದೃಶ್ಯ ವಿಲಕ್ಷಣದಿಂ ಕುರುಹಿಟ್ಟು । ವಶ್ಯವಿದೆಂದೆನೆ ಲಕ್ಷಿಸಿ ಕೊಟ್ಟು ॥ ಮನಸಿಗೆ ಗೋಚರಮೆಂದೆನಿಸುತ್ತ । ಜಾನಿಸಿ ಪೇಳಿತು ಶ್ರುತಿಗಳ ಮೊತ್ತ ॥ ೨ ॥ ನಿಜದೊಳು ಸದಸತ್ತಾಗಿಹ ಶಕ್ತಿ । ಅಜೆಯೆನಿಸುವದದು ಮಾಯಾಶಕ್ತಿ ॥ ಅದುವೆ ಜಗತ್ಕಾರಣಮಾಗಿಹುದು । ಅದರಿಂ ಪ್ರಕೃತಿಯೆನಿಸಿ ಕೊಳುತಿಹುದು ॥ ಸಾನತ್ವಕೆ ಕಾರಣಮಾಗಿಹುದು । ಆನಂದಾಚ್ಛಾದಕಮಾಗಿಹುದು ॥ ಸದ್ಭಾವವನಿಲ್ಲೆನಿಸುತ್ತಿಹುದು । ಚಿದ್ಭಾವವನದು ಮುಸುಕಿರುತಿಹುದು ॥ ಉಳ್ಳ ಬ್ರಹ್ಮವ ನಿಲ್ಲೆನಿಸುವದು । ಇಲ್ಲದ ಲೋಕವನುಂಟೆನಿಸುವದು ॥ ಮಾನ್ಯನೆ ಇದು ನಿನ್ನನೆನೆಮ್ಮಿಹುದು । ಅನ್ಯಾನನ್ಯೇತರಮಾಗಿಹುದು ॥ ೩ ॥ ಸಾಕ್ಷಾನ್ನಿರ್ಲಕ್ಷಣ ವಹ ನೀನು । ಈಕ್ಷಿಸೆ ನಿರ್ಗುಣವಾಗಿಹನೀನು ॥ ಅಜೆಯಿಂ ನಾನಾಗುಣಮಯನೆನಿಸಿ । ನಿಜದಿಂ ಬಹುಲಕ್ಷಣಯುತನೆನಿಸಿ ॥ ನಾನಾಶಕ್ತಿಸಮನ್ವಿತನೆನಿಸಿ । ನಾನಾವಿಧ ಲೀಲಾಸ್ಪದನೆನಿಸಿ ॥ ಸತತಂ ಸರ್ವನಿಯಾಮಕನಾಗಿ । ನುತ ಸರ್ವಗ ಸರ್ವಾತ್ಮಕನಾಗಿ ॥ ಕುಂದದೆ ಸ್ವೇಚ್ಛಾಚರಣೆಯನುಳ್ಳ । ಸ್ಪಂದಾಸ್ಪಂದಾಕಾರವನುಳ್ಳ ॥ ನೀನೇ ಸಕಲ ಜಗನ್ಮಯನಪ್ಪೆ । ಆ ನಿಜದಿಂದೆ ಮಹೇಶನೆನಿಪ್ಪೆ ॥ ೪ ॥ ಏವಂ ವಿಧಗುಣ ಲಕ್ಷಣಮುಳ್ಳ । ಭಾವದ ಕಲ್ಪಿತ ಕಲೆಗಳನುಳ್ಳ ॥ ನಿನ್ನೊಳು ನಾನಾವಿಧಶಕ್ತಿಗಳು । ನಿನ್ನೊಡನಗಲದ ಚಿಚ್ಛಕ್ತಿಗಳು ॥ ಕೆಲವೀ ಬ್ರಹ್ಮಾಂಡಾವಳಿಯಾಗಿ । ಕೆಲವಿಂತೀ ಭೂತಾತ್ಮಕವಾಗಿ ॥ ಸ್ಥಾವರ ಭೇದದ ರೂಪುಗಳಾಗಿ । ತೀವಿದ ಜಂಗಮದಾಕೃತಿಯಾಗಿ ॥ ಏನುಂಟಾದೆಲ್ಲಂ ತಾವಾಗಿ । ನಾನಾವಿಧ ಭೂತಾತ್ಮಕವಾಗಿ ॥ ತೋರ್ಪುವು ನಿನ್ನಿಂ ಬೇರಿಲ್ಲಾಗಿ । ತೋರ್ಪೆಯು ನೀನೆ ಜಗನ್ಮಯನಾಗಿ ॥ ೫ ॥ ಶರನಿಧಿಯಲ್ಲಿ ಜಲಂಗಳವೆಂತು । ತೆರೆಯೆನಿಸುತ್ತಾಡುತ್ತಿಹವಂತು ॥ ಆ ನಿನ್ನಲ್ಲಿಯ ಸಂವಿತ್ತುಗಳು । ಭಾನುಕಳಾನಿಭ

ಚಿಚ್ಛಕ್ತಿಗಳು ॥ ಸಂಕಲ್ಪಾದಿ ಮುಖತ್ವತೆ ವಿಡಿದು। ಭೋಂಕನೆ ಕೆಲವೀ ಭ್ರಮವಂ ಪಡೆದು ॥ ಜೀವರೆನಿಸಿ ವ್ಯವಹರಿಸುತ್ತಿಹವು। ದೇವರೆನಿಸಿ ಮಿಕ್ಕಿ ನಲಿರುತಿಹವು ॥ ಜೀವರೊಳಾಯಿತು ಭೌತಿಕ ದೇಹ। ದೇವರೊಳಾಯಿತು ಮಾಯಿಕ ದೇಹ ॥ ಅವರಿಗುಃಪಾಸ್ಯೋ(ಪಾಸಕರೆಂಬ। ವಿವರಣೆ ಯೆಸೆವುದು ಮಹಿಮಾಲಂಬ ॥೬॥ ಬ್ರಹ್ಮನೆನಿಸಿ ಲೋಕವಸೃಜಿಸುತ್ತ। ಬ್ರಹ್ಮಾಥ್ಯಯ ನಾದಿಯಃನರುಪುತ್ತ ॥ ವಿಷ್ಣುವೆನಿಸಿ ಜಗವಮಂ ಪಾಲಿಸುತ। ವೈಷ್ಣವ ಜನರುಗಳಂ ಲಾಲಿಸುತ ॥ ರುದ್ರನೆನಿಸಿ ಯೋಲೈಸಿ ಕೊಳುತ್ತ। ಕ್ಷುದ್ರ ದಘವನುರೆ ಸಂಹರಿಸುತ್ತ ॥ ಈಶ್ವರನೆನಿಸಿಯೆ ಭಜಿಸಿಕೊಳ್ಳುತ್ತ। ಶಾಶ್ವತಸೌಖ್ಯಂಗಳನೀವುತ್ತ ॥ ಸಾಧುಸದಾಶಿವನಾಗಿ ಜಗತ್ತ। ಬೋಧಿಸಿ ತನ್ನ ಪದವ ನೀವುತ್ತ ॥ ಮತ್ತಾಯಾದೇವರ ಪೆಸರಿಂದ। ಚಿತ್ತದೊಲವನೀವುತ್ತಿಹೆ ಕಂದ ॥೭॥ ಸೇವಕರಿಷ್ಟವನೀವಾ ಶಕ್ತಿ। ಭಾವಿಸೆ ನಿನ್ನೊಳು ಸಂವಿಚ್ಛಕ್ತಿ ॥ ವಾಣಿಯೆನಿಸಿ ವಾಕ್ಸಿದ್ಧಿಯನಿತ್ತು। ಮಾಣದೆ ಲಕ್ಷ್ಮಿಯೆನಿಸಿ ಶುಭವಿತ್ತು ॥ ಗಿರಿಜೆಯೆನಿಸಿ ಸೌಭಾಗ್ಯವನಿತ್ತು। ವರವಂಬಿಕೆಯೆನಿಸುತ್ತೊಲಿದಿತ್ತು ॥ ಯೋಗವನಿತ್ತು ಮನೋನ್ಮನಿಯೆನಿಸಿ। ಭೋಗವನಿತ್ತಾ ಕುಂಡಲಿಯೆನಿಸಿ ॥ ಮತ್ತೆಯು ಬಹುನಾಮಂಗಳನೆರಸಿ। ತತ್ತದಖಿಳರೂಪಿಂದವತರಿಸಿ ॥ ತಾನೇ ಭುವನೇಶ್ವರಿಯಾಗಿಹಳು। ನಾನಾ ಭಕ್ತಿ ಸುಖಪ್ರದೆ ಯಹಳು ॥೮॥ ಶಿವನ ಕಥಾ ಗೋಷ್ಠಿಗೆ ಕಿವಿಗೊಡುವ। ಶಿವನಂ ಪೊಗಳಿ ರಸನೆ ಗುಡಿಯಿಃಡುವ ॥ ಶಿವಮೂರ್ತಿಗಳಂ ನೆನೆವುತ್ತಿರ್ಪ। ಶಿವನೋಲಗದೊಳು ಸಲೆ ನೆಲಸಿರ್ಪ ॥ ಶಿವನಲ್ಲಿಯೆ ಪರಿಚರ್ಯೆವನುಳ್ಳ। ಶಿವನರ್ಚನೆಯೊಳಗಭಿರತಿಯುಳ್ಳ ॥ ಶಿವನಸಿಪದದೊಳ ಗೆರಕತೆಯುಳ್ಳ। ಶಿವ ಸಂಪದದೊಳು ಸುಸ್ಥಿತಿಯುಳ್ಳ ॥ ಶಿವನಿಗೆ ತನು ಮುಖ್ಯವನರ್ಪಿಸುತ। ನವವಿಧ ಸದ್ಭಕ್ತಿಯೊಳಂತಿರುತ ॥ ಭಕ್ತಿಯ ರೂಪಿಂದಾ ಸಂವಿತ್ತು। ಭಕ್ತರೊಳೈದಿಹುದೆಲ್ಲಾ ಹೊತ್ತು ॥೯॥ ಈ ನವವಿಧ ಭಕ್ತಿಯ ಪಥದಿಂದ। ಆ ನಿಖಿಳರ್ಗೀಶ್ವರನೊಲವಿಂದ ॥ ಅಷ್ಟೈಶ್ವರ್ಯಂ ಗುಣವಾರೆಂಬ। ತುಷ್ಟಿಸದಾ ಸರ್ವಜ್ಞತೆಯೆಂಬ ॥ ನಿತ್ಯ ಸುಬೋಧಂ ಬೇರೊಂದೆಂಬ। ಸತ್ಯಮೆನಲ್ ಸ್ವಾತಂತ್ರ್ಯಮಿದೆಂಬ ॥ ತಾನಳಿಯದ ಶಕ್ತಿತ್ವವದೆಂಬ। ನಾನಾ ಶಕ್ತಿತ್ವಂ ತಾನೆಂಬ ॥ ಆರಂಗಮಿವೀಶನ ಪದವಕ್ಕು। ಮೀರಿದ ಭಕ್ತಿಗೆ ಯದೆ ಫಲವಕ್ಕು ॥ ಆ ನಿಜಭಾಗ್ಯಂ ಸಿದ್ಧಿಸಿದವರು। ಸೂನು ತಿಳಿಯೆ ಮುಕ್ತರ್ನೋಡವರು ॥೧೦॥ ಚಿತ್ತದು ಕೇಳನುಭೂತಿಯೆನಿಕ್ಕು। ಮತ್ತದು

ತಾನೇಪವಣವೆನಿಕ್ಕು ॥ ಸತ್ಯವಿದಿಂದ್ರಿಯ ದನುಭವದಿಂದ । ಪ್ರತ್ಯಕ್ಷಮೆನಿಪ್ಪುದು ಪೆಸರಿಂದ ॥ ಕುರುಹಂ ಕಂಡನುಭವಿಪುದರಿಂದ । ಅಱಿಯದನನುಮಾನದ ಪೆಸರಿಂದ ॥ ಆಗಳುನುಡಿವಿಡಿ ದಱಿವುದರಿಂದ । ಆಗಮವೆನಿಸುವದಂತದರಿಂದ ॥ ತನುವಿನುಪಾಧಿಯುಲೇ ಮಾತೃತ್ವ । ನಿನಗಾಗಮಡಲಹುದು ಮೇಯತ್ವ ॥ ಅನುಭವ ಕೆಡಲಾ ಮೂಡೆರನಳಿದು । ಮನವಂ ಮಿಾರಿಹೆ ನುಡಿಗಳನುಳಿದು ॥ ೧೧ ॥ ಅದರಿಂ ನಿನ್ನಿಂ ಬೇರೊಂದಿಲ್ಲ । ವಿದಿತಂ ತಿಳಿಬಂಧಂ ನಿನಗಿಲ್ಲ ॥ ಪ್ರತ್ಯಕ್ಷಾದಿಕಮಂ ನೆರೆ ಬಿಟ್ಟು । ನಿತ್ಯಸುಖದೊಳಿರು ನಿಜವಳವಟ್ಟು ॥ .... .... .... .... ॥ ಶ್ರೀ ॥

ಕಂದ ॥ ಗತಿಯೊಂದನೆಯದಿದಕ್ಕತಿ ।
ಹಿತಮೆನಿಪ ನಿರೂಪಣಂಗಳೇಕಾದಶವಂ ॥

ತತಿಶಯಮಾಗಿರೆ ತಿಳಿಯ ।
ಲ್ಪ್ರತಿಪಾದಿತವಿಲ್ಲಿ ವಸ್ತು ಶಕ್ತಿ ದ್ವಿತಯಂ ॥

ಇಂತು ಪ್ರಥಮಗತಿಯೊಂದರೊಳು ನಿರೂಪಣ ೧೧ಕ್ಕಂ
ಚರಣ ೧೩೬ಕ್ಕಂ ಮಂಗಳಮಸ್ತು.

---

ಶ್ರೀ ಗುರು ಶಂಭುಲಿಂಗಾಯನಮಃ

## ದ್ವಿ ತೀ ಯ ಗ ತಿ .

---

ಸೂತ್ರ ॥ ಕುಂದದೆ ಮಹೇಶ್ವರಾದಿಗ ।
ಳಂದವನಾನಂದದಿಂದೆಪೇಳ್ದೀ ಕ್ರಮದೊಳ್ ॥
ಮುಂದೀಗಳರಿಯೆ ಜಗದೊಲ ।
ವಿಂದಿಳೆವೊದಲಾದ ಭೂತದುದಯವ ನುಸುರ್ವೆಂ ॥

ಗೀತೆ ॥ ಅಲ್ಲಿಯೆ ಮಾಯೋಪಾಧಿಕನಪ್ಪ । ಎಲ್ಲವಬಲ್ಲ ಮಹೇಶನೆನಿಪ್ಪ ॥ ನಿನ್ನಿಚ್ಛೆಯಲೇ ನಭವಾಯಿತ್ತು । ನನ್ನಿಯನಿಲನದರೊಳಗಾಯಿತ್ತು ॥ ವಾಯುವಿನೊಳಗಾ ಪಾವಕವಾಯ್ತು । ವಾಯುಸಖನೊಳಾ ಜಲವಾಯಿತ್ತು ॥ ಆ ಜಲದೊಳು ವಸುಮತಿಯಾಯಿತ್ತು । ರಾಜೀವಜನಹೆ ನೀನಾಹೊತ್ತು ॥ ಬರಿ ಭೂತಂಗಳ್ ವ್ಯವಹಾರಕ್ಕೆ । ನೆರೆ ಸಾಧನವಲ್ಲಾತ್ಮ

ಚಯಕ್ಕೆ ॥ ಆದರಿಂವಖಿಳ ಕರಣ ಬೇಕೆಂದು । ವಿಧಿತಾಂ ಪಂಚೀ ಕರಿಸಿದ ನಂದು ॥ ೧ ॥ ಆ ಭೇದದೊಳರಿ ಭೂತಮಿವ್ವೈದು । ಶೋಭೆಯನ್ನೈದಿದವೊಂ ದೊಂದೈದು ॥ ಸರಿ ಭಾಗದೊಳೊಂದೊಂದೆರಡಾಗಿ । ಎರಡರೊಳೊಂದಂಶವೆ ನೆಲೆಯಾಗಿ ॥ ಉಳಿದರ್ಧಂಶಂಗಳೆ ನಾಲ್ಕಾಗಿ । ತಿಳಿಭಾಗಂ ಬಡೆದವು ಸಮ ನಾಗಿ ॥ ನೆಲೆಯಾಗಿರ್ದಾ ಯಂಶಂಗಳೊಳು । ಉಳಿದ ನಿಜಾಂಶವನಾ ಮಿಕ್ಕ ರೊಳು ॥ ಬೆರಕೆಯನ್ನೈದಿದ ವೊಂದೊಂದೈದು । ವಿರಚಿಸೆ ತತ್ವವಿವಿಪ್ಪತ್ತೈದು ॥ ಈ ತತ್ವಸಮಷ್ಟಿಯೆ ತನುವಾಯ್ತು । ಈ ತೆರನಿಂ ಪಂಚೀಕೃತವಾಯ್ತು ॥ ೨ ॥ ಗಗನಾಂಶವೆ ಜ್ಞಾತೃತ್ವಮದಾಯ್ತು । ಬಗೆಯಲು ಸಂಸೃತಿಗದು ಗುರಿ ಯಾಯ್ತು ॥ ಧರೆಕಳೆವೆರಸಲಹಂಕೃತಿಯಾಯ್ತು । ಪರಿತೋರದ ಮೂಢತೆ ಯದಕಾಯ್ತು ॥ ಜಲಕಳೆ ವೆರಸಲು ಚಿತ್ತವದಾಯ್ತು । ತಿಳಿವಿನ ರೂಪವೆ ನೋಡದಕಾಯ್ತು ॥ ಜ್ವಲನಂ ಬೆರಸಲು ಮತಿಯಾಯಿತ್ತು । ಕಳೆವೆತ್ತಿಹ ರೂಪದಕಾಯಿತ್ತು ॥ ಮರುತಂ ಬೆರಸಲು ಮನವಾಯಿತ್ತು । ನಿರುತಂಚಂಚಲ ವದಕಾಯಿತ್ತು ॥ ಬಗೆ ನಿರವಧಿಯಂತಃಕರಣತ್ವ । ಮಿಗಿಲಹವಿವು ತಿಳಿಯಂಬರ ತತ್ವ ॥ ೩ ॥ ಬರಿ ಮಾರುತನೇ ವ್ಯಾನವದಾಯ್ತು । ನೆರೆ ತಿರ್ಯಗ್ಗತಿಯದ ಕಾಯಿತ್ತು ॥ ಧಾರುಣಿ ಗೂಡಿದೊಡಸುವಾಯಿತ್ತು । ಧಾರಣ ಶಕ್ತಿಯನದು ಪಡೆಯಿತ್ತು ॥ ವಾರಿಯ ಕೂಡಲಪಾನವದಾಯ್ತು । ಭೋರನಧೋ ಮುಖ ಗತಿಯದಕಾಯ್ತು ॥ ಅನಲಂ ಗೂಡಲುದಾನವದಾಯ್ತು । ತನಗದರಿಂ ನುಡಿ ಮೊದಲಾಯಿತ್ತು ॥ ಅಂಬರ ಗೂಡಿ ಸಮಾನವದಾಯ್ತು । ತುಂಬಿದ ತನುವಿ ನೊಳದು ತೋರಿತ್ತು ॥ ಇಲ್ಲಿ ತಿಳಿಯಲಿವಕೀ ಚಲನತ್ವ । ಉಳ್ಳದರಿಂದವೆ ಮಾರುತತತ್ವ ॥ ೪ ॥ ಉದಿತಾಗ್ನ್ಯಂಶವೆ ಲೋಚನವಾಯ್ತು । ಅದು ರೂಪ ಪ್ರತಿಭಾಸಕಮಾಯ್ತು ॥ ಧರಣಿಯನೊಂದಲು ನಾಸಿಕವಾಯ್ತು । ಸುರಭಿಗದು ಪ್ರತಿಭಾಸಕಮಾಯ್ತು ॥ ಉದಕದೊಳೊಂದಲು ರಸನೆಯದಾಯ್ತು । ಅದು ಸುರಸ ಪ್ರತಿಭಾಸಕಮಾಯ್ತು ॥ ಮಾರುತನೊಳಗೊಂದಲು ತ್ವಕ್ಕಾಯ್ತು । ಸ್ಪರ್ಶ ಪ್ರತಿಭಾಸಿಕಮಾಯಿತ್ತು ॥ ಗಗನಂ ಗೂಡಲು ಶ್ರುತಿಯಾಯಿತ್ತು । ಮಿಗೆ ಶಬ್ದ ಪ್ರತಿಭಾಸಕಮಾಯ್ತು ॥ ಎಲ್ಲಾ ವಿಷಯವ ತೋರುವ ಸತ್ವ । ಉಳ್ಳದರಿಂದಿದು ತೈಜಸ ತತ್ವ ॥ ೫ ॥ ಉದಕಾಂಶವೆ ತಿಳಿರಸಮಾಯಿತ್ತು । ಅದು ಜಿಹ್ವೆಗೆ ಗೋಚರಮಾಯಿತ್ತು ॥ ಕ್ಷೋಣಿಯೊಳೊಂದಿ ಸುರಭಿಯಾ ಯಿತ್ತು । ಘ್ರಾಣಕ್ಕದು ಗೋಚರಮಾಯಿತ್ತು ॥ ಶಿಖಿಯಂ ಬೆರಸಲು ರೂಪವ

ದಾಯ್ತು । ಸುಖನೇತ್ರಕ್ಕದು ದೃಶ್ಯತೆಯಾಯ್ತು ॥ ಪೊಕ್ಕನಿಲನೊಳಾ ಸ್ಪರ್ಶವ ದಾಯ್ತು । ತ್ವಕ್ಕಿಂಗದು ವೇದ್ಯತೆಯಾಯಿತ್ತು ॥ ತವೆನಭ ವೆರದಾ ರವವಾ ಯಿತ್ತು । ಶ್ರವಣಕ್ಕದು ವೇದ್ಯತೆಯಾಯಿತ್ತು ॥ ಎಲ್ಲರೊಳುಂ ಮಿಗೆ ಸೊಗ ಯಿಪ ಸತ್ವ । ಉಳ್ಳುದರಿಂದವೆಯಪ್ಪಿನ ತತ್ವ ॥೬॥ ಒದವಿ ಧರಾಂಶವೆ ಗುದವಾಯಿತ್ತು । ಅದಕೆ ವಿಸರ್ಜನವೇ ಕ್ರಿಯೆಯಾಯ್ತು ॥ ಸಲಿಲದೊಳೊಂ ದಲು ಗುಹ್ಯವದಾಯ್ತು । ಸಲೆ ಸುಖಿಸುವ ಕರ್ಮವೆಯದಕಾಯ್ತು ॥ ಪದವಾ ಶಿಖಿಯೋಗದೊಳಾಯಿತ್ತು । ಆದಕಾ ಗಮನವೆಕ್ರಿಯೆಯಾಯಿತ್ತು ॥ ಪುದಿ ದ ನಿಲನೊಳಾ ಕರವಾಯಿತ್ತು । ಅದಕಾದಾನವೆ ಕ್ರಿಯೆಯಾಯಿತ್ತು ॥ ಪೊಂದಿ ಗಗನದೊಳಗಾ ವಾಕ್ಕಾಯ್ತು । ಅಂದದಕಾನುಡಿಯೇ ಕ್ರಿಯೆಯಾಯ್ತು ॥ ಎಲ್ಲದರಂಶವ ಧಾರಣ ಸತ್ವ । ಉಳ್ಳುದರಿಂದವೆ ವಸುಧಾ ತತ್ವ ॥೭॥ ಅಹ ಮುಂ ಪ್ರಾಣಂ ಘ್ರಾಣಂ ಗಂಧ । ಸಹಿತಂ ಧರೆಯಂಶಂಗಳ ಬಂಧ ॥ ಚಿತ್ತ ವಪಾನಂ ರಸನೆಯು ಗುಹ್ಯ । ಪತ್ತಿ ಜಲಾಂಶಂಗಳವೆನಲೂಹ್ಯ ॥ ಬುದ್ಧಿಯು ದಾನಂ ರೂಪಂ ಪಾದ । ಒದ್ದವೆನಿಪ ಶಿಖಿಕಳೆಗಳ ಭೇದ ॥ ಮನವುಂ ತ್ವಕ್ಕುಂ ಸ್ಪರ್ಶಂ ಪಾಣಿ । ಎನಿಪವು ವಾಯು ಕಳಾಯುಚ್ಛ್ರೇಣಿ ॥ ಮತ್ತೆ ಸಮಾನಂ ಶ್ರುತಿ ರವ ವಾಕ್ಕು । ಪತ್ತಿದ ನಭದ ಕಳೆಗಳೆನಿಸಿರ್ಕು ॥ ಆಯಾ ಕಳೆಗಳ ಬೆರ ಸುವ ಸತ್ವ । ಪಾಯು ರಸಾಕ್ಷಿನ್ಯಾನಜ್ಞತ್ವ ॥೮॥ ಸ್ಥೂಲದೊಡಲೊಳಿವು ನೀನೆಡೆ ಗೊಂಡು । ವೀಲಿಂದ್ರಿಯದೊಳು ವಿಷಯವ ಕಂಡು ॥ ವ್ಯವಹರಿಸು ವದೇ ಜಾಗರವಕ್ಕು । ಅವನರಿವಾತನೆ ವಿಶ್ವನೆನಿಕ್ಕು ॥ ಚರಿಸುತ್ತೀ ಪರಿಯೊಳು ಪೊರಗಿರ್ದ । ಕರಣವಡಗಿ ವಾಸನೆ ವೆರಸಿರ್ದ ॥ ಮನದಾ ವ್ಯವಹಾರವೆ ಕನ ಸಕ್ಕು । ನಿನಗದರೊಳು ತೈಜಸ ವೆಸರಕ್ಕು ॥ ತಮದೊಳು ಮನ ಮುಳು ಗಿಹುದೇ ಸುಪ್ತಿ । ಸಮನಿಸೆ ಕಾರಣ ದೇಹ ಕ್ಲುಪ್ತಿ ॥ ಅಲ್ಲಿ ನಿನಗೆ ಪ್ರಾಜ್ಞತೆ ಪೆಸರಕ್ಕು । ಬಲ್ಲನೆ ಜೀವತೆ ನಿನಗಿಂತಕ್ಕು ॥೯॥ ಎಂತು ನೆನಸು ಕನಸಿ ನೊಳರಿವುಂಟು । ಅಂತಾ ಸುಪ್ತಿಯೊಳ್ನಿನಗರಿವುಂಟು ॥ ಇಲ್ಲದಿರಲು ನಿದ್ರೆಯ ನೆಚ್ಚತ್ತು । ಇಲ್ಲಿ ನೆನಹು ನಿನಗೆಂತುದಿಸಿತ್ತು ॥ ಏನುವನರಿಯದೆ ಸುಖನಿದ್ರೆ ಯೊಳು । ಆನಿರ್ದೆನು ಎಂಬೀ ನೆನಹುಗಳು ॥ ಅನುಭವಿಸದೆ ನೆನೆಯಲಿಕಳ ವಲ್ಲ । ಎನಿಪುದರಿಂ ತಾನಲ್ಲಿಯೆ ಬಲ್ಲ ॥ ತನುದಸುಖದ ನೆನಹುಗಳವೆಯಾಗಿ । ಸಮನಿಸದಲ್ಲಿ ಕರಣವಿಲ್ಲಾಗಿ ॥ ನಿನಗದರಿಂ ಸಿದ್ಧಂ ಸದ್ರೂಪು । ಘನ ಚಿತ್ಸುಖ ಜ್ಯೋತಿರ್ಮಯ ರೂಪು ॥೧೦॥ ನಿನ್ನೊಳು ಶಬ್ದ ಬ್ರಹ್ಮವೆನಿಪ್ಪ ।

ಮುನ್ನಾಯಿತು ಸರ್ವಾತ್ಮಕವಪ್ಪ ॥ ಪ್ರಣವಂ ಕೇಳದರಿಂ ಗುಣ ವರ್ನ । ಗಣಿಸಲು ಮೂರವರಿಂ ಬಹುವರ್ನ ॥ ವೇದ ಪುರಾಣಾಗಮವದರಿಂದ । ಚೋದಿತ ಮತಭಾಷೆಗಳದರಿಂದ ॥ ಅವು ವಿಡಿದಾಚರಣೆಯ ಫಲದಿಂದ । ವಿವಿಧ ಚರಾಚರವಹ ರೂಪಿಂದ ॥ ಸಕಲ ವಿಕಲ ತತ್ವಾತ್ಮಕವಾಗಿ । ಸಕಲಾತ್ಮಗಳಾಗಿಹ ನಿಜವಾಗಿ ॥ ಇನಿತೆಲ್ಲವು ನಿನ್ನಯ ಪೆಸರಿಂದ । ಜನಿಸಿದ ತತ್ವಾರ್ಥವ ತಿಳಿಯೆಂದ ॥ ೧೧ ॥ ಕ್ಷಣಭಂಗುರವಹ ಕನಸಿನ ಬಾಳು । ಗಣಿಸಲ್ಕೃತವರ್ಷ ಭ್ರಮೆ ಕೇಳು ॥ ಅಂತೀ ಬಗೆ ದೋರದ ನಿನ್ನಲ್ಲಿ । ಸಂತತವಿಪ್ಪುದು ಪುಸಿ ತಿಳಿದಲ್ಲಿ ॥ .... .... .... ॥ ಶ್ರೀ ॥

ಕಂದ ॥ ಗತಿಯೆರಡನೆಯದಿದಕ್ಕತಿ ।
ಹಿತಮೆನಿಪ ನಿರೂಪಣಂಗಳೇಕಾದಶವಂ ॥
ತತಿಶಯಮಾಗಿರೆ ತಿಳಿಯ ।
ಲ್ಪ್ರತಿಪಾದಿತವಿಲ್ಲಿ ಭೂತಪಂಚೀಕರಣಂ ॥

ಇಂತು ಗತಿ ೨ಕ್ಕಂ ನಿರೂಪಣ ೨೨ಕ್ಕಂ ಚರಣ ೨೦೨ಕ್ಕಂ ಮಂಗಳಮಸ್ತು.

---

ಶ್ರೀಗುರುಶಂಭುಲಿಂಗಾಯನಮಃ

## ತೃ ತೀ ಯ ಗ ತಿ .

---

ಸೂತ್ರ ॥ ಸಾದರದಿಂ ಜೀವತ್ವದ ।
ಭೇದವನಿಂತೊರೆದೆನಿನ್ನು ಮಹದಹಮಾದಿಕ ॥
ವಾದಂದವ ನರುಪುನೆನಿದ ।
ನೋದಿ ವಿಚಾರಿಪುದು ಸಾಧಕರ್ನಲವಿಂದಂ ॥

ಗೀತೆ ॥ ಸತ್ಯಂ ಸಂವಿತ್ಸುಖಮಯನಪ್ಪ । ನಿತ್ಯಂ ನಿನ್ನ ನಿರೀಕ್ಷಣವಪ್ಪ ॥ ನಿಜವಹ ಶಕ್ತಿಯೆ ಕಾಲವೆನಿಕ್ಕು । ನಿಜವದು ಪ್ರಕೃತಿಗೆ ಚೋದನಮಕ್ಕು ॥ ಸುಕೃತಿಯೆ ಕಾಲದಿ ಬೋಧಕಮಾದ । ಪ್ರಕೃತಿಯೆ ಕಳೆ ಸರ್ವೋನ್ಮುಖವಾದ ॥ ಬಿಂದುವೆನಿಸಿ ವಿರಳಂ ಬಡೆಯುತ್ತ । ಅಂದವ್ಯಕ್ತ ನಿನದಮಾಗುತ್ತ ॥ ಮುಂದಹ ತ್ರಿಗುಣಂಗಳ ಭೇದವನು । ಒಂದಿ ವಿಕರಿಸಿ ಮಹದ್ರೂಪ

ವನು ॥ ತಳೆಯಿತ್ತಾ ಪ್ರಕೃತಿಗೆ ನಿಜಧಾಮು । ತಿಳಿ ನೀನದರಿಂದಲೆ ನಿಸ್ಸೀಮು ॥೧॥ ಗುಣ ಗರ್ಭಾತ್ಮಕವಾದ ಮಹತ್ತು । ಗುಣ ಭೇದಂಗಳ ನೈದಿದ ಹೊತ್ತು ॥ ಪರಿವರ್ಧಿಸಿ ಪೂವದು ಮಿಡಿಯಾಂತು । ತಿರುಳುಂ ಸಿಪ್ಪೆ ಗಳಹವೆಂತಂತು ॥ ಪೂರಯಿಸುತ್ತಂತದು ಮೂರಾಗಿ । ಘೋರಂ ಶಾಂತಂ ಮೂಢತೆಯಾಗಿ ॥ ರಾಜಸ ಸಾತ್ವಿಕ ತಾಮಸವೆಂದು । ರಾಜಿಸಿ ಗುಣ ಭೇದಂ ದಳೆದಂದು ॥ ಈ ಕಲ್ಪನೆಗಂತದು ತಾವಾದಿ । ವೈಕಾರಿಕ ತೈಜಸ ಭೂತಾದಿ ॥ ಎನಿಪಾ ತ್ರಿವಿಧಾಹಂಕೃತಿಯಾಯ್ತು । ಜನಿಸಿ ಮಹತ್ತಿಗದಾವೃತಮಾ ಯ್ತು ॥೨॥ ಶಾಂತವೆನಿಪ ಸಾತ್ವಿಕದೊಂದಂದ । ಅಂತದು ತೈಜಸವಹ ಹಮ್ಮಿಂದ ॥ ಪೊಳೆವುದು ಮನನೆಂಬಿಂದ್ರಿಯವೊಂದು । ಬಳಿಕಿಂದ್ರಿಯ ದೇವತೆ ಹನ್ನೊಂದು ॥ ದಿಕ್ಕನಿಲ ರವಿ ವರುಣಾಶ್ವಿನಿಗಳು । ಅರ್ಕನು ಮಿಂದ್ರಂ ಮೃತ್ಯು ವಿಧಿಗಳು ॥ ಮಿತ್ರಂ ಮತ್ತೊಬ್ಬಂ ಮೃಗಧರನು । ಪುತ್ರನೆ ಹನ್ನೊಂದಧಿದೇವ ರನು ॥ ಸಾತ್ವಿಕ ಹಮ್ಮಿನ ಕಾರ್ಯಮಿದೆಂದು । ತತ್ವಜ್ಞರ್ನಾಯಾಮಯ ವೆಂದು ॥ ಪೇಳ್ವರ್ ಮನದ ವಿಕಲ್ಪವಿದೆಲ್ಲ । ಕೇಳದರಿಂ ನಿತ್ಯಂ ನಿನಗಿಲ್ಲ ॥೩॥ ಘೋರವೆನಿಪ ರಾಜಸವದರಿಂದ । ಭೋರನೆ ವೈಕಾರಿಕವದರಿಂದ ॥ ಶ್ರವಣಾ ತ್ವಕ್ಕಂ ಚಕ್ಷುವೆನಿಪ್ಪ । ವಿವರಿಸೆ ಜಿಹ್ವಾಘ್ರಾಣವೆನಿಪ್ಪ ॥ ಆ ವಾಕ್ಕಂ ಕರ ಪಾದವೆನಿಪ್ಪ । ಭಾವಿಸೆ ಗುಹ್ಯಂ ಪಾಯುವೆನಿಪ್ಪ ॥ ಈ ನಿಬಿಳದೊಳಾ ಮುನ್ನಿ ನವೈದು । ಜ್ಞಾನೇಂದ್ರಿಯವಾ ಬಳಿಕಿನವೈದು ॥ ತವೆ ಕರ್ಮೇಂದ್ರಿಯವಿವು ಜನಿಸಿದವು । ಅವು ಜೀವರ್ಗೆ ಕರಣವೆನಿಸಿದವು ॥ ಬೇರವಕಳುವೆ ಯರಸಲಿ ಲ್ಲಾಗಿ । ತೋರುತಿಹವು ನಿನ್ನೊಳು ನೆಲೆಯಾಗಿ ॥೪॥ ಮೂಢವೆನಿಪ ಭೂತಾದ್ಯಹಮಿಂದ । ರೂಢಿರವಂ ಮಾತ್ರಾರೂಪಿಂದ ॥ ನೆಗಳುತ್ತದರಿಂದವೆ ನಭವಾಯ್ತು । ಬಗೆಯುಲದಕೆ ಶಬ್ದವೆ ಗುಣವಾಯ್ತು ॥ ಆ ಗಗನವೆ ಮಹದಹ ಮುಗಳಿಂದ । ಆಗಳೆಯಾವೃತಮಾಯ್ತದರಿಂದ ॥ ಸ್ಪರುಶವೆ ತನ್ಮಾತ್ರಾ ರೂ ಪಿಂದ । ಪಿರಿದಾಯಿತು ಮಾರುತನದರಿಂದ ॥ ಜೇರಾಸ್ಪರ್ಶವದಕೆ ಗುಣ ವಾಯ್ತು । ಮೂರಾವರಣವ ನುಳ್ಳುದಾಯ್ತು ॥ ರೂಪವೆ ತನ್ಮಾತ್ರಾ ರೂಪಿಂದ । ದೀಪಿಸಿತಗ್ನಿಯು ಕೇಳದರಿಂದ ॥೫॥ ಅದಕಾ ರೂಪವೆ ಗುಣವಾಯಿತ್ತು । ಅದು ಚತುರಾವರಣಂ ದಳೆಯಿತ್ತು ॥ ರಸವೇ ತನ್ಮಾತ್ರಾರೂಪಿಂದ । ಪಸರಿಸಿ ತಾಗಳೆ ಜಲಹದರಿಂದ ॥ ಅದಕಾ ರಸವೇ ಗುಣವಾಯಿತ್ತು । ಅದು ಪಂಚಾ ವರಣಂ ದಳೆಯಿತ್ತು ॥ ಗಂಧವೆ ತನ್ಮಾತ್ರಾ ರೂಪಿಂದ । ಬಂಧುರವಾಯಿತು ಧರೆ

ಯವರಿಂದ ‖ ತೋರಲು ಗಂಧವವಕೆ ಗುಣವಾಯ್ತು । ಅರ್ಃವರಣವ ನದು ದಳೆಯಿತ್ತು ‖ ಅದರಿಂ ಭೌತಿಕ ತನುವಾಯಿತ್ತು । ಅದು ಸಪ್ತಾವರಣಂ ದಳೆಯಿತ್ತು ‖ ೬ ‖ ನಭ ವನಿಲಾದಿಗಳಂ ತೀವಿಹುದು । ಶುಭ ರವವದರಿಂದವಕಾಗಿಹುದು ‖ ಮರುತನುಳಿದ ಮೂರಂ ತೀವಿಹುದು । ಸ್ಪರುಶನವದರಿಂದವಕಾಗಿಹುದು‖ ಆ ಪಾವನಕನೆರಡಂ ತೀವಿಹುದು । ರೂಪದರಿಂದವಕುಂಟಾಗಿಹುದು‖ ವಸುಧೆಯನುದಕಂ ತೀವಿರುತಿಹುದು । ರಸವದರಿಂದದಕುಂಟಾಗಿಹುದು ‖ ಅದು ಕಾರಣ ವಂಬರ ಮೊದಲಾಗಿ । ವಿದಿತಂ ಗಂಧವತಿಯೆ ಕಡೆಯಾಗಿ ‖ ಒಂದೆರಡುಂ ಮೂರುಂ ನಾಲ್ಕೈದು । ಪೊಂದಿರೆ ಗುಣಗಳ್ಭೂತಮಿನ್ವೈದು ‖ ೭ ‖ ಸನ್ನುತ ಸಚ್ಚಿಲ್ಲಕ್ಷಣಮುಳ್ಳ । ನಿನ್ನಿಂನಿಜವನೆ ನೆಮ್ಮಿಹವೆಲ್ಲ ‖ ಶ್ರವಣೇಂದ್ರಿಯದೊಳ್ತಳಿ ನಭಮಿರ್ಕು । ತವೆಚರ್ಮದೊಳಾ ಮಾರುತನಿರ್ಕು ‖ ಎಸೆವಾಲೋಚನದೊಳು ಶಿಖಿಯಿರ್ಕು । ರಸನೇಂದ್ರಿಯದೊಳು ಜಲಮಿರುತಿರ್ಕು ‖ ಅಂತಾನಾಸಿಕದೊಳು ಧರೆಯಿರ್ಕು । ಇಂತಿಂದ್ರಿಯದೊಳು ಭೂತಮಿವಿರ್ಕು ‖ ನಿಜಮನದೊಳು ಶಬಳತೆಯಂ ಬಡೆದು । ರುಜುವೆನಿಪಿಂದ್ರಿಯ ಪಥದೊಳ್ನಡೆದು ‖ ಅನಿತು ವಿಷಯವೆಲ್ಲವನೀನರಿವೆ । ತನುಜನೆ ನೀನದರಿಂ ಬರಿಯರಿವೆ ‖ ೮ ‖ ಪ್ರಕೃತಿಗೆ ಸಹಜಾಶ್ರಯಮಾಗಿರ್ದ । ಸುಕೃತಿಯೆ ನಿನ್ನೊಳು ಪೊಳೆವುತ್ತಿರ್ದ ‖ ತವೆ ಮೊದಲೆನಿಸುವ ಮಹದಹಮುಗಳು । ರವವಾದಿಗಳಹ ತನ್ಮಾತ್ರೆಗಳು ‖ ಪ್ರಕೃತಿಯ ವಿಕೃತಿಗಳೆನಿಸುವಿ ವೇಳು । ಪ್ರಕೃತಿಗಳೆಂದೆನಿಸಿರ್ಪವು ಕೇಳು ‖ ಅವರಿಂದುದಿಸಿದ ಭೂತಮಿವೈದು । ವಿವಿಧವೆನಿಸುವಿಂದ್ರಿಯ ವೀರೈದು ‖ ಮನವೆಂಬಧಿಕೇಂದ್ರಿಯಮಿಹುದೊಂದು । ಇನಿತನು ಷೋಡಶ ವಿಕೃತಿಗಳೆಂದು ‖ ಪೇಳುವ ರಿವುಜಗದಾಕಾರವನು । ತಾಳಿಹವೆಂಬುದನರಿಯೆಲಿಸೂನು ‖ ೯ ‖ ಮಾಯೆಯ ಪೊಳವು ಮಹತ್ತೆನಿಸಿರ್ಕು । ಒಯ್ಯಾರದಿ ಹಮ್ಮದರೊಳು ತೋರ್ಕು ‖ ಆ ಮೂಲದ ಹಮ್ಮೆ ಮನವೆನಿಸಿರ್ಕು । ಆ ಮನವದು ತಾಂ ಬ್ರಹ್ಮವೆನಿಕ್ಕು ‖ ಬಗೆಯಾ ಬ್ರಹ್ಮಂಗೊಡಲಾಗಿರ್ಕು । ಗಗನಾದಿಗಳದರಿಂ ಪುಟ್ಟಿರ್ಕ ‖ ಈ ತೆರದಿಂದೆ ಜಗತ್ತಿನ ಹುಟ್ಟು । ಜಾತಾಜಾಂಡಕ್ಕದು ಸಮಕಟ್ಟು ‖ ಶರನಿಧಿಯೊಳು ಬುದ್ಬುದವಾದಂತೆ । ನಿರವಧಿಯಹ ನಿಜದೊಳಗೋರಂತೆ ‖ ತೋರಿದಜಾಂಡಗಳಸಂಖ್ಯಾತ । ತೋರಿಯಡಗುತಿಹವೆಲೆ ವಿಖ್ಯಾತ ‖ ೧೦ ‖ ವಿಸ್ಮಯವೊಂದಿದೆ ಕೇಳ್ನಿನಿಲ್ಲಿ । ಅಸ್ಪಂದಾತ್ಮಕವಹ ನಿನ್ನಲ್ಲಿ ‖ ಬಗೆಯೆಂದೆನಿಪೊಂದತ್ತಿಯ ಮರನು । ಮಿಗೆ ಪಸರಿಸಿ ಮಸಗಿತ್ತಾ

ಮರನು॥ ಕಾಲವೆನಿಪ ಘಾಳಿಯೊ ಳೊಲೆವುತ್ತ । ಮೇಲೆ ನಿಜಾಶ್ರಯುವನೆ ಮುಸು
ಗುತ್ತ ॥ ಚಿತ್ತದ ಹಂಮಿನ ಬೇರುಗಳಿಂದ । ಮತ್ತೆ ಹೃಷೀಕವೆನಿಸ ತಳಿರಿಂದ ॥
ಜಾತಾಜಾಂಡ ಫಲಾವಳಿಯಿಂದ । ಭೂತವೆನಿಸುತೊಳಗಿಹ ನೊರಜಿಂದ ॥
ಮಸಗಿತು ಭೂತೋಪಾಧಿಗಳಲ್ಲಿ । ಎಸೆದುದು ಚಿತ್ತಖಿಳಾತ್ಮತೆಯಲ್ಲಿ ॥ ೧೧ ॥
ಅಂಡಜಮುದ್ಭಿಜ ಸ್ವೇದಜವೆಂದು । ಪಿಂಡಜಮಿನ್ನು ಜರಾಯುಜವೆಂದು ॥
ಈ ತೆರದಿಂದೆ ಚತುರ್ವಿಧವಹವು । ಭೂತಗಳಿಂತೊಗೆದಡಗುತ್ತಿಹವು ॥ ಶ್ರೀ ॥

ಕಂದ ॥ ಗತಿ ಮೂರನೆಯದಿದಕ್ಕತಿ ।
ಹಿತಮೆನಿಸ ನಿರೂಪಣಂಗಳೇಕಾದಶಮಂ ॥
ತತಿಶಯಮಾಗಿರೆ ತಿಳಿಯಲ್ ।
ಪ್ರತಿಪಾದಿತಮಿಲ್ಲಿ ಗುಣವಿಭೇದ ವಿಕಾರಂ ॥

ಅಂತು ಗತಿ ೩ಕ್ಕಂ ನಿರೂಪಣ ೩೩ಕ್ಕಂ ಚರಣ ೪೦೮ಕ್ಕಂ
ಮಂಗಳಮಸ್ತು.

---

ಶ್ರೀ ಗುರು ಶಂಭುಲಿಂಗಾಯನಮಃ
## ಚತುರ್ಥ ಗತಿ

---

ಸೂತ್ರ ॥ ತಿಳಿಯಲ್ಸಮಸ್ತ ತತ್ವಂ ।
ಗಳ ನೊಲವಿಂದಿಂತು ಪೇಳ್ದ ತಾತ್ವಿಕ ಭೇದಂ ॥
ಗಳನೆಲ್ಲರರಿವತೆರದಿಂ ।
ಬಳಿಕೀಗಳನೂನ ವೇದ ಮತದಿಂದುಸುರ್ವೆಂ ॥

ಗೀತೆ ॥ ಜೀವರಿಗಾತೆರನಾದೊಡಲುಗಳು । ಭಾವಿಸೆ ನಾನಾವಸ್ಥಾದಿ
ಗಳು ॥ ಅಲ್ಲಿ ಧರೆಯನೊಡೆದೊಗೆಯುತ್ತಿರ್ಪ । ಎಲ್ಲಾ ಭೂತ ವಿಕೃತಿಯಿಂ
ತೋರ್ಪ ॥ ತರು ಲತೆ ಬಹುವಿಧ ಗುಲ್ಮಾದಿಗಳು । ಪರಿಕಿಸಲುದ್ಭಿಜವಹಜಾತಿ
ಗಳು ॥ ಅವನಿ ಜಲಾಗ್ನಿಯ ಪರಿಪಾಕದೊಳು । ಬೆವರಿನ ಪರಿಪಾಕದ ಭೇದ
ದೊಳು ॥ ಆಕಸ್ಮಿಕವಹ ಜೀವಾದಿಗಳು । ಯೂಕ ಪಿಪೀಲಿಕ ಮಶಕಾದಿಗಳು ॥
ಕ್ಷಣ ಭಂಗುರವಹ ಕೀಟಾದಿಗಳು । ಗಣಿಸಲ್ ಸ್ವೇದಜವಹ ಜಾತಿಗಳು ॥ ೧ ॥
ತತ್ತಿಯೆನಿಸಿ ಮೊದಲುದರದೊಳುದಿಸಿ । ಮತ್ತೊಡೆದಾಯಾ ತನುವಂ ಧರಿಸಿ ॥

ತಾನಿಹ ಪಕ್ಷಿ ಭುಜಂಗಾದಿಗಳು । ನೀನರಿ ಮಗನೆ ಮಸಳಿ ಮೀನಗಳು ॥ ಅಂಡಜ ಜಾತಿಯವೆನಿಸುತ್ತಿಹವು । ಪಿಂಡದ ಗುಣಭೇದಂ ದಳೆದಿಹವು ॥ ರಮಣಿಯ ಪುಂಯೋಗವ ಕಳೆ ಗೂಡಿ । ಕ್ರಮಕಾಲದೊಳಂಗಂಗಳ್ಮೂಡಿ ॥ ಬೆಳೆಯುತ್ತಲ್ಲಿ ಜರಾಯುಜವೆನಿಸಿ । ಬಳಿಕ ಜರಾಯುವನೊಡೆವೃತ್ತುದಿಸಿ ॥ ಇಲ್ಲಹ ನರ ಪಶು ಮಹಿಷಾದಿಕವು । ಎಲ್ಲಂ ತಿಳಿಯೆ ಜರಾಯುಜವಹವು ॥೨॥ ಆ ಜೀವಿಗಳಿಗೆ ಜನಿಯಪ್ಪಂದು । ಯೋಜಿಸಿ ಬಾಹ್ಯ ಮಲಂಗಳವಂದು॥ ಪತಿಯ ಮಲಂ ಕಾರ್ಮಿಕ ಮಲವೆಂದು । ಸತಿಯ ಮಲಂ ಮಾಯಾಮಲ ವೆಂದು ॥ ಕೇಳು ದ್ವಯವಾಣವ ಮಲವೆಂದು । ಪೇಳುವ ರವು ಕೂಟಂ ಬಡೆದಂದು ॥ ತೋರ ತನು ಸ್ಥಿತಿಯಾಗಳೆಯಕ್ಕು । ಆ ರೇತೋಽಧಿಕದಿಂ ಗಂಡಕ್ಕು ॥ ರಮಣಿಯ ರುಧಿರಂ ಮಿಗೆ ಪೆಣ್ಣಕ್ಕು। ಸಮಸಂಬಂಧವೆ ಷಂಡನೆ ನಿಕ್ಕು ॥ ಗಣ್ಯದಘವು ತನು ಪಾಪದಿಂ ಬಕ್ಕು । ಪುಣ್ಯ ಫಲದಿ ಪೂರ್ಣಾಂಗಮು ದಕ್ಕು ॥೩॥ ತ್ವಕ್ಕು ರುಧಿರ ಮಾಂಸಂ ತಾಯಂಶ । ಅಕ್ಕಲು ನರ ಮಜ್ಜೆಯು ಪಿತನಂಶ ॥ ಇವು ತಾವೇ ಷಟ್ಕೋಶವೆನಿಕ್ಕು । ಇದರ ಸಮುಷ್ಟಿಯೆ ದೇಹ ಮೆನಿಕ್ಕು ॥ ಮಾತಾಪಿತರುಂಡನ್ನ ರಸದೊಳು । ರೇತಮುದಿಸಲಂತಾ ದೇಹ ದೊಳು ॥ ಆರುಂ ಕೋಶಂ ರೇತಮಿವೇಳು । ನೀರನೆ ನೋಡಿಂತಿವು ಧಾತು ಗಳು ॥ ಆಗಳೆ ಕೇಳಾ ರತಿಮಥನದೊಳು । ಯೋಗವಹುದು ರೇತಂ ರಕ್ತ ದೊಳು ॥ ಮತ್ತಾ ಯೋಗವಿಧಂ ತನುವಿಂಗೆ । ಬಿತ್ತದರಿಂ ಸಂಸ್ಕೃತಿ ಜೀವಂಗೆ ॥೪॥ ಮಲವೆರಡವು ಬೆರದೊಂದು ದಿನಕ್ಕೆ । ಕಲಲಂ ಬುದ್ಬುದ ವೈದುದಿನಕ್ಕೆ । ಪತ್ತುದಿನಕೆ ಕಂದಾಕೃತಿಯುದಕೆ । ಮತ್ತೆಯು ದಿನದಶ ಪಂಚಕ ಬಳಿಕೆ ॥ ತಲೆ ತೋಳ್ಗೊಡೆ ಸರ್ವಾಂಗ ತತಿಗಳು । ಬೆಳೆವವು ಚೌಮಾಸಾಂತಗತಿಯೊಳು ॥ ನವಿರ ಕುಳಿಗಳೆಲುಗಳು ಚಲನೆಗಳು । ಸವನಿಪ ವೈದಾರೇಳ್ಮಾಸದೊಳು ॥ ಪೂರ್ವ ಸ್ಮರಣಂ ಜನಿಪಾಯಾಸ । ಸಾರ್ವಮ ದೆಂಟು ನವ ಕ್ರಮಮಾಸ॥ ಸೂತಿ ಮರುತನಿಂ ದಿದುಜನಿಯಕ್ಕು। ಈ ತೆರದಿಂ ಪಿಂಡೋದಯವಕ್ಕು ॥೫॥ ಭೂತಾಂಶಕಗುಣ ಪಂಚೀಕರಿಸಿ । ಆ ತನುವಿ ನೊಳಿರುತಿಹವಾವರಿಸಿ॥ ನರವೆಲು ಮಾಂಸಂ ರೋಮಮುತ್ವಕ್ಕು । ಧರೆಯ ಕಠಿಣ ಗುಣವಿಂತೈದಕ್ಕು ॥ ಜಲ ಕಫ ಮೂತ್ರಂ ರಕ್ತಂ ಪಿತ್ತ । ಜಲದ ಗುಣಗಳಿಂ ತೈದರ ಮೊತ್ತ ॥ ಕ್ಷುದೆ ತೃಷೆ ನಿದ್ರಾಲಸ್ಯಂ ಸಂಗ । ವಿಧಿಸಿದ ಶಿಖಿ ಗುಣ ಮಿಂತೈದಂಗ ॥ ಧರಿವ ನಿಲುವ ನಡುಗುವಾಲುಂಘಿಸುವ । ಚರಿಸುವ ಗುಣವೈದ

ನಿಲಸೊಳಿಸವ ॥ ಅರಿವರ್ಗದ ಕಡೆಯಣ ದುಳಿದೈದು। ಅರಿ ಸಭ ಗುಣವಿಂತಿಪ್ಪ ತ್ರೈದು ॥೬॥ ಪಂಚೀಕರಿಸಿದ ಭೂತದೊಳಾದ। ಮುಂಚಿ ನಜಾಂಡದ ಭುವನದೊಳಾದ॥ ಅನ್ನದ ವಿಕೃತಿಯೆನಿಸುವೀ ದೇಹ। ಉನ್ನಿಸೆ ಭಾವ ವಿಕಾರ ಸಮೂಹ॥ ಪೊಟ್ಟೆಯೊಳುಂಟೆಂ ಬಸ್ತಿತೆಯೊಂದು। ಪುಟ್ಟುವ ಜಾಯತೆ ಯೆಂಬುವದೊಂದು॥ ಶಿಶುರೂಪಿನ ಪರಿಣಮತೆಯದೊಂದು। ಪೊಸ ಜವ್ವನದ ವಿವರ್ಧತೆಯೊಂದು ॥ ಷುಪ್ಪಿನಪಕ್ಷೀಯತೆ ಮತ್ತೊಂದು। ತಪ್ಪದೆ ಕೆಡುವ ವಿನಶ್ಯತೆಯೊಂದು ॥ ಇವು ಷಡ್ಭಾವ ವಿಕಾರವನಿಕ್ಕು॥ ಇವರಿಂ ಬಹು ಬಾಧೆಗಳುಂಟಕ್ಕು ॥೭॥ ತನು ತೊಂಭತ್ತಾರಂಗುಲದುದ್ದ। ಎನಿಸುವ ಪವಣವಿದಾಗಮ ಸಿದ್ಧ॥ ಮೂಲಾಧಾರವೆ ತಿಳಿ ತನು ಮಧ್ಯ। ಬಾಲನೆ ಯದು ಗುದ ಗುಹ್ಯದ ಮಧ್ಯ ॥ ಅದರಿಂ ಮೇಲೆ ನವಾಂಗುಲಮಿತಿಯೆ। ಪದ ಮದು ನಾಭಿಯೊಳಿಪ್ಪುದು ತಿಳಿಯೆ ॥ ಅಲ್ಲಿಯೆ ನಾಲ್ವೆರಳಾಯತದಿಂದ। ಬಲ್ಲನೆ ಮೆರೆವುದು ನಾಡಿಯಕಂದ ॥ ಅದರೊಳಗುದಿಸಿದವೆಲ್ಲಾ ನಾಡಿ। ಅದು ತೋರ್ಪುದು ಕುಂಡಲಿಯೊಡಗೂಡಿ॥ ಕೆಳದರಿಂ ದೀಕಾರಂಗುಲಿಯು। ಮೇಲಿಹ ಹೃದಯುವೆ ಜೀವನ ನಿಳಯ ॥೮॥ ದೇಹದೊಳಾ ನವ ಚಕ್ರದೆಡೆಗಳು। ಊಹಿಸೆ ತನುಮಧ್ಯಂ ಶಿಶ್ನಗಳು॥ ನಾಭಿ ಹೃದಯ ಕಂಠಂ ಕೂರ್ಚಗಳು। ಶೋಭಿತ ಖಂ ಶಿಖೆ ಶಿಖೆಯಗ್ರಗಳು ॥ ಅವು ನಾಲ್ಕಾರೀರೈದೀರಾರು। ತವೆ ಷೋಡಶ ಯುಗಳಂ ದಶನೂರು ॥ ಮೂರೊಂದೆನಿಪ ದಳ ಕ್ರಮದಿಂದ। ತೋರುವ ಕಂಜದೊಳೆಸೆವಿವರಿಂದ ॥ ಬೇರಾಕೃತಿ ಬೇರಕ್ಷರ ವರ್ಣ। ಬೇರಧಿದೈವಾದಿಕದಿಂ ಪೂರ್ಣ ॥ ಎನಿಸಿರುತಿಹವಿವೆ ನಿಜಹೋಗಿಗಳು। ಮನದೊಳು ಜಾನಿಸಿ ಸುಖಿಸುವೆಡೆಗಳು ॥೯॥ ಮತ್ತೀ ತನುವೈದುಂ ಕೋಶವನು। ಪೊತ್ತಿಹುದೆಲೆ ನೀನರಿಯಂತವನು ॥ ಅನ್ನಮಯಂ ತನುತಾನೆನಿಸಿರ್ಕು। ನನ್ನಿಯದಕೆ ಜರೆ ಮರಣಂ ತೋರ್ಕು॥ ಅಸುಗಳ್ ಪ್ರಾಣಮಯಂ ನೀ ನೋಡು। ಪಸಿವುಂ ನೀರಡಿಕೆಗೆ ತಾನೀಡು॥ ಮನವೆ ಮನೋಮಯ ಕೋಶವೆನಿಕ್ಕು। ಜನಿಪರಿವರ್ಗಕ್ಕದು ಗುರಿಯಕ್ಕು॥ ಬುದ್ಧಿಯೆ ವಿಜ್ಞಾನಮಯಂ ಕೇಳು। ಸಿದ್ಧವದಕೆ ಮೋಹಂ ಬಲುಗೋಳು॥ ಪ್ರಕೃತಿ ಯದಾನಂದಮಯಂ ನೋಡು। ವಿಕೃತಿ ವಿಷಂಗಂಗಳಿಗದು ಗೂಡು ॥೧೦॥ ಕ್ಲೇಶಗಳೈದೀ ತನು ಮುಖ್ಯಕ್ಕೆ। ಪಾಶದ ಬಿಗುಹಿನ ದುಃಖವದಕ್ಕೆ॥ ತಿಳಿಯಲವಿದ್ಯೆಯೆ ನಿಜದೊಳು ಮೋಸ। ಬಳಿಕಸ್ಮಿತೆ ದೇಹಾತ್ಮಾಧ್ಯಾಸ॥ ಪಡೆವ ವಿಷಯರತಿ

ರಾಗದ ವೇಷ। ಕೆಡಲದು ಪುಟ್ಟುವ ಕೋಪದ್ವೇಷ॥ ಕೂಡಿದ ವಿಷಯಂಗಳ ಬಿಡದಿಹುದು। ನೋಡಂ ತದಭಿನಿವೇಶವೆನಿಪುದು॥ ತೋರು ವವಿದ್ಯೆಯೆ ಪರಿಭವ ಕಾರಿ। ಮೂರುಂ ತಾಪಕ್ಕಸ್ಮಿತೆ ದಾರಿ॥ ಅರಿಷಡ್ವರ್ಗಕೆ ರಾಗವೆ ಬಿತ್ತು। ದುರಿತಂಗಳಿಗಿವು ತಾವೇ ಗೊತ್ತು ॥೧೧॥ ಬಾಲಕನಿಗೆ ದಾದಿಯ ಕಥೆಯೆಂತು। ಪೇಳಿದವೆಲ್ಲಂ ದಿಟವಹುದಂತು॥ ಈ ಪರಿಯೆನಿಸುವ ತೋರಿಕೆಯೆಲ್ಲ। ಕಾಪಟ್ಯಂ ನಿನ್ನೊಳು ನಿಜವಲ್ಲ॥ ... ... ॥ಶ್ರೀ॥

ಕಂದ॥ ಗತಿ ನಾಲ್ಕನೆಯದಿದಕ್ಕತಿ।
ಹಿತವೆನಿಪ ನಿರೂಪಣಂಗಳೇಕಾದಶವಂ॥
ತತಿಶಯಮಾಗಿರೆ ತಿಳಿಯು।
ಲ್ಪ್ರತಿಪಾದಿತವಿಲ್ಲಿ ಪಿಂಡದುದಯ ವಿಭೇದಂ॥

ಇಂತು ಗತಿ ೪ಕ್ಕಂ ನಿರೂಪಣ ೪೪ಕ್ಕಂ ಚರಣ ೫೪೪ಕ್ಕಂ

ಮಂಗಳಮಸ್ತು

———

ಶ್ರೀಗುರು ಶಂಭುಲಿಂಗಾಯ ನಮಃ

ಪಂಚಮಗತಿ

———

ಸೂತ್ರ॥ ತನುವಿನ ಹವಣಂ ತಿಳಿವಂ।
ತನನುಮದಿಂ ದಿಂತು ಪೇಳ್ದೆ ನೋಲಿದು ಬಳಿಕ್ಕಾ॥
ತನುವಿನೊಳು ಭೂತವಿಕಾರ।
ವೆನಿತನಿತು ಮುನೀಗಳೊರೆವೆ ನರಿವಂತಿಳಿಯೊಳ್

ಗೀತೆ॥ ಇಳೆಯಂಶವೆ ತನು ರೂಪಾಗಿಹುದು। ಜಲದಂಶವೆ ಯಾದ್ರವಮಾಗಿಹುದು॥ ದೇಹದ ಮಧ್ಯದೊಳುಜ್ವಲಿಸುತ್ತ। ಊಹಿಸಲನ್ನರಸವನೆಕೊಳುತ್ತ॥ ಪಸಿವಂ ತೃಷೆಯಂ ಮಿಗೆ ಪುಟ್ಟಿಸುತ। ವ್ಯಸನಾಲಸ್ಯಂಗಳನಾಗಿಸುತ॥ ಧಾತುಗಳೇಳಂ ಬಿಸಿಮಾಡುತ್ತ। ಆ ತನುವಂ ಚಲುವೆಂದೆನಿಸುತ್ತ॥ ಸಕಲಾವಯವಂ ದೀಪ್ತಿಯನೆಸಗಿ। ವಿಕರಿಸಿ ಶೋಷಣೆ ಗೈದುರೆ ಮಸಗಿ॥ ಇನಿತುಂ ಬಹುವಿಧಮಾಗಿಹ ಕರ್ಮ। ತನುವಿನೊಳಿಹುದಂತಗ್ನಿಯ ಧರ್ಮ ॥೧॥

ಕಾಲಾಧೀನದೊಳುಸುರಿಕ್ಕುತ್ತ । ಮೇಲೆ ಮಲಾಧಿಕಮಂ ತ್ಯಜಿಸುತ್ತ ॥ ಅನ್ನ ರಸವನೊಡಲೊಳು ಪೀರುತ್ತ । ಇನ್ನುದ್ಗಾರಾದಿಕಮಾಗಿಸುತ ॥ ಸೀನುಂ ಕ್ಷಿಮ್ಮುಗಳಂ ತೋರುತ್ತ । ತಾನಾಗುಳಿಕೆಗಳಂ ಮಾಡುತ್ತ ॥ ತವೆ ತನು ಶಿಖಿಯಂ ಪಟುಮಾಡುತ್ತ । ಎವೆಯಾಟವನೆಡೆವಿಡದಾಡುತ್ತ ॥ ಕರಣ ಸಮೂಹವನೆ:ಚರಿಸುತ್ತ । ಪರಿಪರಿಯೊಳು ಶಬ್ದಂಗೈಯುತ್ತ ॥ ಮೆರೆವುದೊಡಲೊಳಿಂತ ನಿಲನ ಧರ್ಮ । ತೆರಹು ಗೊಡುವದಾಕಾಶದ ಧರ್ಮ ॥೨॥ ಹಮ್ಮು ಮನೋ ನಭ ಮರುತಾದಿಕವು । ನೆಮ್ಮಿ ಧರೆಯನುಸರಿವೀತನು ಪಲವು ॥ ಅದರೊಳಗಾ ವಾರಿಗೆ ನಾನತ್ವ । ಅದರೊಳ ಗನಲಂಗೆಯು ನಾನತ್ವ ॥ ಅವರೊಳಗನಿಲಂಗೆಯು ನಾನತ್ವ । ಅದರೊಳಗಾಕಾಶಕೆ ನಾನತ್ವ ॥ ಅದರೊಳಗಾ ಹಮ್ಮಿಗೆ ನಾನತ್ವ । ಅದರೊಳಗಾ ಮನಸಿಗೆ ನಾನತ್ವ ॥ ತೋರುವವೋಲ್ ನಿನಗೆಯು ನಾನತ್ವ । ತೋ:ರುತಮಿಪ್ಪುದು ತಿಳಿಯದು ತತ್ವ ॥ ಇಳೆಗಾ ನಾನತ್ವದ ಬಗೆಯಿಂತು । ತಳೆದ ಬಹುತ್ವಂ ಪುಸಿನಿನಗಂತು ॥೩॥ ಅಲ್ಲಿ ಮಗುಳೆ ವಾತಾದಿಕ ದೋಷ । ಪಲ್ಲಟವೇ ಬಹುರೋಗದ ವೇಷ ॥ ಆಯಾವ್ಯಾಧಿಗಳಾವಡಲಿಂಗೆ । ಸಾಯುಸವಲ್ಲವು ಮಿಪ್ಪೊಡಲಿಂಗೆ ॥ ತೋರುವವಮನವಿಂತೆಲ್ಲಿಹುದಲ್ಲಿ । ತೋರುಗು ಸುಖದುಃಖಾ ಕೃತಿಯಲ್ಲಿ ॥ ಆ ನಿಖಿಳಂ ಸಂದಿಸಿದಸುವಿಂದೆ । ನಾನತ್ವದ ಭ್ರಮೆಯುಹುದ ದರಿಂದೆ ॥ ಅವನವನೆಲ್ಲವ ನನುಕರಿಸುತ್ತ । ತವೆ ನೀನಹೆ ಸಾಕ್ಷಿಕನೆನಿಸುತ್ತ ॥ ಅದರಿಂನೀನಲೆ ನಿಷ್ಕಲ ರೂಪ । ವಿದಿತಂ ನಭದಂತಿರೆ ನಿರ್ಲೇಪ ॥ ೪ ॥ ಆದಿಯುಮನವೊಡಲು ಬಳಿಸಂದು । ಭೇದವಿಷಯದೊಳು ವ್ಯವಹರಿಪಂದು ॥ ಮನಮೆನಿಪುದು ಸಂಶಯವಾದಂದು । ಎನಿಪುದು ಮತಿನಿಶ್ಚಯ ವಾದಂದು ॥ ಅಹಮೆನಿಸುವ ದಭಿಮಾನಿಸುವಂದು । ಸಹಜಂ ಚಿತ್ತವ ದವಧರಿಪಂದು ॥ ಅರಿದರ್ಥವ ನುಸುರಲು ಬೇಕೆಂದು । ಮೆರೆವಿಚ್ಛೆಯೊಳಾ ಪ್ರಕೃತಿಯೆ ಬಿಂದು ॥ ವಿರಳತೆಯುಪ ಕಾಲವೊಳುದಿಸಿರ್ದ । ಪರನಾದವೆ ಸೂಕ್ಷ್ಮತೆ ವಡೆದಿರ್ದ ॥ ಅದು ತಾನೊಡಲೊಳು ವಾಙ್ಮಯವಾಗಿ । ಉದಿಸಿರ್ಪ ದದರ್ಥಾನ್ವಯಮಾಗಿ ॥೫॥ ವರತನುಜನೆ ವಾಕ್ಕದು ನಾಲ್ಕಕ್ಕು । ಪರೆ ಪಶ್ಯಂತ್ಯಾದಿಗಳೆನಿಸಿಕ್ಕು ॥ ನುಡಿವಾತ್ಮನ ತನುಮಧ್ಯದೊಳೆಂದು । ಬಿಡದಿಹ ನಾದವೆ ತಿಳಿ ಪರೆಯೆಂದು ॥ ನಾಭಿಯೊಳದು ನಿಷ್ಕಳ ವರ್ಣತ್ವದು । ಶೋಭೆವಡೆಯೆ ಪಶ್ಯಂತಿಯೆ ತಿಳಿಯು ॥ ಹೃದಯದೊಳದು ನುಡಿವಿಚ್ಛೆಯೊಳೊಂದೆ । ಒದವಿರೆ ಮಧ್ಯಮೆ ಯಪ್ಪುದ ಮುಂದೆ ॥ ಅದು ಕೇಳಸುವಿಂಮರ

ಮೊದಲಾಗಿ ॥ ಪದವೆಂಟರೊಳಕ್ಷರ ರೂಪಾಗಿ । ಪುಟ್ಟುವ ವಚನವೆ ವೈಖರಿಯಕ್ಕು । ನೆಟ್ಟನೆ ಸಂಸ್ಕೃತಿಗದು ಮೊದಲಕ್ಕು ॥೬॥ ಇಂತರಿವೆಯೆಯಂತಜ್ಞತೆ ಗೂಡಿ । ಹಂತೆಯೊಳಾತ್ಮಾಧ್ಯಾಸಂ ಮಾಡಿ ॥ ಆಹಾ ತಮದೊಳು ದೋಹಂ ಬಡೆದು । ದೇಹದೊಳಾತ್ಮಾಧ್ಯಾಸಂ ದಳೆದು ॥ ವರ ರಜದಿಂ ವಿಷಯೇಚ್ಛೆಯೊಳಾಳಿ । ಕರಣದೊಳಾತ್ಮಾಧ್ಯಾಸಂ ತಾಳಿ ॥ ಶುದ್ಧಂ ಸತ್ವದಿ ಮಿಗೆ ಕಳೆ ವೆತ್ತು । ಬುದ್ಧಿಯೊಳಾತ್ಮಾಧ್ಯಾಸಂ ಬೆತ್ತು ॥ ನೀನಿಂತೀ ನಾಲ್ಕಕೆ ಗುರಿಯಾಗಿ । ಆನೆಂಬೀ ಭಾವಂ ಬಲುಹಾಗಿ॥ ಈ ತೆರದಿಂ ಪುರುಷನು ಯೆನಿಸಿರ್ಪೆ। ವಿತತ ಪ್ರಾಕೃತ ಸೃಷ್ಟಿಯೊಳಿರ್ಪೆ ॥೭॥ ಮಿಗೆ ವಿಪರೀತ ಜ್ಞಾನಾಕೃತಿಯೆ। ಬಗೆಗೊಡಲಹ ಮನಮುದಿಸಿತ್ತರಿಯೆ ॥ ಅದು ತಾನೇ ತನಗಿದಿರಿಟ್ಟಂತೆ। ಅದು ತನಗನ್ಯಂ ತಾನೆಂಬಂತೆ ॥ ಬಹುವಿಧ ಭೂತ ಭುವನ ರೂಪಾಗಿ । ಬಹು ಕರಣೇಂದ್ರಿಯವಸು ರೂಪಾಗಿ ॥ ಸ್ಥಾವರ ಭೇದದ ಕೋಟಿಗಳಾಗಿ । ತೀವಿದಖಿಳ ಜಂಗಮ ರೂಪಾಗಿ ॥ ತೊರುತ್ತಾ ಮನಮುಳ್ಳೊಡಿದೆಲ್ಲ । ತೋರುವದದು ಪಡಲೊಂದುಮಿದಿಲ್ಲ ॥ ಜಗವಿದರಿಂದ ಮನೋಮಯವೆಂದು। ಬಗೆ ದೋರುವ ಕನಸಿನ ತೆರನೆಂದು ॥೮॥ ಅಂತಾ ಕಲ್ಪಿತ ವಿಷಯತತಿಗಳು । ಇಂತೆಸೆದಿರ್ಕೆವು ನಿನ್ನೊಳುಮೆಯೊಳು । ಈ ವನ ಸಾಗರ ಸರಿದದ್ರಿಗಳು । ದೇವಾಸುರ ನರ ತಿರ್ಯಕ್ಕುಗಳು ॥ ಇನಿತು ವಿಚಿತ್ರಂ ದಿಟವೆಂಬತೆ। ಜನಿಸಿತು ಪೊಂದೊಡಿಗೆಯು ಪರಿಯಂತೆ ॥ ಮೇಣದು ಕಂಡಾಗುಂಟೆನಿಸಿತ್ತು। ಕಾಣದ ಹೊತ್ತದನಿಲ್ಲೆನಿಸಿತ್ತು ॥ ಅವರವರಾ ಸ್ಮರಣೆಯ ಕತದಿಂದ। ವಿವಿಧ ಪ್ರತಿಭಾಸಕ ರೂಪಿಂದ ॥ ಈ ಮನವಾಗಳು ಬೇರೂರಿಹುದು । ಈ ಮೂಜಗದಾಸ್ಥಿತಿಯಾಗಿಹುದು ೧೯॥ ಗಗನಜ ವಿಪ್ರನ ಕಥೆಯೊಡಲೆಂತು। ಜಗಮಿರೆ ನಿನ್ನೊಳು ಬಾಧಿಸದಂತು ॥ ಮುಗಿಲೆಡೆಯಾಟಂ ಗಗನದೊಳೆಂತು । ಜಗಮಿರೆ ನಿನ್ನೊಳು ಬಾಧಿಸದಂತು ॥ ನೆಗಳಿದಸರ್ಪಂ ನೇಣನೊಳೆಂತು । ಜಗಮಿರೆ ನಿನ್ನೊಳು ಬಾಧಿಸದಂತು ॥ ಭಾವಿಸೆ ಬಗೆಯುವಿಕಾರವೆನಿಪ್ಪ । ಜೀವರಿಗಾಗಳು ಮೋಹಕವಪ್ಪ ॥ ಮನದ ಸ್ಥಿತಿಯುಂ ಪೇಳಿದೆವಿಂತು । ನಿನಗದರೊಳ್ಪುದು ವಾಳ್ಮನವೆಂತು ॥ ಮನದಂದವ ಕರುಣಿಸಬೇಕೆಂದು । ತನಯಂ ಗುರುವಂ ಕೇಳಿದೊಡಂದು ॥೧೦॥ ಪೂಸತಿದು ಸುತ ಕೇಳ್ವೈ ಮನವೆಂದು । ಪೆಸರು ಗೊಳಲು ಬಾರದು ಇನಿತೆಂದು॥ ಊಹಿಸಿ ತೋರ್ಪೊಡೆ ಕುರುಹೊಂದಿಲ್ಲ। ಆಹಾ ಬರಿಯ ಬಯಲೆ ಸತ್ತಲ್ಲ ॥ ಸೂಂಟಿಸಿ ಜಗದೊಳಗೊಂದಾನೊಂದು । ಉಂಟೆಂದಾಗಲೆ

ಮೇಣಲ್ಲೆಂದು ॥ ಆವಾವ ಪಧಾರ್ಥಂಗಳ ರೂಪು। ಭಾವಿಸುತಿಹುದದು ಮನವೇ ರೂಪು ॥ ಮನವೆಂದೊಡೆ ಸಂಕಲ್ಪವದ್ಯೆಸೆ। ತನುಜನೆ ಸಂಕಲ್ಪವೆ ಮನವೈಸೆ ॥ ಬಗೆಯುಲು ಪೆಸರೆರಡೊಂದೇ ವಡಲು। ಜಗವೆಲ್ಲಂ ಸಂಕಲ್ಪದ ವಡಲು ॥೧೧॥ ಚಿತ್ತೊಂದೇ ಮಾಯಾಮಯವೆಂದು। ಮತ್ತ ಮವಿದ್ಯಾ ಸಂಸೃತಿಯೆಂದು ॥ ತಿಳಿ ಬಂಧಂ ಮೋಹಂ ತಮವೆಂದು। ಘಳಿಲನೆ ಸಂಕಲ್ಪದ ಪೆಸರೆಂದು ॥ ... ... .... .... ... ॥ಶ್ರೀ॥

ಕಂದ ॥ ಗತಿಯೈದನೆಯದಿದಕ್ಕತಿ। ಹಿತಮೆನಿಪ ನಿರೂಪಣಂಗಳೇಕಾದಶವಂ ॥ ಶತಿಶಯುವಾಗಿರೆ ತಿಳಿಯು। ಲ್ಪ್ರತಿಪಾದಿತವಿಲ್ಲಿ ವಿಶ್ವರಚನಾಭೇದಂ ॥

ಅಂತು ಗತಿ ೫ಕ್ಕಂ ನಿರೂಪಣ ೫೫ಕ್ಕಂ ಚರಣ ೭೮೮ಕ್ಕಂ

ಮಂಗಳಮಸ್ತು

---

ಶ್ರೀ ಗುರು ಶಂಭುಲಿಂಗಾಯ ನಮಃ

## ಷಷ್ಠಮಗತಿ

---

ಸೂತ್ರ। ಅನುನಯದಿಂದೀ ತೆರದಿಂ।
ಮನದ ವಿಕಲ್ಪವನೆ ಪೇಳ್ದು ಬಳಿಕಂತದರಿಂ ॥
ಜನಿಸಿದ ಸಂಸಾರದ ಹದ।
ನಿನಿತೆಂಬುದ ನೀಗಳರಿವ ತೆರದಿಂದುಸುರ್ವೆಂ ॥

ಗೀತೆ ॥ ಚಿತ್ತೇ ಸಾಕ್ಷಾದೀಶನು ಕಂಡ್ಯಾ। ಮತ್ತಾಯಿಾಶನೆ ಜೀವನು ಕಂಡ್ಯಾ ॥ ಈಶ್ವರತೆ ಯೊಳಿಲ್ಲದ ಸಂಸಾರ। ಶಾಶ್ವತ ದುಃಖವನುಣುತಿಹ ಘೋರ ॥ ಘನತರ ಕರ್ಮಂಗಳ ಕಾಲಾಟ। ಜನನ ಜರಾಮರಣದ ಕೊರಚಾಟ ॥ ದೇವಗೀ ಪರಿ ಬಂದಪುದೆಂದು। ಭಾವಿಸಿ ಕೇಳಿದ ಶಿಷ್ಯನಿಗೆಂದು ॥ ಗುರುವೆಂದಂ ದುರ್ನೀತಿಗಳಿಂದ। ಪರವಿಪ್ರನು ಶೂದ್ರತೆ ವಡೆದಂದ ॥ ಈಶನು ತಾನೇ ಸಂಕೋಚತೆಯ। ಲೇಶದಿ ಬಗೆವಡೆದನು ಜೀವತೆಯ ॥೧॥ ಭೂತಂಗಳಿಗಾಗುವ ಸಂಸರ್ಗ। ಈ ತೆರನಹುದ್ಯೆ ಮೊದಲಾ ಸರ್ಗ ॥ ನಳಿನಭವನ ಕಲ್ಪನೆಯಿಂದಹುದು। ಬಳಿಕಿನ ಸೃಷ್ಟಿಯು ಕರ್ಮಗಳಹುದು ॥ ಕರ್ಮ ವ್ಯವ

ಹಾರವೆ ಮುನ್ನವನು। ಕರ್ಮವ ಮಾಡಿದನದರಿಂದವನು॥ ಜನನಾಂತರವನು ಬಿಡದೈದುವನು। ಜನಿಸಿದ ಕರ್ಮಫಲವನುಣುತಿಹನು॥ ಅಂತಾ ಕರ್ಮವೆ ಕಾರಣವಾಗಿ। ಮುಂತಿಹ ಸೃಷ್ಟಿಯೆ ಕಾರ್ಯವುದಾಗಿ॥ ಆ ಕಾರ್ಯವು ಕಾರಣ ವಶವಾಗಿ। ಲೋಕಂ ಕೆಡುವುದು ದುಃಖಿತವಾಗಿ ॥೨॥ ಅಜ ಕಲ್ಪನೆಯಿಂ ದೇಹಂ ತೋರ್ಕುಂ। ನಿಜವದರೊಳ ಗಹವುದಿಸುತ್ತಿರ್ಕುಂ॥ ಚಿತ್ತಂತದರೊಳಗಾಗಳೆ ಪೊಕ್ಕು। ಮತ್ತಂ ಜೀವಂ ಪುರುಷನೆನಿಕ್ಕು॥ ಮೊದ ಲಜನೊಳು ಕಲ್ಪನೆಯದು ಶಕ್ತಿ। ಪುದಿದೆಂತಿಹುದಂತೆಯೆತಚ್ಛಕ್ತಿ॥ ಜೀವ ರೊಳುಂ ದೊರಕೊಂಬುದರಿಂದ। ಭಾವಿಸು ಮತಿಸಂಕೋಚತೆಯಿಂದ॥ ಇದ ಮಹಮೆಂಬೀ ಕಲ್ಪನೆಪುಕ್ಕು। ಅದು ತಾನೇ ತಿಳಿ ಪೌರುಷಮಕ್ಕು॥ ಆ ಪೌರುಷವೇ ಕರ್ಮವದಕ್ಕು। ಈ ಪರಿ ಭವವಾ ಕರ್ಮದಿಬಕ್ಕು ॥೩॥ ಅಹಮೆಂಬೀ ಬಗೆ ದೇಹದೊಳಿರ್ಕುಂ। ಬಹಿರಂಗದೊಳಿದಮೆಂಬುದುತೋರ್ಕುಂ॥ ಅದು ಕೇಳೀ ಸಕಲಾರ್ಥದೊಳಿರ್ಕುಂ। ಅದರಿಂ ಬಹುಬಗೆ ನಿರವಧಿಯಕ್ಕು॥ ಕೆಲಕೆಲವೆಡೆಯೊಳು ಸೊಗಸಿಹುದಲ್ಲಿ। ಕೆಲಕೆಲವೆಡೆಯೊಳ ಗಪ್ರಿಯವಲ್ಲಿ॥ ಹಿಡಿವ ಬಿಡುವ ಕರ್ಮಕ್ಕದು ಮೂಲ। ತಡೆಯದೆ ತತ್ಕರ್ಮವೆ ಭವ ಮೂಲ॥ ಅದರಿಂ ದಭಿರುಚಿನಿನಗೆತ್ತಾಸು। ಉದಿಸಿತ್ತಾದೊಡೆಕೇಳದು ತಾನು॥ ವಿದಿತಂ ಬಾಧವೆನಿ ಪ ಸಂಸಾರ। ಅದನುಳಿದರೆ ನೀನೀಶಂಧೀರ ॥೪॥ ಆಪರಿ ಪಡೆದಿಹ ಜೀವರ ಬಾ ಳು। ಈ ಪರಿಭೋಗವನೀವುದು ಕೇಳು॥ ಬೆಳಗುವದಿಂದ್ರಿಯತತಿ ವಿಷಯವನು। ಬಳಿ ವಿಡಿದಾರೈವುದು ಮನವದನು॥ ಮತಿನಿಶ್ಚಯದಿಂದವರಾಕೃತಿಯಂ। ಪತಿಕರಿ ಸಲು ಚಿತ್ತವೆ ತನ್ಮತಿಯು॥ ಧರಿಸಲದನು ಸಮ್ಮತವದು ತಾನು। ವರಿಸಿ ಮುಗುಳೆ ಸುಖದುಃಖಿಯು ತಾನು॥ ಎನಲೊಡನವ ನಧ್ಯಾಸು ಬಡೆದು। ಘನವಿಪರೀತ ಜ್ಞಾನವೆ ವಿಡಿದು॥ ನೀನದನರಿವುದೆ ಭೋಗವೆನಿಕ್ಕು। ಸೂನು ತಿಳಿಯೆ ನಿನಗದು ಪುಸಿಯಕ್ಕು ॥೫॥ ಇಂದ್ರಿಯ ಗೋಚರವಾದ ವಿಷಯವುಂ। ಒಂದಿ ಪ್ರಿಯವುಂ ಮೇಣಪ್ರಿಯವುಂ॥ ಬಗೆಯಲು ದೇಹದೊಳುಂಡಿರಬೇಕು। ಮಿಗೆ ಕಾಮಿಸಿ ಭೋಗಿಪುದದು ಸಾಕು॥ ಕಾಮಂ ಕ್ರೋಧಂ ಮೋಹಾದಿಗಳು। ತಾಮಸವವು ಹೃದಯಗ್ರಂಥಿಗಳು॥ ಆಗಳುಮವರಿಂ ದತ್ತಿತ್ತೊಲಿವ। ಆಗಂಟಿ ನ ಭವಬಂಧನ ಮನವ॥ ಪುಟ್ಟುವ ಸುವಿವೇಕದ ಮನದಿಂದ। ನೆಟ್ಟನೆ ಕಡಿ ವುದು ಮಸೆಮುಳಿಯಿಂದ॥ ಜಡದಿಹ ಸಂಕಲೆಯುಂ ಕಡಿವಂತೆ। ಕಡಿದೊಡೆ ನೀನಹೆ ಮುನ್ನಿರ್ದಂತೆ ॥೬॥ ನಿನಗಾ ಸ್ಥೂಲಂ ಸೂಕ್ಷ್ಮಾಪರವು। ಎನಿಸುವ

ತ್ರೈರೂಪಿ ನೊಳಾ ಪರವು ॥ ಒಂದೇ ನಿತ್ಯವೆನಿಸಿ ಕೊಳುತಿರ್ಕು । ಹಿಂದುಳಿದ ರಡುಮಸತ್ಯಂ ತೋರ್ಕು ॥ ವಿದಿತಂ ಸ್ಥೂಲಂ ಭೋಗಾಯತನಂ । ಅದನಡಿ ದಿಹುದೇ ಮನಮರುಳುತನಂ ॥ ಆ ಸೂಕ್ಷ್ಮವೆ ಬಗೆಗೊಡಲಾಗಿಹುದು। ಭಾಸು ರದತಿ ಮಾಯಿಕವೆನಿಸಿಹುದು ॥ ನಿರುತಂ ಬುದ್ಧಿಗೆ ಸಾಕ್ಷಿಕ ರೂಪು । ಪರವೆನಿ ಸುವದದು ನಿಜ ಚಿದ್ರೂಪು॥ ಮೊದಲೆರಡರೊಳಾ ಭ್ರಮೆಯಂ ಬಿಟ್ಟು। ಪದು ಳದೊಳಿರು ಚಿತ್ಪದವಳವಟ್ಟು ॥೭॥ ಶ್ರುತಿಮತಿ ನಿಷ್ಕಳ ಬ್ರಹ್ಮವೆಯೆಂದು । ನುತ ತಾಂತ್ರಿಕರಿದು ಪರಶಿವನೆಂದು ॥ ಮತ್ತೆ ಕೆಲರು ನಿಜ ಲಿಂಗವಿದೆಂದು । ಮತ್ತೆ ಕೆಲರು ನಾರಾಯಣನೆಂದು ॥ ಆ ಸಾಂಖ್ಯರುಗಳೆ ಪುರುಷನಿದೆಂದು । ವೈಶೇಷಿಕರಿದ ನೀಶ್ವರನೆಂದು ॥ ಕೆಲಬರು ಬೌದ್ಧರು ಶೂನ್ಯವಿದೆಂದು । ಕೆಲ ಬರೊಲಿದು ವಿಜ್ಞಾನವಿದೆಂದು ॥ ಸಂಕಲ್ಪದ ಭೇದವನುಳ್ಳಂತೆ । ಶಂಕಿಸ ದು ಸುರುವರವರರಿದಂತೆ॥ ಬಗೆ ಗೆಡಲಿಂತೆನಲಿಲ್ಲದೆಯೊಂದು। ಮಿಗುತೆಯನರಿ ಚಿ ನ್ಮಾತ್ರಮಿದೆಂದು ॥೮॥ ಉಳಿದ ನಿಜದೊಳಾ ಬಗೆಯಿಲ್ಲಾಗಿ। ತಿಳಿಯುದಯವು ಲಯುವದಕಿಲ್ಲಾಗಿ ॥ ಅದು ತನ್ನಿಂ ತಾಂ ತೋರುವುದಾಗಿ । ಅದು ನಿರ್ಲಕ್ಷಣ ನಿರ್ಗುಣವಾಗಿ ॥ ನಿರಘ ನಿರಂಜನ ನಿಷ್ಕ್ರಿಯವಾಗಿ । ನಿರುಪಾಧಿಕ ನಿರ್ದ್ವಂ ದ್ವವದಾಗಿ ॥ ಅದು ತಾನಿಹುದದರೊಳು ಮನವಿಲ್ಲ । ಅದರಿಂ ಕನಸು ನೆನಸು ಮುನ್ನಿಲ್ಲ ॥ ಬರಿಯರಿವಲ್ಲದೆ ಮೂಢತೆಯಲ್ಲ । ಅರಿಯದರಿಂದದು ಸುಪ್ತಿಯು ಮಲ್ಲ ॥ ಆ ಚಿತ್ಪದವೇ ತುರ್ಯವೆನಿಕ್ಕು । ಯೋಚಿಸಿ ತಿಳಿ ಕೈವಲ್ಯಮದಕ್ಕು ॥೯॥ ಉಳಿದಿಹುದೊಂದೇ ಸದ್ರೂಪಾಗಿ । ಬಳಿಕದರೊಳಗಾ ಬಗೆ ಪುಸಿಯಾಗಿ॥ ತಿಳಿವಡೆ ಮೃಗತೃಷ್ಣೆಯ ಜಲದಂತೆ । ಅಳಿವವು ಬಗೆಗಳು ನಿಜವರಿದಂತೆ ॥ ಬಿಡುವವು ಹೃದಯ ಗ್ರಂಥಿಗಳೆಲ್ಲ । ಕೆಡುವವು ತೋರುವ ಸಂಶಯವೆಲ್ಲ ॥ ತ ನುಜನೆ ಕರ್ಮಾವಳಿ ಲಯವೆಲ್ಲ । ಪುನರಾವೃತ್ತಿ ಭ್ರಮೆ ತನಗಿಲ್ಲ ॥ ಪ್ರಾರಬ್ಧ ದ ವಾಸನೆಯುಳ್ಳನ್ನ । ಶಾರೀರ ವ್ಯವಹೃತಿಯಿರ್ಪನ್ನ । ಭಾವಿಸಲಾತಂ ಬದು ಕಿಪನಾಗಿ । ಜೀವನ್ಮುಕ್ತನೆನಿಪನಾ ಯೋಗಿ ॥೧೦॥ ಮುಕ್ತಂಗಾದರಿವಿನ ಭೂಮಿಗಳು। ಮುಕ್ತಿಪಥದೊಳುಂಟವೆನೆರಕೇಳು॥ ವಿರತನು ಮೋಕ್ಷವ ಬಯ ಸುವದೊಂದು । ಗುರುಗಳನೈದಿ ವಿಚಾರಿಪುದೊಂದು ॥ ನಿಸ್ಸಂಗತೆಯುಂ ಪಡೆಯುವ ದೊಂದು। ನಿಸ್ಸಂಶಯಸುಖ ವಿಡಿದಿಹುದೊಂದು ॥ ವಾಸನೆ ಿಲ ಯುವ ನೈದುವದೊಂದು। ಭಾಸುರವೆನಿಸುವ ತುರ್ಯವದೊಂದು ॥ ಮೇ ಣ ತುರ್ಯಾತೀತವದೊಂದು । ಕೇಳಿಂತಿವೆ ಸುತ ಭೂಮಿಗಳೆಂದು ॥ ತಿಳಿವಾ

ಮುಕ್ತಿಪಥದೊಳಿಹುದೆಂದು। ಬಳಿಕೊರೆದಂ ಸದ್ಗುರುವರನಂದು ॥೧೧॥ ಭೂಮಿಗೆ ಯೋಗ್ಯನ ಚಿಹ್ನವಿದೆಂತು। ಭೂಮಿಗಳಭ್ಯಾಸ ಕ್ರಮವೆಂತು॥ ಕರುಣಿಸು ಶಿಕ್ಷವಂತೆನಗೆನೆ ಸೂನು॥ ಪರುಷದೊಳೊರೆದಾ ಗುರುಕುಲಭಾನು ॥ಶ್ರಿ॥

ಕಂದ॥ ಗತಿಯಾರನೆಯದಿದಕ್ಕತಿ।
ಹಿತಮೆನಿಪ ನಿರೂಪಣಂಗಳೇಕಾದಶವಂ॥
ತತಿಶಯಮಾಗಿರೆ ತಿಳಿಯು।
ಲ್ಪ್ರತಿಪಾದಿತವಿಲ್ಲಿ ಬಂಧ ಮೋಕ್ಷ ದ್ವಿತಯಮ್॥

ಅಂತು ಗತಿ ೬ಕ್ಕಂ ನಿರೂಪಣ ೬೬ಕ್ಕಂ ಚರಣ ೮೧೬ಕ್ಕಂ

ಮಂಗಳಮಸ್ತು

---

ಶ್ರೀ ಗುರು ಶಂಭುಲಿಂಗಾಯ ನಮಃ

## ಸಪ್ತಮಗತಿ

---

ಸೂತ್ರ॥ ಇಂತೀ ನಿಜಸಾಧ್ಯವನೊಲ।
ವಿಂ ತಿಳುಪಿದೆ ನೀಗಳೆಸೆವ ಸಾಧಕರುಗಳಿರ॥
ವಂ ತತ್ಸಾಧನ ತತಿಯಂ।
ಸಂತರೊಡಂಬಟ್ಟು ಕೇಳ್ವ ತೆರದಿಂದುಸುರ್ವೆಂ॥

ಗೀತೆ॥ ಸಾಧು ಸುತನೆ ನೀ ಕೇಳ್ದೀಯರ್ಥ। ಸಾಧಕ ಜನಕತ್ಯಂತ ಹಿತಾರ್ಥ॥ ರಾಗಿ ವಿರಾಗಿಗಳೆಂದಿಳೆಯೊಳಗೆ। ಆಗಳೆ ತೋರುತ್ತಿಹರವರೊಳಗೆ॥ ಭುಕ್ತಿ ಸುಖಂ ಸಂಸಾರದೊಳುಂಟು। ಮುಕ್ತಿಯನ್ನೆದ ಲದರೊಳೇನುಂಟು॥ ಕಲ್ಮರನಂತಿರೆ ನಿದ್ರಿತನಂತೆ। ಪಾಳ್ಮನೆಯೊಳಗಣ ದೀವಿಗೆಯಂತೆ॥ ಎನಗದು ಬೇಡಿಹ ಪರವೇ ಸಾಕು। ಎನಗದರಿಂ ಸತ್ಕರ್ಮವೆ ಬೇಕು॥ ಎಂದೆನುತಿರ್ಪರೆ ರಾಗಿಗಳೆಲ್ಲ। ಅಂದಾ ಭೂಮಿಗೆ ಯೋಗ್ಯರೆಯಲ್ಲ ॥೧॥ ಕರ್ಮವದಾರು ತೆರದೊಳೆಸದಿರ್ಕು। ಧರ್ಮವನರಿಯದು ವಿಧಿ ವಿಡಿದಿರ್ಕು॥ ಸುರಪದವೀವುದೆ ಕಾಮ್ಯವೆನಿಕ್ಕು। ನರಕ ಪ್ರದವೆ ನಿಷಿದ್ಧ ಮೆನಿಕ್ಕು॥ ನೇಮಂದ ನಿತ್ಯಂ ಜಾತಿ ಪ್ರದವು। ನೈಮಿತ್ತಿಕವದು ಪುತ್ರ ಪ್ರದವು॥

ದುರಿತ ಹರವು ಹರಪೂಜನಮುಕ್ಕು । ಪರಪದವೀವುದೆ ವಾಸನೆಯಕ್ಕು ॥ ಇವರೊಳ್ಕಾಮ್ಯ ನಿಷಿದ್ಧವನುಳಿದು । ತವಕಂ ಮಿಕ್ಕುಳಿದವನೆರೆ ತಿಳಿದು ॥ ಆಯಾ ಕರ್ಮವನೊಲವಿಂ ಮಾಡೆ । ಆಯಾ ಫಲವಹುದವರಿಗೆ ಕೂಡೆ ॥೨॥ ಕರ್ಮಫಲದ ಸಗ್ಗದ ಸುಖದೊಡನೆ । ನಿರ್ಮಿಸಿಹುದು ದುಃಖಂ ತನ್ನೊಡನೆ ॥ ಒದವಿದ ಸಿರಿ ತೀರುತ್ತಿಹುದೊಂದು। ಅದರ ವಿಶಿಷ್ಟತೆ ಗೆಳಸುವದೊಂದು ॥ ಆ ಪದವಳಿದರನೀಕ್ಷಿಪುದೊಂದು । ಈ ಪರಿಯೊಳು ತಾಪತ್ರಯ ಬಂದು ॥ ಅಡಿಗಡಿಗಾ ಸುಖಮಂ ಕೆಡಿಸುತ್ತ । ಬಿಡದೂಡಿಪ್ಪುದೆಲೆ ದುಃಖದ ಮೊತ್ತ ॥ ಅಲ್ಲಿಂ ಪುನರಾವರ್ತಿಯನೈದಿ । ಇಲ್ಲಿ ಮಗುಳೆ ಜೀವತ್ವವನೈದಿ ॥ ತೊಳಲುತ್ತಿಹುದಿಂತೀ ಭವದಲ್ಲಿ। ನಿಲುವೆಡೆಯಾವುದು ಕರ್ಮಗಳಲ್ಲಿ ॥೩॥ ಬಳಿಕಾ ಭವದೊಳು ಸುಕೃತವನೇಕ । ಫಲಿಸಲು ಪುರುಷಂಗಹುದು ವಿವೇಕ॥ ಅವನೀ ಭವದುಃಖಂಗಳ ನೋಡಿ । ಅವನೆಲ್ಲವನತಿಗಳೆದೀಡಾಡಿ ॥ ದುಃಖದ ಕಾಟಕ್ಕಂದತಿ ಬಾಡಿ । ದುಃಖಂ ಬೆರಸದ ಸುಖಮಂ ನೋಡಿ ॥ ಪೊರಗೀ ಸತಿ ಪುತ್ರಾದಿಗಳಲ್ಲಿ । ಅರಸಿಯು ಕಾಣದೆ ಲೇಸುವನಲ್ಲಿ ॥ ಪಡೆವೆಡೆಯೊಳು ಮೊದಲತ್ಯಾಯಾಸ॥ ನಡುವಿನಿತಿಹುದೆಲೆ ಸುಖದಾಭಾಸ ॥ ಕಡೆಯೊಳು ಹೇಸಿಗೆ ಮುಸುಗುತ್ತಿಹುದು । ಸಿಡಿಮಿಡಿಯಾಗಳೆ ಮನಸಿಂಗಹುದು ॥೪॥ ಬಳಿಕಿಂತೀ ವಿಷಯಂಗಳ ನೋಡೆ । ಫಳಿಲನೆ ಮೋಹಿಸಿ ಕೆಡುವವು ಕೂಡೆ ॥ ಮುಗಿಲೊಡ್ಡೊಣೆ ಮಿಂಚಿನಕಳೆಯಂತೆ । ಮೃಗತೃಷ್ಣೆಯ ಕನಸಿನ ಸಿರಿಯಂತೆ ॥ ಸುರಧನು ಬೊಬ್ಬುಳಿಕೆಯ ಬಗೆಯಂತೆ । ತೆರೆ ದೀಪಜ್ವಾಲೆಯ ತೆರನಂತೆ ॥ ಸುಳಿಗಾಳಿಯ ಮಣ್ಣಿನ ಪರಿಯಂತೆ । ಮಳೆಗಲ್ಲಿನ ನೆಳಲಂಚೆಗಳಂತೆ ॥ ಯುವತಿಯ ಚಿತ್ತದ ಕಾಪುರದಂತೆ । ವಿವಿಧ ವಿಷಯವೆಲ್ಲವು ತಾವಿಂತೆ ॥ ಅದರಿಂ ದೃಢಮತಿಯದರೊಳ್ಸಲ್ಲ । ಮುದವಣುಮಾತ್ರವನಿತುಮಲ್ಲಿಲ್ಲ ॥೫॥ ಇಂತೆಲ್ಲಾ ವಿಷಯದೊಳಾರೈದು । ಮುಂತವನೆಳಸುವ ಮನವಂ ಬೈದು ॥ ಕೆಡೆ ಮೆಟ್ಟುತ್ತದನುರೆ ಬೋಧಿಸುತ । ಜಡಿದು ನಿಲಿಸಿ ಬಲುಹಿಂ ಬಂಧಿಸುತ ॥ ವಿಷಯದೊಳೆರಕವನುಳ್ಳವನಂದ । ಭಷಕನೆಲುವಿನೊಳು ರಮಿಯಿಪ್ಪಂದ ॥ ಎಂದೀ ವಿಶ್ವದ ವಿಷಯವ ನೋಡಿ । ಮುಂದೆ ಮನಂ ತರಹರದೊಡಗೂಡಿ ॥ ಮೆಲ್ಲನೆ ಮೆಲ್ಲನೆ ವಳಸರಿವುತ್ತ । ಒಳ್ಳೆಯ ಬಟ್ಟೆಯ ನಾರೈವುತ್ತ ॥ ಇಹ ಮನುಜನೆ ಕೇಳ್ಭೋಗ ವಿರಾಗಿ । ಅಹನಾತನೆ ಸುಖದಿಚ್ಛೆಯ ಯೋಗಿ ॥೬॥ ವಿರತಿಗೆ ಬೀಜಂ ರೂಪಂ ಕಾರ್ಯ । ಪರಿ

ಎಡಿದುಂಟವನರಿ ನಿಜಧೈರ್ಯ ॥ ಅಲ್ಲಿ ವಿಷಯ ದೋಷವನೂಹಿಪುದು।
ಬಲ್ಲನೆ ಕೇಳದು ಬೀಜವೆನಿಪ್ಪುದು ॥ ಬಳಿಕಾ ವಿಷಯವನುರೆ ತೊರೆದಿಹುದು।
ತಿಳಿಯುದು ರೂಪಂ ತಾನೆನಿಸಿಹುದು ॥ ಬಳಿಕವರಾಯಾ ವಾಸನೆಯಿಂದ।
ಘಳಿಲನೆ ಮನವಲ್ಲೆರಗಿದೊಡಂದ ॥ ಛಲಮುಂ ಬಲಿದೊಲ್ಲದೆ ಬಿಟ್ಟಿಹುದು ॥
ಕುಳವಾಗಿರಲದು ಕಾರ್ಯವೆನಿಪ್ಪುದು॥ ಇದು ವಿರತಿಗೆ ನಿಜಲಕ್ಷಣವಾಗಿ।
ಇದನುಳ್ಳಾತನೆ ಸಹಜವಿರಾಗಿ ॥೭॥ ಅತಂ ಬಳಿಕೀ ಸಂಸೃತಿಯಲ್ಲಿ। ನೂತ
ನಮಂ ಕಾಣೆನು ನಾನಲ್ಲಿ ॥ ಕೇಳಿದುದನೆ ಮಗುಳೆಯು ಕೇಳುತ್ತ। ಮೇಳೈ
ಸಿದುದನೆ ಮೇಳವಿಸುತ್ತ॥ ಕಂಡುದನೇ ಬಳಿಕಂ ಕಾಣುತ್ತ। ಉಂಡರಸವ
ನೇ ಮಗುಳೆಯುಣುತ್ತ॥ ವಾಸಿಸಿದುದನೇ ಮೇಣ್ವಾಸಿಸುತ। ಈ ಸಕಲವ
ನಿಂತರಿದರಿವೃತ್ತ॥ ಪಿಷ್ಟ ಪಿಷೇಷಣ ವಿಧಿಯಂತೆಲ್ಲ। ಕಷ್ಟವಿದುಂಡುಳಿದುದೆ
ಬೇರಿಲ್ಲ॥ ಎಂದವನೆಲ್ಲವನುರೆ ಬಿಟ್ಟವನು। ಅಂದಾವಿರತಿಯೊಳಳವಟ್ಟ
ವನು ॥೮॥ ಇಹ ಪರ ಭೋಗದೊಳಹ ಸುಖವೇನು। ಬಹು ವಿಭವಂ
ಬಡೆದೊಡೆ ತಾನೇಸು॥ ಸುರ ನರ ವಂದ್ಯತೆಯಿಂದಹುದೇನು। ಸರಸಾಲಂ
ಕೃತಿ ರೂಪಿಂದೇನು॥ ಬಹುಸಿದ್ಧಿಗಳಂ ಪಡೆಯಲದೇನು। ಮಹಿಯೊಳಗಿ
ಹುದೆಲ್ಲವ ನರಿದೇನು॥ ಅಜಹರಿ ಪದವಿಗಳಿಂದಹುದೇನು। ನಿಜ ಸುಖಮಿಲ್ಲ
ದೊ ಡಿವರಿಂದೇನು॥ ಕಂಡಾಕ್ಷಣ ರಮಣೀಯಮಿವೆಲ್ಲ। ಉಂಡಾಗಲೆ ನಿರಸನ
ವಿಂತೆಲ್ಲ॥ ಸುಡುಗವನೊಲ್ಲೆನು ತಾನೆಂದವನು। ಬಿಡುವಂ ಕಾಮ್ಯ ನಿಷಿದ್ಧವ
ನವನು ॥೯॥ ಬಿಡಬೇಕೆನಿತನಿತಂ ಬಿಡುವನ್ನ। ಕಡುಚಪಲತೆ ಚಿತ್ತದೊ
ಳಳಿವನ್ನ॥ ವಿವಿಧವೆನಿಪ ವಾಸನೆಯುಳಿವನ್ನ। ಭವಮಾಲೆಯು ಕಡೆಯುಂ
ಕಾಂಬನ್ನ॥ ಕ್ರಮದಿಂ ನಿಜಪನಿದೆಂ ದರಿವನ್ನ। ಸಮತೆಯು ನೆಟ್ಟನೆ ನೆಲೆ
ಗೊಂಬನ್ನ॥ ಬಹು ದುಃಖ ವಿಷೂಚಿಕೆಮಾಣ್ಬನ್ನ। ಸಹಜಾರೋಗ್ಯತೆ
ದೊರಕೊಂಬನ್ನ॥ ಲೇಸೆಲ್ಲಿಯು ದಕಟಾತನಗೆಂದು। ಲೇಸಂ ಕೊಡುವವರ
ರ್ತನಗೆಂದು॥ ಚಿರತರವಹ ಯೋಚನೆ ವಿಡಿದವನು। ವಿರತಿಯ ಪರಿಪಾಕಂ
ಬಡೆದವನು ॥೧೦॥ ತಡೆಯದೆ ಸುಕೃತವನಾಚರಿಪವನು। ಬಿಡುವಂ ದುಷ್ಕೃ
ತವೆಲ್ಲವನವನು। ಧರ್ಮಂಗಳ ನೆಡೆವಿಡದಾಚರಿಪ। ಧರ್ಮ ಫಲಂಗಳನುರೆ
ಧಿಕ್ಕರಿಪ॥ ಪರರ ಸಿರಿಗೆ ಮತ್ಸರವಂ ಮಾಡ। ಪರಪೀಡೆಯ ನೆನಹಿ ನೊಳೊಡ
ಗೂಡ॥ ದೇಶೋಚಿತ ಕಾಲೋಚಿತವಾಗಿ। ಅಸುರ ಗತಿಯುಳಿದನುಗುಣ
ವಾಗಿ॥ ಒಂದೆರ ಡಿನಿವಾತುಗಳಂ ನುಡಿವ। ಕುಂದದಿಳಿಗೆ ಸೊಗಸಾಗಿರೆ

ನಡೆವ ॥ ಇಂತೆಸಗುವ ಯೋಗವನುಳ್ಳವನು । ಇಂತಾದಿಯ ಭೂಮಿಕೆಯುಳ್ಳವನು ॥೧೧॥ ಜೀವೇಶ್ವರ ಯೋಗವನರಿದಂದು । ಭಾವಾಧ್ಯಾಸಕೆ ಹರವಾದಂದು॥ ಭವದ ಲತೆಯ ಬೇರಂ ಕೊಯ್ದುವನು। ತವೆ ಪರಮಾನಂದವ ನೈದುವನು ॥ ... ... ... ... ॥ಶ್ರೀ॥

ಕಂದ ॥ ಗತಿಯೇಳನೆಯದಿದಕ್ಕತಿ ।
ಹಿತಮೆನಿಪನಿರೂಪಣಂಗಳೇಕಾದಶವಂ ॥
ತತಿಶಯಮಾಗಿರೆ ತಿಳಿಯ ।
ಲ್ಕತಿಪಾದಿತವಿಲ್ಲಿ ಸಾಧಕ ಸ್ಥಿತಿ ನಲವಿಂ ॥

ಇಂತು ಗತಿ ೭ಕ್ಕಂ ನಿರೂಪಣ ೭೭ಕ್ಕಂ ಚರಣ ೯೫೭ಕ್ಕಂ

ಮಂಗಳಮಸ್ತು

---

ಶ್ರೀ ಗುರು ಶಂಭುಲಿಂಗಾಯ ನಮಃ

## ಅಷ್ಟಮಗತಿ

---

ಸೂತ್ರ ॥ ಇಂತಾದಿಯ ಭೂಮಿಕೆಯೊಳ್ ।
ಸಂತಸದಿಂ ಮುಕ್ತಿ ಸಾಧನಂ ನಿಜವೈರಾ ॥
ಗ್ಯಂ ತಾನೆಂದೊರೆದೊಲವಿಂ ।
ದಂ ತಿಳುಪುವೆ ನೀಗಳಿನ್ನು ಯೋಗ ಕ್ರಮಮಂ ॥

ಗೀತೆ ॥ ಯೋಗಕೆ ಬೀಜಂ ರೂಪಂ ಕಾರ್ಯ । ಆಗಳುಮುಂ ಟವನರಿ ಸುವಿಚಾರ್ಯ ॥ ಯಮಮವಾದ್ಯಂಗವೆ ಬೀಜವೆನಿಕ್ಕು। ಕ್ರಮದೊಳವಂ ಮೇಣರಿಯಲ್ಬಕ್ಕು॥ ಪಲವಂದದ ಸದುಪಾಯಗಳಿಂದ। ಪಲವನುಭವಿಗಳ ಸಂಗತಿಯಿಂದ ॥ ಚಲಿಸುವ ಮನವದು ಸುಸ್ಥಿರದಿಂದ। ನಿಲಲದು ರೂಪೆನಿಸುವ ದೆಲೆಕಂದ ॥ ಮಗುಳೆ ಬಹಿರ್ವ್ಯಾಪಾರಂಗಳನು । ಮಿಗೆ ದುಃಖಪ್ರದ ಕರ್ಮಂಗಳನು ॥ ಒಲ್ಲದೆ ಬಿಡುವದು ಕಾರ್ಯಮದಾಗಿ । ಬಲ್ಲನೆ ತಿಳಿ ಯವನುಳ್ಳನೆ ಯೋಗಿ ॥೧॥ ಯೋಗಾಂಗಂ ಬಹುವಿಧಮಾಗಿರ್ಕು । ಯೋಗಿಗವೆಲ್ಲಂ ವಿಧಿಯಾಗಿರ್ಕು ॥ ಯಮಮೆಂಬುದು ತಿಳಿಯಲು ದಶಭೇದ । ಕ್ರಮದಿಂದಂ ನಿಯ

ಮಂ ದಶಭೇದ ॥ ಎಸೆವಾಸನವದು ಫಲವಾಗಿಹುದು । ಅಸುರೋಧನವೇಳುಂ ತೆರನಹುದು ॥ ಅನ್ನವನುಂಬುದು ಪ್ರತ್ಯಾಹಾರ । ಉನ್ನಿಸೆ ಧಾರಣೆ ಹೃದಯ ವಿಚಾರ ॥ ಸಲೆ ಶಿವ ಮೂರ್ತಿಯ ನೆನಹು ಧ್ಯಾನ । ನಿಲಲಲ್ಲಿಯೆ ಮನವದು ತಿಳಿ ಮೌನ ॥ ಇವು ಸಗುಣಾಷ್ಟಾಂಗದ ಸಂಜ್ಞೆಗಳು । ಇವರ ಸುಲಕ್ಷಣವರಿ ಶಾಸ್ತ್ರದೊಳು ॥ ೨ ॥ ಅಗುಣಾಷ್ಟಾಂಗಂ ತಿಳಿ ಬಳಿಕೆಂಟು । ಮಿಗಿಲೆನಿಸುತ್ತಿವು ಶಾಸ್ತ್ರದೊಳುಂಟು ॥ ತನುಮುಖ್ಯದ ವಿರತಿಯೆ ಯಮವಕ್ಕು । ಘನ ನಿಜ ಪದ ರತಿ ನಿಯಮವೆನಿಕ್ಕು ॥ ಬಾಹ್ಯದುದಾಸೀನವೆ ಯಾಸನವು । ಬಾಹ್ಯ ಕರಣದಳಿ ವಸುರೋಧನವು ॥ ಜಡ ವಿಮುಖತೆಯದು ಪ್ರತ್ಯಾಹಾರ । ಪಡೆದ ನಿಜಸ್ಥಿತಿ ಧಾರಣೆ ಶೂರ ॥ ಪರಮಂ ತಾನೆಂಬುದೆ ತದ್ಧ್ಯಾನ । ಪಿರಿದಲ್ಲಿಯೆ ಮನ ಮುಳು ಗಲು ಮೌನ ॥ ಸುತ ನಿರ್ಗುಣಮಿವರೊಳಗನುವಾಗಿ । ಮತಿ ನಿರ್ಮಳತೆಯೊ ಳಿಹನಾ ಯೋಗಿ ॥ ೩ ॥ ವೈರಾಗ್ಯದ ನಿಜಸುಖಮಂ ಬಲ್ಲ । ಸಾರ ಶ್ರುತಿ ಪಥಮಂ ನೆರೆ ಬಲ್ಲ ॥ ದೇಹಾದಿಗಳಾತ್ಮತೆಯಂ ಕಳೆವ । ಊಹಿಸಲಾತ್ಮ ವಿಚಾ ರದೊಳುಳಿವ ॥ ಗುರುಗಳನೈದಿ ಬಿಡದೆ ಸೇವಿಸುತ । ನಿರುತಂ ಮನಮುಟ್ಟಿ ವಿಚಾರಿಸುತ ॥ ಸಾರತರದ ಶಾಸ್ತ್ರವ ಕೇಳುತ್ತ । ಘೋರಭವದ ಕೇಡಂ ಕಾಣು ತ್ತ ॥ ಇರಲೆರಡನೆಯ ಪದಸ್ಥಿತನವನು । ಪರಮ ವಿಚಾರದ ಭೂಮಿಕೆಯ ವನು ॥ ಇಂತೆಲ್ಲವನ ವಿಚಾರಣವೆಲ್ಲ । ಮುಂತೆ ವಿಕಲ್ಪಂ ದಿಟಕದು ಸಲ್ಲ ॥ ೪ ॥ ಸಕಲಾರ್ಥಂಗಳ ಬಿಡುವಂತೊರೆವ । ಸಕಲಸುಖಂ ದೊರೆವಂತಿರಲೊರೆವ ॥ ಸಾದರದಿಂ ಮಿಗೆ ಸದ್ಗುರುವಿಂದ । ವೇದರಹಸ್ಯಾರ್ಥವನೊಲವಿಂದ ॥ ಕೇಳುವ ಹೊತ್ತೀಶ್ವರಲಕ್ಷಣೆಯ । ಮೇಲಾ ಜೀವನ ನಿಜ ಲಕ್ಷಣೆಯ॥ಒಂದರೊಳಾ ದು ಭಯಾಧ್ಯಾಸವನು । ಮುಂದಾ ಬಹುವಿಧ ದಧ್ಯಾಸವನು ॥ ಜೀವೇಶ್ವರರೇಕ ತ್ವದ ನಿಲವ । ಭಾವಿಸುತಾ ಸಹಜಾತ್ಮನ ನಿಜವ ॥ ತಿಳಿವನ್ನೆಗಮಾರ್ವೃತ್ತಿ ಹುದು । ತಿಳಿಯಧ್ಯಾತ್ಮ ವಿಚಾರವೆನಿಪುದು ॥೫॥ ಅರಿವಂಶವನೆಲ್ಲವನರಿವವನು। ಅರಿದರ್ಥದೊಳಭಿರತಿಯುಳ್ಳವನು ॥ ಮುಟ್ಟೆಯು ಮುಟ್ಟದ ಹೆರೆಯನದೆಂತು। ಬಿಟ್ಟು ಭುಜಂಗಂ ಸುಖಮಿಹುದಂತು ॥ ವೈರಾಗ್ಯದ ಬಲದಿಂ ಬಿಟ್ಟಿರ್ದ । ಆರಯ ವಾಸನೆಯಂ ತೊಟ್ಟಿರ್ದ ॥ ಭ್ರಾಂತಿಗಳೆಲ್ಲವನುರೆ ಬಿಟ್ಟವನು । ಶಾಂತಿ ಸುಖಂ ತನಗಳವಟ್ಟವನು ॥ ಸುವಿಚಾರಕ್ಕೆಡರಂ ಪುಟ್ಟಿಸುವ । ತವೆ ಪೂರ್ವಾ ರ್ಥದ ನಿಯತಿಯೊಳೆಸೆವ ॥ ಬಳಿಕೆಯನುಳಿದು ಮಹಾ ವಾಕ್ಯವನು । ತಿಳಿವಂ ಗುರುವರನೊಲವಿಂದವನು ॥೬॥ ತತ್ತ್ವಮಸೀತಿ ಮಹಾವಾಕ್ಯಕ್ಕೆ । ತತ್ತ್ವಮ

ಸೀತಿ ಪದಂಗಳವಕ್ಕೆ ॥ ಶಿವಜೀವೈಕ್ಯಂ ಕ್ರಮದಿಂದರ್ಥ । ಅವು ಮತ್ತಂ ವಾಚ್ಯಂ ಲಕ್ಷ್ಯಾರ್ಥ ॥ ಮಾಯಾದ್ಯುಪಹಿತ ತತ್ಪದ ವಾಚ್ಯ । ಕಾಯಾದ್ಯುಪಹಿತ ತ್ವಂ ಪದ ವಾಚ್ಯ ॥ ಪರತರ ಬೊಮ್ಮವೆ ತತ್ಪದ ಲಕ್ಷ್ಯ । ತುರ್ಯನಿಜಾತ್ಮನೆ ತ್ವಂ ಪದಲಕ್ಷ್ಯ ॥ ಉಭಯ ಪದದ ವಾಚ್ಯಾರ್ಥವ ಬಿಟ್ಟು । ಶುಭ ಲಕ್ಷ್ಯಾರ್ಥವ ಲಕ್ಷಿಸಿಕೊಟ್ಟು ॥ ಚಿದಖಂಡೈಕ ರಸವನರುಹಿಪುದು । ಅದುತಾನಸಿ ಪದದರ್ಥವೆನಿಪ್ಪುದು ॥ ೭ ॥ ಆತನೆಯಿಾತನೆನಿಪ ವಾಕ್ಯಕ್ಕೆ । ಈತೆರನಹುದಿಂತೀ ವಾಕ್ಯಕ್ಕೆ ॥ ಆ ಕಾಲಾದಿಕವಾ ರೂಪುಗಳು । ಈ ಕಾಲಾದಿಕವೀರೂಪುಗಳು ॥ ಬಿಟ್ಟವನೋರ್ವನೆಯುಂದೊಡಬಾಧ್ಯ । ನೆಟ್ಟನೆ ನೋಡಿಂತಿಲ್ಲಿಯೆ ಬೋಧ್ಯ ॥ ಅಲ್ಲಿಯ ಸರ್ವಜ್ಞತ್ವಾದಿಕವ । ಇಲ್ಲಿಯ ಕಿಂಚಿಜ್ಞತ್ವಾದಿಕವ ॥ ನೀತಿಗಳೆದು ಪದವೆರಡರೊಳುಳಿದ । ಚೈತನ್ಯವನೊಂದೆಂಬುದ ತಿಳಿದ ॥ ಲಕ್ಷಣಮಿಂತೀ ಪದ ಲಕ್ಷ್ಯಾರ್ಥ । ಅಕ್ಷಯ ಪದವೆನಿಪ್ಪುದು ಪರಮಾರ್ಥ ॥ ೮ ॥ ಜೀವೇಶ್ವರರೇಕತ್ವಮಿದೆಂದು । ಭಾವಿಸಿ ತಿಳಿ ನಿಜವಿಂತಿಹುದೆಂದು ॥ ಘಟಮಠವೆರಡಂ ಬಿರ್ಚಿದೊಡೆಂತು । ದಿಟಮುಳಿದೆಂತಿಹು ದಾಗಸವಂತು ॥ ಭೃಗುಜ ರಘುಜ ಭಾವನೆಯುಳಿದೆಂತು । ಮಿಗುವುದು ವಿಷ್ಣುತ್ವವೆ ವೊಂದಂತು ॥ ಬಿಂದುದ್ವಯಮಂ ತೊಡೆಯಲದೆಂತು । ಒಂದಲ್ಲದೆ ದಶ ಶತವಿಲ್ಲಂತು ॥ ಅಂದುಗೆ ಮಕುಟಾಕೃತಿಯುಳಿದೆಂತು । ಒಂದೇ ಮಿಸುನಿಯ ಗಟ್ಟಿಯದಂತು ॥ ಇಂತು ನಿಜೈಕ್ಯಂ ಬೇರೊಂದಿಲ್ಲ । ಮುಂತೆ ವಿಕಲ್ಪಂ ಮಾಡಲು ಸಲ್ಲ ॥ ೯ ॥ ಬಳಿಕಿಂತಾತ್ಮ ವಿಚಾರತೆಯಿಂದ । ತಿಳುಪಿದ ಸದ್ಗುರು ಯುಕ್ತಿಗಳಿಂದ ॥ ದೇಹಾದಿಕವಾತ್ಮೇತರವೆಂದು । ದೇಹಾದಿಯನರಿ ಪರಿವಾನೆಂದು ॥ ದಶಮ ಪುರುಷನಳಲುವ ಬಗೆಯಂತು । ಪುಸಿ ಕಡೆಗೆಲ್ಲವ ನೋಡಿದೊಡಂತು ॥ ಎನುತಂ ಜ್ಞಾನಾಭ್ಯಾಸಂ ನೆಲಿಸಿ । ತನಗಾ ಜ್ಞಾತೃತ್ವಾದಿಕಮೆನಿಸಿ ॥ ಇರ್ದಿರವಂ ಸುವಿಚಾರದಿ ನೋಡಿ । ಪೊರ್ದಿದ ಬಗೆಗಳ ನುಳಿದೀಡಾಡಿ ॥ ನಿಸ್ಸಂಗತ್ವವೆ ತನಗಳವಟ್ಟು । ನಿಸ್ಸಂಶಯದೊಳಿಹನು ಮತಿನಟ್ಟು ॥ ೧೦ ॥ ಜ್ಞಾನಕೆ ಬೀಜಂ ರೂಪು ಕಾರ್ಯ । ತಾನುಂ ಟವನರಿವುದು ಸುವಿಚಾರ್ಯ ॥ ಶ್ರವಣಾದಿಕವೇ ಬೀಜಮಿದೀಗ । ಅವು ಶ್ರುತಿ ಗೇಳ್ವುದು ಯುಕ್ತ್ಯನುಯೋಗ ॥ ಅಹಮಾತ್ಮರನು ಪೃಥಕ್ಕರಿಸುವುದು । ಸಹಜವದಕೆ ರೂಪೆಂದೆನಿಸುವದು ॥ ಮತ್ತಾ ಹಮ್ಮಿನೊಳಿಹ ಸಂಸಾರ । ಮೊತ್ತಂ ಬರಿಸುವದುಃಖ ವಿಚಾರ ॥ ತೋರಿದೊಡವಕಾತ್ಮನು ಸಾಕ್ಷಿಕನು । ಬೇರದರಿಂದವೆ ಸುಖಿ ಚಿನ್ಮಯನು ॥ ಎಂಬುದೆ ಕಾರ್ಯವಿದನು

ಬಲ್ಲವನು । ನಂಬಾ ನಿಸ್ಸಂಗತೆಯುಳ್ಳವನು ॥೧೧॥ ಮೂರನೆಯೆಸೆವೀ ಭೂಮಿಕೆ ತಾನು । ತೋರುತ್ತಿಹುದೆಂತೆನೆ ನಿಜಸೂನು ॥ ಅಲ್ಲಿ ಮೊದಲು ಸಾಮಾನ್ಯಸಂಗ । ಬಲ್ಲನೆ ಬಳಿಕ ವಿಶೇಷುಸಂಗ । ... ... ॥ಶ್ರೀ॥

ಕಂದ ॥ ಗತಿಯೆಂಟನೆಯದಿದಕ್ಕತಿ ।
ಹಿತಮೆನಿಪ ನಿರೂಪಣಂಗಳೇಕಾದಶಮುಂ ॥
ತತಿಶಯಮಾಗಿರೆ ತಿಳಿಯ ।
ಲ್ಪ್ರತಿಪಾದಿತವಿಲ್ಲಿ ನಿಜಕೆ ನಿಸ್ಸಂಗತ್ವಂ ॥

ಅಂತು ಗತಿ ೮ಕ್ಕಂ ನಿರೂಪಣ ೮೮ಕ್ಕಂ ಚರಣ ೧೦೮೮ಕ್ಕಂ

ಮ ು ಂ ಗ ಳ ಮ ಸ್ತು

---

ಶ್ರೀ ಗುರು ಶಂಭುಲಿಂಗಾಯ ನಮಃ

## ನ ವ ಮ ಗ ತಿ

---

ಸೂತ್ರ । ಇಂತೀ ಪರಿ ಭೂಮಿತ್ರಯ ।
ಮಂ ತಿಳುಪಿದೆನಲ್ಲಿ ಮೂರನೆಯ ನಿಸ್ಸಂಗ ॥
ಕ್ಕಂತುಭಯ ಭೇದಪದನೀ ।
ಗಂ ತೋರ್ಪೆನನೂನ ಯುಕ್ತಿಸಂಗತ ಮಾಗಲ್ ॥

ಗೀತೆ ॥ ಪೊರಗಣ ವಿಷಯದ ಚಿಂತೆಯನುಳಿದು। ಬರಿಗತ ಗೋಷ್ಠಿಗಳಂ ನೆರೆಗಳೆದು॥ ನಿಜವೈರಾಗ್ಯದ ಬಲವೆಡೆಗೆಡದೆ। ಸುಜನರ ಗೋಷ್ಠಿಗಳಂ ಸಲೆ ಜಿಡದೆ ॥ ತಡೆಯದೆ ಸುವಿಚಾರದ ಭಸಿತವನು । ಪಿಡಿದಾ ಬುದ್ಧಿಯೆನಿಪ ಮುಕುರವನು ॥ ಬೆಳಗಿ ವಿಷಯ ಮಲಿನಂ ಗಳೆದಂಗೆ । ಬಳಿಕದರೊಳು ತನ್ನಂ ನೋಳ್ಪಂಗೆ॥ ಮುಚ್ಚಿದ ಬಗೆಯಂ ಕಳೆದುಳಿದಿರ್ದ। ಬಚ್ಚಬರಿಯಸಮಸುಖವೆನಿಸಿರ್ದ ॥ ನಿಜವೇ ತೋರುವುದಿದಿರಿಟ್ಟಂತೆ। ಸುಜನನೆ ಕರಗತ ಮಾಣಿಕದಂತೆ ॥೧॥ ಆನೆಯನಾದಿಯು ಸದ್ರೂಪಾಗಿ । ಆನೇ ನಿಷ್ಕಳಚಿದ್ರೂಪಾಗಿ॥ ಎಂದುಂ ನಿರ್ಮಳವಹ ಸುಖವಾಗಿ। ಒಂದನಗನ್ಯಂ ಬೇರಿಲ್ಲಾಗಿ॥ ಕೊಡದಂತಿರೆ ಯುತ್ಪಾದ್ಯನುಮಲ್ಲ! ಜಡದವಧಿಯಂತೆ ವಿಕಾರ್ಯನುಮಲ್ಲ॥ ದ್ವಿಜನಂತಿರೆ ಸಂಸ್ಕಾರ್ಯನುಮಲ್ಲ। ನಿಜನಾಕದ ಪೋಲ್ಪಾಪ್ಯನುಮಲ್ಲ ॥ ನೆರೆಯದರಿಂ ನಾಲ್ಕೇಕರ್ಮ

ಕ್ಕೆ। ಗುರಿಯಾನಲ್ಲದರಿಂ ಮೋಕ್ಷಕ್ಕೆ॥ ತಾನಲ್ಲಂ ಸಾಧಕನೆಂಬವನು। ನಾನಾ ಕರ್ಮದಸೋಂಕಿಲ್ಲದನು ॥೨॥ ಜ್ಞಾನಾಭಾಸವೆನಿಪ ಹಂಕಾರ। ತಾನೆಸಗಿದ ಕರ್ಮದೊಳು ಶರೀರ। ಘಟಿಪುದು ಭೋಗಿಪ ಕರ್ಮ ಪದದೊಳು । ನಟಿಪುದು ಸುಖದುಃಖಾಕಾರದೊಳು॥ ಆ ಸುಖದುಃಖವನನುಭವಿಸುತ್ತ । ಈ ಸಂಸೃತಿಯೊಳು ಸಂಚರಿಸುತ್ತ ॥ ಇಹ ಕತದಿಂದದು ಕರ್ತನು ತಾನೆ । ಸಹಜಂ ಮಾಡಿದ ನುಣವುದು ತಾನೆ ॥ ಅದ ಕಧಿಕರಣವೆನಿಪ ತನ್ಮಾತ್ರ । ಪದವಾನದರೊಳ್ಕಿಂಚಿನ್ಮಾತ್ರ ॥ ಪುದಿದಿಂತಿಲ್ಲಿರಲಾನು ನಿರಂಗ । ಅದರಿಂದೆನಗಾದದು ನಿಸ್ಸಂಗ ॥೩॥ ನಿರವಯವವೆನಿಸಿರ್ದಾಕಾಶಕ್ಕೆ । ಚರಿಸುತ್ತಲ್ಲಿಹ ವಿಹಗ ಚಯಕ್ಕೆ ॥ ಅವಕಾಶತೆಯಲ್ಲದೆ ತತ್ಸಂಗ। ಸವನಿಸದವರ ವಿಕಾರ ತರಂಗ ॥ ಈ ವಿಧದಿಂ ನಿಷ್ಕಳ ನಿಜದಲ್ಲಿ । ಜೀವನೆನಿಸಿ ತೊಳಲುತ್ತಿಹನಲ್ಲಿ ॥ ಉಂಟಾ ಹಮ್ಮಿನ ಸಂಸೃತಿಭಂಗ । ಅಂಟದ ನಾನದರಿಂ ನಿಸ್ಸಂಗ ॥ ಎಂಬ ಸಕಲ ನಿಷ್ಕಳದ ವಿಭೇದ । ಇಂಬಿಂತೋರಲು ನಿಜಸುಖಿಯಾದ ॥ ಸ್ಥಿತಿ ತನಗಿದು ಸಾಮಾನ್ಯಾಸಂಗ । ಸುತ ಮುಂದಣದು ವಿಶೇಷಾಸಂಗ ॥೪॥ ತೋರಿಕೆ ತೋರ್ಕೆಗೆ ಕಾರಣವಲ್ಲ। ಕಾರ್ಯಕೆ ಕಾರಣವದರೊಳಗಿಲ್ಲ ॥ ಬ್ರಹ್ಮವು ಕಾರಣವಾಗಲರಿಯದು । ಬ್ರಹ್ಮವು ಚಿತ್ತದರಿಂ ವಿಕರಿಸದು ॥ ಮಾಯೆಯು ಕಾರಣವಾಗಲರಿಯದು। ಮಾಯೆ ವಿಚಾರಿಸೆ ಪುಸಿರೂಪಿನದು॥ ಕಾರಣತೆಯುಮಿಂತಿವಕಿಲ್ಲಾಗಿ । ಕಾರ್ಯಕೆ ಕಾರಣವಿಲ್ಲವದಾಗಿ ॥ ಗುಣಘಣೆಯಂದದಿ ತೋರಿಕೆಯಲ್ಲ । ಗಣಿಸಲು ಬಗೆಯಲ್ಲದೆ ದಿಟಕಿಲ್ಲ ॥ ಶ್ರುತಿಮತವಿಂತೀ ಯುಕ್ತಿಗಳಿಲ್ಲ । ಪ್ರತಿಮತವಿದರೊಳು ಸುರಲಿಂಬಿಲ್ಲ ॥೫॥ ಜಗವಪ್ಪುದು ಮೇಣೀಶ್ವರನಿಂದ । ಬಗೆ ಕಾರಣನೀಶ್ವರನದರಿಂದ ॥ ಎನಲು ಮರನೆ ಮಾಳಿಗೆಯಾದಂತೆ । ಪುನರಪಿ ಮರನಿಲ್ಲದೆ ಪೋದಂತೆ ॥ ಪರಶಿವನೇ ಜಗದಾಕೃತಿಯಾಗಿ । ಪರಿಣಮಿಸಿದೊಡಂ ತವನಿಲ್ಲಾಗಿ ॥ ಲೋಕ ನಿಯಾಮಕನಿಲ್ಲವೆನಿಕ್ಕು । ಈ ಕಲ್ಪನೆ ವಿಧಿಯಿಲ್ಲದುದಕ್ಕು । ಇದ ನೊಪ್ಪಲೆ ಬಾರದು ದೃಗ್ದೃಶ್ಯ । ಪುದಿದಿಹ ಲೋಕದ ನಿಯತಿಯವಶ್ಯ ॥ ತೋರಿಹುದಾಗೀಶ್ವರನು ಜಗಕ್ಕೆ । ಕಾರಣನಲ್ಲದು ಪುಸಿಯು ದಿಟಕ್ಕೆ ॥೬॥ ತರುರೂಪಿಂ ಬೀಜವೆ ಬಳಿಕೆಂತು । ಪರಿಣಮಿಸುವದಾ ಪ್ರಕೃತಿಯುಮಂತು ॥ ತೋರುವದೀ ಜಗದಾಕೃತಿಯಿಂದ ಕಾರ್ಯಕೆ ಕಾರಣಮುಂಟದರಿಂದ ॥ ಎನೆ ಕಾರಣವಳಿದಾ ಕಾರಿಯವು। ಅನುದಿನಮಿಹುದುಳಿದಾ ಕಾರಿಯವು ॥ ಬಳಿಕಾಗದು ಮುಂನಿನ ಕಾರಣವು। ತಿಳಿಯಲು

ದರಿಂ ಜಗಕಿಲ್ಲಂ ಲಯವು ॥ ಮಾಣಲಿಯೆಂದರೆ ತೋರುವ ಸೃಷ್ಟಿ । ಜಾಣಿಸೆ ಲಯವೇಳ್ವಾಗಮ ಕ್ಲಪ್ತಿ ॥ ಇರಲಿಂತಿದನೊಡಬಡೆ ಲೇಸಲ್ಲ । ಪರಿಕಿಸೆ ಕಾರ್ಯಕೆ ಕಾರಣಮಿಲ್ಲ ॥೭॥ ಭೂಮಿಯೊಳುದಿಸಿದ ಮರಮುಟ್ಟೆಂತು । ನೇಮದೊಳೆಲ್ಲಲ್ಲಡಗುವದಂತು॥ ಇದು ವಿಶ್ವ ಪ್ರಕೃತಿಯೊಳಳವಟ್ಟು। ಅದು ತಾನಲ್ಲಿಯದಲ್ಲಿಯೆ ಕೆಟ್ಟು ॥ ಪೋಪುದು ತತ್ಪ್ರಕೃತಿಗೆ ನಿಜವಾದ । ರೂಪಂ ತಾನಿರ್ಲಕ್ಷ್ಯದ ಭೇದ ॥ ಹೇಮದ ವಿನ್ಯಾಸ ವಿಶೇಷವನು । ಆ ಮಕುಟಾದಿಕ ವೆನುತಿಹರದನು॥ ಅದರಿಂ ವಿಪರೀತಾಕೃತಿಯಲ್ಲ। ವಿದಿತಂ ಬಗೆಯಲು ದಿಟವ ದಕಿಲ್ಲ॥ ಬಗೆಯದು ಮಾಯಾಮಯಸಂಬಂಧ। ಮಿಗೆ ಮಾಯೆಯೆ ಯವಿಚಾರಿತಬಂಧ ॥ ೮ ॥ ಪುಸಿಯಾರೋಪಿತ ಜೀವಾಭಾಸ । ಎಸೆವುದು ಬಗೆಯಂದದರ ವಿಲಾಸ ॥ ಇನಿತು ಪದಾರ್ಥಂಗಳ ರೂಪಾಗಿ । ಕನಸಿನ ಪೋಲು ಜಗತ್ರಯಮಾಗಿ ॥ ತೋರುವುದಾಯಾ ರೂಪಿಂ ದೃಷ್ಟಿ । ಬೇರೆನಿಸುತ್ತಿಂತಾಯ್ತೀ ಸೃಷ್ಟಿ॥ ಸ್ಥಿರವಲ್ಲಿದು ದಿಟವೆಂಬೀ ಬುದ್ಧಿ । ನಿರುತಂ ಪುಸಿಯೆಂದೆಂಬುದೆ ಸಿದ್ಧಿ॥ ಅದರಿಂ ನಿತ್ಯಾಸಂಗಂ ತಾನು । ಸದಮಲಸುಖ ಪೂರ್ಣವೆ ಯಾಗಿಹನು ॥ ಅಂತು ವಿಶೇಷಾಸಂಗದ ಭೂಮಿ । ಇಂತೆಂ ದರಿದಾತನೆ ಸುಕ್ಷೇಮಿ ॥ ೯ ॥ ಆ ನಿಸ್ಸಂಗತೆ ಪಡೆದವನಿರವು । ಸೂಸು ತಿಳಿಯೆ ಕಲ್ಪನೆಗದು ಪರವು ॥ ಅದು ತೆರೆಯಡಗಿದ ಸಾಗರದಂತೆ । ಅದು ಮೇಘಂ ತೊಲಗಿದ ನಭದಂತೆ ॥ ಪೊರೆಗಳೆದೆಲೆ ವಾಳೆಯ ಸುಳಿಯಂತೆ । ಮರುತನಡಗಿದೆಡೆಯಣ ಸೊಡರಂತೆ ॥ ಎಲೆಯುದುರಿದ ತರುವಿನ ಪರಿಯಂತೆ। ನೆಲಸಿದ ಸುಖನಿದ್ರಿತ ನರನಂತೆ ॥ ಮಂಜುದೊಲಗಿ ಮಿರುಗುವ ರವಿಯಂತೆ । ಮಂಜೀರಾದಿಯಳಿದ ಪೊನ್ನಂತೆ ॥ ಎಸೆವುದು ಸಚ್ಚಿನ್ಮಾತ್ರವೆಯಾಗಿ। ಮುಸಗಿಹುದೊಂದರ ಸೋಂಕಿಲ್ಲಾಗಿ ॥ ೧೦ ॥ ವಿಕೃತಿಯನುಳಿದೀ ಸಂಸ್ಕೃತಿಯಲ್ಲಿ । ಸುಕೃತದಿ ವೈರಾಗ್ಯಂ ದೊರೆದಲ್ಲಿ ॥ ವಿರಮೋಕ್ಷಾಪೇಕ್ಷೆಯ ಬಲದಿಂದ । ಗುರುವರನೊರೆದ ಸುಯುಕ್ತಿಗಳಿಂದ ॥ ವರಚಿಪ ಶಾಸ್ತ್ರದ ಸುವಿವೇಕದೊಳು। ದೊರಕೊಂಡ ಜಡಾಜಡ ಭೇದದೊಳು ॥ ಆ ಜಡಸಂಗಂ ತನಗಿಲ್ಲೆಂಬ । ಆ ಜಡತನುಮುಖ್ಯವೆ ಪುಸಿಯೆಂಬ ॥ ಮನದಾಳೋಚನೆಯಿಂದ ಸಮಂತು । ಅನುವಾಯಿತು ಭೂಮಿತ್ರಯಮಿಂತು ॥ ಇದು ಬುದ್ಧಿಯ ಸುವಿವೇಕದೊಳಹುದು। ಅದರಿಂ ಜಾಗ್ರಮಿದೆಂದೆನಿಸಿಹುದು ॥೧೧॥ ಯೋಗವನಭ್ಯಾಸಿಪ ಮಾನವನು । ಯೋಗಂ ಸಿದ್ಧಿಸದೊಡಲಳಿದವನು ॥ ಏನಹನೆಂದುರೆ ಕೇಳ್ದನು ಸುತನು । ಆನುಂದದಿಪೇಳ್ದಂ ಗುರುವರನು ॥...॥ಶ್ರೀ॥

ಕಂದ ॥ ಗತಿಯೊಂಭತ್ತನೆಯದಿದಕೆ ।
ಹಿತಮೆನಿಪ ನಿರೂಪಣಂಗಳೇಕಾದಶವಂ ॥
ತತಿಶಯಮಾಗಿರೆ ತಿಳಿಯ ।
ಲ್ಪತಿಪಾದಿತವಿಲ್ಲಿ ತನಗೆ ನಿಸ್ಸಂಗಯುಗಂ

ಅಂತು ಗತಿ ೯ಕ್ಕಂ ನಿರೂಪಣ ೯೯ಕ್ಕಂ ಚರಣ ೧೨೨೪ಕ್ಕಂ

ಮಂಗಳಮಸ್ತು

---

ಶ್ರೀ ಗುರು ಶಂಭುಲಿಂಗಾಯ ನಮಃ

## ದಶಮ ಗತಿ

---

ಸೂತ್ರ ॥ ಕುಂದಿಲ್ಲದೆ ಭೂಮಿತ್ರಯ ।
ದಂದಂ ಜಾಗರಣಮೆಂದು ಪೇಳ್ದಿಂತೊಲವಿಂ ॥
ಮುಂದೆ ಚತುರ್ಭೂಮಿಕೆಗಳ ।
ನಂದೊದಗುವವಸ್ಥೆಯುಮ್ಮನಂಬುಗೆಪೇಳ್ವೆಂ ॥

ಗೀತೆ ॥ ಕೇಳೆಲೆ ಸನ್ಮತಿ ಕೈರವಚಂದ್ರ । ಪೇಳುವೆನಧಿಗತ ನಿಜಸುಖ ಸಾಂದ್ರ ॥ ಹುಟ್ಟಲು ಹೊಂದಲು ಬೇಸತ್ತಂಗೆ । ನಟ್ಟನೆ ಯೋಗಾಭ್ಯಾಸದ ವಂಗೆ ॥ ಹಿಂದಣ ದುರಿತಕ್ಷಯವಾಯಿತ್ತು । ಅಂದಾ ಭವದ ಸುಕೃತವೊದಗಿತ್ತು ॥ ಎಂಬುದಕಿದು ಕುರುವಾಯ್ತು ವಿರಕ್ತಿ। ಬೆಂಬಳಿ ವಿಡಿವುದು ಮೋಕ್ಷಾಸಕ್ತಿ॥ ಇಂದಾರಬ್ಧ ವಶದಲಹಪಾಪ। ಬಂದೊಡದನು ಮೇಣ್ಸುಡುಗನುತಾಪ ॥ ಸಾಧು ಸಮಾಗಮನಾದಿಗಳಿಂದ । ಸಾಧಿತಮಾದುದು ಪುಣ್ಯದವೃಂದ ॥ ೧ ॥ ತಿಳಿಯಾತಂಗಭ್ಯಾಸಿಪ ಯೋಗ । ಫಲಿಸದ ಮುನ್ನವೆ ದೇಹ ವಿಯೋಗ ॥ ಆದೊಡೆ ಪಾಪದ ಹೊಲಬಿಲ್ಲಾಗಿ । ಛೇದಿಸೆ ದುಃಖಂ ತೋರದೆ ಪೋಗಿ ॥ ಬಚ್ಚಬರಿಯ ಪುಣ್ಯದಲನುಬಂಧ । ಅಚ್ಚ ಸುಖವ ನುಣಬೇಕದರಿಂದ॥ ಆಯಾ ಭೂಮಿಕೆ ಗನುಗುಣವಾಗಿ । ಆಯಾ ಮೇಲಣ ಲೋಕಕೆ ಪೋಗಿ ॥ ಆಯಾ ವಿಭವಂಗಳನೆಡೆಗೊಂಡು । ಆಯಾ ಸುಖ ಭೋಗಂಗಳನುಂಡು ॥ ಆ ಪುಣ್ಯದ ಫಲ ಕೆಲಕಾಲಕ್ಕೆ । ಪೋಪುದರಿಂದ ಬಹನೀಲೋಕಕ್ಕೆ ॥ ೨ ॥ ನೆಲಸಿದ ಸಿರಿವಂತರಯೋಗಿಗಳ । ಕುಲದೊಳುದಿಸಿ ಮುನ್ನಿನಭೂಮಿಗಳ ॥ ಒಳಗೆನಿತಳ

ವಟ್ಟಿತು ಮತ್ತನಿತ । ಗಳಿಲನೆ ಪಡೆವನು ಮೇಲತಿಗುಣಿತ ॥ ಕೊಡುತ್ತಂ ಸಜ್ಜನ ಗೋಷ್ಠಿಗಳ। ಮಾಡುತ್ತಲ್ಲಿ ವಿಚಾರದೆಶೆಗಳ॥ ಪೊಕ್ಕು ಮಗುಳೆ ಪೇಳ್ವ ರ್ಥಂಗಳನು । ಧಿಕ್ಕನೆ ತಿಳಿದು ರಹಸ್ಯಂಗಳನು ॥ ನುಡಿವಾಚಾರ್ಯನ ಪದಸಂ ಗತಿಯ । ಬಿಡದಾಳೋಚಿಸಿ ನಿಸ್ಸಂಗತಿಯು ॥ ತಿಳಿದಾಸಾಮಾನ್ಯಾಸಂಗವನು । ಬಳಿಕ ವಿಶೇಷಾಸಂಗವಡೆವನು ॥೩॥ ಆಗಳೆಯಾ ನಿಸ್ಸಂಗತೆಯವನು । ಯೋಗಿ ಯೆನಿಸಿಕೊಂಬನು ಬಳಿಕವನು ॥ ಮೊದಲೆಂತು ಸದಾಚಾರದೊಳಿರ್ಪ । ಅದ ನೆರೆಯುಡುಗದೆ ಕಡೆಮುಟ್ಟಿರ್ಪ ॥ ಅಂತಾ ಮುನ್ನಿನ ಸುಗುಣಂ ಗೆಡದೆ । ಮುಂತಾ ಸದ್ಗೋಷ್ಠಿಗಳಂ ಬಿಡದೆ ॥ ಇಹನವನಜ್ಞಾನ ತಮಸ್ಸೂರ್ಯ । ಆಹನಂತಾ ಯೋಗಿಯೆ ನೋಡಾರ್ಯ ॥ ಮೊಳೆವುದು ಮೊದಲು ಧರೆಯೊ ಳಾಪುಣ್ಯ । ದಳವೇರುವ ದೆರಡನೆಯೊಳಗಣ್ಯ ॥ ಮೂರನೆಯಲ್ಲಿ ಫಲಿತವಾಗಿ ಹುದು । ನೀರಸೆ ಯೋಗಿಗದನುಭವವಹುದು ॥೪॥ ಆತನು ಮೇಲಣ ಭೂ ಮಿಗೆ ಮುನ್ನ । ಆ ತನುವಳಿಯೆಲವಂ ತಿಳಿ ತನ್ನ ॥ ನಿಜವಹ ಬಗೆಗನುಗುಣ ವಾಗಿರ್ದ । ಅಜ ಹರಿ ಶಿವ ಪದ ಮೊದಲಾಗಿರ್ದ ॥ ಒಂದರೊಳಿಬ್ಬಾ ಭುವ ನಂಗಳನು । ಮುಂದೆ ಪಡೆದು ತದ್ಭೋಗಂಗಳನು ॥ ಅನುಭವಿಸುತ ಸುರ ಸಿದ್ಧಾದಿಗಳ । ಮನು ಮುನಿ ಗಂಧರ್ವಾದಿ ತತಿಗಳ ॥ ಓಲಗ ಗೊಳುತಖಿ ಳೋತ್ತಮನಾಗಿ । ಲೀಲೆಯೊಳಿಹನಾತ್ಮಜ್ಞಸುಯೋಗಿ ॥ ಅಲ್ಲಿಯೆ ತಾನೊಲ ವನ್ನೆ ಗಮಿಹನು । ಅಲ್ಲಿಯೆ ನಿರ್ವಾಣವನ್ನೈದುವನು ॥೫॥ ಈಶ್ವರ ನಾಮವು ರಸನೆಗೆ ಬರಲು । ಶಾಸ್ವತ ಸುಕೃತಂಗಳಿಗಿದು ಮಿಗಿಲು ॥ ನುತಮೂರ್ತಿ ಧ್ಯಾನಂ ಮನಗೊಳಲು । ಶತಕೋಟಿ ಜಪಂಗಳಿಗಿದು ಮಿಗಿಲು ॥ ಪರಿಕಿಸೆ ಮೂರ್ತಿ ಧ್ಯಾನದ ಬಳಕೆ । ದೊರಕೊಳುತಿರಲಾ ಧ್ಯಾನದ ಕುಳಕೆ ॥ ವಿಸಾ ನೋನೆರೆ ಮಿಗಿಲದರಿಂದ । ಲೇಸೆನೆ ತಿಳಿವ ಗುರೂಕ್ತಿಗಳಿಂದ ॥ ಪರಮೇಶ್ವರ ಜೀವೈಕ್ಯತೆವಡೆದ । ಪರಿಭವವಿದು ಪುಸಿಯೆಂಬುದನರಿದ ॥ ಗುಣನಿಧಿ ಮುಕ್ತಂಗೆ ೞರ್ವರು ಛರಿಯೆ । ಅಣಿಮಾದಿಕ ವಾತಂಗಚ್ಚರಿಯೆ ॥೭॥ ಮುಕ್ತಂ ಗಪ್ಪಣಿ ಮಾದಿಗಳಿರವ । ವ್ಯಕ್ತಂ ಮಾಡುವೆನರಿಸುತ ಪರವ ॥ ಅತಿ ಸೂಕ್ಷ್ಮ ಕೆ ಸೂಕ್ಷ್ಮತೆಯಹುದಣಿಮೆ । ಅತಿಮೇಲಿಗೆ ಮೇಲಪ್ಪುದೆ ಮಹಿಮೆ ॥ ನೆಗ ಹ ಲಿಶಕ್ಯವೆನಿಪ್ಪುದೆ ಗರಿಮೆ । ನೆಗಹುವಡೆಯೊ ಳಣುವಪ್ಪುದೆ ಲಘಿಮೆ ॥ ಲೋಕದರಿಕೆ ತಿಳಿ ಪ್ರಾಪ್ತಿಯೆನಿಕ್ಕು । ಪ್ರಾಕಾಮ್ಯಂ ಬಯಸಿದು ತನಗಕ್ಕು ॥ ಜಗಮಂ ಪ್ರೇರಿಸುತಿಹುದೀಶತ್ವ । ಜಗದೊಡೆತನವದು ತಾನೆ ವಶಿತ್ವ ॥ ಇವು

ಕಂದ ॥ ಗತಿಯೊಂಭತ್ತನೆಯದಿದಕೆ ।
ಹಿತಮೆನಿಪ ನಿರೂಪಣಂಗಳೇಕಾದಶವಂ ॥
ತತಿಶಯಮಾಗಿರೆ ತಿಳಿಯು ।
ಲ್ಪ್ರತಿಪಾದಿತವಿಲ್ಲಿ ತನಗೆ ನಿಸ್ಸಂಗಯುಗಂ
ಅಂತು ಗತಿ ೯ಕ್ಕಂ ನಿರೂಪಣ ೯೯ಕ್ಕಂ ಚರಣ ೧೨೨೪ಕ್ಕಂ

ಮಂಗಳಮಸ್ತು

---

ಶ್ರೀ ಗುರು ಶಂಭುಲಿಂಗಾಯ ನಮಃ

## ದಶಮಗತಿ

---

ಸೂತ್ರ ॥ ಕುಂದಿಲ್ಲದೆ ಭೂಮಿತ್ರಯ ।
ದಂದಂ ಜಾಗರಣಮೆಂದು ಪೇಳ್ದಿಂತೊಲವಿಂ ॥
ಮುಂದೆ ಚತುರ್ಭೂಮಿಕೆಗಳ ।
ನಂದೊದಗಂ ಪವಸ್ಥೆಯಮ್ಮನಂಬುಗೆಪೇಳ್ವೆಂ ॥

ಗೀತೆ ॥ ಕೇಳೆಲೆ ಸನ್ಮತಿ ಕೈರವಚಂದ್ರ । ಪೇಳುವೆನಧಿಗತ ನಿಜಸುಖ ಸಾಂದ್ರ ॥ ಹುಟ್ಟಲು ಹೊಂದಲು ಬೇಸತ್ತಂಗೆ । ನೆಟ್ಟನೆ ಯೋಗಾಭ್ಯಾಸದ ವಂಗೆ ॥ ಹಿಂದಣ ದುರಿತಕ್ಷಯವಾಯಿತ್ತು । ಅಂದಾ ಭವದ ಸುಕೃತವೊದ ಗಿತ್ತು ॥ ಎಂಬುದಕಿದು ಕುರುವಾಯ್ತು ವಿರಕ್ತಿ । ಬೆಂಬಳಿ ಪಿಡಿವುದು ಮೋಕ್ಷಾ ಸಕ್ತಿ॥ ಇಂದಾರಬ್ಧ ವಶದಲಹಪಾಪ। ಬಂದೊಡದನು ಪೋಣ್ಣುಡುಗನುತಾಪ ॥ ಸಾಧು ಸಮಾಗಮನಾದಿಗಳಿಂದ । ಸಾಧಿತಮಾದುದು ಪುಣ್ಯದವೃಂದ ॥ ೧ ॥ ತಿಳಿಯಾತಂಗಭ್ಯಾಸಿಪ ಯೋಗ । ಫಲಿಸದ ಮುನ್ನವೆ ದೇಹ ವಿಯೋಗ ॥ ಆದೊಡೆ ಪಾಪದ ಹೊಲಬಿಲ್ಲಾಗಿ । ಭೇದಿಸೆ ದುಃಖಂ ತೋರದೆ ಪೋಗಿ ॥ ಬಚ್ಚ ಬರಿಯು ಪುಣ್ಯದಲನುಬಂಧ । ಅಚ್ಚ ಸುಖವ ನುಣಬೇಕದರಿಂದ॥ ಆಯಾ ಭೂಮಿಕೆ ಗನುಗುಣವಾಗಿ । ಆಯಾ ಮೇಲಣ ಲೋಕಕೆ ಪೋಗಿ ॥ ಆಯಾ ವಿಭವಂಗಳನೆಡೆಗೊಂಡು । ಆಯಾ ಸುಖ ಭೋಗಂಗಳನುಂಡು ॥ ಆ ಪುಣ್ಯದ ಫಲ ಕೆಲಕಾಲಕ್ಕೆ । ಪೋಪುದರಿಂದ ಬಹನೀಲೋಕಕ್ಕೆ ॥ ೨ ॥ ನೆಲಸಿದ ಸಿರಿ ವಂತರಯೋಗಿಗಳ । ಕುಲದೊಳುದಿಸಿ ಮುನ್ನಿನಭೂಮಿಗಳ ॥ ಒಳಗನಿತಳ

ವಟ್ಟಿತು ಮತ್ತನಿತ। ಗಳಿಲನೆ ಪಡೆವನು ಮೇಲತಿಗುಣಿತ॥ ಕೊಡುತ್ತಂ ಸಜ್ಜನ ಗೋಷ್ಠಿಗಳ। ಮಾಡುತ್ತಲ್ಲಿ ವಿಚಾರದೆಶೆಗಳ॥ ಪೊಕ್ಕು ಮಗುಳೆ ಪೇಳ್ವ ರ್ಥಂಗಳನು। ಧಿಕ್ಕನೆ ತಿಳಿದು ರಹಸ್ಯಂಗಳನು॥ ಸುಡಿವಾಚಾರ್ಯರ ಪದಸಂ ಗತಿಯ। ಬಿಡದಾಳೋಚಿಸಿ ನಿಸ್ಸಂಗತಿಯ॥ ತಿಳಿದಾಸಾಮಾನ್ಯಾಸಂಗವನು। ಬಳಿಕ ವಿಶೇಷಾಸಂಗವಡೆವನು॥೩॥ ಆಗಳೆಯಾ ನಿಸ್ಸಂಗತೆಯವನು। ಯೋಗಿ ಯೆನಿಸಿಕೊಂಬನು ಬಳಿಕವನು॥ ಮೊದಲೆಂತು ಸದಾಚಾರದೊಳಿರ್ಪ। ಅದ ನೆರೆಯುಡುಗದೆ ಕಡೆಮುಟ್ಟಿರ್ಪ॥ ಅಂತಾ ಮುನ್ನಿನ ಸುಗುಣಂ ಗೆಡದೆ। ಮುಂತಾ ಸದ್ಗೋಷ್ಠಿಗಳಂ ಬಿಡದೆ॥ ಇಹನವನಜ್ಞಾನ ತಮಸ್ಸೂರ್ಯ। ಅಹನಂತಾ ಯೋಗಿಯೆ ನೋಡಾರ್ಯ॥ ಮೊಳೆವುದು ಮೊದಲು ಧರೆಯೊ ಳಾಪುಣ್ಯ। ಪಳವೇರುವ ದೆರಡನೆಯೊಳಗಣ್ಯ॥ ಮೂರನೆಯಲ್ಲಿ ಫಲಿತವಾಗಿ ಹುದು। ನೀರನೆ ಯೋಗಿಗದನುಭವವಹುದು॥೪॥ ಆತನು ಮೇಲಣ ಭೂ ಮಿಗೆ ಮುನ್ನ। ಆ ತನುವಳಿಯೆಲವಂ ತಿಳಿ ತನ್ನ॥ ನಿಜವಹ ಬಗೆಗನುಗುಣ ವಾಗಿರ್ದ। ಅಜ ಹರಿ ಶಿವ ಪದ ಮೊದಲಾಗಿರ್ದ॥ ಒಂದರೊಳಿಚ್ಛಾ ಭುವ ನಂಗಳನು। ಮುಂದೆ ಪಡೆದು ತದ್ಭೋಗಂಗಳನು॥ ಅನುಭವಿಸುತ ಸುರ ಸಿದ್ಧಾದಿಗಳ। ಮನು ಮುನಿ ಗಂಧರ್ವಾದಿ ತತಿಗಳ॥ ಓಲಗ ಗೊಳುತಖಿ ಳೋತ್ತಮನಾಗಿ। ಲೀಲೆಯೊಳಿಹನಾತ್ಮಜ್ಞಸುಯೋಗಿ॥ ಅಲ್ಲಿಯೆ ತಾನೊಲ ವನ್ನೆ ಗಮಿಹನು। ಅಲ್ಲಿಯೆ ನಿರ್ವಾಣವನೈದುವನು॥೫॥ ಈಶ್ವರ ನಾಮವು ರಸನೆಗೆ ಬರಲು। ಶಾಶ್ವತ ಸುಕೃತಂಗಳಿಗಿದು ಮಿಗಿಲು॥ ನುತಮೂರ್ತಿ ಧ್ಯಾನಂ ಮನಗೊಳಲು। ಶತಕೋಟಿ ಜಪಂಗಳಿಗಿದು ಮಿಗಿಲು॥ ಪರಿಕಿಸೆ ಮೂರ್ತಿ ಧ್ಯಾನದ ಬಳಕೆ। ದೊರಕೊಳುತಿರಲಾ ಧ್ಯಾನದ ಕುಳಕೆ॥ ಏಸಾ ನೋನೆರೆ ಮಿಗಿಲದರಿಂದ। ಲೇಸೆನೆ ತಿಳಿವ ಗುರೂಕ್ತಿಗಳಿಂದ॥ ಪರಮೇಶ್ವರ ಜೀವೈಕ್ಯತೆವಡೆದ। ಪರಿಭವವಿದು ಪುಸಿಯೆಂಬುದನರಿದ॥ ಗುಣನಿಧಿ ಮುಕ್ತಂಗೇರ್ವರು ಛರಿಯೆ। ಅಣಿಮಾದಿಕ ವಾತಂಗಚ್ಚರಿಯೆ॥೭॥ ಮುಕ್ತಂ ಗಪ್ಪಣಿ ಮಾದಿಗಳಿರವ। ವ್ಯಕ್ತಂ ಮಾಡುವೆನರಿಸುತ ಪರವ॥ ಅತಿ ಸೂಕ್ಷ್ಮ ಕೆ ಸೂಕ್ಷ್ಮತೆಯಹುದಣಿಮೆ। ಅತಿಮೇಲಿಗೆ ಮೇಲಪ್ಪುದೆ ಮಹಿಮೆ॥ ನೆಗ ಹ ಲಶಕ್ಯವೆನಿಪ್ಪುದೆ ಗರಿಮೆ। ನೆಗಹುವೆಡೆಯೊ ಳಣುವಪ್ಪುದೆ ಲಘಿಮೆ॥ ಲೋಕದರಿಕೆ ತಿಳಿ ಪ್ರಾಪ್ತಿಯೆನಿಕ್ಕು। ಪ್ರಾಕಾಮ್ಯಂ ಬಯಸಿದು ತನಗಕ್ಕು॥ ಜಗಮಂ ಪ್ರೇರಿಸುತಿಹುದೀಶತ್ವ। ಜಗದೊಡೆತನವದು ತಾನೆ ವಶಿತ್ವ॥ ಇವು

ಮೊದಲಾಗಿರ್ದೆಲ್ಲಾ ಸಿದ್ಧಿ । ತಪೆ ಯೋಗೀಶಂಗಹುದು ನಿಬದ್ಧಿ ॥೭॥ ಬಳಿಕಾ ಭೂಮಿತ್ರಯಮಂ ಬಲಿದು । ತಿಳಿವಿನ ಸುಖದನುಭವದೊಳು ನಲಿದು ॥ ಎಲ್ಲಾ ಇಂದ್ರಿಯದೊಲವಂ ಜರಿದು । ಎಲ್ಲಾ ವಿಷಯದ ಮತಿಯಂ ಮರೆದು॥ ಜಗದಾಭಾಸಂ ತೋರುತ್ತಿಹುದು । ನೆಗಳಿದವಾಸನೆ ಲಯಿಸುತ್ತಿಹುದು ॥ ಅದರಿಂದದನು ವಿಲಾಯನಿಯೆಂದು । ಚದುರರ್ಪೇಳುವ ರಾದಶಬಂದು॥ ನೆಲಿಸಲು ಯೋಗಿಯಮತಿ ದೃಢವಾಗಿ । ಚಲಿಸದೆ ತೋರ್ಪುದು ಸುಖಮಯವಾಗಿ ॥ ಅದು ತದ್ಧ್ಯಾನಿಗೆ ತಿಳಿ ಕನಸಕ್ಕು। ಅದು ನಾಲ್ಕನೆಯ ಸುಭೂಮಿಕೆಯಕ್ಕು ॥೮॥ ಸರ್ವ ದ್ವೈತವ ನಳಿದುಕಿದಿರ್ದ । ನಿರ್ವ್ಯಾಪಾರವೆ ಪ್ಯೆಯಾಗಿರ್ದ ॥ ಯೋಗಿ ವಿಷಯದ ವಿಕಲ್ಪನೆಯಳಿದು । ಆಗಳೆ ಪೂರ್ಣಾಹಂಕೃತಿದಳೆದು ॥ ಆ ಸಂಸೃತಿ ವಾಸನೆಯದು ಪೋಗಿ । ಓಸರಿಸದ ನಿಜಸುಖತಾನಾಗಿ ॥ ಸಂತತವಂತರ್ಮುಖನಾಗಿಹನು । ಚಿಂತಿಸದಾ ಸುಖಮೂರ್ಚೆಯೊಳಿಹನು ॥ ಒಮ್ಮೊಮ್ಮೆ ಬಹಿರ್ಮುಖನಾದಂದು । ನೆಮ್ಮದ ನಿಜಸುಖವದು ಬಳಿಸಂದು ॥ ಸಂಚರಿಪಂ ಪರವಶನೆಂತಂತೆ। ಪಂಚಮ ಪದವಿದು ಸುಪ್ತಿಯ ಮಂತೆ ॥೯॥ ಆನಂದಿನಿಯೆಂಬೀ ಭೂಮಿಯೊಳು । ತಾನಭ್ಯಾಸಿಗೆ ಪೇಲ್ಬೂಮಿಯೊಳು ॥ ಆನಂದಾವಿರ್ಭಾವದ ಮನವ । ಆನಂದದೊಳಡಗಿಸು ತನ್ಮನವ ॥ ಮಾಡಲು ನಿರ್ವಾಸನೆ ಚಿತ್ತಾಗಿ । ಕೂಡದ್ವೈತಂ ದ್ವೈತಂ ಪೋಗಿ ॥ ಏನುಂ ತೋರದೆ ಬರಿಬಯಲಾಗಿ । ಆನಂದದ ಪೂರ್ಣವೆ ತಾನಾಗಿ ॥ ವರಚಿತ್ರದ ದೀಪದ ತೆರನಕ್ಕು । ತುರಿಯ ವಿದಾರನೆ ಯವನಿಯನಿಕ್ಕು ॥ ಆತಂ ಪರಪದವಾಗಿರುತಿಹನು । ಆತನಖಂಡೈಕ ರಸಂತಾನು ॥೧೦॥ ಆಗಳೆ ಪರಮಾತ್ಮನುತಾನಾಗಿ । ಯೋಗಿ ಮಗುಳೆ ವರ್ತಿಪನಂತಾಗಿ ॥ ತಾನೇ ತನ್ನೊಳು ವ್ಯವಹರಿಪಂತೆ । ಪಾನಿಸೆ ತೆರೆ ಜಲದೊಳು ಸುಳಿವಂತೆ ॥ ಶರೀರ ಸಂಪಿಗೆಯುಂಡಳಿಯಂತೆ । ಉರುಳುವುದಾರಬ್ಧಂ ಸವೆದಂತೆ ॥ ಸಪ್ತಮ ಪದವಿದು ತುರ್ಯಾತೀತ । ಕ್ಲುಪ್ತಿ ರಹಿತ ವಾಙ್ಮನಸಾತೀತ ॥ ಸತ್ತೆನಲಿಲ್ಲವಸತ್ತೆನಲಿಲ್ಲ । ಚಿತ್ತೆನಲಿಲ್ಲಪಚಿತ್ತೆನಲಿಲ್ಲ ॥ ಅದುಕೇಳ್ವಾವಕೆ ಗೋಚರಮಲ್ಲ । ಅದರಿಂ ನಿಜವಂತಿಂತೆನಲಿಲ್ಲ ॥೧೧॥ ಆವುದು ಪರಮಾತ್ಮನ ಸದ್ಭಾವ । ಭಾವಿಸಲದರೊಡ ವೆರೆಸಿದ ಜೀವ ॥ ಎಂತು ಪುಗುಳೆ ವರ್ತಿಪನೆನೆ ಸೂಸು । ಇಂತು ಗುರೂತ್ತಮನೊರದುತಾನು ॥ ... ... ... ... ... ॥ಶ್ರೀ॥

ಕಂದ ॥ ಗತಿಹತ್ತನೆಯು ದಿದಕ್ಕತಿ ।
ಹಿತಮೆನಿಪ ನಿರೂಪಣಂಗಳೇಕಾದಶವಂ ॥
ತತಿಶಯಮಾಗಿರೆ ತಿಳಿಯ ।
ಲ್ಪ್ರತಿಪಾದಿತವಿಲ್ಲಿ ನಾಲ್ಕು ಭೂಮಿಕೆ ನಲವಿಂ ॥

ಅಂತು ಗತಿ ೧೦ಕ್ಕಂ ನಿರೂಪಣ ೧೧೦ಕ್ಕಂ ಚರಣ ೧೩೬೦ಕ್ಕಂ

## ಮ ಂ ಗ ಳ ಮ ಸ್ತು

ಶ್ರೀ ಗುರು ಶಂಭುಲಿಂಗಾಯ ನಮಃ

## ಏಕಾದಶಗತಿ

ಸೂತ್ರ ॥ ಇಂತೊಲಿದು ಪೇಳ್ದ ಸಾಧನ ।
ಸಂತತಿಯಿಂ ಸಾಧ್ಯದೊಡನೆ ಸಮರಸ ವೈದಿ ಸ ॥
ಮಂತಿಪ್ಪ ಯೋಗಿಯಾತನೆ ।
ಯಿಂ ತನುವಿರೆ ಜೀವಿಪನುವ ನರುಪುವೆನೀಗಳ್ ॥

ಗೀತೆ ॥ ಬಳಿಕೇನುಂ ತೋರದೆ ಬಯಲಾಗಿ । ತಿಳಿವಿನಹಂಭಾವವೆ ಬರಿದಾಗಿ ॥ ಪಿನಾನೊಂದುಳಿದಿಹ ಸದ್ರೂಪು । ತಾನದು ತಿಳಿ ಪರಮಾತ್ಮನ ರೂಪು ॥ ಮತ್ತೆಂಬು ಜೀವನೆನಿಪ ಸಂವಿತ್ತು । ಮೊತ್ತದ ವಿಷಯವ ನುಳಿದಾ ಪೊತ್ತು ॥ ಸದಮಳನೆನಿಸುತ್ತಿಹ ಚಿದ್ರೂಪು । ಅದು ತಾನೇ ಪರಮಾತ್ಮನ ರೂಪು ॥ ಭ್ರಮಿಸದೆ ಭೋಗವನುಣುತಂ ತಾನು । ಸ್ತಿಮಿತಾಂಬುಧಿಯಂತಿರಲಿತ್ಮಾನು ॥ ಪದುಳಂಮಿಕ್ಕಿಹ ನಿಜಸುಖರೂಪು । ಅದು ತಾನೇಪರಮಾತ್ಮನ ರೂಪು ॥ ೧ ॥ ಜಡ ತೋರಿಕೆಗಳ್ತನ್ನೊಳಡಗಿ । ಅಡಗಿತ್ತೆಂಬೀ ಭಾವನೆಯುಡಗಿ ॥ ಉದಿಸಿಹ ಸಲೆ ನಿತ್ಯಾದ್ವಯರೂಪು । ಅದುತಾನೇ ಪರಮಾತ್ಮನ ರೂಪು॥ ಬಗೆಯಿಂದಖಿಳಾ ಕಾರದಿ ತೋರ್ಪ । ಬಗೆಯದು ಕೆಡೆ ತಾನೋರ್ವನೆ ತೋರ್ಪ ॥ ಪದವಿದಖಂಡಿತವಹ ನಿಜರೂಪು । ಅದು ತಾನೇ ಪರಮಾತ್ಮನ ರೂಪು ॥ ಕಪಟದುಪಾಧಿಗಳಿಂ ಬೇರಪ್ಪ । ತ್ರಿಪುಟಿಯುಳಿದು ಚಿನ್ಮಾತ್ರವೆಯುಪ್ಪ ॥ ಉಳುಮೆಯೆ ಪರಮಾತ್ಮನರೂಪೆಂದು । ತಿಳಿ ತನುಜನೆ ನಿಜ ತುರ್ಯವಿದೆಂದು ॥೨॥ ಆತ್ಮನು ಸುಖ ಚಿದ್ರೂಪಾಗಿರ್ಪ । ಆತ್ಮನ ಸತ್ತೆಯೆ ತಾನಾಗಿರ್ಪ ॥ ಸಕಲವು ತನ್ನಯ ನಿಜವಹುದೆಂದು । ಅಕಲಂಕಾನಂದದಿ ಬೆರೆ

ದಂದು ‖ ವಾಸನೆಯುಹು ದನಪಾಯಿನಿಯಾಗಿ । ಆ ಸುಪ್ತನ ಬುದ್ಧಿಗೆ ಪಡಿ ಯಾಗಿ ‖ ಅನ್ನೆಗ ಸಂಸ್ಕಾರದ ಹದನಿಂತು । ಇನ್ನಾ ಸುಪ್ತನ ಪರಿತಾನೆಂತು ‖ ಆಗಳೆಯಾಗಲಿ ತಳುವಿಂದಾಗಿ । ಮೇಗೆನಿಸುವ ಬಹುದಿನಗತಿಯಾಗಿ ‖ ತನ್ನಿಂ ಪರರಿಂದೆಚ್ಚತ್ತವನು । ಮುನ್ನಿನ ಪರಿಯೊಳ್ವ್ಯವಹರಿಸುವನು ‖ ೩ ‖ ಬಲ್ಲನೆ ತುರ್ಯವದುತ್ತಮ ಯೋಗ । ಅಲ್ಲಿಯ ವಾಸನೆ ತನಗಿರಲಾಗ ‖ ಲೀಲಾ ವ್ಯವ ಹಾರಂಗಳಮರ್ಚಿ । ಮೇಲಣ ಕರಣಂ ಪೂರೆಗೆ ಬದಿರ್ಚಿ ‖ ಪಗೈದೊಡೆಯಾ ತ್ಮನ ನಿಜಪದದ । ಯೋಗಸುಖಂ ಬಿಡದಾಗಿಯೆ ಭವದ ‖ ಹೊಲಬಿಲ್ಲಾಗಿಯೆ ಮಾಡಿದನಲ್ಲ ।ಒಲಿದುದನುಂಡೊಡನುಂಡವನಲ್ಲ‖ ಕರ್ತವ್ಯಂ ತನಗೆಳ್ಳನಿತಿಲ್ಲ । ವರ್ತಿಸನದರಿಂ ಮತ ತನಗಿಲ್ಲ ‖ ಈ ವಿಧದಿಂ ಬದುಕುತ್ತಿಹನಾಗಿ । ಜೀವನ್ಮು ಕ್ತನೆನಿಪನಾ ಯೋಗಿ ‖೪‖ ಬಂದುದನಹುದಲ್ಲೆಂಬುವನಲ್ಲ । ಮುಂದಹ ನೊಂದಂ ಬಯಸುವನಲ್ಲ ‖ ಕಳೆದುದನೊಂದಂ ನೆನೆವವನಲ್ಲ । ತಿಳಿಯದರಿಂ ಮನಮುಂತನಗಿಲ್ಲ ‖ ಮೋಹಿತರೊಳು ಮೋಹಿತನಂತಿರ್ಪ । ಮೋಹರಹಿತ ರೊಡ ನವರಂತಿರ್ಪ ‖ ಕರ್ಮಿಗಳೊಳು ಕರ್ಮಿಗಳಂತಿರ್ಪ । ಕರ್ಮರಹಿತರೊಳ ಗವರಂತಿರ್ಪ ‖ ಭೋಗಿಗಳೊಳು ಭೋಗಿಗಳಂತಿರ್ಪ । ಯೋಗಿಗಳೊಳು ಯೋ ಗಿಗಳಂತಿರ್ಪ ‖ ಜೀವನ್ಮುಕ್ತರವರಿಗವರಂತೆ । ಭಾವಿಸುತಿಹ ರುಪಹಿತಮಣಿ ಯಂತೆ ‖ ೫ ‖ ಕಂಡರಿ ಗೆಲ್ಲರವೋಲೆಸೆವುತ್ತ । ಉಂಡುಪವಾಸಿಯೆನಿಸಿ ಚರಿ ಸುತ್ತ ‖ ಇಹನವ ನನುಸಂಧಾನವನರಿಯ । ಮಹಿಯನುಸರಣೆಯ ನೀತಿಯುನ ರಿಯ ‖ ಆಗುಂ ಜಾಗೆಯ ಬಳಕೆಗಳಲ್ಲಿ । ಯೋಗಕ್ಷೇಮದ ಹೊಲಬುಗಳಲ್ಲಿ ‖ ತನುವಿಡಿದಾ ರಾಗಾದಿಕಮುಳ್ಳ । ಜನರಂತಿರ್ಪನು ಮನದೊಲವಿಲ್ಲ ‖ ಭವ ಮಾಲೆಯ ತೊಡಕೇನುಂಟದನು । ವಿವರಿಸೆ ಮುನ್ನವೆ ನೆರೆ ಬಿಟ್ಟವನು ‖ ಜೀವನ್ಮುಕ್ತನೆನಿಸಿ ಕೊಳುತಿಹನು । ತೀವಿ ನಿಜಾನಂದವಯೆಯಾಗಿಹನು ‖ ೬ ‖ ಮೋಹೋಪಾಧಿಕ ಜೀವತೆಯುಳಿವು । ಉಂಟಿಸ ನಿಜಶಾಂತಿಯು ನೆರೆತಳೆದು ‖ ಇರುತಿರೆ ದಿವ್ಯಮಹಾ ಯೋಗಿಯನು । ಶರಣು ಪೊಗುವುದೊಲವಂ ಬಯಸು ವನು‖ ವಂದಿಸಿ ಪೂಜಿಸಿ ಕೀರ್ತಿಸಿ ನೋಡಿ । ಕುಂದದೆ ಪರಿತುಷ್ಟಿಗಳಂ ಮಾಡಿ‖ ಪಡೆವುದು ಬಿಡದಖಿಲೋತ್ತಮ ಗುಣವ । ಕೊಡುವನವನು ಸವಿಯದ ಸುಖ ಪದವ ‖ ಅಹಮಿಲ್ಲದ ಚಿತ್ತೀಶ್ವರನಾಗಿ । ಅಹುದೀಶ್ವರನಿಂ ದಖಿಳಮದಾಗಿ ‖ ಯೋಗಿಯನೊಲಿಸಿದೊಡಿಹ ಪರಸಿದ್ಧಿ । ಆಗಳೆ ಕೈಸಾರುವುದು ನಿಬದ್ಧಿ ‖ ೭ ‖ ರೆನೆ ತಿಳಿಸುತ ನೀನದ್ವಯಯೋಗಿ । ಅರಿದಾಗಳೆ ಮುಕ್ತನು ತಾನಾಗಿ ‖ ಈಕ್ಷಿ

ಸಲೆಲ್ಲಾ ನಿರ್ಮಳವಾದ । ಸಾಕ್ಷಾನ್ನಿರ್ವಾಣಕ್ಕೆಣೆಯಾದ ॥ ತುರ್ಯಪದದ ನಿಬಿಡಭ್ಯಾಸದೊಳು । ವರ್ಯನರಿವ ನೆಲ್ಲವನಲ್ತೆಯೊಳು ॥ ಪೂರ್ವದ ಜಾತಿ ಸ್ಮರಣಾದಿಕವ । ಸಾರ್ವ ಭುವನ ಚೇಷ್ಟಾಸಾಂಗಿಕವ ॥ ಕಲ್ಪನೆಯಿಂ ಪರಿಕಲ್ಪಿಸಲಕ್ಕು । ಕಲ್ಪ ಶತಂಗಳ ನುಳಿದಿರಲಕ್ಕು॥ ಒಲಿದೊಡೆ ಯೊಲಿದೊಲಿ ದಂತುಟೆಯಕ್ಕು । ಬಳಿಕೊಲ್ಲದೊ ಡಿದ್ದಂತಿರಬಕ್ಕು ॥ ೮ ॥ ವರತನುಜನೆ ಕೇಳೀಯುರ್ಥಕ್ಕೆ । ಪರಿಕಿಸಲರಿದನ ಸಾಮರ್ಥ್ಯಕ್ಕೆ ॥ ಮನುಮುನಿ ಸಿದ್ಧ ಮಹಾಯೋಗಿಗಳ । ದನುಜ ದಿವಿಜ ಗಂಧರ್ವಾದಿಗಳ ॥ ಮತ್ತೆಯು ನಾನಾವಿಧ ಶಕ್ತಿಗಳ । ಮೊತ್ತದ ನರಕುಲ ನಾಗಾದಿಗಳ ॥ ಪೇಳುವ ಇತಿಹಾಸಂ ಪಲವುಂಟು । ತಾಳುವ ಸಿದ್ಧಿಗೆ ವಾಸನೆಯುಂಟು ॥ ತವೆತಿಳಿ ತದ್ಯೋಗದ ಬಲದಿಂದ । ಅವರಾ ಸಿದ್ಧಿವಡೆದರದರಿಂದ ॥ ಇಚ್ಛೆಯಿಸಿದೊಡಂ ತಪ್ಪದುತಾನು । ಸ್ವಚ್ಛಂ ಯೋಗದ ಬಲವಿದುತಾನು ॥೯॥ ಬಗೆದೋರಿಕೆ ಜಗದುದ್ಭವವೆಂದು । ಬಗೆ ವಿಸ್ತರಿಸಿದುದೇ ಸ್ಥಿತಿಯೆಂದು॥ ಭಾವಿಸೆ ಬಗೆಗೆಡಲದು ಲಯವೆಂದು। ಜೀವೇಶರಿಗೇಕತ್ವಮಿದೆಂದು ॥ ನಿರ್ವಾಣದ ನಿಜಮಂ ತಿಳುಪಿದೆವು । ಸರ್ವ ಸು ಭೂಮಿಗಳಂ ಪೇಳಿದೆವು ॥ ಯೋಗದ ಸಿದ್ಧಿಗಳಂ ತೋರಿದೆವು । ಯೋಗಿಯ ಸುಸ್ಥಿತಿಯುಂ ತೋರಿದೆವು ॥ ನಿನಗದರೊಳ್ ನಿಜಮತಿ ಸಲೆ ಸಂದು । ತನುಜನೆ ನೀನೊಲಿದಂತಿಹುದೆಂದು॥ ಪರಿಕಲ್ಪನೆಗಳ ನುಳಿದಿಹುದೆಂದು। ಒರೆದಂ ಶ್ರೀಮದ್ಗುರುವರನಂದು ॥೧೦॥ ಈ ಪರಿಯೊಳ್ತಿಳುಪಿದ ಗುರುವರನ । ಶ್ರೀಪಾದಕ್ಕೆ ನಮಿಸಿ ಪರತರನ ॥ ಬಿನ್ನಯಿಸಿದ ನೊಸಗೆಯೊಳಾ ಸುತನು । ತನ್ನ ನಿಜಸ್ಥಿತಿಯೊಳು ಸಂಗತನು॥ ಗುರುವರ ನೀನಿಂತೆನ ಗೊಲವಿಂದ। ಪರಮಾರ್ಥವ ನರುಪಿದ ಕತದಿಂದ ॥ ಭವಸಾಗರವುಂ ದಾಂಟಿದೆನಿಂತು। ಶಿವಸಂಪದ ಸಮನಿಸಿತೆನಗಿಂತು ॥ ಅದು ವಾಙ್ಮನಸಾ ತೀತವಯಾಗಿ । ಅದು ನಿನ್ನೀ ಶ್ರೀಪಾದುಕೆಯಾಗಿ ॥ ಬೇರುಪಚಾರಂ ನಿನಗೊಂದಿಲ್ಲ । ಬೇರಿನ್ನೇನ ನುಸುರಲಿಂಬಿಲ್ಲ ॥೧೧॥ ಶ್ರೀಗುರು ಪೇಳ್ದ ಮಹಾವಿದ್ಯೆಯೊಳು। ರಾಗಿಪ ಶಿಷ್ಯನ ಬೋಧಾಬ್ಧಿಯೊಳು॥ ಕೈವಲ್ಯೋಪಾಯಾದಿಕವಿರ್ಕು । ಸೇವಿತ ಸುಜನರಿ ಗಮರತೆ ಬರ್ಕು ॥ ... ॥ ಶ್ರೀ ॥

ಕಂದ ॥ ಗತಿ ಹನ್ನೊಂದನೆಯದಕಾ ।
ಹಿತವೆನಿಪ ನಿರೂಪಣಂಗಳೇಕಾದಶವಂ ॥
ತತಿಶಯವಾಗಿರೆ ತಿಳಿಯ ।
ಲ್ಪ್ರತಿಪಾದಿತವಿಲ್ಲಿ ಯೋಗಿವರರ ಚರಿತ್ರಂ. ॥ ೧ ॥

ಇತಿಹಾಸ ಪುರಾಣ ಸ್ಮೃತಿ ।
ಶ್ರುತಿಯರ್ಥವನಿಂತು ಕನ್ನಡಿಸಿದಂ ನಿಜಗುಣ ॥
ಯತಿ ಶಂಭುಲಿಂಗದೊಲವಿಂ ।
ಕ್ಷಿತಿಯ ಮುಮುಕ್ಷುಗಳಿದಂ ಪರೀಕ್ಷಿಪು ದನಿಶಂ ॥ ೨ ॥

ಇದನೋದಿ ಕೇಳಿ ತಿಳಿದ ।
ರ್ಗೊದವಿದ ಭವಬಂಧವಳಿದು ನಿತ್ಯ ನಿಜಾನಂ ॥
ದದ ಘನಪದವಪ್ಪುದು ತ ।
ಪ್ಪದು ಸಲೆ ಗುರುಶಂಭುಲಿಂಗದೊಲವಿಂದಿಳೆಯೊಳ್ ॥೩॥

ಅಂತು ಗತಿ ೧೧ಕ್ಕಂ ನಿರೂಪಣ ೧೨೧ಕ್ಕಂ ಚರಣ ೧೪೭೭ಕ್ಕಂ

ಮಂಗಳಮಸ್ತು

---

ಗದ್ಯ ॥ ಸ್ವಸ್ತಿ ಸಮಸ್ತ ಸುರವಿಸರ ಮಕುಟ ಮಣಿಗಣ ಕಿರಣ ಪ್ರಚುರ ಪ್ರವಾಹ ತರಂಗಿಣೀತಟ ವಿರಾಜಿತ ಚರಣ ಕಮಲಯುಗಳ ಶ್ರೀಶಂಭುಲಿಂಗ ಕೃಪಾಕಟಾಕ್ಷ ಸಾಂದ್ರ ಚಂದ್ರಿಕಾ ಸಂಕ್ರಾಂತ ನಿರಸ್ತ ನಿಖಿಳ ಸಂಸಾರ ಶ್ರಮ ವಿಸ್ಫುರಿತ ನಿಜಾನಂದಾಸ್ವಾದನಾಸಕ್ತ ಚಿತ್ತೋಪೇತ ನಿಜಗುಣ ಶಿವಯೋಗಿ ವಿರಚಿತಮಪ್ಪ ಪರಮಾರ್ಥ ಗೀತೆಯೆಂಬ ಪ್ರಕರಣವು ಸಂಪೂರ್ಣಮಾದುದು.



ಶ್ರೀ ಗುರು ಶಂಭುಲಿಂಗಾಯ ನಮಃ

# ಅನುಭವಸಾರ

---

## ಮೊದಲನೆಯ ಸಂಧಿ

---

ಸೂತ್ರ ॥ ಪರತರಾನಂದಮಯ ಗುರುಶಂಭು ಪದವೆನ್ನ ।
ಶಿರದೊಳಿರುತಿರ್ಕೆ ನಿಜಕರುಣದಿಂದೆ ॥

ತ್ರಿವಿಧಿ ॥ ಶ್ರೀಗುರುವೆ ನಿಜಸುಖದ ಸಾಗರವೆ ತೆರೆವುಸಗು ।  ತಾಗಳುಂ ಬೆಳಗುತಿಹ ನಿನ್ನ ಕಡೆಗಣ್ಣ । ಕೀಗೆ ಸಂತಸವ ನಖಿಳರ್ಗೆ ॥೧॥ ಜಗದಾದಿ ಬೀಜಂಗೆ ನಿಗಮಾಂತ ವೇದ್ಯಂಗೆ । ನಗರಾಜ ಸುತೆಯ ರಮಣಂಗೆ ಶಂಭುವಿಂ। ಗಗಣಿತೋತ್ಸವದಿ ನತನಪ್ಪೆ ॥೨॥ ಶರ್ವಂಗೆ ಸರ್ವಜ್ಞ ಸರ್ವೇಶ ಸರ್ವಾತ್ಮ । ಸರ್ವಶಕ್ತಿತ್ವ ವಹುದಾರಬಲದಿನಾ । ಸರ್ವ ಮಂಗಲೆಗೆ ನತನಪ್ಪೆ ॥ ೩ ॥ ಒಮ್ಮೆಗಣಪತಿಗೆ ಮತ್ತೊಮ್ಮೆ ಸೇನಾಧಿಪಂ । ಗೊಮ್ಮೆ ವೀರೇಶ ಗೊಮ್ಮೆ ನಂದೀಶ್ವರಂ । ಗೊಮ್ಮೆ ನಾನೊಲಿದು ನತನಪ್ಪೆ ॥ ೪ ॥ ಅಂದಿಂದು ಮುಂದೆ ಬಿಡದೆಂದೆಂದು ನಿಜಭಕ್ತಿ । ಯಿಂದೀಶನೊಡನೆ ಬೆರದು ಸುಖಿಪುರ್ವ ಗಣ । ವೃಂದಮಂ ಕೂರ್ತು ನತನಪ್ಪೆ ॥ ೫ ॥ ಇದಕೆ ಮೇಲಿಲ್ಲವೆಂಬುದು ತಾನದಾವ ಸುಖ । ವದನೊಮ್ಮೆ ತನ್ನ ನರಿದೊ ಡೊಲಿದೀವಾತ್ಮ । ಪದವೆನ್ನ ಮಾನ ಸದೊಳಿರ್ಕೆ ॥ ... ... ... ... ... ॥೬॥

ಇಷ್ಟದೇವತಾ ನಮಸ್ಕಾರ ನಿರೂಪಣೆ ಸೂತ್ರ ೧ಕ್ಕೆ ತ್ರಿವಿದಿ ೬.

---

ಸೂತ್ರ ॥ ಸಕಲ ವೇದಾಂತ ಸಾರವನೆ ತಿಳಿವಂತೆ ಸಾ ।
ಧಕರಿಗೀ ಪ್ರಕರಣದೊ ಳೊಲಿದೊರೆವೆನು ॥

ತ್ರಿವಿದಿ ॥ ಶ್ರುತಿಯನೇ ಸ್ಮರಿಸಿ ಪೇಳ್ದತಿಶಯದ ಋಷಿವಾಕ್ಯ । ಸ್ಮೃತಿಯೆನಿಸಿ ಲೋಕದೊಳುಸೇವ್ಯವೆನಿಸಲಾ । ಶ್ರುತಿಯೇ ಪ್ರಮಾಣ ಮಖಿ

ಳರ್ಗೆ ॥ ೧ ॥ ಅದರೊಳುತ್ತರ ಭಾಗೆಯದು ತಾನೆಯುಪನಿಷ । ತ್ತದರಿಂದೆ ಮುಕ್ತಿ. ಯಹುದು ವಿದ್ಯಾತತ್ವ । ವದರೊಳಿಹುದಾದ ಕತದಿಂದೆ ॥ ೨ ॥ ತನ್ನನಾದಿಯವಿದ್ಯೆಯಂ ನಾಡೆ ಕಡಿಸಿ ಪರ । ಮೋನ್ನತಿಯನ್ನೈದಿ. ಸುವ ಕಾರಣಂ ವಿದ್ಯೆ । ಗನ್ಯವೇ ಸೂಪ ನಿಷದರ್ಥ ॥ ೩ ॥ ಇಂತಾಗಲುಪನಿಷತ್ತಂ ತಿಳಿದು ಮುಕ್ತಿಯಂ । ಸಂತರೈದುವುದು, ೩ ವೇದಾಂತ ವಿಜ್ಞಾನ । ಮುಂ ತಾದ ವಾಕ್ಯ ವಿಹವಾಗಿ ॥ ೪ ॥ ವೇದಾಂತದೊಳು ಗೋಪ್ಯವಾದರ್ಥಮಂ ತ್ರಿವಿದಿ । ಯಾದೀ ಪ್ರಕರಣ.ವನೆ ಮಾಳ್ಪೆ ನಾತ್ಮಜ್ಞ । ರಾದರದೊಳಾಲಿ ಸುವ ಪಾಂಗು ॥ ೫ ॥ ಕುಂದದನುಭವಸಾರ ವೆಂದಿದಕೆ ಪೆಸರನಾ । ನಂದದಿಂದಾತ್ಮ.ವಿದರಿಡಲು ಪೇಳ್ವೆನೊಲ । ವಿಂದೆ ಸಾಧಕರು ತಿಳಿವಂತೆ ॥ ೬ ॥ ಬಾಧೆಗೊಳಿಸುವ ಪೂರ್ವ ಸಾಧನಂಗಳನಿಲ್ಲಿ । ಬೋಧಿಪುದನುಳಿದೆ.ನವು ಮುನ್ನವೇ ಮರಸ । ದೀ ಧರೆಯೊಳೊಪ್ಪು ತಿಹವಾಗಿ ॥೭॥ ಇಲ್ಲಿಹ ಪ್ರಯೋಜನಂ ಸಲ್ಲಲಿತದಾತ್ಮಸುಖ । ವಿಲ್ಲಿ ಜೀವೇಶ.ರೇಕತ್ವವದು ವಿಷಯ । ವಿಲ್ಲಿ ಸಚ್ಛಿಷ್ಯ ನಧಿಕಾರಿ ॥೮॥ ಪ್ರತಿಪಾದ್ಯವೆ ಬ್ರಹ್ಮ ಪ್ರತಿಪಾದಕವದಿಲ್ಲಿ । ಪ್ರತಿಪಾದಕವನು. ಪ್ರತಿಪಾದ್ಯದೊಡನೆ ಸಂ । ಗತಿಸೆ ಸಂಬಂಧ ವದುತಾನೆ ॥ ೯ ॥ ಇಲ್ಲಿ ಸಂಧಿ ಸಮಾಸ ಪಲ್ಲಟಂ ಮೊದಲಾದ । ವೆಲ್ಲಮಂ ನೋಡ.ದಿರಿ ನೀರ್ವೆರದ ಪಾಲ । ನೊಲ್ಲದೇ ಹಂಸ ಬಿಡುತಿಹುದೆ ॥ ೧೦ ॥ ಇದರೊಳರ್ಥವೆ ಲೇಸು ಪದಬಂಧದೊಳ್ಪ್ರಾಸು । ಮೊದಲಾದವಿಲ್ಲ.ದಿರೆ ತೊಡವನುಳಿದು ಕೂ । ಡಿದ ಕಾಂತೆಯಂತೆ ಸೊಗಸಕ್ಕು ॥೧೧॥ ಏನಾನು ದೋಷಂ ನಿಜಾನು ಭವದೊಳಗಿರ್ದೊ । ಡೇನದಂ ತಿದ್ದಿ. ತಿಳುಹುವುದು ಶಾಂಭವ । ಜ್ಞಾನ ಸಂಪನ್ನ ರಿದರಲ್ಲಿ ॥ ೧೨ ॥ ತೊದಲಿಂದೆ ನುಡಿಯೆ ಶಿಶುವದರಲ್ಲಿ ತಪ್ಪು ತ । ಚ್ಚ ದುರರಾರ್ಯೆಯ.ದಂತಾವ ದೋಷವಿರ । ಲಿದರೊಳೊಲಿದೊಪ್ಪುದು ಸುಖಿಗಳು ॥ ೧೩ ॥ ಮುನ್ನಿನಾ ತ್ರಿವಿದಿ ಸೊಗಸಂ ನೀಡುತ್ತಿರಲಿದೇ । ನೆನ್ನದಾಲಿಪುದು. ಸಂಜೆಯೊಳು ಶಶಿಯ ಬೆಳು । ಜೊನವಿರೆ ಸೊಡರಿ ಗೆಳಸರೆ ॥ ೧೪ ॥ ಶ್ರುತಿಯು ಸಂಸ್ಕೃತಿಯ ಸಮ್ಮತವಾದ ಕತದಿನಿದ । ನತಿಶಯಿಸಿ ಕೇಳ್ವು.ದರಸಿನೊಪ್ಪದೊಳು ಸಂ । ಗತವಾದ ರಾಯುಸದವೋಲು ॥ ೧೫ ॥ ಗುರುಬೋಧೆಯಿಂ ಪರಾತ್ಪರವಪ್ಪ

---

೩ ವೇದಾಂತ ವಿಜ್ಞಾನ ಸುನಿಶ್ಚಿತಾರ್ಥಾಃ ಸನ್ಯಾಸಯೋಗಾದ್ಯತಯಶ್ಶುದ್ಧಸತ್ವಾಃ ತೇ ಬ್ರಹ್ಮಲೋಕೇತು ಪರಾಂತಕಾಲೇಪರಾಮೃತಾಃ ಪರಿ ಮುಚ್ಯಂತಿ ಸರ್ವೇ ॥

ಚಿತ್ಸುತ । ನ್ನಿರವೆಂದು ನಿಜವ.ನರಿದ ನಿಜಗುಣಯೋಗಿ । ವಿರಚಿಸಿದ ಕೃ ತಿಯನಿಲ್ಲಿ ॥ .... .... .... .... ॥ ೧೬ ॥

ಪ್ರಕರಣ ಸ್ಥಿತಿ ನಿರೂಪಣೆ ಸೂತ್ರ ೨ ಕ್ಕೆ ತ್ರಿವಿದಿ ೨೨

ಸೂತ್ರ ॥ ಗುರು ಸರ್ವಸುಖದೊಳೊಪ್ಪಿರಲೋರ್ವ ಶಿಷ್ಯನಾ ।
ದರದಿಂದೆ ಬಂದೆರಗಿ ಬೆಸಗೊಂಡನು ॥

ತ್ರಿವಿದಿ ॥ ಕರುಣ ಸತ್ಕಲೆ ಶಾಸ್ತ್ರಪರಿಣತೆ ನಿರಾಶೆ ಸೌಂ । ದರತೆ ಸುಮುಖತ್ವ.ಸುಗುಣ ಸುಜ್ಞಾನಂಗ । ಳಿರಲವನೆ ಸೇವ್ಯ ಗುರುವಕ್ಕು ॥ ೧ ॥ ಗುರುದೇವತಾಭಕ್ತಿ ವರವೇದ ವಿಧಿನಿಷ್ಠೆ । ವಿರತಿ ಮುಂತಾದ.ನವ ಸುಚಾರಿತ್ರಂಗ । ಳಿರಲವನೆ ಶಿಷ್ಯ ನೆನಿಸುವನು ॥ ೨ ॥ ಒಂದು ದಿನದೊಳು ಯೋಗಿವೃಂದದೊಡಗೂಡಿ ಸುಖ । ದಿಂದೊಪ್ಪು ತಿರ್ದೊ.ಡಾ ಗುರುವರೇಣ್ಯನಂ । ಬಂದು ಕಂಡಾತ ನುಜನಲ್ಲಿ ॥ ೩ ॥ ಎರಡು ಪದವೆರಡು ಕರವೆರಡು ಭುಜವೆದೆ ನೊಸಲು । ವೆರಡು ನೆಲಸೋಂಕ.ಲಷ್ಟಾಂಗದಿಂ ನಮಿಸಿ । ಗುರುವರ್ಯ ಕರುಣಿಸೆನಗೆಂದ ॥೪॥ ಮತ್ತೆ ಗುರುಪಾದಮಂ ಪೊತ್ತು ಶಿರದೊಳು ಸುಖಂ । ಬಿತ್ತು ಕೈ ಮುಗಿದು, ನುತಿಸಿ ನೂರ್ಮುಡಿಸಿ ನಲ । ವೆತ್ತು ಬೆಸಗೊಂಡ ನವನಂದು ॥ ೫ ॥ ಗುರುವೆ ಬಿನ್ನಪವನವಧರಿಸು ಪಲವಂದದಿಂ । ದಿರುತಿರ್ಪ ಜಗವಿ.ದೇನೆಲ್ಲಿ ಪುಟ್ಟಿ ಬಂ । ಧುರವಾಗಿ ತೋರು ತಿಹುದೆಂತು ॥ ೬ ॥ ಕೆಲರಿದಂ ಪುಸಿಯೆಂದು ಕೆಲರಿದಂ ದಿಟವೆಂದು । ಕೆಲರಿದಂ ಮೊದಲೊ.ಳಿಹುದರಿದೊಡಿಲ್ಲೆಂದು । ಕೆಲರಿದಂ ನುಡಿಯು ಲರಿದೆಂದು ॥ ೭ ॥ ಬೇರೆಬೇರನುಮಾನ ಬೇರೆಬೇರೆ ತರ್ಕಂ । ಬೇರೆಬೇರಾದ. ಶಾಸ್ತ್ರ ಯುಕ್ತಿಗಳಿಂದೆ । ಸಾರಿ ಸಂಪಾದಿಸುವರಿಲ್ಲಿ ॥ ೮ ॥ ಏನೆಂದು ತಿಳಿವೆನಾನೇನೆಂದು ನಂಬಿ ಸಂ । ಧಾನವಂ ಮಾಳ್ಪೆ.ನಿದನೆ ಸತ್ಯಾರ್ಥ ನಿಧಿ । ನೀನೆ ಗುರುವರ್ಯ ಕರುಣಿಪುದು ॥ ೯ ॥

ಪ್ರಶ್ನೆ ನಿರೂಪಣೆ—ಸೂತ್ರ ೩ಕ್ಕೆ ತ್ರಿವಿದಿ ೩೧.

---

ಸೂತ್ರ ॥ ಏಕಮೇವಾದ್ವಿತೀಯಾತ್ಮನಲ್ಲೀ ತೋರ್ಪ ।
ಲೋಕ ರಂಜನೆಯು ಕಾಲ್ಪನಿಕವೈಸೆ ॥

ತ್ರಿವಿದಿ ॥ ಕಂದ ಕೇಳಹುದು ನೀನಿಂದು ಮಾಡಿದ ಚೋದ್ಯ । ವಂದವಾಗಿರ್ಪ.ದೀಗಳಿಂತಿದ ನಿನ್ನ । ಸಂದೇಹವಳಿಯಲೊರೆಯುವೆನು ॥ ೧ ॥ ಇದ

ನಾವನರಿದೊಡವನೊದಿದ್ಧು ಸಂಸಾರವಮಂ। ಮುದದಿಂದೆ ಪಡೆವ.ನಕಲಂಕ ವಾದ ನಿಜ। ಪದವನಂತದನೆ ತಿಳಿ ಪೇಳ್ವೆ ॥ ೨ ॥ ವರಸಚ್ಚಿದಾನಂದ ಪರಿಪೂರ್ಣ ನಿತ್ಯ ನಿಜ। ನಿರಶಯ ನಿರ್ವಿ.ಕಲ್ಪ ನಿರುಪಾಧಿಯಾ। ಗಿರುತಿರ್ಪುದೊಂದು ಪರಬೊಮ್ಮ ॥ ೩ ॥ ಉಂಟೆನಿಸ ದಿಲ್ಲೆನಿಸ ದುಂಟಿ ಲ್ಲೆನಿಸ ದಖಿಳ। ಕಂಟಕದ ಬೀಜ. ವೆನಿಪನಾದಿಯವಿದ್ಯೆ। ಯುಂಟಾತ್ಮಸತ್ತೆ ಯೊಡಗೂಡಿ ॥ ೪ ॥ ಆಧಾರ ವಾಬ್ರಹ್ಮವಾಧೇಯವೀಮಾಯೆ। ಯಾಧಾರ ದಲ್ಲಿ. ಬೆರಸಿ ಬೇರಿಲ್ಲದಂತಾಧೇಯ ಮಿರ್ಪುದೆಲೆ ಪುತ್ರ ॥ ೫ ॥ a ದೇವಾತ್ಮ ಶಕ್ತಿಯೆಂಬಾವಾಕ್ಯದಿಂ ಸಾರು। ವಾವೇದದಲ್ಲಿ.ತಿಳಿ ಮಾಯೆ ತತ್ವದೊ। ಳೋ ವಿ ಬೇರಿಲ್ಲ ದಿಹುದೆಂದು ॥೬॥ ಅವಿರಳತ್ವದೊಳೊಪ್ಪು ವಿವರೊಳೇನಾನೊಂ ದು। ನೆವವಿಲ್ಲದಖಿಳ.ವಹುದು ತಿಳಿ ನಿರ್ನಿಮಿ। ತ್ತವೆ ತೋರ್ಪ ಕನಸಿ ಗೆಣೆ ಯಾಗಿ ॥ ೭ ॥ ತಿಳಿಯಲಾಧಾರವಪ್ಪುಳುಮೆಯೊಂದಾಧೇಯ। ದೊಳು ತೋರ್ಪುಪಾಧಿ.ಯಿಂ ಜಗಜ್ಜೀವೇಶ। ಕುಳುವಾದುದೆನಿಸಿ ಮರೆಯುವದು ॥೮॥ ಎಂದೊಡಾಧೇಯಕ್ಕೆ ಬಂದ ವಿಕೃತಿಯು ಬಾಧೆ। ಯಿಂದಲಾಧಾರ. ವಹನಿ ಜಕ್ಕಂ ಬಾಧೆ। ಯೆಂದೆಂಬೆಯಾದೊ ಡದಕೇಳು ॥ ೯ ॥ ತನ್ನೊಳಾಧೇಯ ರೂಪಿಂ ನೆಗಳಿ ಪರಿವತೊರೆ। ಯಿಂ ನೆನೆದು ಶೀತ.ವೆನಿಸಿ ಕಿಡದಾಧಾರ। ದಿಂ ನೆಲಸಿ ತೋರ್ಪ ಬಿಸಿಲಂತೆ ॥ ೧೦ ॥ ಚಿತ್ತುತನ್ನೊಳಗಿರ್ಪಸತ್ತಾದ ಮಾ ಯೆ ಬಹು। ವೃತ್ತಿಗಳನೈದ.ಲದರಿಂದೆ ಬಾಧೆ ವಡೆ। ಯುತ್ತಿರದು ತಾನು ಳುಮೆ ಯಾಗಿ ॥ ೧೧ ॥ ಚಿತ್ತುತಾನೇ ವಿಕರಿಸುತ್ತಿರದು ತಿಳಿವಡೆಯು। ಸತ್ತು ವಿಕ ರಿಸುವ.ತೆರನಾವುದೆನಲಿದಂ। ಬಿತ್ತರಿಪೆನಾತ್ಮ ಜನಕೇಳು ॥ ೧೨ ॥ ಹಾನಿ ತನಗಿನಿತಿಲ್ಲ ದೀನಿಖಿಳ ಜಗವಾಗಿ। ತಾನೆ ತೋರುವನ.ನಿರ್ವಾಚ್ಯ ಮಾಯೋಪ। ದಾನನಾಗಿರ್ಪ ಪರಮಾತ್ಮ ॥ ೧೩ ॥ ಅದುತಾಂ ವಿವರ್ತವಹುದಿದು b ಸರ್ವ ಮಾತ್ಮೇತಿ। ವಿದಿತವೇದಾರ್ಥ. ವರಿ ರಜ್ಜು ಸರ್ಪನೆಂ। ಬುದರ ದೃಷ್ಟಾಂತ ಮುಖದಿಂದ ॥ ೧೪ ॥ ಇನ್ನು ಕೇಳಾಹೊನ್ನು ತನ್ನ ನಿಜಮಂ ಬಿಡದೆ। ಭಿನ್ನ ಕಟಕಾದಿ.ರೂಪೆನಿಸಲದು ವಿವ। ರ್ತಂ ನೋಡಿ ತಿಳಿಯು ದಿದನಿಲ್ಲಿ ॥೧೫॥ ಇಂತಾದ ಕತದಿ ನೋರಂತೀ ಜಗಂ ಬ್ರಹ್ಮ। ದಿಂ ತೋರುತಿಹುದು.. ಪಲ

---

a ಶೃತಿ-ದೇವಾತ್ಮ ಶಕ್ತಿಂ ಸ್ವಗುಣೈರ್ನಿಗೂಢಾವಭಿನ್ನಾಂ ಜ್ಞಾತ್ವಾವಿದ್ವಾ ವಮೃತತ್ವಮೇತಿ.

b ಶೃ—ವಿಶ್ವಮಿದಂಸರ್ವಮಾತ್ಮೈವನಾಸ್ಮತ್ತ ದನ್ಯಮಸ್ತಿ

ತೆರದಿನಿದು ನೈಗ । ಮಾಂತ ಸಿದ್ಧಾರ್ಥವೆಲೆಪುತ್ರ ॥ ೧೬ ॥ ಪರಮಾರ್ಥವಲ್ಲ ದೀಪರಿ ಸತ್ಯದಂತರಿವ । ಪರಿಯಂತವಿಹುದು. ಜಗವಿದಾರೈಯಲಾ । ಪರ ಮಾತ್ಮನಲ್ಲ ದೆರಡುಂಟೆ ॥

ಚಿದ್ವಿವರ್ತ ನಿರೂಪಣೆ ಸೂತ್ರ ೪೭ಕ್ಕೆ ತ್ರಿವಿದಿ ೪೮

---

ಸೂತ್ರ ॥ ಚಿತ್ತಿನ ವಿವರ್ತವೆಂದೆನಲೇಕೆ ಜಗವಿದಂ ।
ಮತ್ತೆ ಮಾಯಾ ಮಾತ್ರವೆನಲಾಗದೆ ॥

ತ್ರಿವಿದಿ ॥ ಶ್ರೀಗುರು ಪಾದಾಂಬುಜ ಪರಾಗರಸ ರೋಲಂಬ ।. ನಾಗಿ ಕಡು ನೇಹ. ದಿಂದೆರಗಿ ಮತ್ತೆ ಸೊಗ।ಸಾಗಿ ಬಿನ್ನಯಿಸಿ ದನುಬೋಧ್ಯ ॥ ೧ ॥ ಗುರುವರ್ಯ ಚಿತ್ತಯಿಸು ನಿರುಪಾಧಿಕ ಜೋತಿ । ನಿರತಿಶಯ ನಿತ್ಯ. ನಿಜ ನಿರಾವರಣವಹ । ಪರಮನೆನಲೇಕೆ ಜಗವನ್ನು ॥ ೨ ॥ ಮಾಯೆ ಸದ್ರೂಪಿ ಣಿಯದೀ ನಿಖಿಳ ಜಗವಾಗಿ । ಸಾಯಸಂ ಗೊಳುತ. ವಿಹುದೆಂದೊಡೇನು ಗುರು । ರಾಯ ಚಿತ್ತಯಿಸು ಬಳಿಕೊಂದ ॥೩॥ ಕೇಡು ಜಡ ದುಃಖದೊಡ ಗೂಡಿರ್ಪ ಜಗವಿದಂ । ನೋಡಲಾ ಸಚ್ಚಿ.ದಾನಂದವೆಂದು ನೀ । ವಾಡಲೇ ನಘಟಿ ತವದಲ್ತೆ ॥ ೪ ॥ ನೀವೆಂದ ತೆರನಾದೊಡಾವಾವ ವಿಕೃತಿ ಮ । ತ್ತಾ ವಾವ ಹಾನಿ.ಯನುಚಿತ್ತಿಗೆನಬೇಹು । ದೋವಿಗುರುವರ್ಯಕರುಣಿಪುದು ॥೫॥

ಪ್ರಶ್ನೆ ನಿರೂಪಣೆ ಸೂತ್ರ ೫ಕ್ಕೆ ತ್ರಿವಿದಿ ೫೩

---

ಸೂತ್ರ ॥ ಸತ್ತೆನಿಸಿ ಜಗದುಪಾದಾನವೊಂದಿಲ್ಲಾಗಿ ।
ಚಿತ್ತಿನ ವಿವರ್ತವೆಂದೆನಬೇಹುದು ॥

ತ್ರಿವಿದಿ ॥ ಎಲೆ ಮಗನೆ ಕೇಳ್ನಿನ್ನ ಚೆಲುವ ಚೋದ್ಯಕ್ಕೆ ನಾ । ನೊಲಿದು ಪರಿಹಾರ. ವರುಪುವೆನೆನುತೆ ಸರ್ವ । ಸುಲಭ ಗುರುವಿಂತು ಬೆಸಸಿದನು ॥ ೧ ॥ ಪರಮಾತ್ಮನಿಂದನ್ಯ ಪರಮಾರ್ಥವಾಗಿ ಸು ಸ್ಥಿರವಿರ್ಪು ದೊಂದ. ನರಿಯಲಿಲ್ಲಾಗಿ ಯಾ । ಪರಮಾತ್ಮನಖಿಳ ವೆನಬೇಕು ॥ ೨ ॥ ಜೇರೊಂದು ಸತ್ತಾಗಿ ತೋರುತಿಹುದೆನೆ ವೇದ । ಸಾರುವದ್ವೈತ. ಸಂಪಾ ದನಕ್ಕೆ ಬಲು । ದೂರಪ್ಪುದಾಗಿ ಪೆರತಿಲ್ಲ ॥ ೩ ॥ ಆದೊಡೀ ಸಕಲದೊಳ ಗಾದ ವಿಕೃತಿಗಳಿಂದ । ನಾದಿ ಚಿತ್ತಿಂಗೆ. ಬಾಧೆಯಿಲ್ಲೆಂದು ನೀ । ನಾದರಿಸಿ

ಕೇಳ ಲೊರೆಯುವೆನು ॥೪॥ ಹಾವಿನುದಯಸ್ತವಾ ಲೀವಣಕ್ಕಿಲ್ಲವಾ। ಲೀವ ಣದೊಳಾದ. ತೆರನಂತೆ ಲೋಕಂ ಚಿ। ದಾವಲಂಬನದೊ ಳಿಹುದೈಸೆ ॥ ೫ ॥ ಎಂದೊಡೆರಡಿಲ್ಲ ಚಿತ್ತೋದೆಯುದು ನಿರ್ವಿಕೃತಿ। ಯಿಂದಿರ್ಪುದಾಗಿ. ಸವಿಕ ಲ್ಪಕಜ್ಞಾನ। ಮಂದಾದುದಾರ್ಗೆ ನಲುಕೇಳು ॥ ೬ ॥ ಯತಿಗೆ ಕನಸಿನೊ ಳೋರ್ಮೆ ಸತಿ ಪತಿಗಳೆನಿಸಿ ತ। ದ್ರುತಿ ಕಾಂಕ್ಷೆದೋರ. ಲವನಿಗಾ ಮೋಹ ದುಪ। ಹತಿಯಿಲ್ಲದಂತೆ ನಿಜದಲ್ಲಿ ॥ ೭ ॥ ಅರಿಯು ದರಿಸಿಕೊಂಬು ದರಿವ ಕರಣಂ ಮಿಥ್ಯೆ। ಯರಿವಿಂತಿವೇಕ ಕಾಲದೊಳ್ತೋರೆ ನಿಜ। ವರಿವಿಗಾ ಭ್ರಾಂತಿ ಯಣುವಿಲ್ಲ ॥ ೮ ॥ ನೀನರಿವುದು ಜ್ಞಾತೃ ಜ್ಞಾನ ವಿಜ್ಞೇಯು ಸುವಿ ಹೀನಸ್ವದೇತ. a ದೋಮಿತಿ ಯೆನುತೆ ವೇದ। ತಾನೊರೆವುತಿರ್ದ ಕತೆ ದಿಂದ ॥ ೯ ॥ ಎಂದೊಡೀ ಪುಸಿಯರೂಪಿಂದಾದ ಜಗಮಿಂತು। ನಿಂದು ಪಲಕಾಲ. ಮಿಹುದೆಂತೆನಲು ಕೇಳಿ। ದಂ ದೃಷ್ಟಿ ಸೃಷ್ಟಿಯೊಳು ಪೇಳ್ವೆ ॥೧೦॥ ನಿಮಿಷವಹ ಕನಸಿನೊಳಗಮಿತ ಯುಗಮಿರ್ಪ ಸಂ। ಭ್ರಮವೆಂತು ತೋರು. ತಿಹುದಂತೆ ಜಗವಿದಾ। ವಿಮಲಾತ್ಮನಲ್ಲಿ ಚಿರಮಿರ್ಕು ॥ ೧೧ ॥ ಮೊದಲಿಲ್ಲ ದಿಂತು ತೋರ್ಪುದು bನತತ್ವಾದಿವಾ। ಕ್ಯದೊಳುದರಮಾದಿ. ವಾಕ್ಯದೊಳ್ ನಿಗಮ ವ್ಯಂ। ದದಬೋಧೆ ಸಾರು ತಿಹುದಾಗಿ ॥ ೧೨ ॥ ದೃಷ್ಟಿ ಸೃಷ್ಟಿಗೆ ವೇದ ದೃಷ್ಟಾಂತಮೀಂತಿದೆ ಸ। ಮೇಷ್ಟಿಯುಹ ತಾನೆ.ಜಗವಾದ ನಾತ್ಮನಿದು। ಶಿಷ್ಟ ಮತವೇದು ತಿಳಿಪುತ್ರ ॥ .... .... .... ॥೧೩॥

ಚಿದ್ವಿವರ್ತ ವಿಶೇಷ ನಿರೂಪಣೆ ಸೂತ್ರ ೬ಕ್ಕೆ ತ್ರಿವಿದಿ ೬೬

---

ಸೂತ್ರ ॥ ಕಾರಣದೊಳುಳ್ಳ ಗುಣವಾ ಕಾರ್ಯಮುಂ ಬಿಡದೆ।
ಸಾರಿ ತೋರುತ್ತಮಿರುತಿರ ಬೇಹುದು ॥

ತ್ರಿವಿದಿ ॥ ಮುಗುಳೆ ಗುರುಪದಪದ್ಮ ಯುಗಳಕ್ಕೆ ನಮಿಸಿ ಕೈ। ಮುಗಿದು ನುತಿಸುತ್ತೆ. ಸುಖದ ಸಂದಣಿ ಮನ। ಕ್ಕೊಗೆಯೆ ಬಿನ್ನಯಿ

---

a ತದೇ ತದೋಂ ಏಕಮೇವಜ್ಞಾ ತ್ರಾದಿ ವರ್ಜಿತಂ

b ನತತ್ರಾದೌ ದೃಶ್ಯಮಿದ ಮಾಸೀದೇಕ ಮೇವಸತ್

c ಯದಾಹ್ಯೇವೈಷ ಏತಸ್ಮಿನ್ನದೃಶ್ಯೇಽ ನಾತ್ಮ್ಯೇಽ ನಿರುಕ್ತೇಽ ನಿಲಯನೇಽ ಭಯಂ ಪ್ರತಿಷ್ಠಾಂವಿಂದತೆ। ಅಥಸೋಽಭಯಂಗತೋಽಭವತಿ ॥ ಯದಾಹ್ಯೇವೈಷ ಏತಸ್ಮಿನ್ನುದರವ.ಂತರಂ ಕುರುತೇ ॥ ಅಥತಸ್ಯ ಭಯಂಭವತಿ ॥

ಸಿದನು ಪುತ್ರ; ॥೧॥ ಜಡ ಮೃತ್ತಿಕಾ ಹೇತು ವಡೆದ ಕುಂಭಾದಿ ಗಳು ಜಡವೆ ಯಾದಂತೆ. ಚಿತ್ಕಾರಣದ ಜಗಂ । ಜಡವಾಗಬಾರ ದಲೆ ದೇವ ॥ ೨ ॥ ಜಲದ ಗುಣವಾ ಫೇನದೊಳ ಗಗ್ನಿಗುಣವೆ ನೋಡ । ರೊಳ್ಗೇ ಸದಾಗತಿಯ. ಗುಣವೆ ಯಸುವಿನೊಳಿರ್ಪ । ವೊಲು ವಿಶ್ವವರಿವೆ ನಿಸ ಬೇಕು ॥೩॥ ಗುರುವರ್ಯ ನೀವೆ ನಿಜಕರುಣದಿಂ ದೀವಿಮತಿ । ಪರಿಹರಿಸು ವಂತೆ. ಪರಮಾರ್ಥಮಂ ಪೇಳಿ । ಪೊರೆಯುದೆಂದೆರಗಿ ದನುಸೂನು ॥ ೪ ॥

ಪ್ರಶ್ನೆನಿರೂಪಣೆ ಸೂತ್ರ ೭ಕ್ಕೆ ದಪ ೭೦.

—೦—

ಸೂತ್ರ ॥ ಚಿತ್ತುಪಾದಾನ ಕಾರಣವಾದೊಡಂ ಜಗವ ।
ಚಿತ್ತೆನಿಸಿ ತೋರ್ಪುದವಿವೇಕದಿಂದೆ ॥

ತ್ರಿವಿದಿ ॥ ಸಾರಜ್ಞ ತಿಳಿ ನೀನೆ ಕಾರಣ ಗುಣಂ ತನ್ನ । ಕಾರಿಯದೊ ಳಿಹುದು.ನಿಯಮವಲ್ಲಂ ದಧಿ । ಕ್ಷೀರ ಪ್ರಸೂನ ಫಲದಂತೆ ॥ ೧ ॥ ಚಿತ್ತು ಕಾರಣವೀ ಜಗತ್ತಿಗಾಗಿರಲೇ ನ । ಚಿತ್ತೆನಿಸಿ ಭಿನ್ನ.ಜಾತೀಯಮಾಗಿ ತೋ । ರುತ್ತಮಿಾ ವಿಶ್ವ ವೆಸೆಯುವುದು ॥೨॥ ಮಗನೆ ಕೇಳೀಜಗಂ ಬಗೆಯಿಂದಚಿತ್ತೆ ನಿಸಿ । ನಿಗಮಾನುಮಾನ. ಯುಕ್ತ್ಯಂತರಂಗಳಿಂ । ಮಿಗೆ ನೋಡೆ ಸಂವಿ ದೆನ ಬೇಕು ॥೩॥ ಜಳಹತ್ತಿ ಬರಲು ಮನೆಯೊಳಗುಳ್ಳ ಬೆಳಗು ಕ । ತ್ತಲೆ ಯೆನಿಸಿ ಮುತ್ತ. ಮಾ ಬೆಳಗೆ ತೋರ್ಪಂತೆ । ತಿಳಿಯಾತ್ಮನಖಿಳ ವಹುದೆಂದು ॥ ೪ ॥ ತರಳಂಗೆ ಮರದಾನೆ ಪರಮಾರ್ಥ ಮಾಗಿರ್ದ । ಕರಿಯೆನಿಸಿ ತೋರಿ. ತಿಳಿಯೆ ಮರನೆನಿಸುತಿಹ । ಪರಿಯಂತೆ ವಿಶ್ವ ವರಿವೈಸೆ ॥ ೫ ॥ ಜಗವೆಂಬ ತೆರೆ ಮಿಾರಿ ಮಿಗೆ ಚಿತ್ಪಯೋನಿಧಿಯೊ । ಳೊಗೆದಲ್ಲಿಯಡಗು.ತಿಹುದಾಗಿ ಮಧ್ಯದೊ । ಳ್ಪಿಗೆಯುದೆಂತರಿವಿ ಗೆರವೆಂದು ॥೬॥ ಈ ನಿಖಿಳವಾತ್ಮಂಗೆ ತಾನನ್ಯವೆನಲೇಕೆ । ಭಾನಮಿಹುದಾದ. ಕತದಿನೆಂತೆಂ ದೊಡಾ । ಜ್ಞಾನದಂತೆಂಬು ದನುಮಾ ॥ ೭ ॥ ಏನಾತ್ಮನೊಳು ಭಿನ್ನ ತಾನಿಲ್ಲವದಕೆ ತತ್ । ಜ್ಞಾನತ್ವಮಿಲ್ಲ. ವೆಂ ನಲ್ ಗಗನ ಪ್ರ । ಸೂನದಂತೆಂಬು ದನುಮಾನ ॥೮॥ ಸತ್ತಿಗಿದು ಭಿನ್ನವೆನಿಸ್ತ್ವ ತ್ತಿರದು ತನ್ಮಯಂ । ಬಿತ್ತು. ಕಾಣಿಸು.ವುದಾಗಿ ಮೃದನನ್ಯಮಂ । ಪೊತ್ತ ಘಟದಂತಿ ದನುಮಾನ ॥ ೯ ॥ ನೆನಹೀಗಿ ಜನವನ್ಯವೆನಲಿಲ್ಲ ವಾತ್ಮನೊಳು । ತನಗನ್ಯ ಹೇತು. ವಿಲ್ಲದೊಪ್ಪು ಹುದಾಗಿ । ಕನಸಿನಂತೆಂಬು ದನುಮಾನ ॥೧೦॥

ಈ ವಿವರ್ತಕ್ಕಂ aಸದೇವಸೋಮ್ಯೇತಿ ಯಾ।bತ್ಮೈವೇದಮಿತಿcಸ.ರ್ವಾಯು ಮಾತ್ಮೇತಿ ಯೆಂ । ದಾವೇದಮುಂಟು ತಿಳಿಪುತ್ರ ॥೧೧॥ ಭೂತವಾ ಭುವ ನವಾ ಜಾತವಾ ಜಾಯಮಾ । ನಾ ತತ್ವವೆಲ್ಲ. ವಾತ್ಮನೆಂದಿಹ ನಿಗಮ । ಜಾತ ದರ್ಥವನೆ ತಿಳಿಯೊಂದೆ ॥೧೨॥ ಇದು ಕಾರಣಂ ಲೋಕದುದಯವಾ ಶಿವ ಜೀವ। ರುದಯವಾ ಬ್ರಹ್ಮ. ದೊಳು ಕಲ್ಪಿತಾಕಾರ । ದುದಯವೆಂದರಿಯು ದೆಲೆಸೂನು ॥೧೩॥ ಇಂತು ಯುಕ್ತ್ಯನುಮಾನ ಸಂತತಿಗಳೊಡನೆ ಶ್ರುತಿ । ಮುಂತಾಗಿ ವಿಶ್ವ.ವೇನೆಂಬ ಶಂಕೆ ಬಿಡು । ವಂತೊಲಿದು ಪೇಳ್ದೆ ನಿದರಲ್ಲಿ ॥೧೪॥ ಎಳೆಗಳೆಂಟವರೊಡನೆ ತಿಳಿಯೆ ಪಂಚಾಶೀತಿ । ಯುಳವಟ್ಟ ಪದದೊ. ಳಿಸೆವಾದಿ ಸಂಧಿಯಿದ । ನೆಳಸಿ ಕೇಳ್ದವನೆ ಕೃತಕೃತ್ಯ॥ .... ॥೧೫॥

ಚಿದ್ವಿವರ್ತಮನನಾರ್ಥ ನಿರೂಪಣೆ

ಸೂತ್ರ ೮೫ ತ್ರಿವಿದಿ ೮೫.

ಅಂತು ಸಂಧಿ ೧ಕ್ಕಂ ಸೂತ್ರ ೮ಕ್ಕಂ ತ್ರಿವಿದಿ ೮೫ಕ್ಕಂ

ಮಂಗಳಮಸ್ತು

---

ಶ್ರೀ ಗುರು ಶಂಭುಲಿಂಗಾಯ ನಮಃ

## ಎರಡನೇ ಸಂಧಿ

ಸೂತ್ರ ॥ ಜಗದೀಶ ಜೀವರಿರವೆಂತು ಕರುಣಿಸುವುದೆನ ।
ಗಗಣಿತ ಗುಣಾಂಬುನಿಧಿ ಗುರುವರ್ಯನೆ ॥

ತ್ರಿವಿದಿ ॥ ಶ್ರೀ ಮಹಾದೇವಂಗೆ ಸೋಮಂಗೆ ಸತ್ಯ ಸುಖ । ಧಾಮಂಗೆ ದಾನ. ಶೀಲಂಗೆ ಶಂಭುವಿಂ । ಗಾಮೋದದಿಂದೆ ನತನಪ್ಪೆ ॥೧॥ ಭವ ದಾವದಲ್ಲಿ ತೊಳಲುವ ಜೀವರಿಗೆ ಸದಾ । ಶಿವಪಥವ ತೋರ್ಪ. ಗುರು

---

a ಸದೇವ ಸೋಮ್ಯೇದಮಗ್ರ ಆಸೀದೇಕಮೇವಾ ದ್ವಿತೀಯಂ

b ಆತ್ಮೈ ವೇದಂಸರ್ವಂ

c ಸರ್ವಾಯಮಾತ್ಮಾ

ವರ್ಯ ಬಿನ್ನಪವ । ನವಧರಿಪುದೀಗ ಕೊಲಿದೆನ್ನ ॥೨॥ ಶಿವಜೀವ ಲೋಕ ವೆಂಬಿವನೆಂತು ತಿಳಿವೆನಾ । ಶಿವ ಜೀವರಾವ. ನೆಲೆಯೊಳೆಂ ತಿಹರದನೆ । ವಿವರಿ ಸೆನಗಾದಿ ಗುರುವರ್ಯ ॥ .. .... .... ॥೩॥

ಪ್ರಶ್ನೆನಿರೂಪಣೆ ಸೂತ್ರ ೧ಕ್ಕೆ ತ್ರಿವಿದಿ ೩

—: o :—

ಸೂತ್ರ ॥ ಚಿಂತ್ಯೊದುಪಾಧಿ ವಶದಿಂದೀಶ ಜೀವರೆನಿ ।
ಸುತ್ತಮಿಹುದೆಂದು ತಿಳಿಯಲ್ಬೇಹುದು ॥

ತ್ರಿವಿದಿ ॥ ಕಂದ ನೀನಿದನೆ ತಿಳಿವಂದದಿಂ ನಿಗಮಾರ್ಥ । ದಿಂದೊರೆವೆ ನೊಲಿದು. ಕೇಳು ಮಾಯೋಪಾಧಿ । ಯಿಂದೀಶನೆನಿಸು ತಿಹನಾತ್ಮ ॥೧॥ ಮತ್ತೆ ಸರ್ವಜ್ಞ ತಾದ್ಯುತ್ತಮೋತ್ತಮ ಶಕ್ತಿ । ಯುಕ್ತನೆನಿಸುತ್ತೆ, ಜಗ ವೆಲ್ಲವಂ ಪ್ರೇರಿ । ಸುತ್ತೆ ನಿಜಕರ್ತ ನಹನೀಶ ॥೨॥ ಅಂತಾ ಪ್ರಕೃತಿಯು ವಸ್ಥಾಂ ತರಂ ತಾನಾದ । ಹಂತೆ ಯುಪದಾನ. ವಾಗೆ ಜೀವಾತ್ಮಪೆಸ । ರಿಂತೋರ್ಪು ದೊಂದೆ ಚಿದಖಂಡ ॥೩॥ ಆದುಕರ್ತೃ ಭೋಕ್ತೃತ್ವ ಮೊದಲಾದ ಗುಣ ವಿಶೇ । ಷದ ಹಮ್ಮಿನಲ್ಲಿ. ಬೆರಸಿ ತದ್ಧರ್ಮವಾಂ । ತುದರಿಂದೆ ಜೀವ ನೆನಿಸುವದು ॥೪॥ ಜೀವನೇತನ್ನ ಕರ್ಮಾವಳಿಯ ಫಲವನುಣ । ಲಾ ವಿಶ್ವ ಭೂತ, ಭೌತಿಕ ಪ್ರಸರಂಗ । ಳಾವರಿಸಿ ಕಾಣಿ ಪುದುಜಗವು ॥೫॥ ಅದು ಸರ್ವದೇಹಿಗಳಿಗೊದವಿ ಮೋಹಕವನಾಂ । ತದಿದೆಂಬ ಬಗೆಯು. ನೆಸಗಿ ಬಹು ವ್ಯತ್ರಿಗಾ । ಸ್ಪದವಾಗಿ ತಾನೆ ಮೆರೆಯುವುದು ॥೬॥ ಇಂತು ಶಿವಜೀವ ಜಗದಂತಮಂ ತಿಳಿವುದೋ । ರಂತಾವತಾಣ. ದೊಳಗೀಶ ಜೀವಾತ್ಮರೆಂತಿರ್ಪರೆಂಬುದನೆ ಕೇಳು ॥೭॥ ಶಿವ ಜೀವರೀರ್ವರೊಂ ದವಯುವಾಂತರದೊ ಳು । ಧ್ರುವಕಂಜ ಕರ್ಣಿ. ಕಾಗ್ರದಲ್ಲಿಯೆ ನೋಡ । ಲವಿರತಂ ಗೂಡಿ ಮೆರೆಯುವರು ॥೮॥ ಬೇರಿಲ್ಲದವರೆಂತು ಬೇರೆನಿಸು ತೊಂದರೊಳು । ತೋರುತಿಹರೆಂದೊ. ಡಿದಕೆ ದೃಷ್ಟಾಂತಮಂ । ಸಾರಿ ನಿನ ಗೊರೆವೆ ನೆಲೆ ಪುತ್ರ ॥೯॥ ಜಲಕುಂಭದಲ್ಲಿ ಮಾರ್ಪೊಳಿವಂಬರಂ ತಾನೆ । ನೆಲ ಸಿದಂಬರವಿ. ವೆರಡುವಿರ್ಪಂತೊಂದ । ರೊಳಗೆ ಜೀವೇಶ ರಿಹರೊಂದಿ ॥೧೦॥ ಎಲ್ಲರೊಳಹೊರಗೆ ಮುನ್ನುಳ್ಳ ಚಿತ್ತಿಂಗೆ ಬೇ । ರಿಲ್ಲಿ ಬಿಂಬಾದಿ. ಯನುಪೇಳ ಬಹುದೆಂದೊ । ಡಿಲ್ಲಿ ನಿನಗರುಪುವೆನು ಕೇಳು ॥೧೧॥ ಸರಸಿಯೋಳ್ಮೇಲಣಂ

ಬರವೆ ಮಾರ್ಪೊಳೆವುದ । ಲ್ಲಿರುತಿರ್ಪ ತಾರೆ. ಮೋಘ ಮುಂತಾದವಾ । ಸರಸಿ ಯೊಳಗೊಪ್ಪು ತಿಹವಾಗಿ ॥೧೨॥ ಪರಿಪೂರ್ಣ ಗಗನವೀಪಸಿಯ ಮಾರ್ಪೊಳೆ ವಂತೆ । ಭರಿತವಹ ಚಿತ್ತು. ಶಿವಜೀವರೆನಿಸಿ ಸಂ । ಚರಿಸುವದುಪಾಧಿ ವಶ ದಿಂದ ॥೧೩॥ ಒಂದು ಗಣಿತಕ್ಕೆ ಮುಂದೊಂದೆರಡು ಮೂರಾದ । ಬಿಂದು ಬರೆ ಪತ್ತು. ನೂರುಸಾವಿರವೆನಿಸಿ । ದಂದವಾ ಬ್ರಹ್ಮ ದೊಳಗಿಂತು ॥೧೪॥ ಪ್ರಕೃತಿ ಯಿಂದೀಶತ್ವ ವಿಕೃತಿಯಿಂ ಜೀವತ್ವ । ಸಕಲ ಭೂತಂಗ. ಳಿಂದೆ ಭುವನತ್ವ ವಹು । ದಕಲಂಕ ನೀನರಿವುದಿಂತು ॥ .... .... .... .... ॥೧೫॥

ಜಗಜ್ಜೀವೇಶ್ವರ ಕಲ್ಪಿತ ನಿರೂಪಣೆ–ಸೂತ್ರ ೨ಕ್ಕೆ ತ್ರಿವಿದಿ ೧೮

ಸೂತ್ರ ॥ ಶಿವ ಜೀವರಿರವನಾ ನಳಿನದಾಯತವ ನೊ ।
ಪ್ಪುವತೆರದಿನೆನಗೆ ಗುರುವರ್ಯ ಬೆಸಸು ॥

ತ್ರಿವಿದಿ ॥ ದಳವೇರುತಿಹಪುಳಕ ವಿಳಿವಶ್ರು ಗದ್ಗದಂ । ಗಳು ಸಹಿತ ಗುರುವಿ. ನಡಿಗೆರಗಿ ಪೊಗಳಿ ಮ । ತ್ತೆಳಸಿ ಬಿನ್ನಯಿಸಿ ದನು ಬೋಧ್ಯ ॥೧॥ ಆ ಸರೋಜದ ಪರಿಯು ನಾ ಸರೋಜದೊಳು ಜೀ । ವೇಶರಿಹತೆರನ. ನೊಲಿ ದಿನ್ನು ಸತ್ಯ ಸುಖ । ವಾಸ ಗುರುವರ್ಯ ಕರುಣಿಪ್ಪುದು ॥೨॥ ಎಂದೊಡೆಲೆ ಮಗನೆ ನೀನಿಂದು ಕೇಳ್ದೀ ಪ್ರಶ್ನೆ । ಯುಂದವಾಗಿಹುದು. ಪೇಳ್ವೆನಿದನತಿ ಗೋಪ್ಯ । ಮೆಂದು ನಿನ್ನೊಳಗೆ ತಿಳಿಯುವುದು ॥೩॥ ಗುದ ಲಿಂಗ ನಾಭಿ ಮತ್ತೆ ದೆ ಗಳ ಮೇಣ್ ಭ್ರೂ ಮಧ್ಯ । ಮದು ಮೇಲೆ ಶಿರವಿ. ವರೊಳೇಳು ಚಕ್ರಮಿಹ। ವಿದು ಸತ್ಯವೆಲ್ಲ ರೊಡಲಲ್ಲಿ ॥೪॥ ದಳ ನಾಲ್ಕು ದಳವಾರು ದಳಹತ್ತು ಹನ್ನೆ ರಡು । ದಳ ಷೋಡಶ ದ್ವಿ. ದಳ ಸಾಸಿರಂಗಳಿಂ । ನಳಿನವಿಹವಾ ಕ್ರಮದೊ ಳೊಂದಿ ॥೫॥ ಬೇರೆ ಬೇರಾಕಾರ ಬೇರೆ ಬೇರಧಿದೈವ । ಬೇರೆ ಬೇರಕ್ಷ. ರ ಪ್ರಕಾಶಂಗಳಿಂ । ಬೇರೆ ಬೇರೊಪ್ಪು ತಿಹವಿಂತು ॥೬॥ ಅವರನಡುವೆಸೆದು ತೋರುವ ದಿವ್ಯಕಮಲ ಮ । ಧ್ಯವನ್ನೈದಿ ಶುಭ್ರ. ನಳಿನವೊಂದಿಹುದು ತುಂ । ಡವನಧಸ್ಸಾಗಿ ತಳೆದಲ್ಲಿ ॥೭॥ ಝುನಕಾಂತ ವರ್ನವದಕನುವಪ್ಪವೀ ಪೂರ್ವ । ವನೆ ಯಾದಿಯಾಗಿ. ನೋಡಲೆಂಟು ದಳಂಗ । ಳನು ತಾಳ್ದು ಬೆಳಗು ತಿರು ತಿರ್ಕು ॥೮॥ ಪ್ರಣವಕರ್ನಿಕೆ ವಿದ್ಯೆಯೆನಿಸಿಕಿಂಜಲ್ಕ ದಳ । ವಣಿಮಾದಿ ಭೂತಿ. ಯರಿವೆನಾಳಂ ಮಹಾ । ತ್ತ್ವಣೆಯುರದ ಕಂದ ವದರಲ್ಲಿ ॥೯॥ ಅದು

ಹೃದಯುವದು ಪರಮುಸದನವದು ಹರಭವನ । ವದು ಪೂರ್ವಶಿಖರಿ. ಯೆದು ಮುಹಾಚಕ್ರವದು । a ಯದಿದಮೆಂದೆಂಬ ಶ್ರುತಿಸಿದ್ಧ ॥೨೯॥ ತಾತ ನೀನರಿ b ಸೂತಗೀತೆ c ವಿದ್ಯಾನಾಥ । ಗೀತೆ d ಶಿವಗೀತೆ. ಯೋಗಸಾರ ಸಮುಚ್ಚ । ಯಾತಿಶಯದರ್ಥ ವಿದು ತಾನು ॥೧೧॥ ಯೋಗೀಂದ್ರರಿದನೆ ಮುಂತಾಗಿ ಭಾ ವಿಸುತಲ್ಲಿ । ಯಾಗಳಾ ಜೀವ. ಪರಮಾತ್ಮರುಗಳ ಸಂ । ಯೋಗ ಸುಖಸಿದ್ಧಿ ಪಡೆಯುುವರು ॥೧೨॥ e ವಾಲಾಗ್ರ ಶತಭಾಗೆಯಾ ಲೇಶದೊಳಗೊಂದ । ನಾ ಲೋಕಿಸಲ್ಕೆ. ತದ್ರೂಪದಿಂದಿರ್ಪ । ನಾಲೋಲಗತಿ ವಿ ಡಿದುಜೀವ ॥೧೩॥ ದಹನ ಲೇಖಾಕಾರವಹ ಜೀವನದರೋಳೊ । ಪ್ಪಿಹನಾದಿ ದೇವ. ನುಂ f ತಸ್ಯ ಮಧ್ಯೆಯೆಂ । ದಿಹ ನೈಗಮಾರ್ಥ ವೆಲೆವತ್ಸ ॥೧೪॥ ವ್ಯವಹಾರಿ ಜೀವರುತವ ರೊಡನೆ ಕೂಡಿ ಕೂ । ಡುವನಲ್ಲದೀಶ.ನಿಹನಾಗಿ g ದ್ವಾಸುಪ । ರ್ಣ ವೆನಿಪ ವೇದ ವಿದಿತಾರ್ಥ ॥೧೫॥ ತನು ಕುಂಭವಹಮಂಬು ಘನಜೀವನದರಲ್ಲಿ । ಮಿನುಗುವಾ ಛಾಯೆ. ಪರಮುನೇ ರವಿಯಂದ । ವೆನಿಸಿ ಚಿನ್ನಭದೊ ಳಿಹ ರಿಂತು ॥೧೬॥ ಅಲ್ಲಿ ಜೀವಂ ಚರಿಸುತೆಲ್ಲಾಗಳುಂ ಭೋಗ್ಯ । ಮೆಲ್ಲಮಂ ಭುಂಜಿ.ಸುತ್ತೆ ಜಾಗರಣಾದಿ । ಪಲ್ಲಟದವಸ್ಥೆ ವಡೆಯುವನು॥ .... ॥೧೭॥

ಜೀವೇಶ್ವರ ವಿಶೇಷ ನಿರೂಪಣೆ—ಸೂತ್ರ ೩ಕ್ಕೆ ತ್ರಿವಿದಿ ೩೫.

---

a ಯದಿದಂ ಸಾಪ್ಪದಳಂ ಪ್ರೋಕ್ತಂ ತದೇವಹೃದಯಂ ತದಾತ್ಮಸ್ಥಾನಂ ತಚ್ಛಿವಗೇಹಂ ತತ್ಪೂರ್ವಗಿರಿ ಸ್ತನ್ಮಹಾಚಕ್ರಂ ವಿದ್ಧಿ.

b ಸೂತಗೀತೆ :—ಹೃದಯೇಷ್ಟದಲೋಪೇತೇ ಜೀವೇಶ್ವರತಿಕರ್ಮಣಾ.

c ವಿದ್ಯಾನಾಥ ಗೀತೆ :—ಹೃದಯಂ ಯನ್ಮಯಾ ಪ್ರೋಕ್ತಾಮಷ್ಟಮ ಪ್ರೋತ ಶೋಭಿತಂ, ತದೇವ ಪರಮಸ್ಥಾನಂ, ತದೇವದಹರಂ ವಿದುಃ.

d ಶಿವಗೀತೆ :—ನಾಭೇರೂರ್ಧ್ವಮದಃಕಂಠಾ, ದ್ವ್ಯಾಪ್ಯತಿಷ್ಠತಿ ಯಸ್ಸದಾ, ತಸ್ಯ ಮಧ್ಯೇಸ್ತಿಹೃದಯಂ । ಸನಾಳಂ ಪದ್ಮಕೋಶವತ್.

ಅದಕ್ಕೆ ಹೃದಯಕೋಶವೆಂದು ಹೆಸರು-ಶ್ರು :— ಅಧೋಮುಖಂಚ ತತ್ರಾಸ್ತಿ ॥ ಸೂಕ್ಷ್ಮಂಸುಷಿರ ಮುತ್ತಮಂ । ದಹರಾಕಾಶಮಿತ್ಯುಕ್ತಂ । ತತ್ರ ಜೀವೋಹಿತಿಷ್ಠತಿ ।

e ಶ್ರು :— ವಾಲಾಗ್ರ ಶತಭಾಗಸ್ಯ ಶತಧಾ ಕಲ್ಪಿ ತಸ್ಯಚ । ಭಾಗೋಜೀವ ಸ್ಸ ವಿಜ್ಞೇ ಯೋ ಸಚಾನಂತ್ಯಾಯ ಕಲ್ಪ್ಯತೇ.

f ತಸ್ಯ ಮಧ್ಯೇವಹ್ನಿ ಶಿಖಾ ಅಣಿಯೋರ್ಧ್ವಂ ವ್ಯವಸ್ಥಿತಃ

g ದ್ವಾ ಸುಪರ್ಣೌ ಶರೀರೇsಸ್ಮಿನ್ ಜೀವೇಶಾಖ್ಯೌಸಹಸ್ಥಿತೌ ॥ ತಯೋರ್ಜೀವಃ ಫಲಂ ಭುಂಕ್ತೇಕರ್ಮಣೋನ ಮಹೇಶ್ವರಃ ॥

ಸೂತ್ರ ॥ ಜೀವನೆಡೆಯಾಟದಿಂದೇನಹು ದದೆಲ್ಲವಮಂ ।
ದೇವ ಪೇಳೆನಗೆಂದೊ ಡೊರೆದನಂದು ॥

ತ್ರಿವಿದಿ ॥ ಬಳಿಕಲಾ ಗುರುಪಾದ ನಳಿನಕ್ಕೆ ನಮಿಸಿ ನಿ । ರ್ಮಳರೂಪ ಕರುಣಿ. ಸೆನುತೆ ಕೈಮುಗಿವುತಂ । ದೆಳಸಿ ಬಿನ್ನಯಿಸಿ ದನುಸೂನು ॥೧॥ ಗುರುವೆ ಜೀವಾತ್ಮನಾ ಸರಸಿಜದೊಳೆಂತು ಸಂ । ಚರಿಸುವದಕೇನು. ಕಾರಣ ವದಂ ನೀನೆ । ಕರುಣದಿಂದೊರೆವು ದೆನಗೊಲ್ದು ॥೨॥ ಎನೆ ಕೇಳು ವತ್ಸ ಜೀವನು ಕರ್ಮವಶದಿನಾ । ತನು ಮಧ್ಯೆ ಕಮಲ.ದಲ್ಲಿ ಸುಳಿವಂ ತನಗೆ । ಮನವೆ ರಥವಾಗಲದನೇರಿ ॥೩॥ ವರಭಕುತಿ ಕ್ಷುಧೆ ಕೋಪ ದುರಿತ ಲೀಲಾ ಗಮನ । ಸುರತ ಧನದಾನ.ಗಳು a ಪೂರ್ವೆ ಎಂದು ಶ್ರುತಿ । ಇರಲೆಂಟು ದಳದ ಗತಿಯಕ್ಕು ॥೪॥ ದಳಗತಿಯೊಳಿಂತು ತನ್ನಳಿನ ಮಧ್ಯಸ್ಥಾನ । ವಳ ಯಕ್ಕೆ ಹಂಸ.ನಿಳಿದಾಗಳೇ ವಿರತಿ । ತಿಳಿವೆಂಬುವಕ್ಕು ಶ್ರುತಿಸಿದ್ಧ ॥೫॥ ಈಗ ತಿಯೊಳಿರೆ ಹಂಸನಾಗಳೇ ವಿಶ್ವಾಖ್ಯ । ನಾಗಿ ಜಾಗರಣ. ವನು ತೋರತನು ವಿನು । ದ್ಯೋಗದಿಂ ಪಡೆವ ನೆಲೆಪುತ್ರ ॥೬॥ ದಳಗತಿಯನಾ ಹಂಸನುಳಿದು ತತ್ಕೇಸರ । ಕ್ಕಿಳಿಯೆ ತೈಜಸವೆ. ಸರು ಕನಸು ಲಿಂಗತನು । ವಳ ವಡಗು ವಾಸ ನೆಗಳಿಂದ ॥೭॥ ಅದನುಳಿದು ಕರ್ಣಿಕಾಸ್ಪದನಾಗೆ ಜೀವನಂ । ತದರಲ್ಲಿ ಪ್ರಾಜ್ಞ. ಸುಪ್ತಿತ್ವ ಕಾರಣಾಂ । ಗದ ಕೂಟವಾಗ ಲೊದಗುವದು ॥೮॥ ಸ್ಥೂಲಂ ವಿವಿಕ್ತಂ ವಿಶಾಲಸುಖವೆಂಬಿಂದ್ರ । ಜಾಲಮಯ ಭೋಗ್ಯ. ವನು ಕಣ್ಮನಂ ಮಾಯೆಂ । ಮೇಳವಾಗರಿವು ತಿಹನಲ್ಲಿ ॥೯॥ ನೆನಸಿಂಗೆ ಸಾತ್ವಿಕಂ ಕನಸಿಂಗೆ ರಾಜಸಂ । ತನಿನಿದ್ರೆಗಲ್ಲಿ. ತಾಮಸಗುಣಂ ಬೀಜ । ವೆನಿಸಿರ್ಪು ದೆಂದು ತಿಳಿನೀನು ॥೧೦॥ ಸ್ಥಾವರಕೆ ಸುಪ್ತಿ ಪಶುಜೀವರ್ಗೆ ಸ್ವಪ್ನವದು । ದೇವ ಜಾಲಕ್ಕೆ. ಜಾಗ್ರವೀ ಮನುಜರ್ಗೆ । ಭಾವಿಸಲವಸ್ಥೆ ಗಳು ಮೂರು ॥೧೧॥ ಇಂತುಜೀವಂಗವಸ್ಥಾಂತರಾದಿಗಳುಂಟು । ಸಂತತಂ b ತಸ್ಯ. ತ್ರಯ ಆವಸಥಾಶ್ರುತಿ । ಸಂತಾನವಿರ್ಪ ಕತದಿಂದ ॥೧೨॥ ಈ ಪರಿಯವಸ್ಥೆಯೊಳ ಗೇಪೊತ್ತು ಜೀವನಿಹ । ನಾಪರಮನಲ್ಲಿ. ಹರಿ ಪಿತಾಮಹ ರುದ್ರ । ರೂಪಿನಿಂ

---

a ಪೂರ್ವೇಭಕ್ತಿಃ ಕ್ಷುಧಾಗ್ನೇಯೆ ಯಾಮ್ಯೇ ಕೋಪಸ್ತುನೈಋತೆ । ಪಾಪಧೀ ರ್ವಾರುಣೇಲೀಲಾ ವಾ ಯವ್ಯೇಗಮನಂತಥಾ । ಉತ್ತರೇ ಸುರತಂ ಚೈವ ಧನ ದಾನಂ ತಥಾಪರೇ ॥

b ತಸ್ಯತ್ರಯಾವಸ್ಥಾ ವಿದೇಹಕೈವಲ್ಯಪರ್ಯಂತಂ ನಿತ ೦ ॥

ಪ್ರೇರಿ ಪನುನೋಡು ||೧೩|| ಕುಂದದೀಶಂ ಜೀವವೃಂದವಮಂ ಪ್ರೇರಿಸುವ | ನಂದದಿಂ ಕೂಡಿ. ೩ ಯೋಽಂತರೋ ನಿಯಮಯತಿ | ಯೆಂದು ಶ್ರುತಿವಾಕ್ಯ ವಿಹುದಾಗಿ || .... .... .... .... || ೧೪ ||

ಜೀವಂಗವಸ್ಥಾತ್ರಯ ನಿರೂಪಣೆ ಸೂತ್ರ ೪೬ಕ್ಕೆ ತ್ರಿವಿದಿ ೪೯.

—: (0) :—

ಸೂತ್ರ || ಪ್ರೇರ್ಯತ್ವವಾ ಪ್ರೇರಕತ್ವವೆಂತೆಂದೊಡಾ |
ಚಾರ್ಯನಾ ಸೂನುವಿಂಗೊಲಿದರುಪಿದ ||

ತ್ರಿವಿದಿ || ಜಯಶರಣಕುಲಗೋತ್ರ ಜಯಸುಗುಣ ಮಣಿಸೂತ್ರ | ಜಯಸೌಖ್ಯಗಾತ್ರ. ಗುರುವೆ ಬಿನ್ನಪವಿಂತು | ಜಯತೆಂದು ನಮಿಸಿ ದನು ಪುತ್ರ ||೧|| ಜೀವೇಶರೊಂದೆಂದು ದೇವಮುನ್ನರುಪಿ ತ | ಜ್ಜೀವಂಗೆ ಮತ್ತೆ. ಪ್ರೇರಕಂ ಶಿವನೆಂಬು | ದಾವತೆರನಿದನು ತಿಳಿಯಲ್ಕೆ ||೨|| ತನಗೆ ತಾನಾಳಾ ಗಿ ತನಗೆ ತಾನರಸೆನಿಪ | ತನಗೋರ್ವನಲ್ಲಿ. ಘಟಿಸುವದೆ ಜಗದೊಳಿದ | ನೆನಗೆ ಗುರುವರ್ಯ ಕರುಣಿಪುದು ||೩|| ಎಂದು ಬೆಸಗೊಂಡೊಡಾನಂದಮಯ ಗುರು ತನ್ನ | ಕಂದನಂ ನೋಡಿ. ನಲಿಯುತೆಲೆವತ್ಸಕೇ | ಳೀದು ದೃಷ್ಟಾಂತ ವರುಪಿ ದನು ||೪|| ರವಿ ತನ್ನ ಪಡಿಯ ಬಿಂಬವನೆ ತನ್ನಲ್ಲಿ ತೋ | ರುವಕಾಲದಿಂದೆ. ನಡಿಸುವಂತೀ ಜೀವ ನಿವಹಮಂ ಪ್ರೇರಿ ಸುವನೀಶ ||೫|| ಶಿವನು ತಾನೇ ಲೋಕನಿವಹಮಂ ಮಾಡುತಂ | ತವನೆ ತನ್ನಲ್ಲಿ. ಲಯಿಸುತಿರ್ಪಂ ನಿಮಿ | ತ್ತವು ಮುಪಾದಾನ ವಹನಾಗಿ || ೬ || ತಾನೇಯುಪಾದಾನವಾ ನಿಮಿತ್ತಾದಿಕ ನಿ | ದಾನವಾಗುತ್ತೆ. ರಚಿಸಿ ಕೆಡಿಪುದಕೆ ಬೇ | ರೇನು ದೃಷ್ಟಾಂತ ವೆನೆಕೇಳು ||೭|| ಒಂದು ಪುಳು ತನ್ನ ನೂಲಿಂದೆ ವಲಯಾಕಾರ | ದಂದಮಂ ಮಾಡಿ. ಕೆಡಿಸಿ ತಾನದನೆ ಮ | ತ್ತೆಂದಿನಂತೆಸಗು ತಿಹುದಂತೆ ||೮|| ಮತ್ತೆ ನಖ ಕೇಶಾದಿ ಮೊತ್ತಂಗಳಿಗೆ ದೇವ | ದತ್ತನೇ ನೈಜ. ವಾಗುಪಾದಾನಂ ನಿ | ಮಿತ್ತ ಕಾರ ಣನೆ ನಿಸುವಂತೆ ||೯|| ತನ್ನ ನವಗುಣಕೆ ಜೀವಂ ನಿಮಿತ್ತಾದಿ ಬೇ | ಜಂ ನೋಡಲಾದ. ತೆರದಿ ನೀಶಂ ತಾನ | ಭಿನ್ನದಿಂ ಮಾಳ್ಪ ನಖಿಳವನು ||೧೦|| ಇಂತು ಸೃಜಿಸುವನೆನಲ್ಕೆಂತು ಟವಿಕಾರತ್ವ | ವಾಂತ ನೆನಲಿದಕೆ. ಪರಿಹಾರ ಮಂ ಸುದೃ | ಷ್ಟಾಂತದಿಂದರುಪು ವೆನು ಕೇಳು ||೧೧|| ರವಿಯಾಗಸದೊಳಿ

---

೩ ಯೋಽಂತರೋ ಯಮಯತೀತಿ ಜೀವವೃಂದಂಸಲತ್ಮಾ.

ಹುದು ಭುವಿಯೊಳಿಹುದಾಕಾಂತ । ವಿವರೆಡೆಯೊಳುಜ್ವ. ಲಿಸುವ ಪಾವಕನ ಸಂ । ಭವವಮಂ ವಿಚಾರಿ ಸುವುದಿಲ್ಲಿ ॥೧೨॥ ಮಣಿಗಿಲ್ಲವಿಚ್ಛೆ ದಿನಮಣಿಗಿಲ್ಲವಾ ಯತ್ನ । ಗುಣವಿಂತಿವೆರಡ. ರನುಸಂಧಿಯಲ್ಲಿ ಸಂ । ದಣಿಸುತಾ ವಹ್ನಿ ಯೊಗೆ ವಂತೆ ॥೧೩॥ ಪರಮಾತ್ಮ ನೆಂಬರ್ಕನಿರೆ ಪ್ರಕೃತಿ ಮಣಿಯಲ್ಲಿ । ಸ್ಫುರಿಸುತಿರು ವಖಿಳ, ತತ್ವವೆಂಬನಲನಿಂ । ತಿರಲು ಸರ್ವೇಶ ನವಿಕಾರಿ ॥೧೪॥ ಎಲೆದೇವ ರವಿ ಬೇರೆ ಶಿಲೆ ಬೇರೆಯಾಗಲಾ । ಜ್ವಲನವಹುದಲ್ಲಿ. ಯದರಂದವೇಕಾತ್ಮ । ನೊಳಗೆಂತು ಸಲುವು ದೆನೆ ಕೇಳು ॥೧೫॥ ಮಳೆಗಳು ತಾನೆ ಭೂತಳದಲ್ಲಿ ಕರೆದು ತ । ಜ್ಜಲದಲ್ಲಿ ಪೊಕ್ಕು. ಪಡಿಬಿಂಬ ರೂಪದಿಂ । ಸುಳಿವ ರವಿಗೆತ್ನ ವಿರದಂತೆ ॥೧೬॥ ತನ್ನೊಳವಿನಾ ಭೂತದಿಂ ನಿತ್ಯಮಿಹ ಶಕ್ತಿ । ಯಿಂ ನಿಖಿಳ ಸೃಷ್ಟಿ. ಯನೆ ಮಾಡಿಯದರೊಳಿ । ರ್ದು೯ಂ ನೋಡಲೀಶ ನವಿಕಾರಿ ॥೧೭॥ ತಾನೆ ಪುಟ್ಟಿಸುತಲ್ಲಿ ತಾನ್ಪೈದುವಂ ೩ ತದೇ।ವಾನುಪ್ರಾವಿಶತೆ.ನುತೆ ವೇದವಿಹು ದಾಗಿ । ನೀನಿದಂ ನಂಬಿ ತಿಳಿಪುತ್ರ ॥ .... .... .... ॥೧೮॥

ಈಶ್ವರಂಗೆ ಸನ್ನಿಧಾನ ಕರ್ತೃತ್ವ ನಿರೂಪಣೆ

ಸೂತ್ರ ೪೩ಕ್ಕೆ ತ್ರಿವಿದಿ ೬೭.

---

ಸೂತ್ರ ॥ ಅವಿಕಾರಿಯಲ್ಲದಿರುತಿರಲಾ ಪರಮಾತ್ಮನು ।
ಭವಮಾಲೆಗಳಿ ಗವಧಿಯಿಲ್ಲನೋಡ ॥

ತ್ರಿವಿದಿ ॥ ಅಂತಲ್ಲದಾತ್ಮೇಚ್ಛೆವಂತ ನೆನಲೀಶ್ವರಂ । ಸಂತತಂ ತೋರು. ತಿಪನಾಗಿ ಸರ್ವದಾ । ಚಿಂತಿಸುತ್ತಿರ್ಪ ನಖಿಳವನು ॥೧॥ ಈಪರಿಯೊಡಂ ಬಟ್ಟೊಡೇಪೊತ್ತುಮಾವೃತ್ತಿ । ಲೋಪಮಿಲ್ಲಾಗಿ. ಭವಪಾಶ ಬಂಧನಂ । ರೂಪು ಗೊಂಡಿರ್ಪ ದನುದಿನವು ॥೨॥ ಭವಹಿಂಗದಿರಲು ಮೋಕ್ಷವಿಧಾ ನವಾ ಶಾಸ್ತ್ರ । ನಿವಹಾದ್ಯನರ್ಥ. ವಹುದಾಗಿ ಸನ್ನಿಧಾ । ನವದೆ.ಕರ್ತೃತ್ವ ವಭವಂಗೆ ॥೩॥ ಮತ್ತೆ ಸಾಧಾರಣ ನಿಮಿತ್ತಮುಂ ಪೇಳಲಾ । ಚಿತ್ತು ಲಯ ವಿಕೃತಿ. ಗಳನುಳ್ಳುದೆಂಬುದಾ । ಯಿತ್ತು ಘಟಕಾರ ಕನ ವೋಲು ॥೪॥ ಅದು ಕಾರಣಂ ಜಗತ್ತಿದು ತಾನನಿರ್ವಾಚ್ಯ । ಪದವಾದ ಮಾಯೆ.ಯಿಂದೀಶ ಸನ್ನಿಧಿಯೊ । ಳುದಿಸುವ ದನೇಕ ವಿಧಮಾಗಿ ॥೫॥ ಸನ್ನಿಧಾನವೆ ಶಿವಂಗೆನ್ನ

---

೩ ತತ್ಸೃಷ್ಟ್ವಾ ತದೇವಾನುಪ್ರಾವಿಶತ್.

ಲೊಂದೇ ತೆರದೊ । ಳಂ ನಿಖಿಳವಾಗು. ತಿಹುದು ಬಹು ಕೃತ್ಯವಿದು । ತನ್ನ ತಾನಾಗ ದೆನೆ ಕೇಳು ॥೬॥ ಅಲರುವದು ನಳಿನ ಮುತ್ಪಲವೆ ಮುಗಿವುದು ಮಣ್ಣು । ಬಲಿವುದಾ ಮೇಣ. ವದುಕರಗುವದು ನಿರಾ । ಕುಲ ಭಾನು ಸನ್ನಿಧಿಯೊಳಂತೆ ॥೭॥ ಬಹು ವೃತ್ತಿಗಳನ್ನೈದಿ ವಿಹರಿಸುತ್ತಿರೆ ಮಾಯೆ । ಯಹು ದಖಿಳ ಕೃತ್ಯ. ವದೆ ಕರ್ತೃತನವಾಗಿ । ಮಹದೀಶ್ವರಂಗೆ ಘಟಿಸುವದು ॥೮॥ ಇಂತೀಶ ನವಿಕಾರದಿಂ ತಾನೆ ಜೀವ ಜಗ । ಮಂ ತೋರಿ ಚೇಷ್ಟಿ. ಸುವನು a ಕರ್ತೃತ್ವೇತಿ । ಮುಂತಾದ ಸೂತ್ರ ವಿಹವಾಗಿ ॥ .... .... ॥೯॥

ಈಶ್ವರಂಗವಿಕಾರತ್ವ ನಿರೂಪಣೆ-ಸೂತ್ರ ೬೭ಕ್ಕೆ ತ್ರಿವಿದಿ ೭೬.

---

ಸೂತ್ರ ॥ ಜೀವಂಗೆ ಸಕಲ ಸಂಸಾರವೆಂಬುದನು ಪರಿ ।
ಭಾವಿಸಲು ಪರಮಾರ್ಥವಲ್ಲ ನೋಡ ॥

ತ್ರಿವಿದಿ ॥ ಶ್ರೀಗುರುವೆ ಭವಮಹಾರೋಗ ಸಂಕುಲ ವೈದ್ಯ । ಯೋಗಿ ಜನ ವಂದ್ಯ. ನಿಜಸುಖ ಪ್ರದನೆ ಕೃಪೆ । ಯಾಗಿ ಬಿನ್ನಪವ ನವಧರಿಸು ॥೧॥ ತರಣಿ ತತ್ಪ್ರತಿಬಿಂಬವೆರಡರಂತೀಶಾತ್ಮ । ರಿರುತಿರ್ಪರೆಂದು. ಮಗುಳೆ ನಿರ್ವಿಕೃತಿಯೆನೆ । ಪರಮಂಗೆ ಪೇಳ್ದಿ ರಲೆದೇವ ॥೨॥ ಬಿಂಬವೇ ಪಡಿಬಿಂಬವೆಂ ಬಂತೆ ಶಿವ ಜೀವ । ರೆಂಬವರ್ಗೈಕ್ಯ.ವಾಗಿ ಜೀವನ ವೋಲೀ । ಶಂ ಬಂಧ ವಡೆವ ನೆನಬೇಕು ॥೩॥ ನೀವಿದಂಕೇಳಿ ಪರಿಭಾವಿಸುತ್ತೆನ್ನ ದು । ರ್ಭಾವಮಂ ಬಿಡಿಸ. ಬೇಕೆನೆ ಸುತಂಗೆ ಗುರು । ದೇವನೊಲಿದಿಂತು ಬೆಸಸಿದನು ॥೪॥ ಸುಡುವ ಕನ್ನಡಿಯೊಳಿರ್ದೊಡೆ ನಿಜಾಸ್ಯಂ ಬೇಗೆ । ವಡೆಯದಂತಹಮು. ವಿಡಿದ ಜೀವನ ವಿಕೃತಿ । ಯಡಸದೀಶಂಗೆ ದಿಟವಾಗಿ ॥೫॥ ಬಹುಮುಖದ ಕನ್ನಡಿಯೊಳಿಹ ಚಲುವ ಮುಖಕೆ ತ । ದ್ಬಹುವಿಧಂ ದೋರ.ದಂತುಪಾಧಿಕ ಜೀವ । ನಹಿತವೀಶಂಗೆ ಸವನಿಸದು ॥೬॥ ಆದೊಡಾ ಜೀವಂಗನಾದಿಯಾ ದಜ್ಞಾನ । ಭೇದದಿಂದಾದ. ವಿಕೃತಿಯಂ ನಿಜವೆಂಬೆ । ಯಾದೊಡಂತದನೆ ತಿಳಿ ಪೇಳ್ವೆ ॥೭॥ ಮುಗಿಲೋಡೆ ಚಂದ್ರಮಂ ಮಿಗೆಯೋಡುವಂತಿರ್ಪ । ಬಗೆ ಯಲ್ಲದೋಡ. ದಂತಹಮಿನಿಂ ಜೀವ । ನಿಗೆ ವಿಕಾರವೇ ಸಹಜವಲ್ಲ ॥೮॥ ಮನೆಯ ಕಂಡಿಯೊಳೈದಿದಿನತೇಜದಲ್ಲಿ ಕರ । ವನು ಸಂಚರಿಸಲು. ತಾನಾಡು

---

a 'ಕರ್ತೈವ. ವೇಷಧಾರೀವ ಜೀವಪ್ರಪಂಚಂ ಪ್ರದರ್ಶ್ಯ ಚೇಷ್ಟೇತ್'.

ವಂತೆ ಜೀ । ವನು ಮನಂ ಗೂಡಿ ಸುಳಿಯುವನು ॥೯॥ ಹಡಗನೇರಿದವಂಗೆ ತಡಿಯೊಳಿ ರ್ಪಚಲಂಗ । ಳಿಡೆಯಾಡುವಂತೆ. ಜಡಮತಿಗೆ ವಿಕೃತಿಯಂ । ಪಡೆ ದಂತೆ ತೋರು ತಿಹನಾತ್ಮ ॥೧೦॥ ಅದು ಕಾಲ್ಪನಿಕವಲ್ಲದೇ ನೈಜವೇ ಮಿತ್ರ । ನುದಕ ಪ್ರವಾಹ. ದೊಳು ಪೋಪತೆರದಿನೀ । ಹದನೈಸೆ ಜೀವ ನೊಳುಬೋಧ್ಯ ॥೧೧॥ ನಿಗಮವೀಯರ್ಥಮಂ ಪೊಗಳ್ವ ೩ ದಯಮಾ ತ್ಮಾದಿ । ಮಿಗಿಲಪ್ಪ ವಾಕ್ಯ. ಚಯಗಳದು ಕಾರಣಂ । ಮಗನೆ ತಿಳಿ ಜೀವ ನವಿಕಾರಿ ॥ ...... .... .... ॥೧೨॥

ಜೀವಂಗವಿಕಾರತ್ವ ನಿರೂಪಣೆ ಸೂತ್ರ ೭ಕ್ಕೆ ತ್ರಿವಿದಿ ೮೮.

---

ಸೂತ್ರ ॥ ಜೀವ ಪರಮಾತ್ಮ ಲೋಕಂಗಳಂದವನು ಪರಿ ।
ಭಾವಿಸಂವರೊಳು ಭೇದಮುಂಟು ನೋಡ ॥

ತ್ರಿವಿದಿ ॥ ತರುಣ ನೀನರಿವಂತೆ ವರವೇದಸಿದ್ಧ ರಹ । ಪರಮು ಜೀವ ರಸು. ತದುಪಾಧಿಯಾದ ಜಗ । ದಿರವನಾಸೊರೆದೆ ನೊಲವಿಂದೆ ॥೧॥ ಆ ವಿಶ್ವವಾ ಪರಮು ಜೀವರಂ ಗುರುಪಾದ । ಸೇವೆಯಿಂದರಿಯೆ. ಮುಕ್ತರಹರವ ರಲ್ಲಿ । ಮೂವರುಂಟಾತ್ಮ ಜನೆ ಕೇಳು ॥೨॥ ಸಕಲ ಲೋಕಂಬೇರೆ ಸಕಲಾ ತ್ಮರುಂ ಬೇರೆ । ಸಕಲೇಶ್ವನೋರ್ವ. ನದಕೆ ಬೇರೆಂಬ ಕಾಣ್ಕೆಯಿಂ ಕನಿಷ್ಠ ನವನೈಸೆ ॥೩॥ ತನ್ಮನಾದಿಯು ಮರವೆಯಿಂ ನೆಗಳ್ದ ಜಗವಿದುವೆ । ನನ್ನಿ ಯಿಂದೀಶ ನಿಂದಾದುದೆಂದು ತಿಳಿ । ವಂ ನೋಡೆ ಮಧ್ಯಮನು ತಾನು ॥೪॥ ಜಗವೆಂದೊಡಂತಾನೆ ಜಗದೀಶನುಂತಾನೆ । ಜಗದಾತ್ಮರೆಲ್ಲ. ರುಂ ತಾನೆ ನಿಜ ವೆಂದು । ಬಗೆವಾತನುತ್ತ ಮನು ನೋಡ ॥೫॥ ಇಂತು ಶಿವ ಜೀವ ಜಗ ಮಂ ತಿಳಿಯೆ ಸಕಲವೇ । ದಾಂತದರ್ಥವನೆ. ಪದವಿಟ್ಟನಿದನರಿದ । ವಂ ತಾನೆ ಪರಮು ಪದವಕ್ಕು ॥೬॥ ತಿಳಿಯಲೆಂಟೆಳೆ ಪದಂಗಳ ಗಣನೆ ತೊಂಭತ್ತು । ಬಳಿಕಲ್ಲೈದಿಂತು. ರಚಿತವಾಯಿತಿದು ನಿ । ರ್ಮಳರೊಪ್ಪುವೆರಡ ನೆಯ ಸಂಧಿ ॥ .... ... .... .... ॥೭॥

ಜ್ಞಾನಾಂತರ ನಿದರ್ಶನ ನಿರೂಪಣೆ ಸೂತ್ರ ೮ಕ್ಕೆ ತ್ರಿವಿದಿ ೯೫.

ಅಂತು ಸಂಧಿ ೨ಕ್ಕೆ ಸೂತ್ರ ೧೬ಕ್ಕಂ ತ್ರಿವಿದಿ ೧೮೦ಕ್ಕಂ

**ಮಂಗಳಮಸ್ತು**

---

೩ ಅಯಮಾತ್ಮಾಬ್ರಹ್ಮ, ಪ್ರಜ್ಞಾನಂ ಬ್ರಹ್ಮ, ಅಹಂ ಬ್ರಹ್ಮಾಸ್ಮಿ, ತತ್ವಮಸಿ.

ಶ್ರೀಗುರು ಶಂಭುಲಿಂಗಾಯ ನಮಃ.

# ಮೂ ರ ನೇ ಸಂ ಧಿ



ಸೂತ್ರ ॥ ಏಕಾತ್ಮವಾದವೆಂಬುದು ಘಟಿಸದದರಿಂದ ।
ನೇಕಾತ್ಮರೆಂದು ಪೇಳಲ್ಬೇಹುದು ॥

ತ್ರಿವಿದಿ ॥ ಭೇದಮತ ದೂರಂಗೆ ವೇದಾಂತ ಸಾರಂಗ । ನಾದಿ ಮೋಹಾಂಧ. ಸೂರಂಗೆ ಶಂಭುವಿಂ । ಗಾದರಂ ಬೆತ್ತು ನತನಪ್ಪೆ ॥೧॥ ೞಗಲದಂಗನೆ ಬಾಹುಯುಗ ಚಂದ್ರಕಳೆ ಭಾಳ । ದೃಗಮಿವಂ ತೋರ.ದಿಹ ಗುರುವೆ ಜಯತೆಂದು । ಪೊಗಳಿ ಬಿನ್ನಯಿಸಿ ದನು ಬೋಧ್ಯ ॥೨॥ ತಂದೆ ಚಿತ್ತಯಿಸು ತನ್ನಿಂದನ್ಯವೇನುಮಿ । ಲ್ಲೆಂದು ಕಂಡಾತ. ನಧಿಕನಹನೆಂದು ನೀ । ನೆಂದೊಡಾನಿಂತು ತಿಳಿಯುವೆನು ॥೩॥ ಮುಂದೆ ಕಾಣಿಸುತೆ ಪಲವಂದದಿಂದಾತ್ಮರಿರ । ಲೊಂದೆಂಬುದಾಗ. ದದು ಯುಕ್ತಿಯಿಂ ಪ್ರಸಿ । ದ್ಧಂದೋರಿ ಭೇದ ವಿಹುದಾಗಿ ॥೪॥ ಬೇರೆ ದೇಹಂ ಮನಂ ಬೇರೆ ಕರ್ಮ್ಮಂ ಬುದ್ಧಿ । ಬೇರೆ ಗತಿ ಬೇರೆ. ಬೇರೆ ಭೋಗಂಗಳಿರೆ । ಬೇರಲ್ಲದೇಕ ವೆನಲುಂಟೆ ॥೫॥ ಉಣುವಿಚ್ಛೆ ಯೋರ್ವನೋಳ್ತಣಿವಿಚ್ಛೆ ಯೋರ್ವನೋ। ಳ್ಮಣಿವಿಚ್ಛೆಯೋರ್ವ.ನೊಳುಮಲತು ಗರ್ವಿಸುವ । ಗುಣದಿಚ್ಛೆ ಯೋರ್ವ ನೊಳಗಿರ್ಕು ॥೬॥ ಜನಿಯೊಬ್ಬನಿಗೆ ಮರಣದನುವೊಬ್ಬನಿಗೆ ನಿಬಂ । ಧನವದೊಬ್ಬನಿಗೆ. ಮುಕುತಿಯೊಬ್ಬನಿಗಪ್ಪು । ದನುನೋಡಲಾತ್ಮರಖಿಳಹರು ॥೭॥ ಇಂತಲ್ಲದಿರ್ದೊಡೋರ್ವಂ ತನ್ನ ಸತಿಯು ರ । ತ್ಯಂತ ಸುಖಿಯಾಗ. ಲದು ಗೋಪಿಯರೊಳು ಹರಿ । ಗಂತೆಲ್ಲ ಕಾಗು ತಿರಬೇಕು ॥೮॥ ಇರಲೋರ್ವನೊಂದೆಡೆಯೊಳಿರಬೇಕು ಸರ್ವರುಂ । ಮರಣವಾಗಲ್ಕೆ. ಮರಣವಹುದಿಂತಿದನೆ । ಗುರುವರ್ಯ ತಿಳುಹಿ ಕೊಡಬೇಕು ॥ ... .... .... .... .... ॥೯॥

ಪ್ರಶ್ನೆ ನಿರೂಪಣೆ ಸೂತ್ರ ೧ಕ್ಕೆ ತ್ರಿವಿದಿ ೯.

— ೦ —

ಸೂತ್ರ ॥ ಪಲವಾತ್ಮರೆಂಬುದಂ ನೆಲೆಗೊಳಿಪೆನೆಂದೊಡದು ।
ಫಲಿಸಲರಿಯದು ಯುಕ್ತಿ ಬಾಧ್ಯಮಾಗಿ ॥

ತ್ರಿವಿದಿ ॥ ಅಹುದು ನಿನ್ನೀ ಪ್ರಶ್ನೆಯಹುದಿದಂ ನಿನ್ನ ಮನ।ವಹುದೆಂಬ ತೆರದೆ. ತಿಳುಪುವೆನು ಕೇಳೆಂದು । ಮಹಿಮಗುರು ಶಿಶುವಿ ಗರುಪಿದನು ॥೧॥ ಚಿತ್ತುಗಳನೇಕಮಂ ಬಿತ್ತರಿಪೆನೆಂಬವಂ । ಗುತ್ತರಂ ಗೊಡುವೆ. ನಿಲ್ಲಿ ಪಲವಾತ್ಮರುಂ । ನಿತ್ಯರೆನಬೇಹು ದವನೊಪ್ಪೆ ॥೨॥ ಎಲ್ಲರುಂ ಪೂರ್ಣರೆಂಬಲ್ಲಿ ಯೊಂದೊಂದೊಡಲೊ । ಳೆಲ್ಲರಿಹರಾಗಿ. ಭೋಗ ಸಾಧನವಪ್ಪ । ದೆಲ್ಲರ್ಗೆ ತನುವಿ ದೆನಬೇಕು ॥೩॥ ಅದನೊಪ್ಪ ಲಾವಾತನಿದರಲ್ಲಿ ಭೋಗಿಸುವ । ನದನರಿಯಬಾರ, ದಖಿಳರುಂ ಕೂಡಿದೇ । ಹದೊಳಿರ್ಪರಾದ ಕತದಿಂದ ॥೪॥ ತನ್ನ ಸುಕೃತಾದಿಯಿಂದಂ ನೆಗಳಿದಂಗವಿದು । ತನ್ನದೇ ಯೆಂದೊ.ಡಾ ಸುಕೃತವಖಿಳರೊಳ । ಗುಂ ನೋಡಲುಂಟೆ ನಿಸಿ ತೋರ್ಕುೞ ॥೫॥ ಮೊದಲ ದೇಹದೊಳು ತಾನೊದವಿ ಮಾಡಿದ ಸುಕೃತ । ವದು ತನ್ನ ದೆಂದೊ.ಡಾ ದೇಹದಭಿಮಾನ । ದುದಯವೆಲ್ಲಾತ್ಮ ರೊಳಗುಂಟು ॥೬॥ ಇಂತಪ್ಪ ಸಾಂಕರ್ಯಮಂ ತೊಲಗಿಸಲ್ಕೆ ಪರ । ನಿಂ ತೋರ್ಪುದೊಂದು. ನಿಯತಿಯಾವರವರ ವಿಧಿ । ಯೆಂತಂತೆ ಮಾಳ್ಪು ದೆನೆಕೇಳು ॥೭॥ ಒಂದು ಮನೆಯೊಳಗೆ ಸೊಡರೊಂದು ಪಲವಿರೆ ವಿಷಯ । ವೃಂದವಮಂ ಬೆಳಗ.ದಿರದಂತೆ ತನುವಿನೊಳ । ಗೊಂದುಂಟು ಭೋಗ್ಯ ವಹಬುದ್ಧಿ ॥೮॥ ಅದುವಿಷಯವಮಂ ತೋರುವದೆ ಲಕ್ಷಣವೆಯಾಗಿ । ಯದು ತನ್ನೊಳಿರ್ದ. ಪಲವಾತ್ಮರಿಗೆ ಭೋಗ । ದೊದವೀಯದಿರದು ನಿಜವಿದುವೆ ॥೯॥ ಆವುದಕ್ಕಾವುದುಸ್ವಭಾವವದು ಕೆಡದು ನಭ । ವಾವಗಂ ಕುಂಭ. ವಾಗದಂತೀಬುದ್ಧಿ । ಜೀವರಂಮಾಣ ದರುಹುವದು ॥೧೦॥ ಏಕಾತ್ಮ ಪಕ್ಷದೊಳನೇಕ ಭೋಗಂ ಘಟಿಪ । ಜೋಕೆಯಿಲ್ಲೆಂದು. ಪಲವಾತ್ಮರಂ ಪೇಳ್ದೊ । ಡೀ ಕೇಡು ಬರ್ಪು ದೆಲೆ ಪುತ್ರ ॥ .... .... ॥೧೧॥

ಆತ್ಮಂಗೆ ನಾನಾತ್ವನಿರಾಕರಣ ನಿರೂಪಣೆ-ಸೂತ್ರ ೨ಕ್ಕೆ ತ್ರಿವಿದಿ ೨೦.

---

ಸೂತ್ರ ॥ ಏಕಾತ್ಮನೆಂಬುದೇ ಸಹಜವೀ ಕಾಣೆಸು ವ ।
ನೇಕಾತ್ಮರೆಂಬುದೆಲ್ಲಾ ಕಲ್ಪನೆ ॥

ತ್ರಿನಿದಿ ॥ ಇಂತುಭಯ ಪಕ್ಷದೊಳಗಂ ತೋರ್ಪ ಶಂಕೆ ಸಮ । ವಾಂತುದೆನಲಿಲ್ಲ. ಬಹುಬುದ್ಧಿಯಿಂ ಭೋಗ । ಸಂತತಿಗೆ ಸುಲಭ ವೆನಲಕ್ಕು ॥೧॥

ಚಿತ್ತೊಂದೆ ಬುದ್ಧಿಗಳ ಮೊತ್ತದೊಳನೇಕಮಂ । ಪೊತ್ತು ನಾನಾತ್ಮ. ರೆನಿಸಿರ್ಪು ದಾಗಿ ಬಹು । ವೃತ್ತಿಯದ್ವೈತ ದೊಳಗಕ್ಕು ॥೨॥ ಕದಡು ಕಂಪನವೆಸೆವ ಸದ ಮಲಾವರ್ತಂಗ।ಳೊದವಿ ದುದಕಂಗ. ಳೊಳು ಬೇರೆಬೇರೆ ರವಿ । ಯುದಿಸಲೊಂ ದಲ್ಲ ದಖಿಳವೇ ॥೩॥ ಬಿಸಿಲಲ್ಲಿ ಪಲರನ್ನ ವಿಸರವಿಕ್ಕಿದೊಡೆ.ಯಾ । ಬಿಸಿಲು ಬಹುವರ್ಣ. ವೆನಿಪಂತುಪಾಧಿಯಿಂ । ದೆಸೆವುದರಿವೊಂದೆ ಪಲವಾಗಿ ॥೪॥ ಧ್ವನಿ ಯಸಾಧಾರಣಂ ತನಗಾದ ನಭವಖಿಳ । ವೆನಿಪ ವಾದ್ಯದೊಳ. ವಚ್ಛಿನ್ನ ವಾಗಿ ಬಹು । ನಿನದವಾದಂತೆ ಪಲವಾತ್ಮ ॥೫॥ ಸ್ವರವೊಂದೆ ಗಾಯಕನ ಕರಣ ಭೇದವನೈದಿ । ಪರಿಪರಿಯ ಗೀತ. ವೆನಿಸಿ ರಂಜಿಸುವಂತೆ । ಶರಿರಾದಿ ಭೇದ ವರಿವಿಂಗೆ ॥೬॥ ಕದಳೀದಳದೆ ಛಿದ್ರಿಸಿದ ವಾರಣಾದಿ ಭಾ । ವದೊ ಳೊಂದೆ ನಭವೆ. ಬಹುರೂಪವಾದಂತೆ । ಚಿದಚಿತ್ತುಗಳಿಗ ಖಿಲವಕ್ಕು ॥೭॥ ಹೂಡಿ ರಾಮಾಯಣವ ನಾಡಲಲ್ಲಿಯ ಸೇವೆ । ಗೀಡಾದ ಸೊಡರ. ಬೆಳಗೇಕ ವಪ್ಪಂತೆ । ನೋಡಾತ್ಮವಖಿಳ ದೊಳಗೊಂದೆ ॥೮॥ ಜ್ಞಾನಭೇದಂ ಭ್ರಮಾ ದ್ಯಾನುಭೇದಂಗಳಿಂ । ದೇ ನೋಡು ಕುಂಭ. ಮೊದಲಾದವಂ ಬೆಳಗು । ತಾ ನಾಮವಾಂತ ಸೊಡರಂತೆ ॥೯॥ ಲವಣಾದಿ ಯೊಡಗೂಡಿ ತವೆತೋಯ ವಖಿಳವಹ । ಸವಿಯಾದ ತೆರದಿ. ಸಕಲಾತ್ಮರೆನಿಸಿ ತೋ । ರುವುದಿದಾ ತಾತ್ವಿ ಕದ ಭೇದ ॥೧೦॥ ಒಂದು ಕುಂಭದ ಬಯಲೊಳೊಂದೆ ಧೂಮಾದಿ ಮ । ತ್ತೊಂದರೊಳಗಿಲ್ಲ, ದಂತೆ ಜೀವರ್ಗೆ ಭೇ । ದಂ ದೋರಿ ಭೋಗ ಮಿರು ತಿರ್ಕು ॥೧೧॥ ತನುವಿಗೋರ್ವಾತ್ಮನೆಂದೆನಿಸಿರ್ದು ಕರಣಂಗ । ಳನುಭವಂ ಬೇರೆ. ಬೇರೊಂದಕೊಂದಿಲ್ಲ । ದನುವಿಂದೆ ಭೇದ ವಹ ಭೋಗ ॥೧೨॥ ಒಂದು ಸಾಗರದ ತೆರೆಯೊಂದನೊಂದತಿಬಾಧಿ । ಪಂದದಿಂ ದ್ವೇಷ.ಮೊದಲಾದ ಧರ್ಮಂಗ । ಳಿಂದೆ ಜೀವರ್ಕ ಳಿರಲೊಂದೆ ॥೧೩॥ ಒಂದು ಚಿತ್ತಿನೊಳು ಪಲವಂದವಹ ಭೋಗಮಿರೆ । ಮುಂದೆ ನಾನಾತ್ಮ.ರೆನೆ ಕಲ್ಪನಾಗೌರ । ವಂ ದೊರೆವುದೆಂದು ತಿಳಿಪುತ್ರ ॥೧೪॥ ಚಿತ್ತಿನೊಳನೇಕವಿದು ಸತ್ಯವಲ್ಲೌಪಾಧಿ । ಮೊತ್ತದಾರ್ಕೆಕೆ. ಗಳನುಳಿದೊಡದು ಕಾಣಿ । ಸುತ್ತಮಿಹುದಾಗಿ ನಭ ದಂತೆ ॥೧೫॥ ಈ ಯಾತ್ಮ ಭೇದವಾ ಕಾಯ ಮುಂತಾದ ಸಮು । ದಾಯ ಜಡವರ್ಗ. ಮಯುದಿನಹುದಾಗಿ ನಿ । ರ್ಮಾಯ ಸಂವಿತ್ತು ತಿಳಿಯೊಂದೆ ॥೧೬॥

ಭೋಗಸ್ಥಿತಿ ನಿರೂಪಣೆ-ಸೂತ್ರ ೩ ಕ್ಕೆ ತ್ರಿವಿದಿ ೩೬.

---

ಸೂತ್ರ ॥ ಭೇದವೆಂಬುದು ಘಟಪಟಾದಿಗಕ್ಕುಂ ನೈಜ ।
ವಾದುದಲ್ಲಂ ದೋಷಮುಳ್ಳುದಾಗಿ ॥

ತ್ರಿವಿದಿ ॥ ವರಸೂನು ಕೇಳಿಂತು ಪರಮಾತ್ಮ ಭೇದಮಂ । ಪರಮಾರ್ಥ ವಲ್ಲ.ವೆಂಬುದೇಂ ಘಟ ಪಟದೊ । ಳಿರುತಿರ್ಪ ಭೇದ ವದುಮಿಥ್ಯೆ ॥೧॥ ಭೇದವೆಂಬುದು ಘಟ ಪಟಾದಿ ಭೇದ್ಯಂಗಳೊಳ । ಭೇದ ಸ್ವರೂಪ.ದಿಂದಿ ರ್ಪುದೋ ಧರ್ಮ । ವಾದುದೋ ಪೇಳು ದಿಟವೊಂದ ॥೨॥ ಅಲ್ಲಿ ಭೇದಂ ರೂಪವಲ್ಲವಾ ಘಟ ಪಟದೊ । ಳುಳ್ಳವಹ ಧರ್ಮ.ವೆನೆ ಧರ್ಮಿ ಧರ್ಮಂಗ । ಳಲ್ಲಿ ನಿನಗಾವು ದನುಮತವು ॥೩॥ ಆ ಧರ್ಮಿಯಿಂ ಧರ್ಮ ಭೇದವೋ ತಿಳಿಯಲ್ಕ । ಭೇದವೋ ಎಂದೆ.ನಲು ಧರ್ಮಿಯಿಂ ಧರ್ಮ । ಭೇದವೆಂದೆಂಬೊ ಡದ ಕೇಳು ॥೪॥ ತನಗೆ ತಾನೇ ಭೇದವೆನಿಸಲಾತ್ಮಾಶ್ರಯವ । ನನುಕರಿಸಿ ತಾಗಿ.ಬಳಿಕೆರಡನೆಯ ಧರ್ಮ । ವನು ನೀನೊಡಂಬ ಡಲುಬೇಕು ॥೫॥ ಅದರೊಳನ್ಯೋನ್ಯಾಶ್ರಯದ ಕೂಟವಾಗಿ ಮ । ತ್ತದನುಳಿದು ಮೂರ.ನೆಯ ಧರ್ಮಮಂ ಪೇಳ । ಲದು ಚಕ್ರಿಕಾಶ್ರ ಯದಭೀತಿ ॥೬॥ ಮುಂದಾವ ಧರ್ಮವೆನಲಂದಪ್ಪುದನವಸ್ಥೆ । ಕುಂದದೀ ನಾಲ್ಕು. ತೆರದ ದೋಷಂಗಳಿರ । ಲಂದವಲ್ಲಾತ್ಮ ಜನೆ ಭೇದ ॥೭॥ ಭೇದವೆಂಬುದು ಘಟ ಪಟಾದಿ ಸ್ವರೂಪ ವನೆ । ಭೇದದಿಂ ತೋರ್ಪ. ಘಟದಲ್ಲಿ ಪ್ರತಿಯೋಗಿ । ಯಾದುದಂ ಪಾರ ದಿರವೇಳ್ಕು ॥೮॥ ತನ್ನ ರೂಪವೆ ಭೇದವೆನ್ನಲ್ತನಗೆ ಹಾನಿ । ಮುನ್ನಪ್ಪ ದಾಗಿ. ಸ್ವಭೇದಿತ ದೂಷಣವ । ದುಂ ನಾಡೆ ಸಂಭ ವಿಸುತಿರ್ಕು ॥೯॥ ಅದು ಕಾರಣಂ ಭೇದವಿದು ಬಾಹ್ಯದಲ್ಲಿ ಘಟ । ಮೊದಲಾದವಕ್ಕೆ. ಮಿಥ್ಯೆಯೆನಲಾ ತ್ಮನೊ । ಳ್ಪದವಿಡದು ಸತ್ಯ ವೆಲೆ ವತ್ಸ ॥೧೦॥ ಮತ್ತೆ ತನಗನ್ಯಮಂ ಪೊತ್ತೊಡದು ಬಾಧೆ ಪಡಿ । ಸುತ್ತಿರ್ಕು ಭೇದ. ವಾಗಿ ತಲೆಹೊರೆಯಾದ । ಬುತ್ತಿಯುಂತೆಂಬು ದನುಮಾನ ॥೧೧॥ ವೇದ ನಿವಹಂ a ದ್ವಿತೀಯಾದ್ವೈ ಭಯಂ ಭವ । ತ್ಯಾದಿ ವಾಕ್ಯಂಗ.ಳಿಂದೆ ಸಾರುವದಾಗಿ ಭೇದವದು ಭೀತಿ ಕರವಕ್ಕು ॥೧೨॥ ದೇಹಾದಿ ಭೇದವಿದನೂಹಿಸಿದೊಡಂ ಮಹಾ । ಮೋಹ ಮಯಕಲ್ಪಿ. ತವೆಯ್ಯೆಸೆ ವೇದವೇ । b ನೇಹ ನಾನಾಸ್ತಿ ಯೆನಲಾಗಿ ॥೧೩॥

---

a ದ್ವಿತೀಯಾದ್ವೈ ಭಯಂಭವತಿ.
b ನೇಹನಾನ್ಯಾಸ್ತಿಕಿಂಚನ.

೩ ಮೃತ್ಯೋಸ್ಸ ಮೃತ್ಯುಮೆಂದುತ್ತಮ ಶ್ರುತಿ ನಿಂದಿ । ಸುತ್ತಿರ್ಪುದಾಗಿ. ಭೇದ ವೆಂಬುದು ನಿಜಂ । ಬೆತ್ತುದಲ್ಲೆಂದು ತಿಳಿಪುತ್ರ ॥೧೪॥ ಇಂತು ಶ್ರುತ್ಯನು ಮಾನ ಸಂತತಿಗಳೊಡನೆ ಯು । ಕ್ತ್ಯಂತರಂ ದೋರಿ. ಭೇದವೆಂಬುದು ಜಡ । ಭ್ರಾಂತಿಮಯವೆಂದೊ ರೆದೆವಿಲ್ಲಿ ॥೧೫॥ ಉತ್ತಮ ತ್ರಿವಿದಿಯ್ಯೆವತ್ತೆರಡ ರೊಡನೆ ವೃದು । ವೆತ್ತ ಸೂತ್ರಂಗ. ಳೆರಡೆರಡರಿಂದೆ ಪೇ । ಳಿತ್ತಿಂತು ಮೂರ ನೆಯ ಸಂಧಿ ॥ .... .... .... .... .... ॥೧೬॥

ಭೇದ ನಿರಾಕರಣ ನಿರೂಪಣೆ ಸೂತ್ರ ೪ಕ್ಕೆ ತ್ರಿವಿದಿ ೫೨

ಅಂತು ಸಂಧಿ ೩ಕ್ಕಂ ಸೂತ್ರ ೨೦ಕ್ಕಂ ತ್ರಿವಿದಿ ೨೩೨ಕ್ಕಂ

ಮಂಗಳಮಸ್ತು

---

ಶ್ರೀ ಗುರು ಶಂಭುಲಿಂಗಾಯ ನಮಃ

# ನಾಲ್ಕನೇ ಸಂಧಿ

ಸೂತ್ರ ॥ ತನುಮುಖ್ಯವಾದ ವಿಷಯಂಗಳೆಲ್ಲವನು ಚಿ ।
ತ್ತೈನಲೊಡಂಬಡಲು ತಾಂ ಬಹುದು ಗುರುವೆ ॥

ತ್ರಿವಿದಿ ॥ ನತಸುರಪ್ರಕರಂಗೆ ನುತವೇದನಿಕರಂಗೆ । ಕ್ರತುಮಹಾದಾನ. ಸುಕರಂಗೆ ಶೈಲಜಾ । ಪತಿ ಶಂಭುವಿಂಗೆ ನತನಪ್ಪೆ ॥೧॥ ನೋಡಿ ಕೆಲರಂ ಮಾತನಾಡಿ ಕೆಲರಂ ಮುಟ್ಟಿ । ಕೂಡೆ ಕೆಲಜೀವ. ರನು ದೇವರಾಗಿ ಮಿಗೆ । ಮಾಡುವಾಚಾರ್ಯ ಶರಣಾಗು ॥೨॥ ದೇವ ಚಿತ್ತಯಿಸು ಮುನ್ನಾವಾವ ಯುಕ್ತಿಯಿಂ । ದೀ ವಿಶ್ವವೆಲ್ಲ. ವರಿವೆಂದು ಪೇಳಿದನು । ಭಾವದಿಂ ನೋಡ ಲದುಸತ್ಯ ॥೩॥ ಆದೊಡೀ ದೇಹ ಮೊದಲಾದವೆಲ್ಲಂ ಬೋಧ । ವಾದವೆನ ಬೇಹು. ದದನೊಪ್ಪ ಲೋಕಾಯ । ತಾದಿ ಮತವಾಗ ದಿಹುದೆಂತು ॥೪॥ ಅರಿವಲ್ಲವೆನೆ ಮುನ್ನವರುಹಿದರ್ಥಂಗಳಂ । ತೊರೆಯಬೇಕಾಯ್ತು. ಗುರು ವರ್ಯ ನೀವೆಯಿದ । ನರುಹೆಂದು ನಮಿಸಿ ದನುಸೂನು ॥ .... ॥೫॥

ಪ್ರಶ್ನೆನಿರೂಪಣೆ ಸೂತ್ರ ೧ಕ್ಕೆ ತ್ರಿವಿದಿ ೫

---

೩ ಮೃತ್ಯೋಃ ಸಮೃತ್ಯುಂಗಚ್ಛತಿಯ ಇಹನಾನೇವಪಶ್ಯತಿ.

ಸೂತ್ರ ॥ ನಾಮ ರೂಪುಗಳೆಲ್ಲಮುಂಮಿಥ್ಯೆ ಯೆಂದು ತಿಳಿ ।
ಯಾ ಮಹಾಸಂವಿತ್ತಿನಲ್ಲಿ ತೋರ್ಪ ॥

ತ್ರಿವಿದಿ ॥ ಸೂನು ಕೇಳಾ ಜಗಂ ತಾನಾತ್ಮನೆಂಬುದ । ಕ್ಕಾ ನಾಮ ರೂಪು. ಗಳ ತೋರ್ಕೆ ಪುಸಿಯೆಂಬು । ದೇ ನಿಶ್ಚಿತಾರ್ಥ ವೆನಬೇಕು ॥೧॥ ಸರ್ಪಾದಿ ಭಾವದಿಂ ತೋರ್ಪುದೇ ರಜ್ಜುವೆನೆ । ಸರ್ಪಾದಿ ಭಾವ. ದಲ್ಲಿಯಾ ರಜ್ಜುತ್ವ । ಮಿರ್ಪುದೇ ಲೋಕ ದೊಳಗಿಂತು ॥೨॥ ಪರಮನೇ ಜಗವೆನಿಸು ತಿರಲೀ ಜಗತ್ತಿಗಾ । ಪರಮಾರ್ಥವೆಂತು. ನಿಜವಕ್ಕು ತಸ್ಕರಂ । ಕೊರಡಾಗ ದೊಪ್ಪು ತಿಹಪಾಂಗು ॥೩॥ ನೀನಿಂತು ತಿಳಿ [೩] ವಿಕಾರೋನಾಮ ರೂಪಮೆನು । ತೀ ನಾಮ ರೂಪ. ಗಳನೆ ಪುಸಿಯೆಂದು ಶ್ರುತಿ । ತಾನೊರೆವುದಾದ ಕತದಿಂದ ॥೪॥ ಕುವರ ಕೇಳೀ ಪ್ರಪಂಚವೆ ಮಿಥ್ಯೆ ಯರಿವಿಗ । ನ್ಯವೆಯಾಗಿ ಕಾಣೆ. ಸುವ ದರಿಂ ಕನಸಿನಿಂ । ದವೆ ತೋರ್ಪ ದೃಶ್ಯ ಚಯದಂತೆ ॥೫॥ ಸೂನು ತಿಳಿ ಪುಸಿ ಯಾಗದೇನುಂಟದರಿವಿಂಗೆ । ತಾನನ್ಯವಲ್ಲ. ವಾತ್ಮನಂತೆಂಬುದನು । ಮಾನ ವಿಂತಿದು ಸ ಹಜಸಿದ್ಧ ॥೬॥ ಎನೆ ಸರ್ವಮುಂ ಮಿಥ್ಯೆ ಯೆನ ಬೇಹುದಂತಾಗೆ । ತನಗೆ ನಿಜಸಿದ್ಧಿ.ಯನು ಸಾಧಿಸಲ್ಕೆ ಪುಸಿ । ತನು ಮುಖ್ಯವಾಗ ದೆನೆ ಕೇಳು ॥೭॥ ಶಿಲೆಯ ಭೈರವನಲ್ಲಿ ಪಲವು ಸಿದ್ಧಿಗಳಾಗೆ । ನೆಲಸಿ ತೋರ್ಪಂತೆ. ಪುಸಿ ಯ ಸಾಧನದಿಂದೆ । ಫಲಿಸುವದು ಸತ್ಯ ವಹ ಮುಕ್ತಿ ॥೮॥ ಕನಸು ಪುಸಿಯಾ ದೊಡಂ ತನಗಲ್ಲಿ ಸುರತದಿಂ । ಜನಿತವಹ ರೇತು. ವದು ಸತ್ಯವಾದಂತೆ । ತನುಜ ಪುಸಿಯಲ್ಲಿ ದಿಟವುಂಟು ॥೯॥ ಮುಕುರ ಬಿಂಬಂ ಮುಖದ ಸಕಲ ಸೌಂದ ರತೆಯಂ । ಪ್ರಕಟಿಸುವ ಪಾಂಗು. ನಿಜಸಿದ್ಧಿಯಂ ಪುಸಿಯ । ನಿಕರದಿಂ ಪಡೆ ಯ ಲಹುದಿಂತು ॥ .... .... .... ॥೧೦॥

ಜಗದನಿತ್ಯತ್ವ ನಿರೂಪಣೆ—ಸೂತ್ರ ೨ಕ್ಕೆ ತ್ರಿವಿದಿ ೧೫

—: ೦ ೦ :—

ಸೂತ್ರ ॥ ತನು ಕರಣ ಮೊದಲಾದವನಿತಾತ್ಮ ತಾನಲ್ಲ !
ತನಗೆ ಬೇರೆನಿಸಿ ಕಾಣಪುದರಿಂದ ॥

---

೩ ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್ ॥ ವಿಕಾರಂ ನಾಮರೂಪಂ ಜಗದವಿಚಾರಕಾಲೇ ದೃಶ್ಯತಿ ಚಿದ್ವ್ಯತಿರೇಕೇಣ;— ವಿಚಾರೇ ಸರ್ವಂಚಿದೇವ ವಿದ್ಧಿ.

ತ್ರಿವಿದಿ ॥ ಇನ್ನು ಕೇಳಿಲೆ ವತ್ಸ ಚಿನ್ನವನರಿಯದಂಗೆ । ಚಿನ್ನದಿಂದಾದ. ಕಡಗಮುಂ ಕಾಣುತ್ತ: । ಚಿನ್ನದ ವಿಚಾರ ವಿರದಂತೆ ॥೧॥ ಪಾರಮಾರ್ಥಿಕ ಚಿತ್ಸನಾರೈಯದೀ ವ್ಯಾವ । ಹಾರಿಕಾಕಾರ. ವಾದ ತನು ಮೊದಲಾದ । ಭೂರಿ ಜಡವರ್ಗ ವನುನೋಡೆ ॥೨॥ ವಾರಿಸಂಪರ್ಕದಿಂ ಧಾರುಣಿ ದ್ರವಿಸುವಂ । ತಾರ್ಕೈಯಲಾತ್ಮ. ಸನ್ನಿವೇಶದಿನಹಂ । ಕಾರಾದಿ ಚಿತ್ತೆ ನಿಸುತಿರ್ಕು ॥೩॥ ಅದು ನೈಜವೆಂದಜ್ಞರೊದವಿ ನುಡಿವುತ್ತಿರ್ಪ । ರದಿದೆಂದು ತೋರು. ತಿಹು ದಾತ್ಮನಲ್ಲವೆಂ । ಬುದನೆ ಕೇಳಾತ್ಮ ಜನೆ ಪೇಳ್ವೆ ॥೪॥ ಭೂತ ಪಂಚೀಕರಣ ಜಾತ ದೇಹಾದಿ ಸಂ । ಘಾತಂಗಳಾತ್ಮ. ನಲ್ಲವೆಂದರಿವುದೆಲೆ । ತಾತ ಚಿತ್ರದ ರ ಚನೆಯುಂತೆ ॥೫॥ ಒಂದು ಹನಿಬಿಂದು ಪೊಡೆಯಿಂ ದೇಹವೆನಿಸುತ್ತೈ । ತಂದು ಬೆಳೆದುಂಡು. ಬದುಕಿ ಕೆಡುವಿದಕೆ ಬೇ । ರೊಂದಿಂದ್ರು ಜಾಲ ವೆನಲುಂಟೆ ॥೬॥ ಪದ ಪಾಣಿ ಶಿರಗಳಿವು ರುಧಿರ ರೇತಂಗಳಿಂ । ದೊದವಿರ್ಪವಾಗಿ. ಜಲದ ಬೊಬ್ಬುಳಿಕೆಯುಂ । ತುದಿಸಿ ತನುವಡಗು ತಿಹುದಿಂತು ॥೭॥ ಅರಿವಲ್ಲವೀ ಕಾಯುವರುಹಿಕೊಳುತಿಹುದಾಗಿ । ಯರುಹಿಕೊಳುತಿರ್ಪು. ದರಿವಲ್ಲವದು ಬಚ್ಚ ಬರಿಯು ಘಟದಂತಿ ದನುಮಾನ ॥೮॥ ಶ್ರವಣಾದಿ ಬುದ್ಧೀಂದ್ರಿಯವನು ವಾ ಕ್ಕರಮುಖ್ಯ । ವಿವಿಧ ಕರ್ಮೇಂದ್ರಿ.ಯವನು ಸಂವಿತ್ತೆಂಬು । ದವಿರತಂ ಘಟಿಸ ದೊಡಲಂತೆ ॥೯॥ ಬಲ್ಲಹನೆ ಶಬ್ದಾದಿಯಲ್ಲಿಯೋ ವಚನಾದಿ । ಯಲ್ಲಿಯೋ ನಿಯುಮ. ವಿಡಿದಿಂದ್ರಿಯ ಪ್ರಕರ । ದಲ್ಲಿಯಾತ್ಮತ್ವ ವಿಹುದೆಂತು ॥೧೦॥ ತಮ್ಮ ವಿಷಯಾಕಾರಮುಂ ಮರೆವವಾಗಿ ಬಳಿ । ಕಂ ಮನನವಿಲ್ಲ. ವಾಗಿ ಕರಣಂಗಳಿವ । ನೊಮ್ಮೆ ಚಿತ್ತೆಂಬು ದರಿದಲ್ತೆ ॥೧೧॥ ಪ್ರಾಣಾನಿಲಂಗಳಂ ಮಾಣಾತ್ಮನೆಂಬು ದಂ । ಜಾಣನಿಂದೂದು. ತಿಹವಾಸದುಸುರಂತೆ । ಕಾಣಿಸುತ್ತೊಡಲೊ ಳಿಹ ವಾಗಿ ॥೧೨॥ ರೇಚಕಾದಿತ್ರಯವನಾಚರಿಸುತಂ ಜಯದ । ಸೂಚನೆಯನುಳ್ಳ. ಯಮಿಗಳಿಂ ಜಾಡ್ಯವೇ । ಪ್ರಾಚುರ್ಯವನಿಲ ನಿವಹಕ್ಕೆ ॥೧೩॥ ಚಿತ್ತು ಮನ ಮೊದಲಾದ ವೃತ್ತಿ ನಾಲ್ಕರರೂಪು । ವೆತ್ತುದಂತಃಕ. ರಣವಾತ್ಮನಾ ಗದಾ । ಚಿತ್ತಿಂಗೆ ವೇದ್ಯ ವಹುದಾಗಿ ॥೧೪॥ a ನೇತಿ ನೇತೀತಿ ನೇತೀತಿ ನಿಗ

---

a ನೇತಿ ನೇತೀತಿ ನೇತೀತಿ । ಶೇಷಿತಂ ಯತ್ಪರಂಪದಂ । ನಿರಾಕರ್ತುಮಶಕ್ಯತ್ವಾತ್ತದಸ್ಮೀತಿ ಸುಖೀಭವ.

ಸೂತ್ರ ॥ ನಾಮ ರೂಪುಗಳೆಲ್ಲಮುಂಮಿಥ್ಯೆ ಯೆಂದು ತಿಳಿ ।
ಯಾ ಮಹಾಸಂವಿತ್ತಿನಲ್ಲಿ ತೋರ್ಪ ॥

ತ್ರಿವಿದಿ ॥ ಸೂನು ಕೇಳಾ ಜಗಂ ತಾನಾತ್ಮನೆಂಬುದ । ಕ್ಕಾ ನಾಮ ರೂಪು. ಗಳ ತೋರ್ಕೆ ಪುಸಿಯೆಂಬು । ದೇ ನಿಶ್ಚಿತಾರ್ಥ ವೆನಬೇಕು ॥೧॥ ಸರ್ಪಾದಿ ಭಾವದಿಂ ತೋರ್ಪುದೇ ರಜ್ಜುವೆನೆ । ಸರ್ಪಾದಿ ಭಾವ. ದಲ್ಲಿಯಾ ರಜ್ಜುತ್ವ । ಮಿರ್ಪುದೇ ಲೋಕ ದೊಳಗಿಂತು ॥೨॥ ಪರಮನೇ ಜಗವೆನಿಸು ತಿರಲೀ ಜಗತ್ತಿಗಾ । ಪರಮಾರ್ಥವೆಂತು. ನಿಜವಕ್ಕು ತಸ್ಕರಂ । ಕೊರಡಾಗ ದೊಪ್ಪು ತಿಹಪಾಂಗು ॥೩॥ ನೀನಿಂತು ತಿಳಿ a ವಿಕಾರೋನಾಮ ರೂಪಮೆನು । ತೀ ನಾಮ ರೂಪ. ಗಳನೆ ಪುಸಿಯೆಂದು ಶ್ರುತಿ । ತಾನೊರೆವುದಾದ ಕತದಿಂದ ॥೪॥ ಕುವರ ಕೇಳೀ ಪ್ರಪಂಚವೆ ಮಿಥ್ಯೆ ಯರಿವಿಗ । ನ್ಯವೆಯಾಗಿ ಕಾಣಿ. ಸುವ ದರಿಂ ಕನಸಿನಿಂ । ದವೆ ತೋರ್ಪ ದೃಶ್ಯ ಚಯದಂತೆ ॥೫॥ ಸೂನು ತಿಳಿ ಪುಸಿ ಯಾಗದೇನುಂಟದರಿವಿಂಗೆ । ತಾನನ್ಯವಲ್ಲ. ವಾತ್ಮನಂತೆಂಬುದನು । ಮಾನ ವಿಂತಿದು ಸ ಹಜಸಿದ್ಧ ॥೬॥ ಎನೆ ಸರ್ವಮುಂ ಮಿಥ್ಯೆ ಯೆನ ಬೇಹುದಂತಾಗೆ । ತನಗೆ ನಿಜಸಿದ್ಧಿ.ಯನು ಸಾಧಿಸಲ್ಕೆ ಪುಸಿ । ತನು ಮುಖ್ಯವಾಗ ದೆನೆ ಕೇಳು ॥೭॥ ಶಿಲೆಯು ಭೈರವನಲ್ಲಿ ಪಲವು ಸಿದ್ಧಿಗಳಾಗೆ । ನೆಲಸಿ ತೋರ್ಪಂತೆ. ಪುಸಿ ಯ ಸಾಧನದಿಂದೆ । ಫಲಿಸುವದು ಸತ್ಯ ವಹ ಮುಕ್ತಿ ॥೮॥ ಕನಸು ಪುಸಿಯಾ ದೊಡಂ ತನಗಲ್ಲಿ ಸುರತದಿಂ । ಜನಿತವಹ ರೇತು. ವದು ಸತ್ಯವಾದಂತೆ । ತನುಜ ಪುಸಿಯಲ್ಲಿ ದಿಟಮುಂಟು ॥೯॥ ಮುಕುರ ಬಿಂಬಂ ಮುಖದ ಸಕಲ ಸೌಂದ ರತೆಯುಂ । ಪ್ರಕಟಿಸುವ ಪಾಂಗು. ನಿಜಸಿದ್ಧಿಯುಂ ಪುಸಿಯ । ನಿಕರದಿಂ ಪಡೆ ಯ ಲಹುದಿಂತು ॥ ॥೧೦॥

.... .... ....

ಜಗದನಿತ್ಯತ್ವ ನಿರೂಪಣೆ–ಸೂತ್ರ ೨೬ಕ್ಕೆ ತ್ರಿವಿದಿ ೧೫೬

–: ೦ ೦ :–

ಸೂತ್ರ ॥ ತನು ಕರಣ ಮೊದಲಾದವನಿತಾತ್ಮ ತಾನಲ್ಲ ।
ತನಗೆ ಬೇರೆನಿಸಿ ಕಾಣಿಪುದರಿಂದ ॥

---

a ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್ ॥ ವಿಕಾರಂ ನಾಮರೂಪಂ ಜಗದವಿಚಾರಕಾಲೇ ದೃಶ್ಯತಿ ಚಿದ್ವ್ಯತಿರೇಕೇಣ—ವಿಚಾರೇ ಸರ್ವಂಚಿದೇವ ವಿದ್ಧಿ.

ತ್ರಿವಿದಿ ॥ ಇನ್ನು ಕೇಳೆಲೆ ವತ್ಸ ಚಿನ್ನವನರಿಯದಂಗೆ । ಚಿನ್ನದಿಂದಾದ. ಕಡಗಮುಂ ಕಾಣುತ್ತ:। ಚಿನ್ನದ ವಿಚಾರ ವಿರದಂತೆ ॥೧॥ ಪಾರಮಾರ್ಥಿಕ ಚಿತ್ತನಾರ್ಯೆಯದೀ ವ್ಯಾವ । ಹಾರಿಕಾಕಾರ. ವಾದ ತನು ಮೊದಲಾದ । ಭೂರಿ ಜಡವರ್ಗ ವನುನೋಡೆ ॥೨॥ ವಾರಿಸಂಪರ್ಕದಿಂ ಧಾರುಣಿ ದ್ರವಿಸುವಂ । ತಾರ್ಯೆಯಲಾತ್ಮ. ಸನ್ನಿವೇಶದಿನಹಂ । ಕಾರಾದಿ ಚಿತ್ತೆ ನಿಸುತಿರ್ಕು ॥೩॥ ಅದು ನೈಜವೆಂದಜ್ಞರೊದವಿ ನುಡಿವುತ್ತಿರ್ಪ । ರದಿದೆಂದು ತೋರು. ತಿಹು ದಾತ್ಮನಲ್ಲವೆಂ । ಬುದನೆ ಕೇಳಾತ್ಮ ಜನೆ ಪೇಳ್ವೆ ॥೪॥ ಭೂತ ಪಂಚೀಕರಣ ಜಾತ ದೇಹಾದಿ ಸಂ । ಘಾತಂಗಳಾತ್ಮ. ನಲ್ಲವೆಂದರಿವುದೆಲೆ । ತಾತ ಚಿತ್ರದ ರ ಚನೆಯುಂತೆ ॥೫॥ ಒಂದು ಹನಿಬಿಂದು ಪೊಡೆಯಿಂ ದೇಹವೆನಿಸುತ್ತೆ । ತಂದು ಬೆಳೆದುಂಡು. ಬದುಕಿ ಕೆಡುವಿದಕೆ ಬೇ । ರೊಂದಿಂದ್ರ ಜಾಲ ವೆನಲುಂಟೆ ॥೬॥ ಪದ ಪಾಣಿ ಶಿರಗಳಿವು ರುಧಿರ ರೇತಂಗಳಿಂ । ದೊದವಿರ್ಪವಾಗಿ. ಜಲದ ಬೊಬ್ಬುಳಿಕೆಯುಂ । ತುದಿಸಿ ತನುವಡಗು ತಿಹುದಿಂತು ॥೭॥ ಅರಿವಲ್ಲವೀ ಕಾಯುವರುಹಿಕೊಳುತಿಹುದಾಗಿ । ಯರುಹಿಕೊಳುತಿರ್ಪ. ದರಿವಲ್ಲವದು ಬಚ್ಚ ಬರಿಯ ಘಟದಂತಿ ದನುಮಾನ ॥೮॥ ಶ್ರವಣಾದಿ ಬುದ್ಧೀಂದ್ರಿಯವನು ವಾ ಕ್ಕರಮುಖ್ಯ । ವಿವಿಧ ಕರ್ಮೇಂದ್ರಿ.ಯವನು ಸಂವಿತ್ತೆಂಬು । ದವಿರತಂ ಘಟಿಸ ದೊಡಲಂತೆ ॥೯॥ ಬಲ್ಲಹನೆ ಶಬ್ದಾದಿಯಲ್ಲಿಯೋ ವಚನಾದಿ । ಯಲ್ಲಿಯೋ ನಿಯಮು. ವಿಡಿದಿಂದ್ರಿಯ ಪ್ರಕರ । ದಲ್ಲಿಯಾತ್ಮತ್ವ ವಿಹುದೆಂತು ॥೧೦॥ ತಮ್ಮ ವಿಷಯಾಕಾರಮುಂ ಮರೆವವಾಗಿ ಬಳಿ । ಕಂ ಮನನವಿಲ್ಲ. ವಾಗಿ ಕರಣಂಗಳಿವ । ನೊಮ್ಮೆ ಚಿತ್ತೆಂಬು ದರಿದಲ್ತೆ ॥೧೧॥ ಪ್ರಾಣಾನಿಲಂಗಳಂ ಮಾಣಾತ್ಮನೆಂಬು ದಂ । ಜಾಣನಿಂದೂದು. ತಿಹವಾಸದುಸುರಂತೆ । ಕಾಣಿಸುತ್ತೊಡಲೊ ಳಿಹ ವಾಗಿ ॥೧೨॥ ರೇಚಕಾದಿತ್ರಯವನಾಚರಿಸುತಂ ಜಯದ । ಸೂಚನೆಯುನುಳ್ಳ. ಯಾಮಿಗಳಿಂ ಜಾಡ್ಯವೇ । ಪ್ರಾಚುರ್ಯವನಿಲ ನಿವಹಕ್ಕೆ ॥೧೩॥ ಚಿತ್ತು ಮನ ಮೊದಲಾದ ವೃತ್ತಿ ನಾಲ್ಕರರೂಪು । ವೆತ್ತುದಂತಃಕ. ರಣವಾತ್ಮನಾ ಗದಾ । ಚಿತ್ತಿಂಗೆ ವೇದ್ಯ ವಹುದಾಗಿ ॥೧೪॥ a ನೇತಿ ನೇತೀತಿ ನೇತೀತಿ ನಿಗ

---

a ನೇತಿ ನೇತೀತಿ ನೇತೀತಿ । ಶೇಷಿತಂ ಯತ್ಪರಂಪದಂ । ನಿರಾಕರ್ತುಮಶಕ್ಯತ್ವಾತ್ತ ದಸ್ಮೀತಿ ಸುಖೀಭವ.

ಮುಗಳಿರೆ । ಭೂತ ದೇಹೇಂದ್ರಿಯ ಪ್ರಕರವರಿಪೆಂಬ ಮಾತು ತಾನೆತ
ಣಿಯು ಪುತ್ರ ॥ .... .... .... ॥೧೫॥

ದೇಹಾದಿಗಳಿಗನಾತ್ಮತ್ವ ನಿರೂಪಣೆ ಸೂತ್ರ ೩೬ಕ್ಕೆ ತ್ರಿವಿದಿ ೩೦.

---

ಸೂತ್ರ ॥ ವೃತ್ತಿ ನಾಲ್ಕೆನಿಸುವಂತಃಕರಣ ವಾತ್ಮನಾ ।
ಗುತ್ತಿರದು ವೇದ್ಯವಹುದಾಗಿ ತಾನು ॥

ತ್ರಿವಿದಿ ॥ ಆವವನ ಕಡೆಗಣ್ಣ ಭಾವಮಿಾ ವಿಶ್ವ ಸ । ದ್ಭಾವಕ್ಕೆ ಮೂಲ. ವಾ ಶಂಭುವಾದಗುರು । ದೇವ ಬಿನ್ನಪವ ನವಧರಿಸು ॥೧॥ ಎಂತಿರ್ಪವಾ ವೃತ್ತಿ ಯೆಂತು ಕಾಣಿಸಿಕೊಂಬ । ವೆಂತುಟಂತಃಕ. ರಣಮಿರ್ದು ಮಗುಳೆ ತಾ । ನೆಂತರುಹಿ ಕೊಂಬು ದಖಿಳಜ್ಞ ॥೨॥ ಎನೆ ಕೇಳು ವೃತ್ತಿ ನಾಲ್ಕೆನಿಸಿ ಕೊಂಡಾ ಚಿತ್ತ । ಮನಹಂತೆ ಬುದ್ಧಿ. ಯೆಂಬ ಪೆಸರಿಂದಿರ್ಕು । ನಿನಗದಂ ತಿೞಿಪುವೆನು ಬೋಧ್ಯ ॥೩॥ ಬೀದಿಯ ಗಸದಂತೆ ಘಟಾದಿ ವಿಷಯದ ನಿರುಗೆ । ವೇದಿಸದೆ ತೋರ್ಪ.ನಿರ್ವಿಕಲ್ಪ ಜ್ಞಾನ । ವಾದುದೇ ಚಿತ್ತ ವೆನಿಸುವದು ॥೪॥ ಕೊರಡಿದೋ ನರನೋ ಗೋಚರಿಸದೆನಗೆಂದು ನಿ । ರ್ಧರಿಸದಾರೈವ. ಚೈತ ನ್ಯವೇ ಮನಂ । ತರುಣ ನೀನರಿವು ದಿದನಿಂತು ॥೫॥ ಇದನರಿದವ ನಾ ನಿದೆನಗೆನ್ನದೆಂಬ ಮೋ । ಹದೊಳಿರ್ಪ ಮತಿಯೆ. ಹಮ್ಮೆನಿಸುತಿಹುದು ನೀ । ನಿದನಿಂತು ತಿಳಿವು ದೆಲೆ ವತ್ಸ ॥೬॥ ಇದು ಚೋರನಲ್ಲವಿಂತಿದು ಕೊರಡು ಸಂದೇಹ । ವಿದಕೆ ಬೇಡೆಂಬ. ರಿವೆ ಬುದ್ಧಿಯಹುದು ನೋ । ಡಿದರಲ್ಲಿ ವೃತ್ತಿ ಗಳನೀತು ॥೭॥ ಎನ್ನದೀ ಚಿತ್ತ ತಾನೆನ್ನದೀ ಮನ ಹಮ್ಮಿ । ದೆನ್ನದೀ ಬುದ್ಧಿ. ಯೆಂಬನುಭವದ ತೋರ್ಕೆ । ಯಿಂ ನೋಡೆ ವೇದ್ಯ ಮಿವು ತಾವು ॥೮॥ ಇಂತು ವೃತ್ತಿಗಳುಳ್ಳ ದಂತಃಕರಣವಿದಾ । ಹಂತೆಯೊಂದಂಶ. ವಹುದು ಜಾಗರಣ ಕನ । ಸಂ ತಾನೆ ರಚಿಸು ತರಿಯುವದು ॥೯॥ ಅಣಿಯರದೆ ಸತ್ವಾದಿ ಗುಣದೇ ಳ್ಗೆಯಿಂ ವಿಷಯ । ಗಣಮಂ ಬಿಡುತ್ತೆ. ಪಿಡಿವುತ್ತೆ ತೊಳಲುತ್ತೆ । ತಣಿಯದದು ಬಾಧೆ ಗೊಳುತಿರ್ಕು ॥೧೦॥ ಇಂತೀಪರಿಯೊಳವಸ್ಥಾಂತರಂ ಗೊಳುತಿರ್ಪ । ದಂತಃಕರಣವೆ. ಯದುಕಾರಣಂ ವೇದ್ಯ । ವಾಂತುದಂತಾಗಿ ನಿಜವಲ್ಲ ॥೧೧॥

ಅಂತಃಕರಣಕ್ಕನಾತ್ಮತ್ವ ನಿರೂಪಣೆ ಸೂತ್ರ ೪೬ಕ್ಕೆ ತ್ರಿವಿದಿ ೪೧.

ಸೂತ್ರ ॥ ಅಹಮಾತ್ಮನಲ್ಲ ಬುದ್ಧ್ಯಾದಿಗುಣಮುಳ್ಳುದಾ ।
ಗಿಹುದಾದ ಕತದಿಂದೆ ಜಾಡ್ಯವೈಸೆ ॥

ತ್ರಿವಿದಿ ॥ ಪರಿಪೂರ್ಣನಾಗಿ ಶಿವನಿರೆ ಜಗಂ ಶಿವನಾಗ । ದಿರಲದಂ ಸೋಟ.ಮಾತ್ರದಿಂ ಶಿವನೆನಿಪ । ಗುರುವೆ ಬಿನ್ನಪವ ಸವಧರಿಸು ॥೧॥ ಮೊದಲೊಳಂತಃಕರಣವದು ಹಮ್ಮಿನಂಶಮೆಂ । ದೊದವಿ ನೀವೆನ್ನೊ. ಳೊರದಿರಾಹಂತೆಯೆಂ । ಬುದರಂದವಾವು ದೆಲೆ ದೇವ ॥೨॥ ಎನೆ ಕೇಳು ವೃತ್ತಿ ನಾಲ್ಕೆನಿಸುವಂತಃಕರಣ । ವನು ತನ್ನ ದೊಂದ.ವಸ್ಥೆಯೆನಿಸಿರ್ಪ ಹಂ । ಮಿನ ಪರಿಯನೊರೆವೆ ನೆಲೆ ಪುತ್ರ ॥೩॥ ಅಜ್ಞಾನದಿಂದನ್ಯಥಾ ಜ್ಞಾನದವೆ ದೆರೆಯೆ । ಸೌಜ್ಞೆಯಿಂದದು ಮ. ಹತ್ತಲ್ಲಿ ಸವಿಕಲ್ಪ । ಕ ಜ್ಞಾನವಾಗಲದೆ ಹಮ್ಮು ॥೪॥ ಅದನೆ ಪ್ರಥಮಧ್ಯಾಸವದನೆ ಕಲ್ಪಿತಪುರುಷ । ನದನೆ ವ್ಯವಹಾರಿ. ಜೀವನೆನಂತಿಹರು ಕೇ । ಳದು ತಾನೆ ಮೂಲ ವಖಿಳಕ್ಕೆ ॥೫॥ ಕುಟಿಯೊಡನೆ ವೇದ್ಯವಾ ಪಟವೆಂಬ ವೊಲು ತನ್ನ । ಪಟುವೃತ್ತಿಯುರುಹಿ. ಕೊಳುತಿರ್ಪ ಕತದಿನಿದು । ಘಟದಂತೆ ವಿಷಯ ವೆನಬೇಕು ॥೬॥ ಈ ಯಹಮುತಾನುಭಯ ಕಾಯದೊಳಗರಿವಿನ ವಿ । ಡಾಯಮಂ ಪಡೆದು ಪೊರಗುಳ್ಳ ವಿಷಯುಸಮು । ದಾಯಮಂ ಕಾಣು ತಿಹುದಿಂತು ॥೭॥ ಜಡವರಿವ ಪರಿಯೆಂತುಮಡಿಕೆಯುಂ ಬೇರೊಂದು ಮಡಿಕೆಯರಿವುತ್ತ. ಮಿಹುದೆ ನೀವಿದನರುಹಿ । ಕೊಡುವುದೆನೆ ಪೇಳುವೆನು ಕೇಳು ॥೮॥ ಸೂಜಿಗಲ್ಲಂ ಪಿಡಿದ ಸೂಜಿಯುದು ಬೇರೊಂದು । ಸೂಜಿಗಾ ಸೂಜಿ. ಕಲ್ಲಗುಣಮಂ ತಾಳ್ದು । ರಾಜಿಸುತಿರ್ಪ ತೆರನಂತೆ ॥೯॥ ಚಿತ್ತುವಿಡಿದಿರ್ಪಹಮು ಚಿತ್ತಲ್ಲದಿದ್ದೊಡಂ । ಚಿತ್ತೆನಿಸಿ ದೇಹ. ಮೊದಲಾದವಂ ಚೇಷ್ಟಿ । ಸುತ್ತರಿವುದೆಂದು ತಿಳಿಪುತ್ರ ॥೧೦॥ ಕುವರ ಕೇಳಿನ್ನಿದರ ನವಗುಣಂ ವೇದ್ಯವೆನಿ । ಸುವ ಕತದಿನಹಮು, ನಿಜವಾಗದಾ ಗುಣಿತ್ವವನಾಂತುದಾಗಿ ಘಟದಂತೆ ॥೧೧॥ ಆವ ಧರ್ಮಾಧರ್ಮ ವೋವಿಯತ್ನ ದ್ವೇಷ । ಭಾವನಾರಾಗ. ಸುಖ ದುಃಖ ಮತಿಗಳಿವು । ತಾವೆ ನವಗುಣವೆ ನಿಸುತಿರ್ಕು ॥೧೨॥ ಶ್ರೋತಾಹಮೆಂಬಲ್ಲಿ ಧ್ಯಾತಾಹಮೆಂಬಲ್ಲಿ । ಮಾತೇನು ಹಮ್ಮು. ತತ್ತದಿಂದ್ರಿಯದೊಡನೆ । ಶ್ವೇತೋತ್ಪಲದ ತೆ ರದೆವೇದ್ಯ ॥೧೩॥ಸೂನು ತಿಳಿ ನೀನಹಂ ಜಾನಾಮಿ ಯೆಂಬುವಭಿ । ಮಾನಕ್ಕೆ ವೇದ್ಯ. ವೇದಕತ್ವವನೆಯನು । ಮಾನಿಪುದು ತಪ್ತಜಲದಂತೆ ॥೧೪॥ ಜಡವಜಡವಿಂತು ತನ್ನೊಡಲಾಗಿ ಜಾಗ್ರಾದಿ । ಯೊಡನೆ ಯಹಮೆಂದು. ತೋರಿ ಸುಪ್ತಿಯೊಳಹಮಿ । ದಡಗಿ ದೃಶ್ಯತ್ವವಹು

ದೈಸೆ ॥೧೫॥ ಇಂತುದಿಸಿ ಯಡಗುತಿಹುದಂತಾಗಿ ಯಾತ್ಮನೆಂ । ದೆಂತೊರೆಯ ಬರ್ಪುದ. ವಹಮನೀ ಪರಯೊಳರಿ ಸಂತ ನೀನೀ ಕ್ರ ಮವನಿಲ್ಲಿ ॥೧೬॥ ಉತ್ತಮರು ಮೆಚ್ಚುವೈವತ್ತೆಂಟು ಪದದೊಡನೆ । ಬಿತ್ತರಂ ಬಡೆದ. ಸೂತ್ರುಗಳೈದು ರಚಿ । ಸಿತ್ತು ನಾಲ್ಕನೆಯ ದಿದುಸಂಧಿ ॥ .... .... ॥೧೭॥

ಅಹಂಕಾರಕ್ಕನಾತ್ಮತ್ವ ನಿರೂಪಣೆ—ಸೂತ್ರ ೫ಕ್ಕಂ ತ್ರಿವಿದಿ ೫೮.
ಅಂತು ಸಂಧಿ ೪ಕ್ಕಂ ಸೂತ್ರ ೨೫ಕ್ಕಂ ತ್ರಿವಿದಿ ೨೯೦.

**ಮಂಗಳಮಸ್ತು.**

---

ಶ್ರೀಗುರು ಶಂಭುಲಿಂಗಾಯನಮಃ

# ಐದನೆಯ ಸಂಧಿ.

ಸೂತ್ರ ॥ ಅಹಮಿನಿಲ್ಲವೆ ನಿದ್ರೆಯೊಳಗರುಹಿಕೊಂಬುದೆಂ ।
ತಹುದರಿವು ಸಂದಿಲ್ಲದಿರ್ಪುದಾಗಿ ॥

ತ್ರಿವಿದಿ ॥ ಅಳಿಯುದುಳಿಯದ ಮರವೆ ದಳೆಯುದೆಚ್ಚರದ ಕಳ । ವಳಿಸದರಿವರಿವೆ. ನಿಜವಾದ ಶಂಭುಪದ । ನಳಿನಮಂ ಕೂರ್ತು ನತನಪ್ಪೆ ॥೧॥ ಅಜ್ಞಾನ ನಿರ್ಹರಣ ಸುಜ್ಞಾನ ಸುಖಕರಣ । ತಜ್ಞ ನತಚರಣ. ಗುರುವರ್ಯನೀವೆನ್ನ । ವಿಜ್ಞಾಪನವನೊ ಲಿದು ಕೇಳು ॥೨॥ ಅಹಮು ನಿದ್ರೆಯೊಳಿಲ್ಲದಿಹ ರೂಪಿನಿಂ ದೃಶ್ಯ । ವಹುದೆಂದೊಡರಿವು. ತಿಹುದೊಂದುಬೇಕದೆಂ । ತಹುದು ಪೇಳೆನಗೆ ನಿಜವಾಗಿ ॥೩॥ ಚಿರನಿದ್ರೆಯಲ್ಲಿ ಯರಿವಿರೆ ತನ್ನ ದೇಹದಾಭರಣಮಂ ಚೋರ. ನೊಯ್ವಾಗಲಾದೊಡಂ । ನರನರಿಯನೇತ ಕೆಲೆ. ದೇವ ॥೪॥ ಮತ್ತೆ ನಿದ್ರೆಯೊಳು ಸಂವಿತ್ತಿಲ್ಲವೆಂದು ಕೆಲ । ರುತ್ತರಂಗೊಡುವ. ರಹಮಿನಿಲ್ಲವೆ ಕಾಣೆ । ಸುತ್ತಮಿಹುದೆಂತು ಕರುಣಿಪುದು ॥೫॥

ಪ್ರಶ್ನೆ ನಿರೂಪಣೆ—ಸೂತ್ರ ೧ಕ್ಕೆ ತ್ರಿವಿದಿ ೫.

---

ಸೂತ್ರ ॥ ಅರಿವಿಲ್ಲವಾ ನಿದ್ರೆಯೊಳಗೆಂಬುದಾವಾವ ।
ತೆರದೊಳು ವಿಚಾರಿಸಲು ದೊರಕೊಳ್ಳದು ॥

ತ್ರಿವಿಧಿ ॥ ಕಂದ ಕೇಳಹಮಿಲ್ಲದಂದವಮಂ ನಿದ್ರೆಯೊಳ । ಗೊಂದಿಯರಿ ವಾತ್ಮ.ನಿಹುದು ನಿಜವಿದನೆ ಕುಶ । ಲಂ ದೋರಿ ನಿನ್ನೊಳೊರೆಯುವೆನು ॥೧॥ ಅರಿವಿಲ್ಲವೆನಲೇನುವುರಿಯದೆ ಸುಖದಿಂದಾ । ನೊರಗಿರ್ದೆನೆಂಬ. ನೆನಹಿರ್ದ ಬಳಿಕ ಕೇ । ಳರಿವುಂಟು ನಿದ್ರೆಯೊಳುಪುತ್ರ ॥೨॥ ಏನೊಂದರಿಯದಿರ್ದೆನಾ ನುಸುಖವುಯನಾದೆ । ನಾನಿದ್ರೆಯಲ್ಲಿ.ಯೆನಲಾತ್ಮನಿರ್ವೃದ । ಕ್ಕೇನು ದೃಷ್ಟಾಂತವೆನೆ ಕೇಳು ॥ ೩ ॥ ಏನುಮಾಡಿದೆಯೆಂದೊಡೇನುಮಿಲ್ಲೆಂಬವಂ ಹಾನಿತನಗಿಲ್ಲ. ದಾ ನಿರುದ್ಯೋಗಾಭಿ । ಮಾನದಿಂದಿಹುದ ನೊರೆವಂತೆ ॥೪॥ ಒಂದುವಂ ಕಾಣೆನಾನೆಂದುದಾಹಂತೆಲಯ । ಮೊಂದಿರ್ಪ ಸುಪ್ತಿ.ಯಲ್ಲಿ ತಾನಿರ್ದನೆನ । ಹಿಂದೆ ನೀನರಿವು ದಲೆ ವತ್ಸ ॥೫॥ ಲಂಬಿಕಾಯೋಗಿ ತಾನೆಂಬ ಬಗೆ ದೋರದ । ಲ್ಲುಂಬವೃತದಿಂದೆ. ಚಿರಕಾಲ ಸುಖಮಿರ್ದು । ದಂ ಬಳಿಕ ನೆನೆದು ಸುರುವಂತೆ ॥೬॥ ಪರಮಸುಖನಿದ್ರೆಯೊಳಗಿರುತಿರ್ದೆನೆಂಬ ಸಂ । ಸ್ಮರಣವಾಸುಪ್ತಿ. ಸತಿಯ ಸಂಯೋಗದಿಂ । ದೊರಕೊಂಡ ಸುಖವ ನರುಹುವದು ॥೭॥ ನೆನಹಿದರ್ಥಾಪತ್ತಿಯೆನಿಸುವ ಪ್ರಾಮಾಣ್ಯ । ವನೆ ಸೂಚಿಸುತ್ತಿಹುದಾದ ಕತದಿನಾ । ತನನಿದ್ರೆಯಲ್ಲಿ ಯರಿವುಂಟು ॥೮॥ ಸಂದೇಹವಿಲ್ಲದಾನಂದವುಯಚಿತ್ತು ತಂ । ನಿಂದೆ ತಾನೊಪ್ಪಿ.ಹುದಲ್ಲಿ ೩ ನಹಿದ್ರಷ್ಟು । ಮೆಂದು ಶ್ರುತಿಪೇಳುತಿಹುದಾಗಿ ॥ ...... .... ...... ॥೯॥

ಜ್ಞಾನ ಸದ್ಭಾವನಿರೂಪಣೆ ಸೂತ್ರ ೨ಕ್ಕೆ ತ್ರಿವಿದಿ ೧೪.

— ೦ —

ಸೂತ್ರ ॥ ಅರಿವಿನಿಲ್ಲವೆಯನರಿವುದು ಘಟಿಸದಾಗಿ ಕೇ ।
ಳರಿವುಂಟು ನಿದ್ರೆಯೊಳಗಿದು ಸಿದ್ಧವು ॥

ತ್ರಿವಿದಿ ॥ ತರುಣ ಕೇಳಾತೆರದೊಳೊರೆಯಲಂತದನೊಪ್ಪ । ದಿರೆ ಚಿತ್ತಿನಿಲ್ಲ.ವೆಯುದಲ್ಲಿ ನನಗೆ ಗೋ । ಚರಿಸಿತೆನಲಿಂತು ಬೆಸಸುವೆನು ॥೧॥ ಜ್ಞಾನದಿಲ್ಲವೆಯನಂತಾನಿದ್ರೆಯಲ್ಲಿಯೆ । ನೀನರಿದೆನೆಂಬೊ.ಡದಂ ಘಟಿಸಲರಿಯದಂ ದಾನಿಲ್ಲಿ ಪೇಳುವೆನು ಕೇಳು ॥೨॥ ಆವುದಿಲ್ಲವೆಯುದಂ ಭಾವಿಸಲ್ಪ್ರತಿ

೩ ನಹಿದ್ರಷ್ಟುರ್ದೃಷ್ಟೇರ್ವಿಪರಿಲೋಪೋವಿದ್ಯತೇ ಅವಿನಾಶಿತ್ವಾತ್,

ಯೋಗ್ಯ । ಭಾವವದೆ ಯಾಗಿ. ತದ್ವಿಶೇಷಣಮಾದ । ಠಾವಿನೊಳಗರುಹಿ
ಕೊಳುತಿರ್ಕು ॥ ೩ ॥ ಸಕಲಂ ವಿಶೇಷಣಾತ್ಮಕವಾದ ಬೋಧವಾ । ಸಕಲ
ದೊಡನೊಂದು. ನೆಲೆಯಲ್ಲಿ ಸಾಮಗ್ರಿ । ನಿಕರದಿಂದರುಹಿ ಕೊಳಬೇಕು ॥೪॥
ಭಾವವೊಂದಿಲ್ಲದಿಹಠಾವು ಕರಣಾದಿ ತ । ದ್ಭಾವದ ಸ್ಮರಣೆ.ಗಳು ಕೂಡೆ
ಸಾಮಗ್ರಿ । ಯಾವದೆಂದೆಂಬೊಡಿದು ತಾನೆ ॥೫॥ ವಸ್ತು ಸದ್ಭಾವಮಂ
ವಿಸ್ತರಿಪೊಡಾವಾವ । ವಸ್ತುವಿರಬೇಹು.ದದನೆ ಮತ್ತಿಲ್ಲೆಂಬ । ಪ್ರಸ್ತುತಕ್ಕನಿ
ತು ಮಿರವೇಳ್ಕು ॥೬॥ ಅಲ್ಲಿ ಚಿದಭಾವಮಿಂತಿಲ್ಲದರುಹಿಸದು ಕೇ । ಳಲ್ಲಿ
ಸಾಮಗ್ರಿ. ಗಳನುಳ್ಳೊಡದು ನಿದ್ರೆ । ಯಲ್ಲವೀ ಜಾಗ ರಣವ್ಯಸೆ ॥೭॥
ಇಲ್ಲವೆಯನಾರ್ಸೆಯ ಲುಳ್ಳನೆಲೆಯೊಂದು ಬೇ । ಕಲ್ಲಿ ಚಿತ್ತಿಲ್ಲ.ದುದನರಿಯೆ
ಬೇರೆ ನೆಲೆ । ಯೆಲ್ಲಿಯುಂ ತೋರ ದುದರಿಂದ ॥೮॥ ಅರಿವಿಲ್ಲವೆನಬಾರದರಿ
ವೆಂಬ ನಿಯಮದಿಂ । ತರಿವ ಹಮ್ಮಿಲ್ಲ.ದಿರೆ ನಿದ್ರೆಯದನೆ ಚಿ । ತ್ತರಿವುತಿಹು
ದಲ್ಲಿ ನಿಜದಿಂದ ॥೯॥ ಅರಿವಿರ್ಪುದರುಪಕೊಂಬರಿವೆ ತಾನಿಲ್ಲವೆಂ । ದರಿಯ
ಬೇಡೆನಲು. ಗುರುವರ್ಯ ನೀನೆಯಿದ।ನರುಹೆಂದೊಡಿಂತು ತಿಳುಪಿದನು॥೧೦॥
ಪರೆದಿರ್ದ ಶಿಶುಗಳಂ ಬರಿಸಿ ಪಕ್ಕದೊಳುಸಂ । ಚರಿಸದಂತಿರಿಸಿ. ಚರಣಾ
ಯುಧಂ ನಿದ್ರೆ । ವೆರಸುತೊಂದೆಡೆಯೊ ಳಿಹಪಾಂಗು ॥೧೧॥ ವಿಕರಿಸಿದ
ಬುದ್ಧ್ಯಾದಿ ಸಕಲ ತತ್ವಂಗಳಂ । ಪ್ರಕೃತಿಯೊಳಕೂಡ.ವಸ್ಥೆಯಿಲ್ಲದೆ ಸದಾ
ತ್ಮಕ ಚಿದಾಶ್ರಯದೊ ಳಿರುತಿರ್ಕು ॥೧೨॥ ರಾಹುವಿಡಿದಿಂದುವಾ ರಾಹುವಂ
ಬೆಳಗುವಂ । ತೂಹಿಸಲ್ನಿದ್ರೆ. ಮುಸುಕಲಂತಾ ಮಹಾ । ಮೋಹಮಂ ಚಿತ್ತ
ರಿವುದಲ್ಲಿ ॥ ೧೩ ॥ ಚಿದಚಿತ್ತುಗಳವಿಂತು ಪುದಿದು ನಿದ್ರೆಯೊಳಿರ್ಪು । ದಿದು
ನೈಜವಾಗ. ಲಲ್ಲಿ ನಾನರಿದೆನೆಂ । ಬುದು ಘಟಿಸದೇತ ಕೆನೆ ಕೇಳು ॥೧೪॥
ಒಡವೆಯರಸಲು ಕೂಪದೆಡೆಯಲ್ಲಿ ಮುಳುಗಿದವ । ನೊಡವೆಯುಂಟಿಲ್ಲ.ದುದ
ನೆದ್ದೊಡಲ್ಲದೇ । ನುಡಿಯಲಳವಲ್ಲ ವದರಂತೆ ॥೧೫॥ ಮುಳುಗಿ ನಿದ್ರೆಯೊಳು
ಚಿತ್ತುಳಿದಿರ್ದೊಡಾ ನಿದ್ರೆ । ಯಳಿದಲ್ಲದಲ್ಲಿ. ಯುರಿರ್ದಥಮಂ ನುಡಿಯ । ಲಳ
ವಲ್ಲವೆಂಬು ದಿದುಸಿದ್ಧ ॥೧೬॥ ನೀಇಂತು ತಿಳಿವುದೆಲೆ ಸೂನು ಶ್ರುತಿ ತಾನೆ
ಇಪ್ರಾ । ಜ್ಞೇನಾತ್ಮನಾದಿ. ವಾಕ್ಯದಿಂದೊರೆಯಲಿಂ । ತಾನಿರ್ದು ಪೇಳ ಲರಿ
ದಲ್ಲಿ ॥ ॥ ೧೭ ॥

.... .... ....

ಜ್ಞಾನಾಜ್ಞಾನ ಸದ್ಭಾವ ನಿರೂಪಣೆ—ಸೂತ್ರ ೩೩ಕ್ಕೆ ತ್ರಿವಿದಿ ೩೧.

---

ಇಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನಬಾಹ್ಯಂ ಕಿಂಚನ ವೇದ ನಾಂತರಂ.

ಸೂತ್ರ ॥ ಕರಣವಾವುದು ಸುಷುಪ್ತಿಯನರಿವೊಡಾತ್ಮಂಗೆ ।
ಗುರುವರ್ಯ ಕರುಣದಿಂದೊರೆವುದೆನಗೆ ॥

ತ್ರಿವಿದಿ ॥ ತರಣಿ ಶಶಿ ರೋಚಿಗಳ ಕಿರಣಂಗಳೈದಿ ಸಂ । ಹರಿಸದಜ್ಞಾನ, ತಿಮಿರಮಂ ಕೆಡಿಸುವದು । ಗುರುವರ್ಯ ನಿನ್ನ ನಸುನೋಟ ॥ ೧ ॥ ಎಂದು ಕೊಂಡಾಡುತಾನಂದಮಯ ಭಕ್ತಿರಸ । ದಿಂದೆ ನತನಾಗಿ. ಗುರುವೆ ಚಿತ್ತಯಿಸೆನ್ನು ತ್ತಂದು ಬಿನ್ನಯಿಸಿ ದನು ಪುತ್ರ ॥ ೨ ॥ ಗುರುವೆ ನಾನಾಯುಕ್ತಿವೆರಸಿ ನಿದ್ರೆ ಯನರಿವು । ತಿರುತಿರ್ಪನಾತ್ಮ. ನೆಂದಿರಾ ಸುಪ್ತಿಯೊಳು । ಕರಣಂಗಳುಂಟೆ ಯರಿವಿಂಗೆ ॥ ೩ ॥ ಕರಣ ಸಂಚಾರವಿರುತಿರೆ ನಿದ್ರೆಯಲ್ಲವೆಂ । ದಿರಿ ಮತ್ತ ಭಾವ. ವನು ಚಿತ್ತರಿವೊಡಲ್ಲಿ । ಕರಣಂಗಳಿಲ್ಲ ದಿಹುದೆಂತು ॥ ೪ ॥ ಚಿತು ನಿದ್ರೆಯು ನರಿವುದೆತ್ತಣದು ಸಾಧನದ । ಮೊತ್ತಮಿಲ್ಲಾಗಿ. ಮಗುಳೆಯಾ ನೆನ್ನ ಹುದೋ । ರುತ್ತಮಿಹುದಕ್ಕೆ ಗತಿಯುಂಟೆ ॥೫॥ ಅಲ್ಲಿ ಕರಣಾಪೇಕ್ಷೆಯಿಲ್ಲದಾ ಚಿತ್ತರಿಯ । ಬಲ್ಲುದೆನೆ ಸುಪ್ತಿ. ಯಳಿದಲ್ಲದಾ ಸ್ಮರಣ । ವಿಲ್ಲವೆಂದೆಂಬ ವಿಧಿ ಬೇಡ ॥ ೬ ॥ ತಾನೆಯರಿವುದು ಮತ್ತೆ ತಾನೆ ಮರೆವುದು ಮಗುಳೆ । ತಾನದಂ ನೆನೆವು. ದೆನಲು ಬುಧ್ಧ್ಯಾದಿ ಗುಣ । ತಾನಾದನಾತ್ಮನ ನಬೇಕು ॥ ೭ ॥ ಅಂತಾಗೆ ಜಡಭಾವಮಂ ತಾಳ್ದ ನಾತ್ಮನೆಂ । ಬಂತೆ ತೋರುತ್ತ. ಮಿದೆ ಗುರೂ ತ್ತಮನೀವಿ । ದಂ ತಿಳುಹಬೇಹುದೆನಗೊಲ್ದು ॥ ...... ॥ ೮ ॥

ಪ್ರಶ್ನೆ ನಿರೂಪಣೆ ಸೂತ್ರ ೪ಕ್ಕೆ ತ್ರಿವಿದಿ ೩೬.

---

ಸೂತ್ರ ॥ ತನಿನಿದ್ರೆಯೊಳಗನುಭವಿಪ ಕರಣಮುಂಟದಂ ।
ನಿನಗೆ ಪೇಳುವೆನೊಲಿದು ಕೇಳು ಬೋಧ್ಯ ॥

ತ್ರಿವಿದಿ ॥ ತನುಜ ಕೇಳಾ ನಿದ್ರೆಯನುಭವಕ್ಕಾದ ಸಾ । ಧನವನಾ ನಿದ್ರೆ. ಯಳಿದಲ್ಲಿ ತೋರುತಿಹ । ನೆನಹಿನ ಕ್ರಮವ ನೊರೆಯುವೆನು ॥ ೧ ॥ ನೆನಸಿನ ಲ್ಲಿಯು ಮತ್ತೆ ಕನಸಿನಲ್ಲಿಯು ತೋರ್ಪ । ತನುವಿಡಿದ ಜೀವ.ನನು ಕರ್ಮವ ಶದಿಂದೆ । ತನಿನಿದ್ರೆ ಮುಸುಕು ತಿಹುದೋರ್ಮೆ ॥ ೨ ॥ ಆ ನಿದ್ರೆಯೊಳಗ ಹಮು ತಾನಖಿಳ ಕರ್ಮಾಭಿ । ಮಾನ ಸಂಸ್ಕಾರ. ಸಹಿತ ನಿಜಕಾರಣದೊ । ಳೇನೆನ್ನದೊಂದೆ ಲಯಿಸುವುದು ॥ ೩ ॥ ಅದರಲ್ಲಿ ಜೀವನೆನಿಸಿದ ಚಿತು. ತನ್ನ ನಿಜ । ಪದವಪ್ಪ ತುರ್ಯ. ನೊಳಗಡಗಿತೆನಿಸಿ ತೋ । ರ್ಪುದು ಸುಷುಪ್ತಿಯು

ನರಿವುದಿಂತು ॥ ೪ ॥ ಮಿಸುಪ ಚಿದ್ರೂಪದಿಂ ಪ್ರಸರ ಧರ್ಮಂಗಳಿಂ । ದೆಸೆವು ದಾ ಮಾಯೆ. ಯೆಂದು ಶೈವ ಪುರಾಣ । ಮುಸುರುವದು ಸುಪ್ತಿಯೊಳು ಪುತ್ರ ॥ ೫ ॥ ಆ ಮಾಯೆಗಾ ವಿಕೃತಿ ನೇಮವಾಗಿರಲಲ್ಲಿ । ತಾಮಸ ಸುಖಂಗ. ಳನುಭವಂ ನಿತ್ಯನಿ । ಸ್ಸೀಮ ಸಂವಿತ್ತಿ ಗಹುದೈಸೆ ॥ ೬ ॥ ಅಲ್ಲಿ ಮಾಯಾಪ್ರ ಸರವೆಲ್ಲಂ ಕ್ಷಣಿಕವಾಗ । ಲಲ್ಲಿ ಯಾತ್ಮಾನು. ಭವ ಸುಖ ಜ್ಞಾನಂಗ । ಳೆಲ್ಲವು ಕ್ಷಣಿಕ ವೆನಬೇಕು ॥ ೭ ॥ ಮರದಳಿರ ಚಂಚಲಾಂತರದ ಚಂದ್ರಿಕೆಗಳಂ । ತಿರೆ ತೋರಿಕೆಡುವ, ಸುಖದನುಭವಂಗಳಿಗೆ । ಕರಣ ಕರ್ಮಾತ್ಮ ಕಪ್ಪೆ ಮಾಯೆ ॥ ೮ ॥ ದೀಪವೊಂದೇ ಕರ್ಮರೂಪದಿಂದಂ ಕರಣ । ರೂಪದಿ ತೋರು, ವಂತಾತ್ಮನಿಗೆ ಕರ್ಮ । ರೂಪದಿಂ ಕರಣ ವದು ಮಾಯೆ ॥ ೯ ॥ ಅಲ್ಲಿ ತತ್ಸಂಸ್ಕಾರವೆಲ್ಲಂ ಪ್ರಕೃತಿಯೊಳಿ । ರ್ದಲ್ಲಿ ಕರ್ಮಾನು. ಗುಣದೊಳಿ ರ್ದಾತಂಗೆ । ಯಿಲ್ಲದಾ ಸ್ಮೃತಿಯ ನೆಸಗುವದು ॥ ೧೦ ॥ ಅದು ಪ್ರತ್ಯಭಿಜ್ಞೆ ಯಹುದದು ನೋಡಲಿಂತು ಪೂ । ರ್ವದೊಳು ತಾನನುಭ. ವಿಸಿದರ್ಥಮಂ ಕಾಣು । ತದುಗೂಡಿ ಮೊದಲ ನೆನೆಯುವದು ॥ ೧೧ ॥ ಆತನೇ ಈತನೆಂದೇ ತೆರದೆ ಘಟಿಪುದಾ । ಮಾತು ದೃಷ್ಟಾಂತ. ವಿದಕೆ ಸುಖ ನಿದ್ರಾನು । ಭೂತದಾ ಸ್ಮರಣೆ ತನಗಿಂತು ॥ ೧೨ ॥ ಅನುಭವಿಸದರ್ಥವದು ನೆನೆಯೆ ಗೋಚರಿಸದಾ ತನಿನಿದ್ರೆಯಲ್ಲಿ. ಯರಿಯುದಿರೆ ಮುನ್ನೊರೆದ । ನೆನಹೆಂತು ಘಟಿಪು ದೆಲೆ ವತ್ಸ ॥ ೧೩ ॥ ಕಾರಣ ಪ್ರಕೃತಿ ಸಂಸ್ಕಾರವೀ ಕಾರ್ಯ ವಿ । ಸ್ತಾರವಾಗಿರ್ದ. ಕರಣದ ಸ್ಮೃತಿಗೆಂತು । ಸಾರುವದು ಪೇಳೆ ನಲು ಕೇಳು ॥ ೧೪ ॥ ಪ್ರಕೃತಿ ತಾನೇ ಮತ್ತೆ ವಿಕರಿಸುತೆ ಮಾನಸಾ । ತ್ಮಕವಪ್ಪುದಾಗಿ. ತದನುಭವ ಸಂಸ್ಕಾರ ನಿಕರವೀ ನೆನಹಿ ಗಹುದಿಂತು ॥ ೧೫ ॥ ಅಚ್ಚು ಪಡಿಯಚ್ಚಿನೊಳಗೊಪ್ಪತಂ ತೋರ್ಪಂತೆ । ಬಿಚ್ಚದಾ ನಿದ್ರೆ.ಯೊಳಗಿರ್ದ ಸಂಸ್ಕಾರ । ವೆಚ್ಚತ್ತ ಬುದ್ಧಿ ಯೊಳು ತೋರ್ಕು ॥ ೧೬ ॥ ಇಂತವಸ್ಥಾತ್ರಯದೊಳಂ ತಾನೆ ತೋರುತಿಹ । ನಂತಾಗಿ ಸತ್ಯ. ಸುಖಚಿತ್ಸ್ವಯಂಪ್ರಕಾ । ಶಂ ತನಗೆ ಸಿದ್ಧ ವೆಲೆ ಪುತ್ರ ॥೧೭॥ ಅದು ಕಾರಣಂ ನೀನೆ ಸದಮಲಂ ಪರಿಪೂರ್ಣ । ನದರಿಂದೆ ನಿತ್ಯ. ನಂತಾಗಿ ಮರವೆಯೆಂ । ಬುದು ನಿನ್ನೊಳಿಲ್ಲ ವಿದು ಸತ್ಯ ॥ ೧೮ ॥ ಇದು ಸಂಧಿಯೈದನೆ ಯ ದಿದರೊಳೈದೆಳೆ ಲಲಿತ । ಪದವೆಯ್ಯೆವತ್ತು, ಮಗುಳೆಂಟು. ನೋಡಲಿದು । ಚಿದಚಿದ್ವಿವೇಕ ವೆನಿಸುವದು ॥ .... ... .... ॥ ೧೯ ॥

ಅನುಭೂತದರ್ಥ ಸ್ಮರಣೆ ನಿರೂಪಣೆ ಸೂತ್ರ ೫ಕ್ಕೆ ತ್ರಿವಿದಿ ೫೮

ಅಂತು ಸಂಧಿ ೫ಕ್ಕಂ ಸೂತ್ರ ೩೦ಕ್ಕಂ ತ್ರಿವಿದಿ ೩೪೮ಕ್ಕಂ

ಮಂಗಳಮಸ್ತು



ಶ್ರೀಗುರು ಶಂಭುಲಿಂಗಾಯ ನಮಃ.

# ಆರನೇ ಸಂಧಿ

—: (0) :—

ಸೂತ್ರ ॥ ಗುರುವರ್ಯ ನೀವೆನಗೆ ಮರವೆಯಿಲ್ಲೆಂದೊರೆದ ।
ಪರಿಯಾವುದದನೆ ಕರುಣಿಸಬೇಹುದು ॥

ತ್ರಿವಿದಿ ॥ ಪರಿಪೂರ್ಣ ಬೋಧಂಗೆ ಪರತರಾನಂದಂಗೆ । ಪರಮಂಗೆ ಪಾವ.ನಾತ್ಮಂಗೆ ಪಾರ್ವತೀ । ವರ ಶಂಭುವಿಂಗೆ ನತನಪ್ಪೆ ॥ ೧ ॥ ಹರಿ ಪಿತಾಮಹ ರುದ್ರ ವರಸದಾಶಿವ ಮಹೇ । ಶ್ವರ ಮುಖ್ಯ ರಾವ.ನೊಡಲೊಳಿ ರುತಿರ್ಪರಾ । ಗುರುವೆ ಬಿನ್ನಪವ ನವಧರಿಸು ॥೨॥ ತನಗೆ ಮರವೆಯ ಕೂಟ ವಿನಿಸಿಲ್ಲವೆಂದಿರೀ । ಜನನಾದಿ ಭೀತಿ ಯಿಂದೆ ಕಣ್ಗೆಟ್ಟು ನಿ । ನ್ನನೆ ಸಾರ್ದರಾರು ಕರುಣಿಪುದು ॥೩॥ ಅಹಮಿಂಗೆ ತಾನೆ ದುಸ್ಸಹಸಂಸರಣ ವೆಂದೊ । ಡಹುದಂತದಕ್ಕೆ. ಮುಕ್ತಿಯುದನೊಪ್ಪೆ ನಿಜ । ಮಿಹುದಹಂಕಾರ ವೆನಬೇಕು ॥ ೪ ॥ ಮುನ್ನವೀ ತೋರಿಕೆಗಳಂ ನಿತ್ಯವಲ್ಲವೆಂ । ದೆನ್ನೊಳುಸಿರಿ ದಿರಿ. ಯದರಿಂದಹಮು ಸತ್ಯ । ವೆನ್ನಲುಂ ಬಾರ ದೆಲೆ ದೇವಾ ॥ ೫ ॥ ಅಹ ಮಿಂಗೆ ಸಂಸಾರವಹುದು ತನಗಾವಮುಕ್ತಿ । ಯಹುದೆಂದೊಡಿಲ್ಲಿ. ಸೂರೆಯೋ ರ್ವಂಗೆ ದೂ । ರಹುದೋರ್ವಂಗೆಂಬ ಪರಿಯಕ್ಕು ॥೬॥ ಗುರುವೆ ನೀವೀಗ ಳಂತರಸದೀ ಸಂದೇಹ । ವಿರದಂತೆ ವೇದ.ಶಿರದರ್ಥಮಂಪೇಳಿ ಪೊರೆವುದೆಂದೆ ರಗಿ ದನು ಸೂನು ॥ .... .... .... ॥೭॥

ಪ್ರಶ್ನೆ ನಿರೂಪಣೆ ಸೂತ್ರ ೧ಕ್ಕೆ ತ್ರಿವಿದಿ ೭.

---

ಸೂತ್ರ ॥ ಸೋಪಾಧಿಯಾದ ಸಂಸಾರವಾ ಪರಮುಜಿ ।
ದ್ರೂಪಂಗೆ ಘಟಿಪುದದು ನೈಜವಲ್ಲ ॥

ಶ್ರೀವಿದಿ ॥ ಕಂದ ಕೇಳೀ ಪ್ರಶ್ನೆಯಂದವೆಲ್ಲವನು ಮುದ । ದಿಂದನಾನೊ
ರೆವೆ.ನಿದು ಗೋಪ್ಯವಾದರ್ಥ । ವೆಂದು ನೀನನುಭವಿಸುವಂತೆ॥ ೧ ॥ ಅಪ
ಮಿಂಗೆ ಸಂಸಾರವಹುದು ತಪ್ಪದು ನೋಡ । ಲಹಮು ವಿಡಿದಾತ್ಮ. ನೊಳಗೆ
ತತ್ಸಂಸಾರ । ವಿಹುದಿಂತುಪಾಧಿ ವಶದಿಂದ ॥ ೨ ॥ ಸುತನೆ ಕೇಳಧ್ಯಾಸ ಪ್ರತಿ
ಬಿಂಬಾವಚ್ಛಿನ್ನ । ಗತಿಯಿಂದುಪಾಧಿ.ಯದು ಮೂರು ತೆರದೊಳಂ । ಚಿತ
ಮುಪ್ಪುದಾತ್ಮ ನೊಳಗಲ್ಲಿ ॥ ೩ ॥ ಪ್ರಸರ ಧರ್ಮಿಣಿಯೆನಿಸು ತೆಸೆಯುವದಾ
ಪ್ರಕೃತಿಯ । ವಶನಾಗುತಾತ್ಮ.ನದರ ಹವಣಾಗಿ ಭಾ । ವಿಸಲವಚ್ಛಿನ್ನವದೆ
ನೋಡು ॥ ೪ ॥ ತಿಳಿಯಲ್ಕಹಂಕಾರದೊಳಗೆ ಮಾರ್ಪೊಳೆದು ನಿ । ರ್ಮಳ
ಚಿತ್ತು ತಾನೆ. ಯದರೊಳೇಕತ್ವ ಮಂ । ತಳೆಯ ಪ್ರತಿಬಿಂಬ ವಹುದಿಂತು ॥೫॥
ಬಳಿಕಲೀತಾ ಹಮ್ಮಿನೊಳಗುಳ್ಳ ಧರ್ಮಮೊಂ । ದುಳಿಯದಾತ್ಮನೊಳು, ಸತ್ಯ
ವೆಂಬಂತೆ ಮಾ । ರ್ಪೊಳೆಯಲಧ್ಯಾಸ ವೆನಿಸುವದು ॥ ೬ ॥ ಅಧ್ಯಾಸ ಲಕ್ಷಣವ
ಸಾಧ್ಯವರಿಯಲ್ಕೆಂದು । ಬೋಧ್ಯನೆನಲಾತ. ನೊಡನೆ ಮುದವಲರುತಾ ।
ರಾಧ್ಯನೊಲಿದಿಂತು ಬೆಸಸಿದನು ॥ ೭ ॥ ಅದನು ತತ್ತ್ವಲ್ಲದಿರ್ಪುದರಲ್ಲಿ ತದ್ಬು
ದ್ಧಿ । ಯುದಯವೆಂದರಿವು. ದೆಲೆ ಶುಕ್ತಿರಜತಮಂ । ಬುದರ ದೃಷ್ಟಾಂತಮುಖ
ದಿಂದ ॥ ೮ ॥ ಇಂತಿ ದಧ್ಯಾಸವಿದರಂತಾತ್ಮನಲ್ಲಿ ಜಡ । ಹಂತೆಯೊಳಗುಳ್ಳ.
ಗುಣವೈದಿ ಸತ್ಯವೆಂಬಂತೆ ಕಾಣಿಸುವು ದೆಲೆ ಪುತ್ರ ॥ ೯ ॥ ಎಂತು ನಿರ್ಮಳ
ಮುಕುರದಂತರಾಳದೊಳುಗಜ । ವೆಂತು ತರು ಸರಸಿ.ಯೊಳು ಪೊಳೆದು
ತೋರುತಿಹ । ವಂತೆಲ್ಲವಾತ್ಮನೊಳು ತೋರ್ಕು ॥ ೧೦ ॥ ಅದು ತಾನುಪಾಧಿ
ಯೆನಿಸಿದ ಸಂಸರಣಮುಪ್ಪು । ದದು ಸಜ್ಜನಂಗೆ. ದುರ್ಜನರ ಸಂಸರ್ಗ । ವದು
ಬಾಧೆಯಾದ ಪರಿಯಕ್ಕು ॥ ೧೧ ॥ ಆರೋಪವಾದ ಸಂಸಾರವೆಂಬುದನು
ಸುಕು । ಮಾರ ನೀನರಿವು. ೩ದಸ್ಯ ಜೀವತ್ವಮಂ । ದೋರಂತೆ ವಾಕ್ಯ ಸುಧೆ
ಯುಂಟು ॥ ೧೨ ॥ ಇಂತು ಸಂಸೃತಿ ತನ್ನೊಳುಂ ತೋರ್ಪುದಾಗಿ ವೇ । ಧಾಂತ
ಗುರುಶಿಕ್ಷೆ. ಯಿಂದಹಮುಳಿಯೆ ಮುಕ್ತಿ । ಯಂ ತಾನೆ ಪಡೆವ ನೆನಬೇಕು ॥೧೩॥

---

೩ ಅಸ್ಯ ಜಿವತ್ವ ಮಾರೋಪಾತ್ ಸಾಕ್ಷಿಣ್ಯವಭಾಸತೆ, ಶುಕ್ತಿಕಾ ರಜಿತವತ್

ಮುಕ್ತನಸಹ ನೀನರಿದು ಮುಕ್ತನಸಹನೆಂಬುದಾ। ೩ಮುಕ್ತಶ್ಚ ಮುಚ್ಯ. ತೇ ಜಂತುರಿತಿ ನೈಗ। ಮೋಕ್ತಿಯೊಳು ಸಿದ್ಧವೆಲೆವತ್ಸ ॥ .... ॥೧೪॥

ಆತ್ಮಂಗೆ ಸಂಸಾರಾಧ್ಯಾಸ ನಿರೂಪಣೆ ಸೂತ್ರ ೨ಕ್ಕೆ ತ್ರಿವಿದಿ ೨೧,

---

ಸೂತ್ರ ॥ ತದುಪಾಧಿ ಸತ್ಯವೆಂದೊರೆವುದಿದು ಘಟಿಸಲರಿ।
ಯದು ಯುಕ್ತಿಬಾಧ್ಯವೆನಿಸಿಪ್ಪುದಾಗಿ ॥

ತ್ರಿವಿದಿ ॥ ಮತಿವಂತ ಕೇಳೆಮ್ಮ ಮತದೊಳಾ ಸಂಸಾರ। ಕತಿ ಮಿಥ್ಯೆ ಯಹುದು.ಪಾಧಿಯದು ಘಟಿಸದಾ। ಕತದಿನಿಂತಿದನು ತಿಳಿ ನೀನು ॥೧॥ ಪರಮಾರ್ಥವೆಂದು ಸಂಸರಣಮಂ ಪೇಳ್ದೊಡಾ। ಭರಿತಮಪ್ಪರಿವಿ. ಗಿಹಪರದ ಗತಿಯೆಂತು। ದೊರೆವುದೈ ನಿನ್ನ ಮತದಲ್ಲಿ ॥೨॥ ಇಹಪರಂಗಳ ಗಮನ ವಹಮಾದ್ಯುಪಾಧಿಯಿಂ। ದಹುದೆನಲುಪಾಧಿಯದು ಸತ್ಯವೋ ಪುಸಿಯೊ! ಸಹಜವಾಗುಳ್ಳ ದನೆಪೇಳು ॥೩॥ ತದುಪಾಧಿ ಸತ್ಯವೆನಿಸಿದ ಪಕ್ಷದಲ್ಲಿ ತನ। ಗದರಿಂದಲಾದ. ಗಮನವಂ ಸಹಜಮೆಂ। ಬುದ ನೀನೊಡಂಬ ಡಲುಬೇಕು ॥೪॥ ಅಂತಾದೊಡವ್ಯಾಪಕಂ ತಾನೆನಲ್ಬೇಹು। ದಿಂತೊಡಂಬಟ್ಟೊಡದರಿ. ನೆಲ್ಲಾ ವಿಕೃತಿ। ಯಂ ತಾಳ್ದನೆಂಬು ದಿದುಸಿದ್ಧ ॥೫॥ ನಿನಗದೇ ಮತವಪ್ಪು ದೆನಲಾತ್ಮನಂ ಮಿಥ್ಯೆ। ಯೆನಬೇಹುದೆಂದೊ. ಡದರಿಂದಪಸಿದ್ಧಾಂತ। ವೆನಿಪುದಿನ್ನೇನು ಗತಿಹೇಳು ॥೬॥ ಪಳುಕಿನೊಳು ತೋರ್ಪ ಕೆಂಬೆಳಗು ಪುಸಿ ದಾಸಾಣ। ತಿಳಿಯೆ ದಿಟವಂತು.ಪಾಧಿಯದು ನಿಜವಾತ್ಮ। ನೊಳುಚಲ ನೆಮಿಥ್ಯೆ ಯಹುದಂತೆ ॥೭॥ ಪಾರಮಾರ್ಥಿಕವಲ್ಲದಾರಕ್ತತೆಯನೆ ತಾಂ। ಕಾರಣಂ ಬಡೆದ, ಕೆಂಬೆಳಗೆನಿಪ್ಪ ವ್ಯವ। ಹಾರಮುಂ ಮಿಥ್ಯೆಯಹುದಂತೆ ॥೮॥ ಪುಸಿಯಾದ ಗಮನದಿಂದೆಸೆವಖಿಳ ಭೋಗಮಂ। ಪುಸಿಯೆಂಬುದಾಯ್ತು. ನೀನೆ ತದ್ಗಮನಮಂ। ಪುಸಿಯೆಂಬೆಯಾದ ಕತದಿಂದ ॥೯॥ ಇಂತುಪಾಧಿಗೆ ಸತ್ಯವೆಂತು ಘಟಿಸುವದು ವೇ। ದಾಂತ ಮತದಲ್ಲಿ. ಪೇಳ್ದಂತೆ ಸರ್ವಮಂ। ಭ್ರಾಂತಿ ಮಯವೆಂದು ತಿಳಿ ಪುತ್ರ ॥೧೦॥

ಉಪಾಧಿ ನಿರಾಕರಣ ನಿರೂಪಣೆ ಸೂತ್ರ ೩ಕ್ಕೆ ತ್ರಿವಿದಿ ೩೧.

---

೩ ಮುಕ್ತಶ್ಚ ಮುಚ್ಯತೇ ಜಂತು ರಭಿಮಾನೇನ ನಾನ್ಯಥಾ.

ಸೂತ್ರ ॥ ಸೋಪಾಧಿಯಾದ ಸಂಸಾರಮಂ ಕೆಡಿಸಲ್ಕಿ ।
ರೂಪಿಸುವೆನಾ ಸಮಾಧಿಗಳನಿಲ್ಲಿ ॥

ತ್ರಿವಿದಿ ॥ ತನುಜ ಕೇಳೌಪಾಧಿಯನಿಸುತಿಹ ಸಂಸಾರ ವಿನಿತಿಲ್ಲದಂತೆ ಮಾಳ್ಪಸು ಸಮಾಧಿಯಂ । ನಿನಗೆ ನಾನೊರೆವೆ ನೊಲಿದಿಲ್ಲಿ ॥ ೧ ॥ ಪರಮ ಜೀವಾತ್ಮರೀರ್ವರು ಸಮತೆಯಾಗಲದು ವರಸಮಾಹಿಂತೆಯೆ.ನಿಸುವದಾ ಸಮ ತೆಯೆನ । ಲೆರಡೆಂಬ ಮತಿಯ ಲಯವೈಸೆ ॥ ೨ ॥ ನೀನರಿವುದೌಪಾಧಿ ಹಾನಿ ಯಹುದಕ್ಕೆ ಪೇ । ಳ್ವಾನಿಜ ಸಮಾಧಿ. ಸಗುಣ ನಿರ್ಗುಣವೆಂದು । ತಾನಿರ್ಪು ದೆರಡು ತೆರನಾಗಿ ॥ ೩ ॥ ಬೋಧಾರ್ಹ ದೃಶ್ಯಾನುವೇದವಾ ಶಬ್ದಾನು । ವೇದ ವೆಂದು ಭಯ.ಮಾಗಿ ಸಗುಣಾತ್ಮಕ ಸ । ಮಾಧಿ ತಾನೊಪ್ಪುತಿಹುದಿಂತು ॥೪॥ ಸವಿಕಲ್ಪವೆರಡು ಮತ್ತನಿಕಲ್ಪವೊಂದಿಂತು । ತ್ರಿವಿಧ ರೂಪಿಂದೆ. ಪೊರಗೊಳಗೆ ತೋರುತಿಹ । ವಿವರಂದವರುಪು ವೆನು ಕೇಳು ॥ ೫ ॥ ಮನದೊಳೆಲ್ಲಾಗಳುಂ ಜನಿಪ ಕಾಮಾದಿಗಳು । ತನಗೆ ದೃಶ್ಯಂಗ.ಳವಕೆ ಸಾಕ್ಷಿಕನು ತಾ । ನೆನಲದೇ ಮೊದಲ ಸವಿಕಲ್ಪ ॥ ೬ ॥ ಮಹದಾದಿಯೊಡಗೂಡದಿಹ ಸಚ್ಚಿದಾನಂದ । ವಹ ಪರಂಜ್ಯೋತಿ.ಯಾನೆಂಬ ಸಂಧಾನ । ವಹುದನಂತರದ ಸವಿಕಲ್ಪ ॥ ೭ ॥ ಸ್ವಾನುಭಾವ ಸುಖ ದನುಮಾನದಿಂ ಮೊದಲ ಸಂ । ಧಾನವೆರಡಿಲ್ಲ. ದಚಲ ದೀಪಿಕೆಯಂತೆ । ತಾನಿರ್ಪುದಗುಣ ಸುಸಮಾಧಿ ॥ ೮ ॥ ಇಂತು ಯೋಗತ್ರಯ ವಿವಂತರಂಗದವೆ ನೋ । ಡಂತೆ ಬಹಿರಂಗ.ದೊಳಗೆ ಸಗುಣಸಮಾಧಿ । ಯಂ ತಿಳಿಯಪೇಳು ವೆನು ಕೇಳು ॥ ೯ ॥ ಪೊರಗೇನನಾದೊಡಂ ಕುರಿತು ತದ್ರೂಪಮಂ । ಪಿರಿಚುತದರಸ್ತಿ. ಭಾತಿಗಳ ನಾತ್ಮನೆಂ । ದರಿಯಲೊಂದನೆಯ ಸವಿ ಕಲ್ಪ ॥ ೧೦ ॥ ವರ ಸಚ್ಚಿದಾನಂದ ಪರಿಪೂರ್ಣವಾಗಿ ಸು । ಸ್ಥಿರ ಪರಬ್ರಹ್ಮ ವಹುದೆಂಬ ಸಂಧಾನ । ವಿರಲನಂತರದ ಸವಿಕಲ್ಪ ॥ ೧೧ ॥ ಮುನ್ನಿನೆರಡುಂ ಸಗುಣಮಂ ನೀಗಿ ಪರವಶದೊ । ಳಂ ನಿಂದು ನಿಸ್ತ.ರಂಗ ಸುಖಶರಧಿಯೆನಿ । ಪುನ್ನತಿಯೆ ಬಾಹ್ಯದವಿಕಲ್ಪ ॥ ೧೨ ॥ ಪೊರಗೊಳಗೆ ಯೋಗವೀ ತೆರನಾಗೆ ತನುಗುಣಂ । ಪರಿದು ನಿಜಸಿದ್ಧಿ.ಯಹುದಾಗಿ ಮನವೆತ್ತ । ಲೆರಗಲಾ ಯೋಗ ವಹುದೈಸೆ ॥ ೧೩ ॥ ಬಹಿರಂತರಂಗದೊಳಗಿಹ ಪರಮ ಜೀವರೊಂ । ದಹರೀ ಸಮಾಧಿ ಬಲದಿಂ ನಿಜ ಜ್ಞಾನ । ಸಹಭೇದವಳಿದ ಕತದಿಂದ ॥ ೧೪ ॥ ಬಳಿಕ ಹೃದಯದ ಗ್ರಂಥಿಯಳಿವುದದು ತತ್ವ ಸಂ । ಕುಳವಾತ್ಮನೊಡನೆ. ಭೇದವೆಂಬು ದನು ಕ । ಣ್ಗೊಳಿಸದಿರುತಿರ್ಪ ಹಮುತಾನೆ ॥ ೧೫ ॥ ಅದು ಕೆಟ್ಟೊಡಾನೆ ತತ್ಪ

ದವೋ ಪೋಣಲ್ಲವೋ । ಪದುಳ ಹೀಗಿಲ್ಲ. ವೋಯೆಂಬ ಸಂದೇಹ । ದುದಯಂ ಗಳ್ಳಿದೆ ತವಿಸುವವು ॥೧೬॥ ಆ ಸಂಶಯಂ ಪೋಗಲ್ಕೆಸರೊಳು ಕರ್ಮ ಚಯ । ನಾಶವದರಿಂದೆ. ನಿಜದಭಿವ್ಯಕ್ತಿಯಹ । ಲೇಸಪ್ಪ ಮುಕ್ತಿ ಘಟಿಸು ವದು ॥೧೭॥ ಇಂತಾಗೆ ಭೇದಮುಯು ಸಂತಾನವಡಗಿ ನಿ । ಶ್ಚಿಂತೆಯಿಂದೇಕ. ಮೇವಾದ್ವಿತೀಯರೂ । ಪಿಂ ತಾನೆ ತೋರ್ಪ ನೆಲೆಪುತ್ರ ॥೧೮॥ ತ್ರಿವಿದಿ ಯ್ಯೆವತ್ತರೊಡನಮರಿದೆಳೆ ನಾಲ್ಕರಿಂ । ಡವೆ ಬಂಧಮುಕ್ತಿ. ಗಳಲಕ್ಷಣವನಿಂತು । ವಿವರಿಪುದಿದಾರ ನೆಯಸಂಧಿ ॥ .... .... ॥೧೯॥

ಕೈವಲ್ಯ ನಿರೂಪಣೆ—ಸೂತ್ರ ೪೬ಕ್ಕೆ ತ್ರಿವಿದಿ ೫೦.

ಅಂತು ಸಂಧಿ ೬ಕ್ಕಂ ಸೂತ್ರ ೩೪ಕ್ಕಂ ತ್ರಿವಿದಿ ೩೭೮ಕ್ಕಂ

**ಮ ಂ ಗ ಳ ಮ ಸ್ತು**

---

ಶ್ರೀ ಗುರು ಶಂಭುಲಿಂಗಾಯನಮಃ

# ಏ ಳ ನೇ ಸ ಂ ಧಿ

—: ೦ :—

ಸೂತ್ರ ॥ ಯೋಗಬಲದಿಂದಾತ್ಮಲಾಭವಾಗಲು ಮುಕ್ತಿ ।
ಯಾಗುವಂದವನೆನಗೆ ಬೆಸಸು ಗುರುವೆ ॥

ತ್ರಿವಿದಿ ॥ ವರಚಿತ್ಪ್ರಕಾಶಂಗೆ ಚಿರಮುಕ್ತಿ ಕೋಶಂಗೆ । ದುರಿತ ನಾಶಂ ಗೆ.ಗಿರಿಶಂಗುಮೇಶಂಗೆ । ಗುರುಶಂಭುವಿಂಗೆ ನತನಪ್ಪೆ ॥೧॥ aಸಗುರುಮೇ ವಾಯೆಂಬ bನಗುರೋರಧಿಕವೆಂಬ । ನಿಗಮ ಸಂಸಿದ್ಧ. ಗುರುವರ್ಯ ಜಯ ತೆಂದು । ಪೊಗಳಿ ಬಿನ್ನಯಿಸಿ ದನು ಸೂನು ॥೨॥ ಶ್ರೀಗುರುವೆ ಕರ್ಮದಿಂದಾ ಗಿರ್ದ ತನುವಿರಲು । ಯೋಗದಿಂ ಕರ್ಮ. ವಳಿದು ನಿಜವಹನೆಂಬು । ದಾಗ ದಿದನೆಂತು ತಿಳಿಯುವೆನು ॥೩॥ ತನುವಿರುತ್ತೀ ಜಗದ ಜನರ ಮಧ್ಯದೊ

---

a ಸಗುರುಮೇವ ಭಜೇತ್ ಯಸ್ಸ್ವಸಂಶಯಂನಾಶಯತಿ ॥

b ನಗುರೋರಧಿಕಂ ಕಶ್ಚಿತ್ರಿಷುಲೋಕೇಷು ವಿದ್ಯತೇ ॥

ಳೋರ್ವ । ನೆನಿಸಿ ಮೊದಲಂತೆ. ಜೀವಿಸುವನಂ ಮುಕ್ತ । ನೆನಲಿದೇನ ಘಟಿ ತವದಲ್ತೆ ॥ ೪ ॥ ಅರಿದೊಡನೆ ಬಂಧನಂ ಪರಿದು ದೇಹಂ ಪೋಗಿ । ಕುರು ಹಿಲ್ಲದೇಕ. ರಸವೆ ತಾನಾಗದಿಹ । ತೆರನಾವುದಾರ್ಯ ಕರುಣಿಪುದು ॥ ೫ ॥

ಪ್ರಶ್ನೆ ನಿರೂಪಣೆ—ಸೂತ್ರ ೧ಕ್ಕೆ ತ್ರಿವಿದಿ ೫.

— ೦ —

ಸೂತ್ರ ॥ ಕರ್ಮವಾಸನೆ ಕೆಡದೆ ತೋರಲದರಿಂದೇಪ ।
ಧರ್ಮವಿರಲೇನವನೆ ಮುಕ್ತನೈಸೆ ॥

ತ್ರಿವಿದಿ ॥ ಕಂದ ಕೇಳಿದನೊರೆವೆನಿಂದು ಕರ್ಮವೆ ಮೂರು । ಚಂದ ದಿಂ ಸಂಚಿ ತಾರಬ್ಧವಾಗಾಮಿ । ಯೆಂದು ಫಲಿಸುತ್ತ ಮಿಹುದಲ್ಲಿ ॥೧॥ ಮೊದ ಲುಮಾಡಿದ ಕರ್ಮವದು ಸಂಚಿತಾಖ್ಯದಿಂ । ಪುದಿದಹಂಕಾರ. ದೊಷನಿರ್ಮ ಬಹುದೇಹ । ದುದಯಕ್ಕೆ ಬೀಜ ವೆನಿಸುವುದು ॥ ೨ ॥ ತಿಳಿತನ್ನನರಿದೊಡಾ ಗಳೆ ಕೆಡುವುದದು ನಿದ್ರೆ । ಯಳಿದಲ್ಲಿ ಕನಸಿ. ನೊಳು ಜನಿಸಿ ತೋರಿದುಂ । ಮುಳವೆಲ್ಲ ನಷ್ಟ ವಹಪಾಂಗು ॥ ೩ ॥ ಅದರಲ್ಲಿ ತನುವಿದಾವುದರಿಂದೆ ಸಂಜನಿಸಿ । ತದನುಳಿದು ನಾಶ. ವಹುದು ತಿಳಿಯಾರಬ್ಧ । ವದು ಜೀವಿಸುತ್ತ ಮಿಹುದಿಂತು ॥ ೪ ॥ ನೇಣಹಾವಿನ ಭೀತಿ ನೇಣೆಂದು ತಿಳಿದೊಡಂ । ಕಾಣಿಸಿರ್ಪಂತೆ. ಮೊದ ಲಸಂಸ್ಕಾರವದು । ಮಾಣದಾರಬ್ಧ ವೆನಿಸಿರ್ಕು ॥ ೫ ॥ ಭೋಗಿಸಿದೊಡಲ್ಲದೇ ಪೋಗದಾರಬ್ಧಂತ್ರಿ । ಭಾಗೆಯಿಂದಿಚ್ಛೆ. ಮೊದಲಾದ ರೂಪಂಗ । ಳಾಗಿ ಸುಖ ದುಃಖ ಗಳನೀಗು ॥೬॥ ತೀರುವದು ನರರಿಗೀಶಾರೀರದಲ್ಲಿ ಯುಧಿ । ಕಾರವಾಸ ನೆಯು. ಸುರರಿಗದು ದಶಕಲ್ಪ । ಕಾರಿಯುಹುದೆಂದು ತಿಳಿನೀನು ॥ ೭ ॥ ಜ್ಞಾನ ಸಿದ್ಧಿಯ ಮೇಲೆ ತಾನಾದ ಕರ್ಮವಭಿ । ಮಾನವಿಲ್ಲಾಗಿ. ಫಲಿಸದದು ಮುಂದೆ ವಂ । ಧ್ಯಾನುಭವದಂತೆ ವೃಥೆಯುಕ್ಕು ॥ ೮ ॥ ತರಳ ನೀನರಿವು ದುತ್ತರಪೂರ್ವ ಕರ್ಮಂಗ । ಳೆರಡಳಿದು ಮಧ್ಯ ದಾರಬ್ಧ ಮಿರ್ಪುದಿದು । ವರವೇದ ಶಾಸ್ತ್ರವಿ ದಿತಾರ್ಥ ॥೯॥ ಸಂಚಿತಾಗಾಮಿಗಳು ಮುಂಚೆ ಕೆಟ್ಟಾರಬ್ಧ । ದಿಂ ಚರಿಸುವಂಗೆ. ದೇಹಾದಿ ನಿರಭಿಮಾ । ನಾಂಚಿತವೆ ಮುಕ್ತಿಯೆನಿಸುವದು ॥ ೧೦ ॥ ಇಂತು ಶಾರೀರವಿರ್ದಂತೆ ಜೀವನ್ಮುಕ್ತಿ । ಯುಂ ತಿಳಿ ವಿದೇಹ.ಕೈವಲ್ಯವೀತನುವಿ । ನಂತ್ಯ ದೊಳಗಪ್ಪು ದೆಲೆಸೂನು ॥೧೧॥ ತಿಳಿದಾತನೀ ದೇಹವಳಿವನ್ನೆಗಂವೇದ । ದೊಳು

೩ತಸ್ಯ ತಾವ. ದೇವ ಚಿರಮೆನಲಿರ್ಪ । ನೆಳಸಿ ನೀನರಿವುದಿದ ನಿಂತು ॥ ೧೨ ॥
ಜೀವನ್ಮುಕ್ತಿ ನಿರೂಪಣೆ-ಸೂತ್ರ ೨ಕ್ಕೆ ತ್ರಿವಿದಿ ೧೭.

---

ಸೂತ್ರ ॥ ಶಾರೀರವಳಿಪ ಪರಿಯಂತಮಿಹ ಯೋಗಿಗಾ ।
ಚಾರವಾವುದು ಗುರುವೆ ಕರುಣಿಸೆನಗೆ ॥

ತ್ರಿವಿದಿ ॥ ನುಡಿವೇದವನಿಸಿ ಕಣ್ಗಡೆದಯದ ಕಡಲೆನಿಸಿ । ಬಿಡದೆನ್ನನು ದ್ಧ.ರಿಸುವಾರ್ಯ ಜಯತೆನು । ತ್ತಡಿಗೆರಗಿ ಸೂನು ಬೆಸಗೊಂಡ ॥೧॥ ಪ್ರಾರಬ್ಧ ಕರ್ಮಾನುಸಾರದಿಂ ಜೀವಿಸುವ । ಧೀರಂಗೆ ವಿಧಿಗ.ಳೇನುಂಟು ಗುರುವೆ ನಿಜ । ಕಾರುಣ್ಯದಿಂದೆ ತಿಳುಪುವದು ॥ ೨ ॥ ಎನೆ ವತ್ಸ ಕೇಳುಮುಕ್ತನ ವಿಷಯ ಮಾಗಿ ವಿಧಿ । ಯನು ಪೇಳಲಾಗ.ದುಭಯ ಕರ್ಮದ ಕೂಟ । ವನು ಮೀರಿ ವರ್ತಿಸುವನಾಗಿ ॥ ೩ ॥ ಪಾಪ ಪುಣ್ಯಂಗಳನುಲೇವಿಲ್ಲದೊಡೇನು । ರೂಪ್ಪು ವಿಡಿದಿರ್ಪ.ನಾಗಿ ಸತ್ಕರ್ಮಕುಳ । ವೇ ಪೊತ್ತು ಬೇಹು ದೆನೆ ಕೇಳು ॥ ೪ ॥ ನೀರೊಳಗಿಳಿದವಂಗೆ ನೀರತೃಷೆಯಡಸದಂ । ತಾರಾಧನಾದಿ. ಬಯಕೆ ದೋರದು ಯೋಗಿ । ಗಾರೈಯಲನ್ಯ ವಿರದಾಗಿ ॥೫॥ ಆವ ತಧ್ಯಾನವಿನ್ನಾವ ಜಪ ಕರ್ಮ ತತಿ । ಯೊವಪೂಜೋಪ.ಚಾರ ವಂದನೆಗಳುಂ । ಟಾವದೇವತೆಯು ವನಿಗನ್ಯ ॥ ೬ ॥ ತಿಳಿವೆಂಬ ಸುತನುದಯುದೊಳಗೆ ಮರಹೆಂಬ ತಾ । ಯಳಿಯಲಾ ಸೂತ.ಕಪ್ಪಯುದ ಸಂಬಂಧ । ದೊಳು ಯೋಗಿಗಾವ ವಿಧಿಯುಂಟು ॥ ೭ ॥ ಹೃದಯುವೆಂಬಾಗಸದೊಳುದಯಾಸ್ತಮಾನವಿ । ವಿಲ್ಲದ ಚಿದಾದಿತ್ಯ. ನಿಹನಾಗಿ ಸಂಧ್ಯಾತ್ರ । ಯದ ಸೇವೆ ಯೋಗಿ ಗಹುದೆಂತು ॥ ೮ ॥ ಏನನೊಪ್ಪಿರೆ ಪೂಜೆ ಯೇನನೀಕ್ಷಿಸೆ ಲಕ್ಷ್ಯ । ವೇನನೊಡಗೂಡ.ಲದೆ ಯೋಗವೈಸೆ ಬಳಿ । ಕೇನು ಟು ಮುಕ್ತನೊಳು ನಿಯಮ ॥ ೯ ॥ ನಡೆದೇವ ಯಾತ್ರೆ ನಿಂದೆಡೆ ವಾರಣಾಸಿ ಮನ । ಪಿಡಿದುದೇ ಸುಮತ.ವಹುದುಯೋಗೀಶ್ವರಂ । ನುಡಿದುದೇ ಮಂತ್ರ ವೆನಿಸುವುದು ॥ ೧೦ ॥ ಜನಿಯಿಲ್ಲದಾತಂಗೆ ಮನುಜತ್ವವೆಲ್ಲಿಯದು । ಮನುಜತ್ವವಿಲ್ಲ.ದವನಿಗಾಶ್ರಮ ಧರ್ಮ । ವನು ಪೇಳಲಾಗ ದೆಲೆವತ್ಸ ॥ ೧೧ ॥ ಇಂತಾಗ ಮರಣಭಯ ಮುಂತಾದ ವಿಕೃತಿಗಳ । ನೆಂತೊರೆಯಬರ್ಪು.ದವನಲ್ಲಿ ಮರಳಿ ಜ । ನ್ಮಾಂತರದ ಸುದ್ದಿ ಗೊಳಲುಂಟೆ ॥ ೧೨ ॥ ಇದನರಿಯದನ್ಯಭಾ

---

೩ ತಸ್ಯ ತಾವದೇವ ಚಿರಂ ತತ್ವವಿತ್ ಯಾವತ್ ಪ್ರಾರಬ್ಧಂ ನಿವಸೇತ್ ಕೈವಲ್ಯಂ ಶರೀರಾಂತೆ ಭವತಿ ॥

ವದೊಳು ದೇವತೆಯು ಭಜಿ।ಸಿದೊಡೆ ಭವದಲ್ಲಿ. ಬಹನ್ನುa ಯೋऽನ್ಯಾಂ ಶ್ರುತಿ ಯು। ವೊದವಿ ತಾನೊರೆವುದೆಲೆ ಪುತ್ರ ॥೧೩॥ b ಧ್ಯಾಯತೀವೇತಿ ಲೇಲಾಯು ತೀವೇತಿ ಸಮು । ದಾಯ ವಾಕ್ಯಂಗ.ಳಿಹವಾಗಿ ಯೋಗಿ ನಿಜ । ದಾಯತ ದೊಳಿರ್ಪ ನೊಲಿದಂತೆ ॥

ಜೀವನ್ಮುಕ್ತಿ ಸ್ಥಿತಿ ನಿರೂಪಣೆ-ಸೂತ್ರ ೩ಕ್ಕೆ ತ್ರಿವಿದಿ ೩೧.

---

ಸೂತ್ರ ॥ ಕರ್ಮಂಗಳಿಂದವೇ ಮುಕ್ತಿಯಹುದಾಗಿ ಯಾ ।
ಕರ್ಮಂಗಳಂ ತ್ಯಜಿಸಲಾಗದೆಂತು ॥

ತ್ರಿವಿದಿ ॥ ನತಕಲ್ಪತರುವೆ ಶಾಶ್ವತ ಸುಖದ ಕರುವೆ ಸ । ದ್ಗತಿ ಪಥದ ನೆರವೆ.ನಿಜಗುರುವೆ ಜಯತೆಂದು ನತನಾಗಿ ಸೂನು ಬೆಸಗೊಂಡ ॥೧॥ ಶ್ರೀ ಗುರುವೆ ನಿಜವರಿದ ಯೋಗಿ ಕರ್ಮಂಗಳಂ । ನೀಗಿ ನೆಲಸಿರ್ಪ.ನೆಂದು ಬೆಸಸಿ ದಿರಿ ನಿಜ । ವಾಗಿ ನಾನರಿವೆ ನಿದನೆಂತು ॥ ೨ ॥ ಯಜನಾದಿ ವಿಧಿಗಳಿಂ ನಿಜಮು ಕ್ತಿಯಹುದೆಂದು । ಸುಜನರೆನುತಿರ್ಪ.ರದರಿಂದೆ ವಿಧಿಗಳಂ । ತ್ಯಜಿಸಲಿಲ್ಲೆಂ ಬು ದಿದು ಸತ್ಯ ॥ ೩ ॥ ಮತ್ತೆ c ಧರ್ಮಾತ್ಸುಖ ಮೆನುತ್ತವಾಸ್ಮೃತಿಯೆಸಾ । ರುತ್ತಮಿಹುದಾಗಿ. ಸತ್ಕರ್ಮವಂ ತ್ಯಜಿಸ । ಲೆತ್ತಣದು ಮುಕ್ತಿ ಕರುಣಿ ಪುದು ॥ ॥೪॥

.... .... ....

ಪ್ರಶ್ನೆ ನಿರೂಪಣೆ-ಸೂತ್ರ ೪ಕ್ಕೆ ತ್ರಿವಿದಿ ೩೫.

---

ಸೂತ್ರ ॥ ಕರ್ಮವೆಂಬುದು ಮಂದಮತಿಯ ವಿಷಯುವೆ ನಿಜದ ।
ಮರ್ಮವರಿದಾತಂಗೆ ದೊರಕೊಳ್ಳದು ॥

ತ್ರಿವಿದಿ ॥ ಅಹುದು ಕೇಳೆಲೆ ಕುವರ ವಿಹಿತ ಕರ್ಮಂಗಳಿಂ । ದಹ ಮಾದಿಶುದ್ಧಿ.ಯಹುದೈಸೆ ನಿಜಮುಕ್ತಿ । ಯಹುದೆಂಬುದೆಂತು ಘಟಿಸುವದು ॥೧॥ ಸೂನು ಕೇಳೀ ಕರ್ಮತಾನೇ ಮುಕ್ತಿಯನೀಯು । ಲಾನ್ಯಗಮಾಂತ.ದಲ್ಲಿ

---

a ಅಥ ಯೋऽನ್ಯಾಂ ದೇವತಾ ಮುಪಾಸ್ತೇऽನ್ಯೋऽಸಾವನ್ಯೋऽಹಮಸ್ಮೀತಿ ನಸವೇದ ಯಥಾ ಪಶುರೇವಂ ಸದೇವಾನಾಂ ॥

b ಧ್ಯಾಯತೀವ ಲೇಲಾಯತೀವ.

c ಧರ್ಮಾತ್ಸುಖಂಚ ಜ್ಞಾನಂಚ ಜ್ಞಾನಾನ್ಮೋಕ್ಷೋಧಿಗಮ್ಯತೆ.

ವಿಧಿಸಿರ್ಪ ಸು । ಜ್ಞಾನ ಮಂ ವ್ಯರ್ಥ ವೆನಬೇಕು ॥೨॥ ರೋಗವದು ಮದ್ದಂ ದೊಡಾಗಳಳಿವುದೆ ಸುಪ್ರ ಯೋಗದಿಂ ಸೇವಿ.ಸದೆ ವಿಧಿಯನುಳಿದರಿಯ । ಲಾಗಿ ತಮವಳಿಯು ದೆನೆ ಕೇಳು ॥ ೩ ॥ ಮುನ್ನಲುಂಟಾದ ಗುಣಪನ್ನಗಭಯುಂ ತಿಳಿವಿ । ನಿನ್ನಾಡೆಪಿಂಗು.ತಿಹುದಂತೆ ಮೋಹವದು । ತನ್ನ ನರಿದಂತೆ ಕೆಡು ತಿರ್ಕು ॥ ೪ ॥ ಇನ್ನು ಪೇಳ್ವೆನು ಕೇಳು ನಿನ್ನ ಮತದಲ್ಲಿ ಸಂ । ಪನ್ನವಹಮುಕ್ತಿ. ಯದು ನಿಜಸ್ಥಿತಿಯುಪ್ಪು । ದೆನ್ನಲೇ ಬೇಹು ದಿದು ಸಿದ್ಧ ॥೫॥ ಅದು ನಿತ್ಯವಿಧಿ ಯಿಂದಹುದು ಸತ್ಯ ವೆನೆ ವಿಧಿಗೆ । ಮೊದಲೆ ನಿಜಸಿದ್ಧಿ. ತನಗುಂಟೊ ಬಳಿ ಕತೋ । ರ್ಪುದೊ ನೀನೆ ಪೇಳು ನಿಜವಾಗಿ ॥ ೬ ॥ ಮೊದಲಿಲ್ಲದಾತ್ಮನೀ ವಿಧಿ ಗಳಿಂ ಮೇಣುತೋ । ರ್ಪುದ: ನ್ನೈಜವೆಂದೊ.ಡೆಲೆ ನಿತ್ಯನಾತ್ಮನಂ । ಬುದ ನಿನ್ನು ಬಿಟ್ಟು ಕಳೆ ನೀನಂ ॥೭॥ ತನ್ನಾಸ್ವರೂಪದಿಂ ಮುನ್ನಿರ್ದು ಕರ್ಮಮಂ । ಚನ್ನಾಗಿ ರಚಿಸು.ತಿಹನೆಂದೊಡದರಿಂದ । ಲಿನ್ನೇನು ಸಿದ್ಧಿ ತನಗುಂಟು ॥ ೮ ॥ ತಿಳಿಯೆ ಸಾಧಿಸುವರ್ಥದೊಳು ಕರ್ಮಬೇಹುದೈ । ಸಲೆ ತನಗೆ ಸಿದ್ಧ.ವಾದರ್ಥ ದಲ್ಲಿ ವಿಧಿ । ಯಳವಡುವು ದೆಂತು ಸುರು ನೀನೆ ॥ ೯ ॥ ಇಂತು ವಿಧಿಗೆರಡು ತೆರದಿಂ ತೋರ್ಕೆ ಘಟಿಸದೋ । ರಂತಾತ್ಮನಿಜಕೆ. ಮರೆಯಾದ ತಮವಳಿಯೆ ಸಂತ ವಿಧಿಬೇಹು ದೆನೆ ಕೇಳು ॥ ೧೦ ॥ ಆವಗಂ ಸಂಗ ಸ್ವಭಾವನೋ ಮೇಣು ತಾ । ನಾವಗಂ ಸಂಗ, ರಹಿತಸ್ವಭಾವನೋ । ಭಾವಿಸಿಯೆ ಪೇಳು ದಿಟ ಮೊಂದ ॥೧೧॥ ತನಗೆ ಮಾಯಾಸಂಗವನುದಿನಂನ್ನೈಜವೆಂ । ದೆನೆ ಕರ್ಮದಿಂದ. ಲಿದು ಕೆಡದು ತನ್ನ ರೂ । ಪೆನಿಸಿ ನೆಲಸಿರ್ದ ಕತದಿಂದ ॥ ೧೨ ॥ ಮತ್ತೆ ನಿಸ್ಸಂ ಗಿಯೊಳಿರುತ್ತಿರದು ಮಾಯೆ ಕೇ । ಳುತ್ತಮನೆ ಕರ್ಮ.ವೆಲ್ಲಿಯುಂ ಘಟಿಸದಾ ಯಿತ್ತಾತ್ಮನಮಲ ನಹನಾಗಿ ॥ ೧೩ ॥ ಆವಾವವಸ್ತುಗಳಿಗಾವಾವಧರ್ಮ ಸ್ವ । ಭಾವವದು ಪರಿಣ.ಮಿಸದು ರವಿ ಶಶಿಗಳಂ। ತಾವುದೈ ವಿಧಿಗೆ ಫಲವಿನ್ನು॥೧೪॥ ಇಂತಾಗೆ ಕರ್ಮದಿಂದೆಂತಕ್ಕು ಮುಕ್ತಿ ಶ್ರುತಿ । ಸಂತಾನದಲ್ಲಿ. ನೋಡಲು ೩ನಕರ್ಮಣಾ । ಮುಂತಾದ ವಾಕ್ಯವಿಹವಾಗಿ ॥ .... ॥ ೧೫ ॥

ಕರ್ಮೋಪರತಿ ನಿರೂಪಣೆ—ಸೂತ್ರ ೫ಕ್ಕೆ ತ್ರಿವಿದಿ ೫೦.

---

೩ ಅನ್ಯಾಶ್ರಯಂ ಯತಃಕರ್ಮ ತಸ್ಮಾನ್ಮುಕ್ತಿರ್ನಕರ್ಮಣಾ ॥

ಸೂತ್ರ॥ ಫಲವಂದದಿಂದಲೇಕಿಹರು ಜೀವನ್ಮುಕ್ತ ।
ರೊಲಿದಿದಂ ಪೇಳೆನಗೆ ಗುರುವರ್ಯನೇ ॥

ತ್ರಿವಿದಿ ॥ ಗುರುಮಾತೆ ಗುರುಪಿತಂ ಗುರುಬಂಧು ಬಳಗವಾ । ಗುರು ತತ್ವದಿಂದೆ. ಪರವಿಲ್ಲವೆನಿಪ ಸ । ದ್ಗುರುವೆ ಬಿನ್ನಪವ ನವಧರಿಸು ॥ ೧ ॥ ತನುವಿಡಿದ ನಿಜನಿಷ್ಠರೆನಿಸುತಿಹ ಮುಕ್ತರೊಂ । ದನುವಿಂದ ಮಿರದೆ. ಬಹು ವರ್ತನೆಯೊಳಿಹುದ । ನೆನಗೆ ಗುರುವರ್ಯ ಕರುಣಿಪುದು ॥ ೨ ॥ ಎನಲು ಗುರುವರ್ಯನಾ ತನಯುನಂ ಬೋಳೈಸಿ । ನಿನಗೀ ವಿಚಾರ.ವನು ಕರಾಮಲ ಕವೆಂ । ದೆನಿಪಂತೆ ಪೇಳುವೆನು ಕೇಳು ॥ ೩ ॥ ಪ್ರಾರಬ್ಧ ಕರ್ಮ ಸಂಸ್ಕಾರ ವೆಂಬುದು ತೀವ್ರ । ವಾರೈಯೆ ಮಧ್ಯ.ಮಂದ ಸುಪ್ತಂಗಳೆಂ । ದೋರಂತೆ ಫಲಿಸುತಿಹುದಿಂತು ॥ ೪ ॥ ಅವರೊಳಗೆ ದೇಹಮುಳ್ಳವನಾಗಿ ಜೀವಿಸು । ತ್ತವೆ ಪಶುವಿನಂತೆ. ತನ್ನೊಳಾ ಪ್ರೀತಿ ಸಂ । ಭವಿಸಿರಲು ತೀವ್ರ ವೆನಿಸು ವದು ॥ ೫ ॥ ಭೋಗಕ್ಕೆ ಮುಖ್ಯತ್ಯವಾಗಿ ತಾನಾತ್ಮವಶ । ನಾಗಿ ಬಾಲಕನ. ವೋಲು ನುಡಿಯುತಂ ಬಿನದಿ । ಯಾಗಿರಲು ಮಧ್ಯವೆಲೆಪುತ್ರ ॥ ೬ ॥ ತೊಲಗಿ ಭೋಗವನು ಮತಿನೆಲಸಿ ನಿಜದಲ್ಲಿ ಸಂ । ಚಲಿಸದನುಕೂಲ. ಮಿಥುನದಂತಾ ಸುಖದೊ । ಳೊಲಿದಿರಲು ಮಂದ ಮದುತಾನೆ ॥ ೭ ॥ ಪರಿಭವಂ ಪುಗದೆ ಭಾಸುರ ನಿರ್ವಿಕಲ್ಪ ನಿಜ । ತುರಿಯುಪದದಲ್ಲಿ. ಪರಮುಕ್ತನಂತೊಪ್ಪು । ತಿರೆ ಸುಪ್ತವೇಗ ವೆನಿಸುವದು ॥ ೮ ॥ ಇಂತು ಕರ್ಮದವೇಗವೆಂತಂತೆ ಫಲಿಸು ತಿಹ । ವಂತಂತೆ ಚರಿಪ. ಫಲವರ್ಗ ಮುಕ್ತಿಯೋ । ರಂತೆ ಬಳಿಕೊಂದೆ ತೆರನಕ್ಕು ॥ ೯ ॥ ಯತಿಗಳಾಶಬ್ದ ಸಂತತಿಯ ವಾಸನೆ ಯಾವ । ಗತಿಯಿಂದ ಮಿರ್ಪು. ದಂತಿರುತ್ತಿಹ್ನರಾತ್ಮ । ರತಿ ವೇದವಾಕ್ಯ ವಿಹುದಾಗಿ ॥ ೧೦ ॥ ಮತ್ತ ಮಾಗುಣವೆ ನೈಮಿತ್ತಮಾಗಿಹ ಮನೋ ವೃತ್ತಿ ನಾಲ್ಕೆನಿಸು. ತಿರೆ ಬೇರೆ ಬೇರೆ ನಿಜ । ಮುಕ್ತರಿಹರವರ ತಿಳಿಪೇಳ್ವೆ ॥ ೧೧ ॥ ಒಂದು ವಿಕ್ಷುಪ್ತವಿನ್ನೊಂ ದದು ಗತಾಗತವ । ದೊಂದು ಸಂಶ್ಲಿಷ್ಟ.ವದಕೆ ಮೇಲೆನಿಸಿ ಮ । ತ್ತೊಂದೇ ಸ್ವಲೀನವೆನಿಸುವುದು ॥ ೧೨ ॥ ಅವರಲ್ಲಿ ವಿಷಯಾನುಭವದಾಸೆಯಿಂ ತ್ರಿಕಾ । ಲವು ಚಿಂತೆವಡೆದ. ತಾಮಸ ಮನೋವರ್ತ । ನವದೆ ವಿಕ್ಷಿಪ್ತ ವಹು ದಿಂತು ॥ ೧೩ ॥ ಯೋಗದೊಳಗೊಮ್ಮೆ ನಿಜಭೋಗದೊಳಗೊಮ್ಮೆ ನೆಲೆ । ಯಾಗಿ ರಜವಿಡಿದ. ಮನದ ಸಂಚರವೇಗ । ತಾಗತವೆನಿಪ್ಪುದೆಲೆಬೋಧ್ಯ ॥೧೪॥

---

೩ ಆತ್ಮರತಿರಾತ್ಮಕ್ರೀಡ ಆತ್ಮಮಿಥುನ ಆತ್ಮಾನಂದ.

ಪೆರತೊಂದುವಿಷಯದೊಳಗೆರಗದನುಭವದಲ್ಲಿ । ಕರಿಗೊಂಡು ಸತ್ವ.ಮಯ ಬುದ್ಧಿನೆಲಿಸಲದ । ನರಿಯೆ ಸಂಶ್ಲಿಷ್ಟ ವಹುದೈಸೆ ॥ ೧೫ ॥ ಅನು ನೀನದಿದಂ ಬುದೇನು ತೋರದೆ ಸಚ್ಚಿ । ದಾನಂದದಲ್ಲಿ. ಸುಪ್ತನಂತಿರಲಾ ಸ್ವ । ಲೀನವವು ನಿರ್ಗು ಣವೆ ಕೇಳು ॥೧೬॥ ಈ ತೆರದೊಳಾಗುಣವ್ರಾತಮಯುವಹ ಮನೋ । ಜಾತವರ್ತನೆಯೊ.ಳಿರೆ ಯೋಗಿಗಳಿಗಾವ । ಭೀತಿ ಜನಕಾದಿ ಗಳವೋಲು ॥೧೭॥ ವಾಸಿಷ್ಠದಲ್ಲಿ ನಿಶ್ವಾಸಕಾರಿಕೆಯಲ್ಲಿ । ವಾಸನಾ ಕರ್ಮ.ದನುವಂ ಮನೋ ವೃತ್ತಿ । ಯೈಸುವಂ ನೋಡಿ ತಿಳಿ ಪುತ್ರ ॥ .... .... ॥೧೮॥

ಜೀವನ್ಮುಕ್ತಿ ಸ್ಥಿತಿ ನಿರೂಪಣೆ ಸೂತ್ರ ೬೬ಕ್ಕೆ ತ್ರಿವಿದಿ ೬೮.

---

ಸೂತ್ರ ॥ ಲೋಕದೊಳು ಲೌಕಿಕವನೊಂದಿ ಚರಿಸುವಯೋಗಿ ।
ಗೇಕೆ ಕರ್ಮದಬಾಧೆ ದೊರಕೊಳ್ಳದು ॥

ತ್ರಿವಿದಿ ॥ ಮನು ಮುನೀಶ್ವರರರಿಯದನುಪಮಾನಂದ ಚಿ । ದ್ಘನವೆ ಗುರುವರ್ಯ. ಶರಣಾಗೆನುತೆ ಸೂನು । ವಿನಯದಿಂ ಮತ್ತೆ ಬೆಸಗೊಂಡ ॥ ೧ ॥ ಗುರುವೆ ಚಿತ್ತಯಿಸು ಸರ್ವರನು ಬಾಧಿಪ ಕರ್ಮ । ವಿರುತಿರ್ದು ಮುಕ್ತ.ನನು ಬಾಧೆ ಗೊಳಿಸದಿಹ । ಪರಿಯಾವುದೆನಗೆ ಕರುಣಿಪುದು ॥ ೨ ॥ ಎಂದ ವಿಜ್ಞಾ ಪನವನಂದು ಗುರು ಕೇಳಿ ಮುದ । ದಿಂದಾತ್ಮಜಂಗೆ. ತಿಳಿಯಲೊರೆದಂ ಮನದ । ಸಂದೇಹವೈದೆ ಬಿಡುವಂತೆ ॥ ೩ ॥ ಗರುಡಮಂತ್ರಿಗೆ ಸರ್ಪ ನಿರದೆ ಭೀತಿಸುವಂತೆ । ಪರಮಾರ್ಥ ಯೋಗ. ಸಿದ್ಧನಂ ಕರ್ಮವಾ । ವರಿಸದೇ ತಾನೆ ಕೆಲಸಾಗ್ರ್ರು ॥ ೪ ॥ ಮತ್ತೆ ತನುಕರಣಾದಿ ಮೊತ್ತದೊಡನಿರ್ದೊಡಾ । ಪತ್ತು ಬಂದಡಸ. ದತ್ಯೈಶ್ರುಮಿಗೆ ಜಲಂ । ಪತ್ತದಿಹ ಕಮಲ ದಳದಂತೆ ॥ ೫ ॥ ಮರ ದೊಳಿಹುದಗ್ನಿಯಾ ಮರನಿಲ್ಲವದರೊಳಂ । ಇರೆ ಯೋಗಿ ಸಂಸ.ರಣದೊಳಿರು ತಿಹನು ಸಂ । ಸರಣವಾ ಯೋಗಿ ಯೊಳಗಿಲ್ಲ ॥ ೬ ॥ ಬೆಳಕಃ ಕತ್ತಲೆಗಳಂ ತಳೆದೊಡಾಗಸದ ನಿ । ರ್ಮಳವಳಿಯದಂತೆ. ತಿಳಿಪುಣ್ಯ ಪಾಪಂಗ । ಳೊಳು ಲೇಪವಿಲ್ಲ ವರಿದಂಗೆ ॥ ೭ ॥ ದಾವ ನಡಸಿದ ನಗವನಾವ ಮೃಗಪಕ್ಷಿ ಪುಗ । ವಾವಿಧಿಯೊಳಾತ್ಮ. ನಿಜನಿಷ್ಠನಂ ಕರ್ಮ । ವಾವರಿಸಲರಿಯ ದಿದು ಸತ್ಯ ॥೮॥ ಪೊಲಗೇರಿಯೊಳು ಕಾಶಿಯೊಳು ಮರವೆಯುರಿವಿನೊಳು । ತಿಳಿದೇಹವಳಿಯ. ಲೂಚ ನೀಚತೆಗಳಂ । ಡಲೆಯಿಲ್ಲವಾತ್ಮ ವಿದನಲ್ಲಿ ॥ ೯ ॥ ಭೇದಿಸಾ ವಿಧಿ

ನಿಷೇಧಾದಿಯುಂ ಸಮವೆ ನಿಜ । ವಾದ ಯೋಗೀಂದ್ರ. ನೊಳಗೆ ವಾರಣಾ ಸಿಯೊ । ಳಾದ ಕರ್ಮದ್ವ ಯದಪಾಂಗು ॥ ೧೦ ॥ ಮರದ ಕೊನೆ ಮುರಿ ದೊಡಲ್ಲಿರುತಿರ್ಪವಂ ಬೀಳ್ವ । ವಿರಸಕ್ಕೆ ಬಯಸ.ದಿರಲೆಂತು ಬೀಳ್ವನಾ । ಪರಿ ತತ್ವದರ್ಶಿ ಗಹಮುಕ್ತಿ ॥ ೧೧ ॥ ವಿದಿತ ಧೂಮಾದಿ ಮಾರ್ಗದೊಳರ್ಚಿರಾದಿ ಮಾ । ರ್ಗದೊಳ್ಳೈದಿ ಮರಳ.ಲಿಲ್ಲವಾತಂ ಪೂರ್ಣ । ಪದವೆ ತಾನಾದ ಕತ ದಿಂದೆ ॥ ೧೨ ॥ ಇಂತಪ್ಪವಂಗಣಿಮ ಮುಂತಾದ ವಿಲ್ಲದಿಹು। ದೆಂತೆಂದೊಡಾತ. ನವನೆಲ್ಲಮಂ ಜಡ । ಭ್ರಾಂತಿಯೆಂದೆಳಸ ದಿಹನೈಸೆ ॥ ೧೩ ॥ ಆ ಸರ್ವ ಸಿದ್ಧಿ ಗಳಿಗಾಸೆ ಮಾಡಿದೊಡೆ ತಾ । ನಾ ಸಾಧನಂಗ.ಳನು ಮಂತ್ರಮುಖದೊಳ । ಭ್ಯಾಸಮಂ ಮಾಡೆ ದೊರಕೊಳ್ಗು ॥ ೧೪ ॥ ಹಿಡಿವ ಮೋಹಕವಿಲ್ಲ ಬಿಡುವ ಬಾಧಕವಿಲ್ಲ । ಪಡೆವ ಗತಿಯಾಸೆ. ಮೊದಲಿಲ್ಲ ಯೋಗಿಗವು । ಜಡ ದೃಶ್ಯ ಮಿಥ್ಯೆಯುಹವಾಗಿ ॥ ೧೫ ॥ ಹಾನಾದಿ ಯತ್ನಂಗಳೇನುಮಿಲ್ಲದ ಯೋಗಿ । ಗೀ ನಿಖಿಳ ಭೋಗ.ವಹವು ತಾವೇ ಶರಧಿ । ಗಾನದಿಗಳೈದೆ ಬೆರೆವಂತೆ ॥ ೧೬ ॥ ಮಾನವಿಲ್ಲದ ಯೋಗಿಗಾ ನಿಖಿಳ ಭೋಗ ಸಂ । ಧಾನದೊಡನಸತಿ. ನಿಜಪತಿ ಯೊಳೆಂತುದಾ । ಸೀನವಂತೆರಕ ವಣುವಿಲ್ಲ ॥೧೭॥ ವೇದವರಿದಂಗಾವ ಬಾಧೆ ಯಿಲ್ಲೆಂದು ತಾ । ನೋದಿಪೇಳುವದು. ಇಜ್ಞಾತ್ವಾದಿ ವಾಕ್ಯದೊಳ । ಗಾದರಿಸಿ ನೀನು ತಿಳಿಬೋಧ್ಯ ॥ ೧೮ ॥ ಏಳು ಸೂತ್ರಂ ತ್ರಿವಿದಿಯೇಳರೊಡನೆಂ ಭತ್ತು । ಮೇಳವೆನಿಸುತ್ತೆ. ಮುಕ್ತರುಗಳಿರವನಿದು । ಪೇಳುತಿಹುದೇಳ ನೆಯ ಸಂಧಿ॥ ॥೧೯॥

.... .... ....

ನಿರ್ಲೇಪ ಸ್ಥಿತಿ ನಿರೂಪಣೆ ಸೂತ್ರ ೭ಕ್ಕೆ ತ್ರಿವಿದಿ ೮೭.

ಅಂತು ಸಂಧಿ ೭ಕ್ಕಂ ಸೂತ್ರ ೪೧ಕ್ಕಂ ತ್ರಿವಿದಿ ೪೮೫ಕ್ಕಂ

**ಮಂಗಳಮಸ್ತು.**

—o—

ಶ್ರೀಗುರು ಶಂಭುಲಿಂಗಾಯ ನಮಃ

# ಎಂಟನೇ ಸಂಧಿ.

ಸೂತ್ರ॥ ಇನ್ನು ತಿಳಿವಂಶವೇನುಂಟವೆಲ್ಲವನೊಲವಿ ।
ನಿಂ ನೀನೆ ದೇಶಿಕೋತ್ತಮ ಕರುಣಿಸು ॥

---

ಇ ತದ್ಬ್ರಹ್ಮಾಹಮಿತಿ ಜ್ಞಾತ್ವಾ ಸರ್ವ ಬಂಧೈಃ ಪ್ರಮುಚ್ಯತೆ.

ತ್ರಿವಿದಿ ॥ ಭಯಂ ಶೋಕ ರಹಿತಂಗೆ ಜಯಶಕ್ತಿ ಸಹಿತಂಗೆ । ನಯ ಸಾರ ಸೌಖ್ಯ.ವಿಹಿತಂಗೆ ಪಾರ್ವತೀ । ಪ್ರಿಯಶಂಭುವಿಂಗೆ ನತನಪ್ಪೆ ॥ ೧ ॥ ಭವಸಿಂಧುಕುಂಭಸಂಭವದುರಿತಭಾವಸಂ । ಭವರುದ್ರರೂಪ.ಗುರುವರ್ಯ ಪೇಳೆನು । ತ್ರವೆ ಭೋದ್ಯನಿಂತು ಬೆಸಗೊಂಡ ॥ ೨ ॥ ಎನ್ನ ಮಾನ ಸದೊಳುತ್ಪನ್ನ ಸಂದೇಹಂಗ । ಳನ್ನಿನ್ನೊಳುಸುರ.ಲವಕೆ ಪರಿಹಾರಮಂ । ಚೆನ್ನಾಗಿ ಪೇಳ್ದಿರೆಲೆ ದೇವ ॥ ೩ ॥ ಅವನೆಲ್ಲಮಂ ಕೇಳುತವೆ ಮುನ್ನಲುಳ್ಳ ದು । ರ್ಭವ ಬೀಜವೆನಿಸು.ವಜ್ಞಾನವಳಿದಾತ್ಮ । ಸುವಿಚಾರವೆನ್ನೊಳೊದ ವಿತ್ತು ॥ ೪ ॥ ಅರಿವುದಿನ್ನೇನುಂಟು ನೆರೆ ನಂಬಿದಣುಗನಾ । ನರಿವಂತೆ ಕರು ಣಿ.ಸೆಂದು ಗುರುವರ್ಯನಡಿ ।ಗೆರಗಿ ನುತಿಗೈದ ನವನಿಂತು ॥ .... ॥ ೫ ॥

ಪ್ರಶ್ನೆ ನಿರೂಪಣೆ ಸೂತ್ರ ೧ಕ್ಕೆ ತ್ರಿವಿದಿ ೫.

---

ಸೂತ್ರ ॥ ಕೇಳಿದರ್ಥಂಗಳಂ ನಿನ್ನೊಳೇಕಾಗ್ರದಿಂ ।
ದಾಲೋಚನಂಗೈವುತಿರಬೇಹುದು ॥

ತ್ರಿವಿದಿ ॥ ಮಗನೆ ನಿನಗಾವಸಂದೆಗಮಿಲ್ಲದಂದದಿಂ । ನಿಗಮಾಂತಸಾರ. ವನೆ ಪೇಳ್ದೆನೊಲಿದಿದಂ । ಬಗೆಯೊಳಾರೈದು ಸುಖಿಸುವದು ॥ ೧ ॥ ಮೊದ ಲಿಂದ ನೋಡಲಿಂತಿದರಲ್ಲಿ ನಾಮರೂ । ಪದ ತೋರ್ಕೆ ಮಿಥ್ಯೆ.ಯಹುದು ನೀನೆ ನಿತ್ಯ । ಪದವೆಂದು ಪೇಳು ತಿಹುದ್ಯೆಸೆ ॥ ೨ ॥ ಕೇಳ್ತತ್ತ್ವಮಸೀತಿ ಮೇಲೆ ತ್ವಂತದಸೀತಿ । ಪೇಳಲಿನ್ನೇನು. ತತ್ತ್ವದಹಮಿತಿವೇದ । ಜಾಳಮಿರೆ ನೀನೆ ಚಿದಖಂಡ ॥ ೩ ॥ ವೇದೋಕ್ತಿಯಿಂ ಸೂತಕಾದಿಯೊಳಗೆಂತು ದೃಢ । ವಾದಮತಿಯಪ್ಪು.ದಂತೆ ತದಸೀತಿಯೆಂ ದೋದುತಿಹ ವಾಕ್ಯವನೆ ನಂಬು ॥೪॥ ನಿನಗೆ ವಿಪರೀತ ಭಾವನೆಯಸಂಭಾವನೆಗ ।ಳನುಕರಿಸಲಿದರೊ. ಳಮೃತಮಂ ತೊರೆದುದಂ । ಕನ ತಪದಗತಿಯ ಹುದು ನೋಡು ॥ ೫ ॥ ಪೇಳಿದರ್ಥಂಗಳಂ ಕೇಳಿ ನಂಬಲು ಮುಕ್ತಿ । ಮೇಳವಹುದಲ್ಲ,ದಿರೆ ಭಸ್ಮದೊಳು ಹವಿಯ ಬೀಳಿ ದಂತಪ್ಪುದೆಲೆ ಪುತ್ರ ॥ ೬ ॥ ಸಂದೇಹವಳಿಯಲಾನಂದ ಸಾಗರವೆನಿ । ಸ್ಪಂದ ವಾಗಿಹುದು. ಮಂದರಾದ್ರಿಯ ಚಲನೆ । ನಿಂದ ದುಗ್ಧಾಂಬು ನಿಧಿಯಂತೆ ॥೭॥

---

೩ ತತ್ತ್ವಮಸಿ, ತ್ವಂತದಸಿ, ತ್ವಂಬ್ರಹ್ಮಾಸಿ, ಅಹಂ ಬ್ರಹ್ಮಾಸ್ಮಿ ಇತ್ಯನು ಸಂಧಾನಂ ಕುರ್ಯಾತ್.

ಮುನ್ನವೀ ದೇಹಭಾವಂ ನೈಜವಾದಂದ । ದಿಂ ನೀನೆ ಪರಮು. ನೆಂಬ ಭಾವಂ ಫಲಿಸು । ವನ್ನೆಗಂ ಮನನ ವಿರುತಿರ್ಕು ॥ ೮ ॥ ಪೊರಗೆಂತುಟಾದೊಡೇಂ ಮರೆಯದೊಳಗೊಲಿದು ನೀ । ನರಿದ ನಿಜಸೌಖ್ಯ. ವನೆ ಕರಣದುಪಹತಿಗೆ । ತೆರಹುಗೊಡದನುಭ ವಿಸು ಬೋಧ್ಯ ॥ ೯ ॥ ಇದು ಸಕಲ ನಿಗಮಾರ್ಥ ವಿದು ಯೋಗಿಗಳ ಮಾರ್ಗ । ವಿದು ಗುರೂತ್ತಮರ. ಮತವಪ್ಪುದಾಗಿ ನಿಜ ಪದವನೇ ಮರೆಯ ದಿಹುದಿಂತು ॥ .... .... ॥ ೧೦ ॥

ಶ್ರೀಗುರು ಸಂಬೋಧ ನಿರೂಪಣೆ ಸೂತ್ರ ೩ಕ್ಕೆ ತ್ರಿವಿದಿ ೧೫.

---

ಸೂತ್ರ ॥ ತತ್ವಮಸಿಯೆಂಬುದರೊಳೇನಾನುಮೊಂದು ಭೇ ।
ದತ್ವಮಂ ಪೇಳ್ದೊಡನುಚಿತಮಪ್ಪುದು ॥

ತ್ರಿವಿದಿ ॥ ಶಿಶುವೆ ಕೇಳಾ ತತ್ತ್ವಮಸಿ ವಾಕ್ಯದಲ್ಲಿ ನೀ । ನಸಮು ಚಿದ ಖಂಡ. ವೆನುತಿರ್ಪುದರ್ಥವಾ । ದ ಸಮೇತವಾದು ದೆನಲಿಲ್ಲ ॥ ೧ ॥ ಮನುಜ ನಂ ದೇವೇಂದ್ರನೆನುತೆ ಬಣ್ಣಿಸುವಂತೆ । ಘನಪರಂಜ್ಯೋತಿ. ನೀನೆಂಬ ವಾಕ್ಯ ವಿದ । ನೆನಲಿಲ್ಲವೈಸೆ ನುತಿಯೆಂದು ॥ ೨ ॥ ಆಳನೊಲಿದರಸೆಂದು ಬೋಳೈಸು ವಂತೆ ವಾ । ಕ್ಯಾಳಿ ಪರಬೊಮ್ಮ. ವದು ತಾನೆ ನೀನೆಂದು । ಪೇಳದುಪಚಾರ ಕವೆ ಯಾಗಿ ॥ ೩ ॥ ಪ್ರತಿಮೆಯುಂ ದೇವತಾಕೃತಿಯೆಂಬ ವೊಲುತನ್ನ । ನತಿಶ ಯಿಪ ವಾಕ್ಯ. ವದು ತಾನುಪಾಸನಾ । ರತಿಯಲ್ಲವೆಂದು ತಿಳಿನೀನು ॥ ೪ ॥ ಅನಲನೀ ಮಾಣವಕ ನೆನುತಿರ್ಪ ಪಾಂಗು ನಿಂ । ನನೆ ವಸ್ತುವೆಂಬ. ವಾಕ್ಯ ವದು ಸಾದೃಶ್ಯ । ವೆನಲಿಲ್ಲವೆಂಬು ದಿದುಸಿದ್ಧ ॥೫॥ ಮೃದನನ್ಯಘಟವಿದೆಂಬು ದರಂತೆ ನೀನೆ ತ । ತ್ವದವೆಂಬ ವಾಕ್ಯ. ವದು ಕಾರ್ಯಕಾರಣವ । ನೊದವಿಸು ವುದೆಂಬು ದಿದುಮಿಥ್ಯೆ ॥ ೬ ॥ ಕುವರಕೇಳ್ ನೀಲೋತ್ಪಲವೆನಿಪ್ಪವೋಲು ವಾ । ಕ್ಯವೆ ನೀನೆ ಪರಮು.ನೆಂದು ತದ್ಗುಣಗುಣಿ । ತ್ವವನುಂಟು ಮಾಡು ತಿಹು ದಲ್ಲ ॥ ೭ ॥ ಇದು ಗವಯಪಿಂಡವೆಂಬುದರಂತೆ ನೀನೆ ಚಿ । ತ್ಪದವೆಂಬ ವಾಕ್ಯ. ವನು ಜಾತಿವ್ಯಕ್ತಿ ದೋ । ರ್ಪುದನಾಗಿ ತಿಳಿಯ ದಿರು ಪುತ್ರ ॥ ೮ ॥ ಗಗನಾಂಶವೆಂದು ತದ್ಗಗನದ ವಿಕಾರವಂ । ದು ಗಣಿಸಲ್ಬಾರ. ದಿಹ ಘಟದ ಬಯಲಂತೆ । ಮಗನೆ ನೀನಿರ್ಪೆ ನಿಜದಲ್ಲಿ ॥೯॥ ನೀನಿಂತಿದಂ ತಿಳಿ೩ಯ

---

೩ಅನೇನ ಜೀವೇನಾತ್ಮ ನಾನುಪ್ರವಿಶ್ಯನಾಮರೂಪೇ ವ್ಯಾಕರವಾಣಿ,

ನೇನ ಜೀವೇನಾತ್ಮ । ನಾನುಪ್ರವಿಶ್ಯ. ನಾಮರೂಪೇಂದು ಶ್ರುತಿ । ತಾನಿರ್ಪು ದಾದ ಕತದಿಂದ ॥೧೦॥ ಇದು ಕಾರಣಂ ನೀನೆ ಸದಮಲ ಬ್ರಹ್ಮವೆಂ । ಬುದ ರಲ್ಲಿ ವಿಮತಿ.ಗಳ ಬಾಧೆಯಿಲ್ಲಾಗಿ । ಪದುಳದಿಂ ನಿಜದೊಳಿರು ಪುತ್ರ ॥೧೧॥

ವಾಕ್ಯಾರ್ಥ ಪ್ರತಿಪತ್ತಿ ನಿರಾಕರಣ ನಿರೂಪಣೆ

ಸೂತ್ರ ೩ ಕ್ಕೆ ತ್ರಿವಿದಿ ೨೬,

---

ಸೂತ್ರ ॥ ದೇಶಿಕೋತ್ತಮ ನಿನ್ನ ಕರುಣದಿಂದಾನಖಿಳ ।
ಪಾಶವಿಲ್ಲದ ಪರಬ್ರಹ್ಮವಾದೆ ॥

ತ್ರಿವಿದಿ ॥ ಶರಣು ಗುರುಕುಲಭಾನು ಶರಣು ನತಸುರಧೇನು । ಶರಣು ನಿಮಗಾನು. ಪರನಲ್ಲವಿನ್ನೇನು । ಶರಣು ಮಿಗೆ ಶರಣು ಗುರುವರ್ಯ ॥೧॥ ತಂದೆ ಚಿತ್ತಯಿಸು ಪಲವಂದದಿಂದೆನ್ನನೇ । ಕುಂದಿಲ್ಲದಿರ್ಪ. ನಿಜಪರಬ್ರಹ್ಮ ವಹು । ದೆಂದು ಬೋಧಿಸಿದಿ ರೊಲವಿಂದೆ ॥೨॥ ಸಂದೇಹವಿಲ್ಲದಾನೊಂದಿ ತದ್ಭಾವದೊಳು । ನಿಂದೆನದರಿಂದ. ಲೆನಗಾದ ಸಂತಸವ । ನಿಂದು ಬಿನ್ನವಿಪೆ ನವಧರಿಸು ॥೩॥ ಗುರುಪುಂಗವನೆ ನಿನ್ನೊಳಂರವಣಿಸಿ ಮುಂಚುತಿಹ । ಕರು ಣಾಂಬುವೆನ್ನ. ಮನದ ಮಲಿನಂ ದೊಳೆಯೆ । ಪರಿಶುದ್ಧನಾದೆ ನಿದುಸತ್ಯ॥೪॥ ತವಪಾದ ರೇಣುವೆಂಬವಿಭೂತಿಯಿಂದೆನ್ನ । ನವಿರತಂ ಭ್ರಾಂತಿ. ಗೊಳಿಸ್ಯ ವಜ್ಞಾನ ಗ್ರ । ಹವೆ ಪಿಂಗಿತಾತ್ಮ ರತ ವಂದ್ಯ ॥ ೫ ॥ ಪರಮಾತ್ಮ ನಿಮ್ಮ ಪದಸರಸಿಜಾಮೋದವದು । ಪರಿದೆನ್ನೊಳಿರ್ದ. ದುರಿತ ದುರ್ವಾಸನೆಯ । ನೊರಿಸಲಾನಿಂದು ಶುಚಿಯಾದೆ ॥ ೬ ॥ ಎನ್ನ ತನುಮುಖ್ಯವೆಲ್ಲಂ ನಿಮ್ಮ ಪದಸೋಂಕಿ । ನಿಂ ನಿರ್ಮಲತ್ವ.ವಾಯ್ತು ಪುಷ್ಪಾದಿರುಮೆ । ಯನ್ನೆರದು ಲವಣ ವೆನಿಪಂತೆ ॥೭॥ ಮಂಗಳಾತ್ಮಕ ನಿನ್ನ ಸಂಗದಿಂದೆನ್ನ ಕರ । ಣಂ ಗಳಂ ಮರವೆ. ಮುಸುಕದಾ ರವಿಯ ತುರ । ಗಂಗಳಿಗೆ ತಿಮಿರ ಭಯ ವೆಂತು ॥ ೮ ॥ ಬೆಲ್ಲಮಂಕೂಡಿ ಬೇವೆಲ್ಲವಿನಿದಪ್ಪಂದ । ದಲ್ಲಿ ನಿನ್ನೊಲುಮೆ. ವೆರದೆನ್ನ ಮತಿಮರವೆ । ಯಿಲ್ಲದಾಯಿತ್ತು ಸುಖರೂಪೆ ॥ ೯ ॥ ಕ್ಲೇಶಪಂಚಕ ಪಂಚಕೋಶ ನವಗುಣವಷ್ಟ । ಪಾಶಾಷ್ಟಕ ಪ್ರ.ಕೃತಿಯಷ್ಟ ಪುರವಳಿದ । ವೀಶನಿಮ್ಮನುಭ ವದೊಳೆನ್ನ ॥೧೦॥ ಶ್ರೀಗುರುವೆ ನಿಮ್ಮವಚನಾಗಮಪ ಯೋನಿಧಿಯ । ನೀಗಳಾನ್ಯೆದಿ. ಸುಖಸುಧಾರಸವನ್ನು ಭೋಗಿಸುತ್ತಮೃತ

ಮಯನಾಡೆ ॥ ೧೧ ॥ ಪಾಪ ಪುಣ್ಯಂಗಳಾರೋಪಕ್ಕೆ ಗುರಿಯಾಗ । ದಾ ಪರಬ್ರಹ್ಮ.ವಾದೆನಾ ಸುಖಮಂ ನಿ । ರೂಪಿಸುವೆನೆಂತು ಕರುಣಾಬ್ಧಿ ॥ ೧೨ ॥ ಆರೊಡನೆ ವೈರ ಮತ್ತಾರೊಡನೆ ಮಿತ್ರತ್ವ । ವಾರನ್ಯವೆನಗೆ. ಗುರುವರನೆ ತವಪಾದ । ವಾರಿಜದೊಳೊಂದಿ ದೆನಗಿನ್ನು ॥೧೩॥ ಪರಮಾಣು ರೂಪಮಂ ಧರಿಸಿದೆನ್ನನೆ ಪೂರ್ಣ । ಪರಮಾತ್ಮನೆನಿಸಿ. ತೋರಿತಾವುದು ನಿನ್ನ । ಕರುಣವದು ಜಯತು ಗುರುವರ್ಯ ॥ .... .... ॥೧೪॥

ನಿಜಸುಖ ನಿರೂಪಣೆ ಸೂತ್ರ ೪ ಕ್ಕೆ ತ್ರಿವಿದಿ ೪೮.

---

ಸೂತ್ರ ॥ ತಿಳಿಯ ಲನುಭವಸಾರವಿದು ಸಾಧಕರ್ಗೆನಿ ।
ರ್ಮಳವಪ್ಪ ಕೈವಲ್ಯವನೆ ಮಾಳ್ಪುದು ॥

ತ್ರಿವಿದಿ॥ ನವಯುಕ್ತಿ ಯನುಮಾನ ನಿವಹದೊಡಗೂಡಿ ಯನು। ಭವಸಾರಮಿಂತು. ರಚಿತವಾಯಿತ್ತಿಳಿಯೊ । ೞವಿರತಂ ಸೇವ್ಯ ವೆನಿಪಂತೆ ॥ ೧ ॥ ಇದು ವೇದಶಿರದರ್ಥವಿದು ಸಕಲಶಾಸ್ತ್ರೋಕ್ತ । ವಿದು ಪುರಾತನರ. ಮತವಿದು ಗುರೂಕ್ತಿ ಮ । ತ್ತಿದು ತತ್ವವಿದರ ನಿಜಮಾರ್ಗ ॥೨॥ ಅದುಕಾರಣಂ ಮುಕ್ತಿಪದವನೆಳಸುವರೆಲ್ಲ । ರಿದನೆ ಗುರುಮುಖದೊ. ೞೊಲಿದೋದಿ ಕೇಳಿತಿಳಿ। ವುದು ಬಳಲದನ್ಯ ಮಂತದಲ್ಲಿ ॥ ೩ ॥ ದಿನಪನುದಯಂ ತಮುವನೆನಿತುಬೇಗಂ ತವಿಪು । ದನಿತು ಶೀಘ್ರದೊಳು. ಸಕಲಸಂದೇಹಂಗ । ೞನು ಕಳೆವುದಿದರೊ ೞಸೆವರ್ಥ ॥೪॥ ರನ್ನಗನ್ನಡಿಯಲ್ಲಿ ತನ್ನ ಮೊಗದಂದಮಂ । ಚೆನ್ನಾಗಿ ಕಾಣ್ಬ. ತೆರನಂತೆ ನಿಜವಿದರೊ । ೞಂ ನಾಡೆ ತೋರ್ಪು ದಖಿಳರ್ಗೆ ॥ ೫ ॥ ಬೇರೆ ಬೇರೋದಿ ಬಾಯಾರದಿದನೊಮ್ಮನಲ । ವೇರಿ ಕೀಳ್ದವರು. ಪರಮ ಶಿವಪದವನುರೆ । ಸೂರೆ ಗೊಂಡಿಪರು ಸುಖದಲ್ಲಿ ॥ ೬ ॥ ವೀತರಾಗರ್ಗೆ ವಿಖ್ಯಾತರ್ಗೆ ತಿಳಿವ ಸಂ । ಪ್ರೀತಿಯುಳ್ಳರ್ಗೆ. ಪೇಳ್ವು ದಜ್ಞರ್ಗೆ ಮನ । ಮೋತು ಸುರಲಾಗ ದಿದನೊಮ್ಮ ॥ ೭ ॥ ಇದನೆ ಬರೆದೋದಿ ಕೇಳಿದವ ರರ್ಥಂಗಳಂ । ಮುದದಿಂದೆ ಪೇಳಿ.ದವರುಮಾವರ ಶಂಭು। ಪದವೆ ತಾವಾಗಿ ಸುಖಮಿರ್ಕು ॥೮॥ ಇಂತು ನಿಜಗುಣಯೋಗಿ ಸಂತಸದೊಳೊರೆದಿದ ನ । ನಂತ ಮಹಿಮಾಂಬು. ನಿಧಿ ಶಂಭುತಾನೊಪ್ಪಿ । ಸಂತರಿಂ ಪಾಡಿ ಸುತಮಿರ್ಕೆ ॥ ೯ ॥ ಉತ್ತಮ ಪದಂಗಳೈವತ್ತು ಸೂತ್ರಂಗಳೈ । ದುತ್ತಮರು ಮೆಚ್ಚ.ವಂತೆಂಟನೆಯಸಂಧಿ ।

ಯುತ್ತಮೋತ್ತಮವೆ ನಿಪುದಿಂತು॥ .... .... ॥ ೧೦ ॥

ಗ್ರಂಥಪ್ರಾಶಸ್ತ್ಯ ನಿರೂಪಣೆ ಸೂತ್ರ ೫೬ಕ್ಕೆ ತ್ರಿವಿದಿ ೫೧.

---

ಕಂದ ॥ ತ್ರಿವಿದಿಗಳೈನೂರ್ಮೇಲೈ ।
ದವಧಿಯುಮೂವತ್ತು ಸೂತ್ರಗಳು ನಾಲ್ವತ್ತಾ ॥
ರವರಿರ್ದ ಸಂಧಿಯೆಂಟನು ।
ಭವಸಾರದೊಳೆಸೆವ ವಖಿಳವಿಬುಧರ್ಮೆಚ್ಚಲ್ ॥

ಅಂತು ಸಂಧಿ ೮ಕ್ಕಂ ಸೂತ್ರ ೪೬ಕ್ಕಂ ತ್ರಿವಿದಿ ೫೩೫ಕ್ಕಂ
ಮಂಗಳಮಸ್ತು.

ಇತಿ ಶ್ರೀ ನಿಜಗುಣ ಶಿವಯೋಗೀಂದ್ರರವರಿಂ ವಿರಚಿತಮಪ್ಪ
ಅ ನು ಭ ವ ಸಾ ರ ಸಂ ಪೂ ರ್ಣ ೦.

ಓಂ ಭದ್ರಂ:

-: ೦೦ :-

ಶ್ರೀಗುರುಶಂಭುಲಿಂಗಾಯನಮಃ

# ವಿವೇಕ ಚಿಂತಾಮಣಿ

---

## ೧. ವೇದಾಂತಪ್ರಕರಣ

### ಉತ್ಪಲಮಾಲಾವೃತ್ತಂ

ಶ್ರೀಮದನೇಕ ಲೋಕಹಿತಮಾಗಿರೆ ವೇದ ಪುರಾಣ ಶಾಸ್ತ್ರದೊ ।
ಳ್ನೇಮಿಸಿತೋರ್ಪ ವಿಶ್ವ ವಿಷಯಂಗಳ ಸಂಸ್ಥಿತಿಯಂ ವಿವೇಕಚಿಂ ॥
ತಾಮಣಿಯೊಂದು ಸ್ವಲ್ಪಪೆಸರಿಟ್ಟು ಮಹಾ ಕವಿತಾ ಪ್ರಬಂಧಮಂ ।
ಪ್ರೇಮದಿಪೇಳ್ವೆನಾನಿದನೆ ನೀನೊಲಿದಾಲಿಸು ಶಂಭುಲಿಂಗವೆ ॥

ಗದ್ಯ ॥ ಶ್ರೀಮದನೇಕ ಭುವನ ಭವನಾರಂಭಮೂಲ ಸ್ತಂಭರೂಪ ಶಂಭುಲಿಂಗಪಾದಿಯಾಗಿ ನಿರಾಭಾರಿ ದೇಶಿಕೋತ್ತಮಪರ್ಯಂತ ಮಹಾಗುರು ಪರಂಪರೆಗೆ ಮನೋವಾಕ್ಕಾಯಂಗಳಿಂದಭಿವಂದಿಸಿ ಮತ್ತಮಾ ನಮಸ್ಕಾರ ಲಕ್ಷಣ ಮಂಗಳಾಚರಣಕ್ಕೆ ನಿರ್ವಿಘ್ನದಿಂ ಪ್ರಕರಣ ಪರಿಸಮಾಪ್ತಿ ಶಿಷ್ಯ ಪ್ರಶಿಷ್ಯ ಪ್ರವಾಹ ಪ್ರವರ್ತನೆ ಕೇಳ್ವರ ಚಿತ್ತಸ್ವಸ್ಥತೆಗಳೆಂಬ ಫಲತ್ರಯ ಸಿದ್ಧಮೆಂದು ನಿರ್ಧರಿಸಿ ಬಳಿಕ ಅನಾದಿ ಶುದ್ಧ ಚಿದ್ರೂಪನಪ್ಪುದರಿಂ ಸರ್ವೋತ್ಕರ್ಷನಾಗಿ ಸರ್ವಜ್ಞತ್ವ ಸರ್ವಕರ್ತೃತ್ವ ಸಹಿತನಾದ ಪರಮೇಶ್ವರ ಪ್ರಣೀತತ್ವದಿಂ ಪರಮಪ್ರಮಾಣ ಮೆನಿಸಿದಾಗಮಾಮ್ನಾಯ ಸಮ್ಮತದಿಂ ಮತ್ತಮಾಉಭಯಮೇ ಮೂಲವಾದ ಸ್ಮೃತಿ ಪುರಾಣೇತಿಹಾಸ ಪುರಾತನೋಕ್ತಿಗಳನುಸಾರದಿಂದನುಭವಿಗಳಹುದೆನಿಪ್ಪಂತೆ ಸ್ವಕಪೋಲ ಕಲ್ಪಿತಮಲ್ಲದ ಸಾರತರಮಾದ ಸತ್ಯಾರ್ಥಂಗಳನೆ ಸಂಗ್ರಹಿಸಿ ಮುನ್ನುಳ್ಳ ಮಣಿಪುಂಜಮಂ ರಂಜನಂಗೈದು ತರ್ರವರಿತು ಸರಂಗೊಳಿಸಿ ನವೀನ ಕಂಠಾಭರಣಮೆನಿಸುವಂತೆ ಮುಮುಕ್ಷುಜನಂಗಳೀ ಜಗತ್ತಿನ ಸ್ಥಿತಿಗತಿಗಳಾವಪ್ರಕಾರದಿಂದಿಹವೆಂದರಸಿ ಬಳಲದಭಿವ್ಯಕ್ತಮಾಗಿಲ್ಲಿಯೆ ಸಲೀಲೆಯಿಂದರಿದು ಕೃತಾರ್ಥರಾಗಲೆಂದು ನಿಜಗುಣ ಶಿವಯೋಗಿ ಬೆಳುಗನ್ನಡಮೊದವಚನ ರಚನೆಗಳಿಂ ವಿವೇಕ ಚಿಂತಾಮಣಿಯೆಂಬ ಪ್ರಕರಣಮಂ ಪೇಳ್ವೆನದೆಂತೆಂದೊಡೆ ಪ್ರಥಮದಲ್ಲಿ ಚಕ್ಷುರಾದಿಬಾಹ್ಯೇಂದ್ರಿಯ

ಗೋಚರಮಾಗಿ ತೋರುವೀ ಜಗತ್ತೆಲ್ಲಂ ಪೃಥುಬುಧ್ನೋದರಾಕಾರದಿ ಸಾವಯವಮಪ್ಪುದರಿಂ ಘಟದಂತೆ ಕಾರ್ಯಮಹುದಾಗಿ ಕುಲಾಲನಂತೆ ನಿಮಿತ್ತ ಕಾರಣನಾದೀಶ್ವರನಿಂ. ಚಕ್ರದಂಡಾದಿಕದಂತೆ ಪುಣ್ಯಾಪುಣ್ಯರೂಪಕರ್ಮವೆಂಬ ಸಹಕಾರಿಕಾರಣದಿಂ, ಮೃತ್ತಿಕೆಯಂತೆ ಬಿಂದುಮಾಯೆಯೆಂಬ ಶುದ್ಧಾಶುದ್ಧ ಮಾದುಪಾದಾನ ಕಾರಣದಿಂ ಗಮನಾಗಮನ ಸುಖದುಃಖಾದ್ಯನೇಕ ವ್ಯವಹಾರಭೇದದಿಂ ಭಿನ್ನರಾದಾತ್ಮರ ಭೋಗಮೋಕ್ಷಾರ್ಥಮಾಗಿ ಜನಿಸಿ ತೆಂದರಿಯಲ್ವೇಳ್ಕುಂ. ಬಳಿಕಲ್ಲಿ ಪ್ರಕೃತಿ ಪರಮಾಣು ಕಾಲಕರ್ಮಾದಿಗಳೆ ಜಗತ್ಕರ್ತೃಗಳಪ್ಪ ವೀಶ್ವರನಲ್ಲೆಂದೊಡಾಪ್ರಕೃತಿ ಮೊದಲಾದವೆಲ್ಲ ಜಡರೂಪಗಳಾಗಿ ಚೈತನ್ಯಾಧಿಷ್ಠಾನಮಿಲ್ಲದೆ ತಾವೇ ಜಗನ್ನಿರ್ಮಾಣಕರ್ತೃಗಳಲ್ಲವೆಂಬುವದೇ ಸಿದ್ಧಮಕ್ಕುಂ. ಬಳಿಕಂತಾದೊಡೆ ಚೇತನನಾದ ಜೀವನೇ ಜಗತ್ಕರ್ತೃವಾಗಲೆಂದೊಡಾತಂಗೆ ಕಿಂಚಿಜ್ಞತ್ವ ಅದೃಷ್ಟ ಪರತಂತ್ರತ್ವ ಅನೀಶ್ವರತ್ವಾದಿ ದೋಷಗಳುಂಟಾಗಿ ಜಗತ್ತುಗಳಂ ಸೃಜಿಸಲು ಯೋಗ್ಯವೆಂಬಾಲೋಚನೆಯಲ್ಲಿ ಹೇಗೆ ಸಮರ್ಥನಪ್ಪಂ ? ಮತ್ತೇನೆಂದೊಡೆ ಪಾರಿಶೇಷನ್ಯಾಯದಿಂ ಪರಮೇಶ್ವರನೇ ಜಗತ್ಕರ್ತೃವೆಂದುನಿಶ್ಚಿತಮಕ್ಕುಂ. ಬಳಿಕಜಗದ್ರೂಪ ಮಹಾಕಾರ್ಯವಾದೊಡೆ ರಥದಂತೆ ಬಹುಕರ್ತೃಗಳುಳ್ಳದ್ದೆನಲಾ ರಥವು ಆಚಾರ್ಯನಾದೋರ್ವನ ಸೂತ್ರದಿಂದಲೇ ಅಹುದಾಗಿಯುಂ ಬೇರೆ ಬೇರೆ ಬಲ್ಲತನದಭಿಮಾನದಿಂ ತಮ್ಮ ತಮ್ಮನೆ ಪೋಷಿಸಿಕೊಳ್ಳಲುಳ್ಳನೇಕ ಕರ್ತೃಗಳಿಂದೊಂದು ಕಾರ್ಯವನುವಾಗದಾಗಿಯುಂ ಜಗದೀಶ್ವರನೋರ್ವನಾಗೇವೇಳ್ಕುಂ.

## ೨. ಈಶ್ವರನ ಗುಣಾವಳಿ

ಬಳಿಕೆಲ್ಲಕಾಲದಲ್ಲಿಯು ಎಲ್ಲತಾವಿನಲ್ಲಿಯು ಕಾರ್ಯೋದಯಮುಂಟಾಗಿ ಕರ್ತೃವಾದೀಶ್ವರಂಗೆ ನಿತ್ಯತ್ವವ್ಯಾಪಕತ್ವಂಗಳುಂ, ಆವಕಾರ್ಯವೂ ಅರಿವುತಿರದಸಮರ್ಥನಿಂದಾಗದಾಗಿ ಕರ್ತೃವಾದೀಶ್ವರಂಗೆ ಸರ್ವಜ್ಞತ್ವ ಸರ್ವಶಕ್ತಿತ್ವಂಗಳುಂ, ಕಾಲವೆಂತಮೂರ್ತವಾಗಿ ಪಲ್ಲವ ಕುಸುಮಾದಿ ಸಾಧಕಮಪ್ಪುದಂತು ಸಕಲ ಕಾರ್ಯೋತ್ಪಾದಕನಾದೀಶ್ವರಂಗೆ ನಿಷ್ಕಳಂಕತ್ವಮುಂ, ಸರ್ವಾತ್ಮರ ಹೃದಯದೊಳಂತರ್ಯಾಮಿಯಾಗಿಯುಂ, ಹೊರಗೆ ಶ್ರುತಿ ಸ್ಮೃತಿ ರೂಪಮಾದಾಜ್ಞೆಯಿಂದಲು ನಿಯಾಮಕಮಪ್ಪುದರಿಂದೀಶ್ವರಂಗೆ ಸರ್ವಪ್ರೇರಕತ್ವಮುಂ, ಎಂತು ಲೋಕದಲ್ಲಿ ಕುಲಾಲಾದಿ ಕರ್ತೃವಿನಿಂದನ್ಯಮಾದ ಘಟಾದಿ

ಗಕ್ಕಿನಿಯಾಮಿಸಿಕೊಳ್ಳುತ್ತಿರಲು ಅನನ್ಯವಾದ ಶರೀರಾದಿಗಳೆ ನಿಯಾಮಿಸಿಕೊಳು ತಿರ್ಪವಾಗಿ ವಿಶ್ವವೆಲ್ಲಂ ವಿಶ್ವೇಶ್ವರನಿಂ *ನಿಯಮ್ಯವೆಂಬ ಶ್ರುತಿಯುಂಟಾ ಗೀಶ್ವರಂಗೆ ಸರ್ವಾತ್ಮಕತ್ವಮುಂ, ಅದ್ವಿತೀಯನಪ್ಪುದರಿಂ ಬೇರೆ ಕರ್ತೃಗಳಿಲ್ಲ ವಾಗೀಶ್ವರಂಗೆ ಸರ್ವಸ್ವತಂತ್ರತ್ವಮುಂ, ಜೀವರ ಕರ್ಮಾನುಗುಣ್ಯಮಾಗಿಯೆ ಸುಖದುಃಖವನೀವುದರಿಂದೀಶ್ವರಂಗೆ ರಾಗ ದ್ವೇಷ ವಿರಹಿತತ್ವಮುಂ, ಈಶ್ವ ರನಿಂ ಸೃಷ್ಟಮಾದ ವ್ಯೋಮಾದಿವಿಶ್ವಮುಂ ಬೇರೊಂದು ಪ್ರಕಾರಮಾಗಿ ಮಾಡಲಾರುಂ ಸಮರ್ಥರಲ್ಲದರಿಂದೀಶ್ವರಂಗೆ ಸರ್ವೇಶ್ವರತ್ವಮುಂ ಸುಸ್ಥಿತ ಮಕ್ಕುಂ.

## ೩. ಪ್ರಮಾಣ ಶಾಸ್ತ್ರಗಳು

ಅನಂತರದೊಳಾ ಪರಮೇಶ್ವರನಿಂ ನಿರ್ಮಿತವಾದಚೇತನಾಚೇತನ ರೂಪ ಜಗತ್ತಿನಲ್ಲಿ ಭೋಗ ಮೋಕ್ಷಾರ್ಥವಾಗಿ ಬೇರೆ ಬೇರೆ ಪ್ರವರ್ತಿಸುತಿ ರ್ದ ವಾದಿಗಳಿಗಭಿಮತವಾದ ಶಾಸ್ತ್ರಂಗಳಾವಾವವೆಂದೊಡೆ :— ಮೊದಲು ಮುಖ್ಯ ಪ್ರಮಾಣಮಾದ ಋಗ್ವೇದ ಯಜುರ್ವೇದ ಸಾಮವೇದ ಅಥರ್ವಣ ವೇದವೆಂಬವೇ ಸ್ವಯಂಭುವೆಂದೀಶ್ವರಪ್ರಣೀತವೆಂದು ಪೇಳಿಸಿಕೊಳುತಿರ್ದ ನಾಲ್ಕು ವೇದಂಗಳವುಗಳಲ್ಲಿ—

## ೪. ವೇದಪ್ರಭೇದಗಳು

ಋಗ್ವೇದವಿಪ್ಪತ್ತೊಂದು ಭೇದವಾಗಿಹುದು ಯಜುರ್ವೇದವು ಹನ್ನೊಂ ದು ಭೇದಮಾಗಿಹುದು ಸಾಮವೇದವು ಸಾವಿರಭೇದಮಾಗಿಹುದು ಅಥರ್ವಣ ವೇದವು ನವಭೇದಮಾಗಿರ್ಕುಂ.

## ೫. ವೇದವಾಕ್ಯಸ್ವರೂಪ

ಮತ್ತಮಾವೇದಂಗಳಾದೊಡೆ :— ವಿಧಿವಾದ ಅರ್ಥವಾದ ಮಂತ್ರವಾದ ನಾಮಧೇಯಂಗಳೆಂಬ ನಾಲ್ಕು ಭೇದದಿಂ ಸಮಸ್ತ ಧರ್ಮಂಗಳಂ ಬೋಧಿಪ ವವುಗಳಲ್ಲಿ ರಾಜಾಜ್ಞೆಯಂತೆ ಪುರುಷರ್ಗಳಂ ನಿಷೇಧ ಧರ್ಮದಿಂ ತಿರುಗಿಸಿ ಧರ್ಮವೇ ಮಾಡತಕ್ಕದೆಂಬುವದೇ ವಿಧಿವಾದ ವೆನಿಸುವುದು. ವಂದಿಗಳಂತೆ ಅತಿ ಶಯಾರ್ಥಮಂ ಕೊಂಡಾಡಿ ಉತ್ಸಾಹಿಪುದೇ ಅರ್ಥವಾದ ವೆನಿಸುವುದು.

---

* ಯೋಂತರೋನಿಯಮಯತಿ ಜೀವಬೃಂದಂ ಇತಿ

ಆಚಾರ್ಯನಂತೆ ಮಾಡತಕ್ಕುದಂ ತೋರ್ಪುದೇ ಮಂತ್ರವಾದವೆನಿಸುವುದು, ಜನನೀಜನಕರಂತೆ ಯಾಗಾದಿಗಳಿಗೆಪೆಸರಂ ಪೇಳ್ವುದೇ ನಾಮಧೇಯಮಕ್ಕುಂ.

## ೬. ವೇದಾಂಗಗಳು

ಮತ್ತಮಾ ವೇದಕ್ಕೆ, ಪಾದ ಹಸ್ತ ಮುಖ ಘ್ರಾಣ ನೇತ್ರ ಶ್ರೋತ್ರಂಗಳಾದಕ್ರಮದಿಂ, ಛಂದಸ್ಸು ಕಲ್ಪ ವ್ಯಾಕರಣ ಶಿಕ್ಷೆ ಜ್ಯೋತಿಷ ನಿರುಕ್ತಿಗಳೆಂಬವೆ ಷಡಂಗಂಗಳವುಗಳಲ್ಲಿ ಛಂದಸ್ಸೇ ಮಂತ್ರಾದಿಗಳಿಗೆ ತ್ರಿಷ್ಟುಪು ಮೊದಲಾದವುಗಳಿಂದಕ್ಷರದ ಗಣನೆಗಳಂಮಾಡುವುದು. ಕಲ್ಪವೇ ಅಶ್ವಲಾಯನಿಯ ಬೋಧಾಯನಿಯ್ಯ ಆಪಸ್ತಂಬಿಯಾದ ಸೂತ್ರರೂಪದಿಂ ಯಜ್ಞ ಪ್ರಯೋಗಾದಿಗಳಂ ಕಲ್ಪಿಸುವುದು. ವ್ಯಾಕರಣವೇ ವೈದಿಕ ಶಬ್ದಸಿದ್ಧಿಯಂ ಸಮರ್ಥಿಸುವುದು. ಶಿಕ್ಷೆಯೇ ಉದಾತ್ತಾನುದಾತ್ತ ಸ್ವರಿತ ಪ್ರಚಯಂಗಳೆಂಬ ಚತುರ್ವಿಧ ಸ್ವರಕರಣ ಪೂರ್ವಕಮಾದ ಪದ ಪಾಳಿ ಕ್ರಮದಿಂ ವೇದಾಧ್ಯಯನಾದಿಕವ ಶಿಕ್ಷಿಸುವುದು. ಜ್ಯೋತಿಷವೇ ಲಗ್ನ ತಿಥಿ ನಕ್ಷತ್ರ ಯೋಗ ಕರಣಾದಿಗಳಿಂ ವೈದಿಕ ಕರ್ಮಂಗಳಿಗೆ ಕಾಲಂಗಳಂ ತಿಳಿಪುವುದು. ನಿರುಕ್ತಿಯೇ ವೈದಿಕ ಶಬ್ದ ನಿರ್ವಚನಮಂ ನಿಯಮಿಸುತ್ತಿರ್ಕುಂ.

## ೭. ಉಪಾಂಗಗಳು

ಬಳಿಕ ಮೀಮಾಂಸೆ ನ್ಯಾಯ ಪುರಾಣ ಸ್ಮೃತಿಗಳೆಂಬ ನಾಲ್ಕೇವೇದಗಳಿಗೆ ಉಪಾಂಗಂಗಳಿವುಗಳ ಲಕ್ಷಣಂಗಳು ಮುಂದೆ ಪೇಳಲ್ಪಡುತಿರ್ಕುಂ.

## ೮. ಉಪವೇದಗಳು

ಬಳಿಕ ಆಯುರ್ವೇದ ಅರ್ಥವೇದ ಧನುರ್ವೇದ ಗಾಂಧರ್ವವೇದಂಗಳೆಂಬವೆ ಉಪವೇದ ಚತುರ್ವಿಧಂಗಳವುಗಳಲ್ಲಿ ಆಯುರ್ವೇದವೆ ವ್ಯಾಧಿನಿದಾನ ವ್ಯಾಧಿಚಿಹ್ನೆ ಮಂತ್ರೌಷಧ ಚಿಕಿತ್ಸೆಗಳಿಂದ ಆಯುರಾರೋಗ್ಯಾದಿಗಳಂ ತೋರಿಸುವುದು. ಅರ್ಥವೇದವೆ ದಕ್ಷಿಣೆ ಆಜ್ಯ ಚರು ಉಪಹಾರಾದಿಗಳ ಸಂಪಾದಿಪುದರಿಂಧರ್ಮಾದಿ ಚತುರ್ವರ್ಗ ಸಾಧನಮಾಗಿಹುದು. ಧನುರ್ವೇದವು ಶತ್ರುಜಯಾರ್ಥಮಾಗಿಯೇ ಮಂತ್ರಾಸ್ತ್ರಪ್ರಯೋಗಾದಿಗಳಂ ಕಲ್ಪಿಸುವುದು. ಗಾಂಧರ್ವವೇದವು ಸಾಮವೇದಾದಿಗಳಲ್ಲಿ ಸರಿಗಮಪಧನಿಯೆಂಬ ಸಪ್ತಸ್ವರ ಗೀತಪ್ರಬಂಧಗಳಂ ವಿಭಾಗಿಸುತಿರ್ಕುಂ.

## ೯. ಉಪನಿಷತ್ತು.

ಬಳಿಕ ಶ್ರೀರುದ್ರ ಬೃಹದಾರಣ್ಯ ಶ್ವೇತಾಶ್ವತರ ಕೈವಲ್ಯ ಕಾಲಾಗ್ನಿರುದ್ರ ಕಠವಲ್ಲೀ ಕಾತ್ಯಾಯನ ಬ್ರಹ್ಮನಾರಾಯಣ ಹಂಸ ಪರಮಹಂಸ ಬಾಷ್ಕಳ ಬ್ರಹ್ಮಬಿಂದು ಆರುಣ ಅಮೃತಬಿಂದು ಚರ್ಚೆ ಪಂಚಬ್ರಹ್ಮಜಾಬಾಲ ತೇಜೋಬಿಂದು ವಾಜಸನೇಯ ಬೋಧಾಯನೀಯ ಅಶ್ವಲಾಯನೀಯ ಮೈತ್ರಾಯಣೀಯಿಂ ಸಾಂಖ್ಯಾಯಣೀಯ ಭಾಗುರಾಯಣೀಯ ಶೌನಕೀಯ ಶಿವಸಂಕಲ್ಪಶ್ರವಣ ಈಶಾವಾಸ್ಯ ತಳವಕಾರ ನಿರಾಲಂಬ ತೈತ್ತಿರೀಯ ಛಾಂದೋಗ್ಯ ಕೌಷೀತಕಿ ಮಾಂಡೂಕ್ಯ ಮುದ್ಗಲ ಮುಂಡಕವೆಂಬ ಮೊದಲಾದವೆ ಅಷ್ಟೋತ್ತರ ಶತೋಪನಿಷತ್ತುಗಳವುಗಳಲ್ಲಿ ಜ್ಞಾನಾಂಗಮಾದ ಭಸ್ಮ ರುದ್ರಾಕ್ಷಾದಿಗಳಂ ಬ್ರಹ್ಮಜ್ಞಾನಾದಿಕಮಂ ವಿವರಿಸುತಿರ್ಕುಂ.

## ೧೦. ಸ್ಮೃತಿಗಳು

ಬಳಿಕ ಮನುಸ್ಮೃತಿ ಅತ್ರಿಸ್ಮೃತಿ ಹರಿತಸ್ಮೃತಿ ವಿಷ್ಣುಸ್ಮೃತಿ ಯಾಜ್ಞವಲ್ಕ್ಯಸ್ಮೃತಿ ಉಶನಸ್ಮೃತಿ ಅಂಗೀರಸಸ್ಮೃತಿ ಯಮಸ್ಮೃತಿ ಅಪಸ್ತಂಬಸ್ಮೃತಿ ಸಂವರ್ತಸ್ಮೃತಿ ಕಾತ್ಯಾಯನಸ್ಮೃತಿ ಬೃಹಸ್ಪತಿಸ್ಮೃತಿ ಪರಾಶರಸ್ಮೃತಿ ವ್ಯಾಸಸ್ಮೃತಿ ಶಂಖಲಿಖಿತಸ್ಮೃತಿ ದಕ್ಷಸ್ಮೃತಿ ಗೌತಮಸ್ಮೃತಿ ಶಾತಾತಪಸ್ಮೃತಿ ವಶಿಷ್ಠಸ್ಮೃತಿಗಳೆಂಬವೆ ಆಯಾಯ ನಾಮಧೇಯಮುಳ್ಳವರಿಂದುಕ್ತಮಾದ ಹತ್ತೊಂಭತ್ತು ಧರ್ಮಶಾಸ್ತ್ರಂಗಳವುಗಳೊಳಗೆ ಕೃತಯುಗದಲ್ಲಿ ಮನುಸ್ಮೃತಿ ಧರ್ಮವೇ ಮುಖ್ಯವಾಗಿಹುದು. ತ್ರೇತಾಯುಗದಲ್ಲಿ ಗೌತಮ ಸ್ಮೃತಿ ಧರ್ಮವೇ ಮುಖ್ಯವಾಗಿಹುದು. ದ್ವಾಪರಯುಗದಲ್ಲಿ ಶಂಖ ಲಿಖಿತ ಸ್ಮೃತಿ ಧರ್ಮವೇ ಮುಖ್ಯವಾಗಿಹುದು. ಕಲಿಯುಗದಲ್ಲಿ ಪರಾಶರ ಸ್ಮೃತಿ ಧರ್ಮವೆ ಮುಖ್ಯವಾಗಿಹುದು. ಆ ಸ್ಮೃತಿಗಳಲ್ಲಿ ಜಾತಿ ವರ್ಣ ಆಶ್ರಮಾಚಾರಂಗಳಂ ದಾಯ ವಿಭಾಗಾದಿ ಹದಿನೆಂಟು ವ್ಯವಹಾರಗಳ ಭೇದಂಗಳಂ ಮಹಾಪಾತಕಾದಿಗಳಿಗೆ ಪ್ರಾಯಶ್ಚಿತ್ತಂಗಳಂ ವಿಧಿಸುವದವರೊಳಗೆ ಕರ್ಮ್ಮ ಕನ್ನಡಿಗ ಅಂಧ್ರ ದ್ರಾವಿಡರೆಂಬವೆ ನಾಲ್ಕು ಜಾತಿಗಳು. ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೆಂಬವೆ ನಾಲ್ಕು ವರ್ಣಂಗಳವುಗಳಲ್ಲಿ-

## ೧೧. ಷೋಡಶಕರ್ಮಾದಿ

ಗರ್ಭಾದಾನ ಪುಂಸವನ ಸೀಮಂತ ಜಾತಕರ್ಮ ನಾಮಕರಣ ಅನ್ನಪ್ರಾಶನ ಚೌಲ ಉಪನಯನ ಉಪಾಕರ್ಮ ಉತ್ಸರ್ಜನ ವೇದವ್ರತ ಗೌದಾ

ನಿಕ ಸ್ನಾತಕ ವಿವಾಹ ಸ್ಮಾರ್ತಾಗ್ನಿ ಹೋತ್ರ ಔರ್ಧ್ವದೇಹಿಕಗಳೆಂಬ ಷೋಡಶ ಕರ್ಮಗಳೊಡನೆಯುಂ, ಯಜನ ಯಾಜನ ಅಧ್ಯಯನ ಅಧ್ಯಾಪನ ದಾನ ಪ್ರತಿಗ್ರಹಗಳೆಂಬ ಷಟ್ಕರ್ಮಂಗಳೊಡನೆಯುಂ, ಶಿವಭಕ್ತ್ಯಾದಿಸಕಲ ಸದ್ಗುಣಂ ಗಳೊಡನೆಯುಂ ಕೂಡಿದಾತನೆ ಬ್ರಾಹ್ಮಣನಪ್ಪಂ.

## ೧೨. ಕ್ಷತ್ರಿಯಕರ್ಮ

ಬಳಿಕ ಪ್ರಜಾಪಾಲನ ಯಜನ ಅಧ್ಯಯನ ದುರ್ಜನ ದುಷ್ಟಮೃಗ ಪಕ್ಷಿ ಶತ್ರು ಸಂಹಾರ ಅನ್ನದಾನ ವಸ್ತ್ರದಾನ ಕನ್ಯಾದಾನ ಭೂದಾನ ಹಿರಣ್ಯ ದಾನ ಗೋದಾನ ಉಭಯಮುಖೀಗೋದಾನ ಮಹಿಷೀದಾನ ಅಶ್ವದಾನ ಶ್ವೇತಾಶ್ವದಾನ ಕಾಳಮುಖೀದಾನ ಮಹಾಮೇರುದಾನ ಕಲ್ಪವೃಕ್ಷದಾನ ವಿದ್ಯಾದಾನಾದಿ ಮಹಾದಾನ ತದ್ದಾನಾರ್ಥಮಾಗಿ ದೇಶ ಕಾಲ ಪಾತ್ರ ಪರೀ ಕ್ಷಿಸಿ ವಿಷ್ಣುಭಕ್ತ್ಯಾದಿ ಸಕಲಸದ್ಗುಣಗಳಿಂ ಯುಕ್ತನಾದಾತನೇ ಕ್ಷತ್ರಿಯನಪ್ಪಂ.

## ೧೩. ವೈಶ್ಯಧರ್ಮ

ಬಳಿಕ ಮೂರನೆಯ ಕುಲಜನಾಗಿ ವಿಪ್ರ ಕ್ಷತ್ರ ಸೇವೆಗಳಿಂ ಕೃಷಿ ಗೋ ಪಶ್ವಾದಿವಾಣಿಜ್ಯದೊಳ್ ಯಜ್ಞೋಪಕರಣ ರಾಜ್ಯೋಪಕರಣ ಕ್ರಯ ವಿಕ್ರ ಯಾದಿ ವ್ಯವಹಾರಸಾಧಕಮಾಗಿ ಗಣನಾದಿ ಕೌಶಲಮಂ ಪದಾರ್ಥಗಳ ಸ್ವ ರೂಪ ಪರೀಕ್ಷಾದಿಗಳಂ ತಿಳಿದು ಬಡ್ಡಿ ದಳ್ಳಾಳಿ ಲಾಭ ಮುಂತಾದವುಗಳಿಂ ಧರ್ಮವಾಗಿ ಧನವಂ ಪಡೆದು ದಾನಾದಿ ಪುಣ್ಯಕರ್ಮಗಳಂ ಸೂರ್ಯಾದಿ ಪೂಜೆಗಳಂ ಮಾಳ್ಪನೇ ವೈಶ್ಯನಕ್ಕುಂ.

## ೧೪. ಶೂದ್ರಧರ್ಮ

ಬಳಿಕ ಬ್ರಾಹ್ಮಣಾದಿ ವರ್ಣತ್ರಯಕ್ಕೆ ಪರಿಚರ್ಯಾಪರನಾಗಿ ವಿಪ್ರಾನು ಗ್ರಹ ಕ್ಷತ್ರಿಯರಕ್ಷಣೆ ವೈಶ್ಯಸಹಾಯಗಳಿಂ ಸಕಲ ದೇವತಾ ಭಕ್ತ್ಯಾದಿಯುಕ್ತ ನಾಗಿ ವಿನೀತನಪ್ಪವನೇ ಶೂದ್ರನಕ್ಕುಂ.

## ೧೫. ಗಣಿತಸಂಜ್ಞೆ

ಬಳಿಕ ಪ್ರಥಮಸ್ಥಾನ ದ್ವಿತೀಯಸ್ಥಾನ ತೃತೀಯಸ್ಥಾನ ಚತುರ್ಥಸ್ಥಾನ ಪಂಚಮಸ್ಥಾನವೆಂಬೀ ಮೇರೆ ಮೂವತ್ತಾರು ಸ್ಥಾನ ಪರೀಕ್ಷೆ ಪರಿಯಂತರಂ ಕ್ರಮದಿಂದವಕ್ಕೆ ಎಕ್ಕಂದಹಂ ಶತಂಸಾವಿರ ದಹಸಾವಿರ ಲಕ್ಷ ದಹಲಕ್ಷಕೋಟಿ

ದಹಕೋಟಿ ಶತಕೋಟಿ ಅರ್ಬುದ ನ್ಯರ್ಬುದ ಖರ್ವ ಮಹಾಖರ್ವ ಪದ್ಮ ಮಹಾಪದ್ಮ ಕ್ಷೋಣಿ ಮಹಾಕ್ಷೋಣಿ ಶಂಖ ಮಹಾಶಂಖ ಕ್ಷಿತಿ ಮಹಾಕ್ಷಿತಿ ಕ್ಷೋಭ ಮಹಾಕ್ಷೋಭ ನಿಧಿ ಮಹಾನಿಧಿ ಸಾಗರ ಮಹಾಸಾಗರ ಹರಿ ಮಹಾ ಹರಿ ಶಂಖೆ ಮಹಾಶಂಖೆ ಫಣಿ ಮಹಾಫಣಿ ಕ್ರಮು ಮಹಾಕ್ರಮು ವೆಂಬವೇವು ಘ್ಢಡನೆಗಳು. ಬಳಿಕ ಏಕರೂಪ ಭೂಮಿಸಂಜ್ಞೆ ಚಂದ್ರಸಂಜ್ಞೆ ಮೊದಲಾದದ್ದು ಒಂದಕ್ಕೆ ಬೇರೆ ಪೆಸರು. ಬಳಿಕ ದ್ವೌ ದ್ವೆ ದ್ವಿ ದ್ವಿತಯ ಯುಗ್ಮ ಯುಗಳ ಯುಗ ಉಭಯ ಬಾಹು ಪಾದ ಪಕ್ಷ ನಯನಸಂಜ್ಞೆ ಮೊದಲಾದವೆ ಎರಡಕ್ಕೆ ಬೇರೆ ನಾಮಂಗಳು. ತ್ರಿತಯ ತ್ರಿತ್ರಯ ಹರನಯನ ಅಗ್ನಿ ಪುರವರ್ಗಗುಣಾದಿಗಳೇ ಮೂರಕ್ಕೆ ಪೆಸರು. ಚತ್ವಾರಿ ಚತುಃ ಚೌಕಷಾಯ ವೇದ ವರ್ಣ ಆಶ್ರಮ ಸಮುದ್ರಸಂಜ್ಞೆ ಮೊದಲಾದವೇ ನಾಲ್ಕರ ಪೆಸರು. ಪಂಚ ಹರವಕ್ತ್ರ ವ್ರತ ಇಂದ್ರಿಯ ಬಾಣ ವಿಷಯ ಪಾಂಡವ ಭೂತಾದಿಗಳೇ ಐದಕ್ಕೆ ಪೆಸರು. ಷಟ್ ಋತು ರಸ ಸ್ಕಂದಮುಖ ವೇದಾಂಗ ಕರ್ಮ ವರ್ಣ ದರ್ಶನ ಅರ್ಥಾದಿಗಳೆ ಆರಕ್ಕೆ ಪೆಸರು. ಸಪ್ತ ಮುನಿ ಗಿರಿ ರಾಜ್ಯಾಂಗ ತುರಗ ಧಾತು ಸಭಾಂಗ ಸ್ವರ ಸಾಗರಸಂಜ್ಞೆ ಮೊದಲಾದವೇ ಏಳಕ್ಕೆ ಪೆಸರು. ಅಷ್ಟವಸು ದಿಗ್ಗಜ ಮದ ಕರ್ಮಾದಿಗಳೇ ಎಂಟಕ್ಕೆ ಪೆಸರು. ನವ ರಂಧ್ರ ನಿಧಿ ರಸ ಗ್ರಹ ರತ್ನ ಭಕ್ತಿಗಳೇ ಒಂಭತ್ತಕ್ಕೆ ಪೆಸರು. ಬಿಂದು ಶೂನ್ಯ ನಾಸ್ತಿ ಅನುಸ್ವಾರ ಗಗನ ಪೂರ್ಣ ಸಂಜ್ಞೆ ಮೊದಲಾದವೇ ಸೊನ್ನೆಯ ಪೆಸರು. ಸಕಲ ಸಂಖ್ಯಾಸಂಜ್ಞೆಗಳನರಿತು ಹೆಚ್ಚು ಕಳೆದು ಗಣಿತಾದಿಗಳಂ ಗುಣಿಸಿ ಕ್ರಮುಕಾದಿ ಸಮಸ್ತ ವಸ್ತುಗಳಂ ಪ್ರಮಾಣಿಸುವ ಲೆಕ್ಕಬರಹ ಕ್ರಯ ಬಡ್ಡಿ ವಟ್ಟ ಚಿನ್ನದಬಣ್ಣ ಪವಳದಕಣಜ ಮಣಿಗಳಚೌಕ ರತ್ನಗಳ ಸೂತ್ರಪರೀಕ್ಷೆ ವಜ್ರದಮಂಜಾಡಿ ಪಚ್ಚೆಯ ರತಿ ಮೊದಲಾದವಂ ಬೇರೆ ಬೇರೆ ಲಕ್ಷಿಸಿ ವ್ಯವಹರಿಸಲುಪಯುಕ್ತಮಕ್ಕುಂ.

## ೧೬. ತೂಕದಪ್ರಮಾಣ

ಬಳಿಕ ಹತ್ತಣ ತೂಕಮೊಂದು ಗದ್ಯಾಣ, ಅದು ನಾಲ್ಕಾಗಲೊಂದು ಕರ್ಷ, ಅದುನಾಲ್ಕಾಗಲೊಂದು ಹಲ, ಅದು ಇಪ್ಪತ್ತಾಗಲು ಒಂದು ಬೆಸಿಗೆ. ಇದು ಐದಾಗಲು ಒಂದು ತೊಲೆ, ಆ ತೊಲೆ ಇಪ್ಪತ್ತಾಗಲು ಒಂದು ಭಾರ, ಆ ಭಾರ ಹತ್ತಾಗಲೊಂದು ಅಚಿತವಪುದೆಂದು ಕರ್ಪೂರಾದಿಕದ ತೂಕಮಂ ಪ್ರಮಾಣಿಸಿ ಬಳಿಕೊಂದು ಸೊಲಿಗೆಯೇ ನಿಕುಂಜ, ಅದು ನಾಲ್ಕಾಗಲೊಂದು

ಕುಡಬ, ಅದು ನಾಲ್ಕಾಗಲೊಂದು ಪ್ರಸ್ಥ, ಆ ಪ್ರಸ್ಥ ಎರಡಾಗೆ ವಾಹ, ಅದೆರ ಡಾಗಲು ಒಂದು ಆಢಕ, ಅದು ನಾಲ್ಕಾಗೆ ಒಂದು ದ್ರೋಣ, ಅದು ಐದಾಗಲು ಒಂದು ಖಾರ್ಯೆಯಹುದೆಂದು ಧಾನ್ಯಾದಿಗಳಳತೆಗಳಿಗುಪಯುಕ್ತಮಕ್ಕುಂ.

## ೧೭. ಹದಿನೆಂಟು ಪುರಾಣ

ಅನಂತರದಲ್ಲಿ ಬ್ರಹ್ಮಪುರಾಣ ಪದ್ಮಪುರಾಣ ವೈಷ್ಣವಪುರಾಣ ಶೈವ ಪುರಾಣ ಭಾಗವತಪುರಾಣ ನಾರದೀಯಪುರಾಣ ಮಾರ್ಕಂಡೇಯಪುರಾಣ ಆಗ್ನೇಯಪುರಾಣ ಭವಿಷ್ಯತ್ಪುರಾಣ ಬ್ರಹ್ಮವೈವರ್ತಪುರಾಣ ಲೈಂಗಪುರಾಣ ವಾರಾಹಪುರಾಣ ಸ್ಕಾಂದಪುರಾಣ ವಾಮನಪುರಾಣ ಕೂರ್ಮಪುರಾಣ ಮತ್ಸ್ಯ ಪುರಾಣ ಗಾರುಡಪುರಾಣ ಬ್ರಹ್ಮಾಂಡಪುರಾಣವೆಂಬವೇ ಶಿವಪ್ರಸಾದದಿಂವ್ಯಾಸ ಋಷೀಶ್ವರೋಕ್ತಮಾದ ವೇದದ ನಷ್ಟಶಾಖಾರ್ಥ ಪ್ರತಿಪಾದಕಮಪ್ಪ ನಾಲ್ಕು ಲಕ್ಷ ಗ್ರಂಥ ಸಂಖ್ಯೆಯುಳ್ಳ ಹದಿನೆಂಟು ಮೂಲಪುರಾಣಂಗಳವುಗಳೊಳಗೆ ಸ್ಕಾಂದ ಶೈವ ಲೈಂಗ ಕೂರ್ಮ ವಾಮನ ವರಾಹ ಭವಿಷ್ಯತ್ತು ಮಾತ್ಸ್ಯ ಮಾರ್ಕಂಡೇಯ ಬ್ರಹ್ಮಾಂಡವೆಂಬ ಹತ್ತು ಶಿವಪುರಾಣಂಗಳು. ನಾರದೀಯ ಭಾಗವತ ಗಾರುಡ ವೈಷ್ಣವ ಪುರಾಣಗಳೆಂಬ ನಾಲ್ಕೇ ವಿಷ್ಣುಪುರಾಣಂಗಳು. ಬ್ರಹ್ಮ ಪದ್ಮವೆರಡೇ ಬ್ರಹ್ಮಪುರಾಣಂಗಳು. ಬ್ರಹ್ಮವೈವರ್ತವೊಂದೇ ಸೂರ್ಯ ಪುರಾಣವಹುದು. ಆಗ್ನೇಯುವೆಂಬುದೊಂದೇ ಅಗ್ನಿಪುರಾಣಮಹುದು. ದೇವತೆ ಗಳ ತಾರತಮ್ಯವನೀ ಪುರಾಣಂಗಳ ಕುಂದು ಹೆಚ್ಚುಗಳಿಂದಲೇ ನಿಶ್ಚಯಿಸಲ್ವೇ ಳ್ಕುಂ. ಮತ್ತಮಾ ಪುರಾಣಂಗಳಲ್ಲಿ ಸರ್ಗ ಪ್ರತಿಸರ್ಗ ವಂಶ ಮನ್ವಂತರ ವಂಶಾನುಚರಿತಂಗಳೆಂಬ ಪಂಚಲಕ್ಷಣಂಗಳುಂ ಸಮಸ್ತ ವೈದಿಕ ತಾಂತ್ರಿಕ ಧರ್ಮಂಗಳುಂ ವಿದಿತಂಗಳಕ್ಕುಂ.

## ೧೮. ಉಪಪುರಾಣಂಗಳು

ಬಳಿಕ ಪುರಾಣಂಗಳಿಗೆ ಸನತ್ಕುಮಾರ ಪುರಾಣ ನಾರಸಿಂಹ ಪುರಾಣ ನಂದಿ ಪುರಾಣ ಶಿವಧರ್ಮಪುರಾಣ ದೂರ್ವಾಸಪುರಾಣ ನಾರದೀಯಪುರಾಣ ಕಪಿಲ ಪುರಾಣ ಮಾನವಪುರಾಣ ಉಶನಃಪುರಾಣ ಬ್ರಹ್ಮಾಂಡಪುರಾಣ ವಾರುಣ ಪುರಾಣ ಕಾಳೀಪುರಾಣ ವಾಸಿಷ್ಠಲೈಂಗಪುರಾಣ ಸಾಂಬಪುರಾಣ ಸೌರ ಪುರಾಣ ಪರಾಶರಪುರಾಣ ಮರೀಚಿಪುರಾಣ ಭಾರ್ಗವಪುರಾಣವೆಂಬವೇ

ಆಯಾ ನಾಮಧೇಯಮುಳ್ಳವರಿಂ ನಿರೂಪಿತಮಾದ ೧೮ ಉಪಪುರಾಣಂಗಳು. ಅವುಗಳಲ್ಲಿ ವೈದಿಕ ಧರ್ಮಾದಿಕವೇ ಪ್ರತಿಪಾದ್ಯಮಕ್ಕುಂ.

## ೧೯. ಇತಿಹಾಸ

ಬಳಿಕ ಭಾರತ ರಾಮಾಯಣವೆಂಬೆರಡೇ ವ್ಯಾಸ ವಾಲ್ಮೀಕಿಗಳಿಂ ಪ್ರಣೀತಮಾದಿತಿಹಾಸಂಗಳು. ಅವುಗಳಲ್ಲಿ ಸತ್ವಾದಿಗುಣ ವಿಭೇದಂಗಳಂ ತ್ರಿದೇವತಾ ಲಕ್ಷಣಂಗಳಂ ದೇವ ದಾನವಾದಿ ಜನನ ಕ್ರಮಂಗಳಂ ಯುಧಿಷ್ಠಿರ ರಾಮ ಚಂದ್ರಾದಿ ರಾಜವೃತ್ತಾಂತಂಗಳಂ ವೈದಿಕಧರ್ಮಾದಿಗಳಂ ದೃಢೀಕರಿಸು ತಿರ್ಕುಂ.

## ೨೦. ಚಾರ್ವಾಕಶಾಸ್ತ್ರ

ಅನಂತರದಲ್ಲಿ ಬೃಹಸ್ಪತಿ ಅರ್ಹತ ಸುಗತರೆಂಬವರಿಂ ಕ್ರಮದಿಂ ಅವೈದಿಕ ಶಾಸ್ತ್ರಂಗಳಲ್ಲಿ ಪೇಳಲ್ಪಟ್ಟ ಚಾರ್ವಾಕ ತಂತ್ರವೇ ಪೃಥಿವ್ಯಾದಿಚತುರ್ಭೂತ ವಿಕಾರಮಾದ ಜಗತ್ತಿನಲ್ಲಿ ಸುಖವೇ ಸ್ವರ್ಗ ದುಃಖವೇ ನರಕವಲ್ಲದೆ ಬೇರೆ ಸ್ವರ್ಗ ನರಕಂಗಳಿಲ್ಲವೆಂದು ಪೇಳುವದು. ಜೈನವೇ ಸಿದ್ಧ ಬುದ್ಧ ನಾರಕಿಗಳು ಎಂಬ ಪುರುಷತ್ರಯ ಲಕ್ಷಣಂಗಳಂ ಓಡ್ಡೀಶ ಓಡ್ಡಾಮರೇಶ್ವರ ಜ್ವಾಲಾನಿ ಕಲ್ಪ ಪದ್ಮಾವತಿಕಲ್ಪ ಶಾರದಾಕಲ್ಪ ಕುಕ್ಕುಟನಾಥಾದಿ ಕಲ್ಪಂಗಳಂ ಮಂತ್ರೌಷಧಾದಿ ಪ್ರಯೋಕ್ತೃಗಳಾದ ಪರಮಸಿದ್ಧರುಗಳಂ, ಲೂನಕೇಶ ದಿಗಂಬರ ಪಾಣಿಪಾತ್ರ ಮಯೂರಪಿಂಛ ಪಂಚಮಲ ಧಾರಣಾದಿಗಳಂ, ಹುಸಿ ಕಳವು ಪರದಾರ ಅತಿಕಾಂಕ್ಷೆ ಹಿಂಸೆಗಳಿಲ್ಲದ ಪಂಚಾಣುವ್ರತಂಗಳಂ, ಮಧು ಪಲಾಂಡು ಮೊದಲಾದ ನಿಷಿದ್ಧದ್ರವ್ಯಂಗಳಂ ಬಿಟ್ಟು, ತಪ್ತಶಿಲಾಶಯ ನಾದಿಗಳಿಂದುಗ್ರತ ಪವನಾಚರಿಸುವ ಮುನಿವ್ರತಗಳಂ, ಹೇಮಚಂದ್ರ, ನಾಗಚಂದ್ರ, ನೇಮಿಚಂದ್ರ ಮೇಘಚಂದ್ರ ಮಾಘಚಂದ್ರ ಅರ್ಹತ ಆದಿನಾಥ ಅಗ್ಗಳ ಪಾರ್ಶ್ವನಾಥಸೌಗತ ಶೃತಿಕೀರ್ತಿ ಶ್ರೀಮತಿ ಕಾಮರಹಿತ ಮುನಿಸ್ವಾಮಿಗಳೆಂಬ ಚತುರ್ದಶ ತೀರ್ಥಂಕರ ಚರಿತ್ರೆಗಳಂ, ಸ್ಯಾದಸ್ತಿ, ಸ್ಯಾನ್ನಾಸ್ತಿ, ಎಂಬಿವು ಮೊದಲಾದ ಸಪ್ತಭಂಗಿ ಗಳಂ, ಜೀವ ಸಜೀವ ನಿರ್ಜೀವ ನಿರ್ಜರ ಆಶ್ರವ ಬಂಧ ಮೋಕ್ಷವೆಂಬ ಸಪ್ತಪದಾರ್ಥಗಳಂ ಪ್ರತಿಪಾದಿಸುವದು.

## ೨೧. ಬೌದ್ಧ

ಬೌದ್ಧವೇ ಭೂಮ್ಯಾದಿ ಬುದ್ಧಿಕಡೆಯಾದ ತ್ರಯೋವಿಂಶತಿತತ್ವಾತ್ಮಕ

ಪ್ರಪಂಚವೆಲ್ಲಂ ದೀಪಜ್ವಾಲೆಗಳಂತೆ ಕ್ಷಣಿಕವೆಂದು ಸಂವಾದಿಸುತ್ತದೆ. ಸೌತ್ರಾಂತಿಕ ವೈಭಾಷಿಕ ಮಹಾಯಾನಕ ಸಂಸ್ಕೃತವೆಂದು ನಾಲ್ಕುತೆರನಾಗಿರ್ಕುಂ.

## ೨೨. ಕೌಳಯಾಮಳ

ಬಳಿಕ ಸತ್ಯನಾಥ ಸತೋಕನಾಥ ಆದಿನಾಥ ಅನಾದಿನಾಥ ಅಕುಳಿತನಾಥ ಮಾತಂಗನಾಥ ಮಚ್ಛೇಂದ್ರನಾಥ ಘಟಯಂತ್ರನಾಥ ಗೋರಕ್ಷನಾಥರೆಂಬ ನವನಾಥ ಸಿದ್ಧರಿಂ ಕಲ್ಪಿತಮಾದ ಕೌಳಯಾಮಳಾದಿಗಳೇ ಹಿಂಸಾಮೈಥುನಾದಿ ನಿಷಿದ್ಧ ಕರ್ಮಂಗಳುಳ್ಳ ಶಾಸ್ತ್ರಾಂತರಂಗಳವುಗಳಲ್ಲಿ ಅಭಿಚಾರ ಕರ್ಮಜನಿತ ವ್ಯಾಧ್ಯಾದಿದ್ವಾರದಿಂ ಅಕಾಲಮೃತಿರೂಪಮರಣವೆಂಬ; ಸುಪ್ತಿ ವಿಷ ಮೂರ್ಛೆ ಅದೃಶ್ಯಕರಣ ಲಕ್ಷಣ ಮೋಹನವೆಂಬ; ಅಗ್ನಿಸ್ತಂಭ, ಜಲಸ್ತಂಭ, ಇಂದ್ರಿಯ ಸ್ತಂಭ, ಖಡ್ಗಸ್ತಂಭ, ಜಿಂಹಾಸ್ತಂಭ, ಗತಿಸ್ತಂಭಾದಿ ರೂಪಸ್ತಂಭವೆಂಬ; ಪೂರ್ವ ಸುಖಾಶ್ರಯನಿರಸನಾತ್ಮಕೋಚ್ಚಾಟನವೆಂಬ; ವಸ್ತ್ರಾಭರಣ ವಾಹನ ವನಿತಾದಿ ವಸ್ತು ನಿಜಸ್ಥಾನಾಗತಿಲಕ್ಷಣಾಕರ್ಷಣವೆಂಬ; ಪ್ರಾಣಸ್ನೇಹಿತಾನ್ಯೋನ್ಯ ವಿರೋಧಕರಣಾತ್ಮಕ ವಿದ್ವೇಷಣವೆಂಬ ಷಟ್ಕರ್ಮಗಳಂ: ರಾಜವಶ್ಯ, ಜನವಶ್ಯ, ಸ್ತ್ರೀ ವಶ್ಯಂಗಳಂ; ಜ್ವರ, ಭೂತಗ್ರಹಾವೇಶಂಗಳಂ; ಪಾದುಕಾಸಿದ್ಧಿ, ಅಂಜನಸಿದ್ಧಿ, ಘುಟಿಕಾಸಿದ್ಧಿ, ಮೂಲಿಕಾಸಿದ್ಧಿ, ರಸವಾದ ಸಿದ್ಧ್ಯಾದಿಗಳಂ ಸಾಧಿಸುತಿರ್ಕುಂ.

## ೨೩. ಶಾಕ್ತೇಯ ಪಾಂಚರಾತ್ರಗಳು

ಬಳಿಕ ಶಕ್ತಿತತ್ವವಾಸಿಯಾದೋರ್ವಾತ್ಮನಿಂ ಮತ್ತು ವಾಸುದೇವನಿಂ ಕ್ರಮದಿಂದುಕ್ತಮಾದ ಶಾಕ್ತೇಯಪಾಂಚರಾತ್ರಗಳೆಂಬವೇ ಶಾಸ್ತ್ರಾಂತರದ್ವಯ ವದರಲ್ಲಿ ಶಾಕ್ತೇಯವು ಜಡಾಜಡ ಪ್ರಪಂಚವೆಲ್ಲವಂ ಶಕ್ತಿಪರಿಣಾಮವೆಂಬುದು ಮೊದಲಾದವಂ ವಿಸ್ತರಿಸುವುದು. ಪಾಂಚರಾತ್ರವು ಪೃಥಿವ್ಯಾದಿ ಮಾನಸಾಂತ ಮಾದ ಚತುರ್ವಿಂಶತಿ ತತ್ವಂಗಳಂ ಮೇಲೆ ಗುಣಮೂಲತತ್ವಾತ್ಮಕ ವಾಸು ದೇವನಿಂ ಜಗದ್ಧಿತಾರ್ಥಮಾಗಿ ಸಂಕರ್ಷಣ, ಅನಿರುದ್ಧ, ಪ್ರದ್ಯುಮ್ನ, ಕೃಷ್ಣ ರೆಂಬ ಚತುರ್ವ್ಯೂಹಗಳ ಉತ್ಪತ್ತಿಮೊದಲಾದವುಗಳಂ ಸಂಪಾದಿಸುತಿರ್ಕುಂ.

### ೨೪. ಸಾಧಾರಣ ಶಾಸ್ತ್ರಪಂಚಕ

ಬಳಿಕ ಲೌಕಿಕ, ವೈದಿಕ, ಅಧ್ಯಾತ್ಮಿಕ, ಅತಿಮಾರ್ಗಿಕ, ಮಂತ್ರಗಳೆಂಬ ಪಂಚವಿಧ ಶಾಸ್ತ್ರಂಗಳು ಕ್ರಮದಿಂ ಪೇಳಲ್ಪಡುವವು.

### ೨೫. ಲೌಕಿಕ ಶಾಸ್ತ್ರ

ಲೌಕಿಕಶಾಸ್ತ್ರವುಧನ್ವಂತರಿಪ್ರಮುಖರಿಂದುಕ್ತಮಾದ ಆಯುರ್ವೇದ ದಂಡ ನೀತಿ ಶಿಲ್ಪ ಮೊದಲಾದುವುಗಳಿಂ ಸಾಧಾರಣವಾಗಿ ದೃಷ್ಟಫಲಂಗಳಂ ನಿರ್ಧರಿಸುತಿಪ್ಪುದು.

### ೨೬. ವೈದಿಕ ಶಾಸ್ತ್ರ

ಬಳಿಕ ಜೈಮಿನಿ ಅಕ್ಷಪಾದ ಕಣಾದರೆಂಬ ಋಷೀಶ್ವರರಿಂ ಕ್ರಮದಿಂದುಕ್ತಮಾದ ಪೂರ್ವಮೀಮಾಂಸೆ ನ್ಯಾಯ ವೈಶೇಷಿಕಗಳೆಂಬ ದೃಷ್ಟಾದೃಷ್ಟ ಫಲಂಗಳುಳ್ಳವೇ ವೈದಿಕಶಾಸ್ತ್ರತ್ರಯಮೆನಿಸಿವುದು.

### ೨೭. ಪೂರ್ವಮೀಮಾಂಸೆ

ಅದರೊಳ್ ಪೂರ್ವಮೀಮಾಂಸೆಯು ತಾತ್ಪರ್ಯನಿರ್ಣಾಯಕಮಾದ ಉಪಕ್ರಮಾದಿ ಷಡ್ವಿಧಲಿಂಗಗಳಿಂ ವೇದವಾಕ್ಯ ವಿಚಾರಪೂರ್ವಕವಾಗಿ ಜ್ಯೋತಿಷ್ಟೋಮಾದಿ ಯಾಗ ಪ್ರಮುಖ ವಿಧಾನಕ್ರಮವಂ ನಿರ್ವಹಿಸುವದರಿಂ ಕರ್ಮಕಾಂಡಮೆನಿಸುವದು.

### ೨೮. ವೈದಿಕನ್ಯಾಯಶಾಸ್ತ್ರ

ಗೌತಮೋಕ್ತನ್ಯಾಯವು ಪ್ರಮಾಣ ಪ್ರಮೇಯ ಸಂಶಯ ಪ್ರಯೋಜನ ದೃಷ್ಟಾಂತ ಸಿದ್ಧಾಂತ ಅವಯವ ತರ್ಕ ನಿರ್ಣಯ ವಾದ ಜಲ್ಪ ವಿತಂಡ ಹೇತ್ವಾಭಾಸ ಛಲ ಜಾತಿ ನಿಗ್ರಹಸ್ಥಾನಂಗಳೆಂಬ ಷೋಡಶಪದಾರ್ಥಂಗಳಂ ನಿರೂಪಿಸುತ್ತಲೀ ಪ್ರಪಂಚಕ್ಕೆ ಪರಮೇಶ್ವರ ಕರ್ತೃಕತ್ವಮಂ ನಿಶ್ಚಯಿಸುವದು.

### ೨೯. ವೈದಿಕ ವೈಶೇಷಿಕಶಾಸ್ತ್ರ

ಕಾಣಾದವೆಂಬ ವೈಶೇಷಿಕಶಾಸ್ತ್ರವೇ ದ್ರವ್ಯ ಗುಣ ಕರ್ಮ ಸಾಮಾನ್ಯ ವಿಶೇಷ ಸಮವಾಯ ಅಭಾವಗಳೆಂಬ ಪದಾರ್ಥಸಪ್ತಕಮಂ ಪ್ರತಿಪಾದಿಪುದರಿಂ ಪ್ರಪಂಚಸ್ವರೂಪಮಂ ವಿವರಿಸಿ ವಿಭಾಗಿಸುತಿರ್ಕುಂ.

### ೩೦. ಅಧ್ಯಾತ್ಮ ಶಾಸ್ತ್ರತ್ರಯ

ಬಳಿಕ ಕಪಿಲ ಪತಂಜಲ ವ್ಯಾಸರೆಂಬ ಮುನಿಗಳಿಂ ಕ್ರಮದಿಂ ನಿರೂಪಿತಗಳಾದ ಸಾಂಖ್ಯ ಪಾತಂಜಲ ವೇದಾಂತಗಳೆಂಬ ಸಾಂಖ್ಯಸೂತ್ರ ಯೋಗಸೂತ್ರ ಬ್ರಹ್ಮಸೂತ್ರತ್ರಯವೇ ಸಭಾಷ್ಯಪ್ರಕರಣ ಟೀಕಾಪರಿಪ್ಲುತವಾಗಿ ಸ್ವಾತ್ಮ ಜ್ಞಾನಫಲೀಭೂತ ಮೋಕ್ಷಪ್ರತಿಪಾದಕವಾಗಿರುವದರಿಂದ ಅಧ್ಯಾತ್ಮ ಶಾಸ್ತ್ರತ್ರಯವೆನಿಸುವುದು.

### ೩೧. ಸಾಂಖ್ಯಶಾಸ್ತ್ರ

ಸಾಂಖ್ಯವು ನಿತ್ಯ ನಿರ್ಲಿಪ್ತಾತ್ಮ ಸನ್ನಿಧಾನದಿಂ ಗುಣತ್ರಯಾತ್ಮಕ ಪ್ರಕೃತಿಕರ್ತೃಕಮಹದಾದಿಪಂಚವಿಂಶತಿತತ್ವಾತ್ಮಕ ಪ್ರಪಂಚವಾಗಿ ವ್ಯವಹರಿಸುವದೇ ಸಂಸಾರಬಂಧವೆಂಬುದರಿಂ ಸತ್ವಾದಿ ಗುಣತ್ರಯಾನುಕ್ರಮದಿಂ ಶ್ಲೇಷ್ಮಪ್ರಕೃತಿ ಪಿತ್ತಪ್ರಕೃತಿ ವಾತಪ್ರಕೃತಿಗಳುಳ್ಳ ಶಾಂತ ಕ್ರೋಧ ಮೂಢತ್ವಾಧಿ ಪ್ರಧಾನ ಗುಣಗಳಾದ ಉತ್ತಮ ಮಧ್ಯಮ ಅಧಮ ಪುರುಷತ್ರಯದ ವರ್ಣ ರೀತಿ ಮೊದಲಾದವುಗಳಂ ಭಾವಿಸುವದು,

### ೩೨. ಪಾತಂಜಲಶಾಸ್ತ್ರ

ಪಾತಂಜಲವು ಯಮಾದ್ಯಷ್ಟಾಂಗಯೋಗ ಸಾಧನದಿಂ ಮನೋನಿಶ್ಚಲತೆಯಂ ನಿಶ್ಚಲಪರಿಪಕ್ವಾಂತಃಕರಣಂಗೆ ಮೋಕ್ಷಸಿದ್ಧಿಯಂ ಬೋಧಿಸಿ ಸಾಧಿಸುವದು.

### ೩೩. ಉತ್ತರಮೀಮಾಂಸೆ

ಉತ್ತರಮೀಮಾಂಸೆಯು ಸರ್ವೋಪನಿಷದರ್ಥ ಪ್ರತಿಪಾದಕಮಾದ ವೇದಾಂತಶಾಸ್ತ್ರವೆಂತಲೂ ಬ್ರಹ್ಮವಿದ್ಯೆಯೆಂತಲೂ ಪಾರಂಪರ್ಯ ಪ್ರಸಿದ್ಧಮಾಗಿ ದ್ವೈತಪ್ರಪಂಚಕ್ಕೆ ಮಿಥ್ಯಾತ್ಮವಂ ಸಾಧಿಸುವದರಿಂ ದ್ವೈತಾಭಾವೋಪ ಲಕ್ಷಿತ ಬ್ರಹ್ಮಾತ್ಮೈಕ್ಯವಂ ಉಪದೇಶಿಪುದಾಗಿ ಜ್ಞಾನಿಗಳಿಗಭಿಮತಮಾಗಿರ್ಪುಂ.

### ೩೪. ಅಧ್ಯಾತ್ಮಮತಭೇದ

ಭಾಸ್ಕರೀಯ ಮಾಯಾವಾದ ಶಬ್ದಬ್ರಹ್ಮವಾದ ಕ್ರೀಡಾಬ್ರಹ್ಮವಾದವೆಂದು ಸಾಮಾನ್ಯತಃನಾಲ್ಕು ತೆರನಾಗಿಯುಂ, ಅನಿರ್ವಚನೀಯಖ್ಯಾತಿಮುಂತಾದ ತತ್ತದನುಭವಗಳಿಂ ಸಂವಳಿತವಾಗಿಯುಂ ಪ್ರಚುರಗೊಂಡಿರ್ಪುದು.

### ೩೫. ಅತಿಮಾರ್ಗಿಕಶಾಸ್ತ್ರ

ಬಳಿಕ ಮಾಯಾತತ್ವ ವಿದ್ಯಾತತ್ವ ಕಾಲತತ್ವ ತ್ರಿಪಾದಿಗಳಾದ ರುದ್ರ ರಿಂ ವಿರಚಿತಂಗಳಾದ ಪಾಶುಪತ ಕಾಪಾಲಿಕ ಮಹಾವ್ರತಂಗಳೆಂಬವೇ ಅತಿ ಮಾರ್ಗಿಕ ಶಾಸ್ತ್ರತ್ರಯಮಾಗಿರ್ಪುದು. ಅದರೊಳ್ ಪಾಶುಪತವು ಮಾಯಾ ಕರ್ಮನಾಮಕ ಪಾಶದ್ವಯಾದಿಗಳಂ ನಿರ್ವಹಿಸುವುದು. ಕಾಪಾಲಿಕವು ನರ ಕಪಾಲ ಭಿಕ್ಷಾಟನಾದಿಗಳಂ ವರ್ಣಿಸುವುದು. ಮಹಾವ್ರತವು ಅಸ್ಥಿಧಾರಣಾದಿ ಗಳಂ ವಿವರಿಪ್ಪುದು.

### ೩೬. ಮಾಂತ್ರಿಕಶಾಸ್ತ್ರ

ಬಳಿಕ ಪರಶಿವಪ್ರಣೀತಮಾದ ಮಾಂತ್ರವೇ ಮೋಕ್ಷಾಂಗಮಾದ ಕ್ರಿಯೆ ಚರ್ಯೆ ಯೋಗ ಜ್ಞಾನಾದಿಗಳಂ ಪ್ರಮಾಣಿಸುತಿರ್ಕುಂ.

### ೩೭ ಆತ್ಮಪ್ರತಿಪಾದನೆ

ಮತ್ತಮಾ ಸಮಸ್ತ ಮತಾಂತರಂಗಳಲ್ಲಿ ಪೇಳುವಾತ್ಮಸ್ವರೂಪವೆಂತೆನೆ– ದೇಹವೇ ಆತ್ಮಸ್ವರೂಪವೆಂಬರು ಚಾರ್ವಾಕರು. ಇಂದ್ರಿಯಂಗಳೇ ಆತ್ಮನೆಂ ಬರು ಚಾರ್ವಾಕೈಕದೇಶಿಗಳು. ಪ್ರಾಣವೇ ಆತ್ಮನೆಂಬರು ಹಿರಣ್ಯಗರ್ಭೋಪಾಸ ಕರು. ದೇಹಾಗಿ ವಿಲಕ್ಷಣನಾದಾತ್ಮನು ದೇಹಪರಿಮಿತನಾಗಿ ಮಧ್ಯಮಪರಿಮಾ ಣದಿಂ ಸಂಕೋಚ ವಿಕಾಸ ಧರ್ಮಯುಕ್ತನೆಂಬರು ಜೈನರು. ಬುದ್ಧಿಯೇ ಆತ್ಮನೆಂಬರು ಬೌದ್ಧರು. ಆನಂದಮಾತ್ರವಂ ಆತ್ಮನೆಂಬರು ಕೌಳಯಾಮಳ ಶಾಕ್ತೇಯರುಗಳು. ಆತ್ಮನು ನಾಡೀಮಧ್ಯಗತನಾಗಿ ಅಣುಪರಿಮಾಣನೆಂಬರು ಪಾಂಚರಾತ್ರರು. ಆತ್ಮನು ದೇಹಪುತ್ರಾದಿ ರೂಪನೆಂಬರು ಲೌಕಿಕರು. ಆತ್ಮನು ಸ್ವತಃ ಪ್ರಮಾಣಜ್ಞಾನ ಸಮೇತರೆಂಬರು ಮೀಮಾಂಸಕ ಭೇದ ಮಾದ ಭಾಟ್ಟ ಪ್ರಾಭಾಕರರುಗಳು. ಆತ್ಮನು ಗಗನದಂತೆ ಮಹತ್ಪರಿಮಾಣ ನಾಗಿ ಪಾಷಾಣದಂತೆ ಜಡರೂಪನಾದೊಡಂ ಮನಸ್ಸಂಯೋಗದಿಂ ಚಿದ್ಧ ರ್ಮಯುಕ್ತನೆಂಬರು ನೈಯಾಯಿಕ ವೈಶೇಷಿಕರುಗಳು. ಆತ್ಮನು ಅಸಂಗಚಿ ನ್ಮಾತ್ರನೆಂಬರು ಸಾಂಖ್ಯ ಪಾತಂಜಲರುಗಳು. ಆತ್ಮನು ಜ್ಞಪ್ತಿ ಸತ್ತಾಮಾತ್ರ ಶುದ್ಧಾದ್ವಿತೀಯನೆಂಬರು ವೇದಾಂತಿಗಳು. ಆತ್ಮನು ನಿತ್ಯ ವ್ಯಾಪಕಚೈತನ್ಯ ರೂಪನೆಂಬರು ಪಾಶುಪತ ಕಾಪಾಲಿಕ ಮಹಾವ್ರತರುಗಳು. ಆತ್ಮನು ನಿತ್ಯ ವ್ಯಾಪಕ ಜ್ಞಾನ ಕ್ರಿಯಾರೂಪನೆಂಬರು ಮಾಂತ್ರಸಂಜ್ಞಕ ಸಿದ್ಧಾಂತಿಗ ಳೆಂದು ಪೃಥಕ್ಕರಿಸಲ್ಪೇಳ್ಕುಂ.

## ೩೮. ಮೋಕ್ಷಪ್ರತಿಪಾದನೆ

ಮತ್ತಮಾ ಸಕಲ ವಾದಿಗಳಿಂ ಪ್ರತಿಪಾದಿಸಲ್ಪಟ್ಟ ಮೋಕ್ಷಮೆಂತೆನೆ-ಮರಣವೇ ಮೋಕ್ಷಮೆಂಬರು ಚಾರ್ವಾಕರು. ಅಲೌಕಿಕಾಕಾಶಮಧ್ಯದೊಳು ಉತ್ತರೋತ್ತರಗಮನವೇ ಮೋಕ್ಷವೆಂಬರು ಜೈನರು. ಸುಖ ದುಃಖಾದಿಗಳ ಸೋಂಕಿಲ್ಲದ ಶುದ್ಧಬುದ್ಧಿ ಸಂಸಕ್ತಿಯೇ ಮೋಕ್ಷಮೆಂಬರು ಬೌದ್ಧರು. ಆಕಾಶ ಗಮನಾದಿ ಸಿದ್ಧಪ್ರಾಪ್ತಿಯೇ ಮೋಕ್ಷಮೆಂಬರು ಕೌಳಯಾಮಳರುಗಳು. ಆನಂದಪ್ರಾಪ್ತಿಯೇ ಮೋಕ್ಷವೆಂಬರು ಶಾಕ್ತೇಯರು. ವಾಸುದೇವಾತ್ಮಕ ಪ್ರಕೃತಿಯಲ್ಲಿ ಸ್ವರೂಪಹಾನಿಯಿಲ್ಲದಡಗಿಹುದೇ ಮೋಕ್ಷವೆಂಬರು ಪಾಂಚರಾತ್ರರು. ಇಹ ಪರಂಗಳಲ್ಲಿ ಪುತ್ರ ಭಾರ್ಯಾದಿಗಳೊಡಗೂಡಿ ವ್ಯಾಧ್ಯಾದಿ ದುಃಖವಿಲ್ಲದ ಸುಖದಿಂದುಹುದೇ ಮೋಕ್ಷವೆಂಬರು ಲೌಕಿಕರು. ಸ್ವರ್ಗಾದಿಪದಪ್ರಾಪ್ತಿಯೇ ಮೋಕ್ಷವೆಂಬುವರು ಪೂರ್ವಮೀಮಾಂಸಕರು. ಆತ್ಮಶರೀರೇಂದ್ರಿಯಾದಿಕವೆಂಬ ಇಪ್ಪತ್ತೊಂದು ದುಃಖಗಳ ಅತ್ಯಂತನಾಶದಿಂ ಪಾಷಾಣ ಪ್ರಾಯನಾಗಿಹುದೇ ಮೋಕ್ಷವೆಂಬುವರು ನೈಯಾಯಿಕ ವೈಶೇಷಿಕರುಗಳು. ಪ್ರಕೃತಿಪುರುಷವಿವೇಕದಿಂದ ಅವಿದ್ಯಾ ನಾಶವೇ ಮೋಕ್ಷವೆಂಬುವರು ಸಾಂಖ್ಯರು. ಯೋಗಾಭ್ಯಾಸಬಲದಿಂ ಮನೋಲಯದ್ವಾರದಿಂದ ಅಜ್ಞಾನವಳಿವುದೇ ಮೋಕ್ಷವೆಂಬುವರು ಪಾತಂಜಲರು. ಚಿನ್ಮಾತ್ರ ಬ್ರಹ್ಮಾತ್ಮೈಕ್ಯತ್ವಜ್ಞಾನದಿಂ ವ್ಯಾವಹಾರಿಕವಾದ ದ್ವೈತಬಂಧನಿವೃತ್ತಿಯೇ ಮೋಕ್ಷಮೆಂಬುವರು ವೇದಾಂತಿಗಳು. ಪ್ರವಾಹೇಶ್ವರತ್ವದಿಂದೀಶ್ವರತ್ವವನನ್ಯಗ್ಗಿತ್ತು, ಆತ್ಮನು ಜ್ಞಪ್ತಿಮಾತ್ರನಾಗಿರ್ಪುದೇ ಮೋಕ್ಷವೆಂಬುವರು ಪಾಶುಪತರು. ಕರ್ತೃತ್ವಾಭಿಮಾನವೇ ಸಂಸಾರವಪ್ಪುದರಿಂದದನುಳಿದು ಜ್ಞಪ್ತಿಮಾತ್ರದಿಂದಿಹುದೇ ಮೋಕ್ಷಮೆಂಬುವರು ಕಾಪಾಲಿಕ ಮಹಾವ್ರತರುಗಳು. ಆತ್ಮಂಗೆ ಷಡಧ್ವಾತೀತ ಶಿವಸಮಾನತ್ವವೇ ಮೋಕ್ಷಮೆಂಬುವರು ಸಿದ್ಧಾಂತಿಗಳೆಂದು ವಿವೇಕಿಸೆ ಪೇಳ್ಕುಂ.

## ೩೯. ಮತಾಂತರಭೇದ

ಬಳಿಕ ವಾದಿಗಳಲ್ಲಿ ಚಾರ್ವಾಕ ಜೈನ ಬೌದ್ಧ ಮೀಮಾಂಸಕ ಸಾಂಖ್ಯರೆಂಬರೈವರೇ ನಿರೀಶ್ವರವಾದಿಗಳು. ಮಿಕ್ಕವರೆಲ್ಲರೂ ಸೇಶ್ವರವಾದಿಗಳು. ಮತ್ತಮಾವಾದಿಗಳಲ್ಲಿ ಚಾರ್ವಾಕಾದಿ ವಾದಿಗಳೆಲ್ಲರೂ ಭೇದವಾದಿಗಳು. ವೇದಾಂತಿಯೋರ್ವನೇ ಅಭೇದವಾದಿಯಪ್ಪಂ.

## ೪೦. ಚತುರ್ದಶವಿದ್ಯೆಗಳು

ಬಳಿಕಿಂತುಪೇಳ್ದ ಸಕಲ ಶಾಸ್ತ್ರಂಗಳೊಳಗೆ ವೇದಗಳು ನಾಲ್ಕು, ವೇದಾಂಗಗಳಾರು, ನ್ಯಾಯ ಮೀಮಾಂಸಗಳೆರಡು, ಸ್ಮೃತಿ ಪುರಾಣಗಳೆರಡುಂ ಕೂಡಿ ಹದಿನಾಲ್ಕು ವಿದ್ಯೆಗಳೆನ್ನಿಸಿಕೊಳ್ಳುತಿರ್ಕುಂ,

## ೪೧. ಸೂತ್ರವಿಚಾರ

ಮತ್ತಮಾ ಚತುರ್ದಶ ವಿದ್ಯೆಗಳೊಳಗೆ ಮೀಮಾಂಸೆಯೆಂಬುವದೇ ಮಿಗೆ ವಿಶೇಷಮಾಗಿ ಇಪ್ಪತ್ತಧ್ಯಾಯಮೆನಿಸಿ ಕರ್ಮಾರ್ಥ ಬ್ರಹ್ಮಾರ್ಥಪ್ರತಿಪಾದಕತ್ವದಿಂ ದ್ವಿಭಾಗಮಾಗಿಹುದದರೊಳಗೆ—ಮೊದಲನೆಯ ಭಾಗವೇ ಜೈಮಿನಿ ಸೂತ್ರರೂಪದಿಂ ದ್ವಾದಶಾಧ್ಯಾಯಮೆನಿಸಿ ಕರ್ಮಾರ್ಥಪ್ರತಿಪಾದಕಮಾಗಿ ಲೋಕ ವೇದಾಧಿಕರಣಮೆಂಬುವದು ಮೊದಲಾದ ಸಹಸ್ರಾಧಿಕರಣಾತ್ಮಕ ಶಾಸ್ತ್ರನ್ಯಾಯದಿಂ ಪೂರ್ವಮೀಮಾಂಸೆಯೆನ್ನಿಸಿಕೊಂಬುವದಾ ಜೈಮಿನಿ ಸೂತ್ರಕ್ಕೆ ಶಾಬರಮೆಂಬ ಭಾಷ್ಯಮಾಡಲ್ಪಟ್ಟಿತು. ಮತ್ತಮಾ ಮೀಮಾಂಸಾ ಶಾಸ್ತ್ರಕ್ಕೆಭಟ್ಟಾಚಾರ್ಯರಿಂ ವಾರ್ತಿಕರೂಪಮಾಗಿ ಭಾಟ್ಟಮೆಂಬುವದೊಂದು ಮತಾಂತರ ರಚಿತಮಾಯಿತು. ಬಳಿಕ ಭಟ್ಟಾಚಾರ್ಯರ ಶಿಷ್ಯನಾದ ಪ್ರಭಾಕರ ಗುರುವಿನಿಂದಾ ಶಾಬರ ಭಾಷ್ಯಕ್ಕೆ ವ್ಯಾಖ್ಯಾನರೂಪಮಾಗಿ ಪ್ರಾಭಾಕರಮೆಂಬುವದೊಂದು ಮತಾಂತರ ಪೇಳಲ್ಪಟ್ಟಿತು. ಬಳಿಕೆರಡನೆಯ ಭಾಗವೇ ಬ್ರಹ್ಮಾರ್ಥಪ್ರತಿಪಾದಕತ್ವದಿಂದುತ್ತರ ಮೀಮಾಂಸೆ ಯೆನ್ನಿಸಿಕೊಂಡು ವ್ಯಾಸ ಸೂತ್ರ ರೂಪದಿಂದೆಂಟಧ್ಯಾಯಮಾಗಿಹು ದದರೊಳಗೆ ಪೂರ್ವದ ನಾಲ್ಕಧ್ಯಾಯವೇ ದೇವತಾಕಾಂಡಮೆನಿಸಿಕೊಂಬುವದದರಲ್ಲಿ ಮಂತ್ರವಾದದಂತೆ ದೇವತಾದಿಲಕ್ಷಣವೇ ಬಲಭದ್ರರಾಮನಿಂ ಪ್ರತಿಪಾದಿಸಲ್ಪಟ್ಟಿತು. ಬಳಿಕುತ್ತರಮಾದ ನಾಲ್ಕಧ್ಯಾಯವೇ ಬ್ರಹ್ಮಕಾಂಡಮೆನಿಸಿಕೊಂಬುವದಾ ಸೂತ್ರಕ್ಕೆ ವ್ಯಾಸತಾತ್ಪರ್ಯಾನುಸಾರ ಬ್ರಹ್ಮಾತ್ಮೈಕ್ಯಪ್ರತಿಪಾದಕಮಾಗಿ ಶಂಕರಗುರು ಭಗವತ್ಪಾದಾಚಾರ್ಯರಿಂದ ಅಧ್ಯಾಸಭಾಗ ಪೂರ್ವಕಮಾಗಿ ವೇದಾಂತ ಭಾಷ್ಯಂಗೈಯಲ್ಪಟ್ಟಿತು. ಬಳಿಕಾ ಭಾಷ್ಯಕ್ಕೆ ಟೀಕಾರೂಪಮಾಗಿ ವಿವರಣಾಚಾರ್ಯರಿಂ ವಿವರಣಮಾಡಲ್ಪಟ್ಟಿತು. ಮತ್ತಮಾಶಂಕರಭಾಷ್ಯಕ್ಕೆ ವೃತ್ತಿ ಪಂಚಪಾದಿಕೆ ರಾಮಾನಂದೀಯ ಬ್ರಹ್ಮವಿದ್ಯಾಭರಣ ಮುಂತಾದ ಅನೇಕ ವ್ಯಾಖ್ಯಾನಗಳು ತಚ್ಛಿಷ್ಯರಿಂ ರಚಿಸಲ್ಪಟ್ಟವಾ ಶಂಕರಭಾಷ್ಯಕ್ಕೆ ತಾತ್ಪರ್ಯಬೋಧಕಮಾಗಿ

ವಾಚಸ್ಪತಿಮಿಶ್ರರಿಂ ಭಾಮತಿಯೆಂಬ ವ್ಯಾಖ್ಯಾನಮಾಡಲ್ಪಟ್ಟಿತದಕೆ ಕಲ್ಪತರುವೆಂಬ ವ್ಯಾಖ್ಯಾನವದಕೆ ಕೌಸ್ತುಭವೆಂಬ ಟೀಕೆ ಈ ಮೇರೆ ಸಿದ್ಧಾಂತಿತಮಾದ ಗ್ರಂಥಜಾತವೇ ವೇದಾಂತ ಶಾಸ್ತ್ರಮೆನ್ನಿಸಿಕೊಳ್ಳುತಿರ್ಕುಂ.

## ೪೨. ವೇದಾಂತವಿಷಯ ಕ್ರಮ

ಅನಂತರದೊಳಾ ವೇದಾಂತಶಾಸ್ತ್ರದರ್ಥ ವಿಸ್ತಾರಮೆಂತೆಂದೊಡೆ— ಆಶೀರ್ವಾದ ನಮಸ್ಕಾರ ವಸ್ತುನಿರ್ದೇಶವೆಂಬವೇ ಶಾಸ್ತ್ರಾರಂಭದಲ್ಲಿ ಮಾಳ್ಪ ಮಂಗಲಾಚರಣತ್ರಯಮಾಗಿರ್ಕುಂ.

## ೪೩. ಸೂತ್ರಲಕ್ಷಣ

ಬಳಿಕ ಸರ್ವೋಪನಿಷದರ್ಥ ನಿರ್ಣಾಯಕಮಾಗಿ ಶ್ರುತಿ ಲಿಂಗಾದಿ ಪಾರದೌರ್ಬಲ್ಯ ಪೂರ್ವ ಪ್ರಾಬಲ್ಯಾದಿದ್ಯೋತಕತ್ವದಿಂ ಬಹ್ವರ್ಥಸೂಚಕಮಪ್ಪಂತೆ ಮಿತಾಕ್ಷರಮಾಗಿ ವಿಶ್ರುತಾಚಾರ್ಯರಿಂ ರಚಿಸಲ್ಪಟ್ಟ ವಾಕ್ಯಜಾತವೇ ಸೂತ್ರಮಾಗಿರ್ಪುದು.

## ೪೪. ಭಾಷ್ಯಲಕ್ಷಣ

ಮತ್ತಮಾ ಸೂತ್ರಕ್ಕೆ ಸೂತ್ರಾನುಕಾರಿಗಳಾದ ಪದಗಳಿಂದವಿರುದ್ಧಮಾಗಿ ಲಿಂಗಷಟ್ಕದಿಂದರ್ಥಮಂ ವಿವರಿಸುವ ಸ್ವಪದವರ್ಣನೆಯಿಂದೊಡಗೂಡಿಪ್ಪುದೇ ಭಾಷ್ಯಮಕ್ಕುಂ.

## ೪೫. ಅಧಿಕರಣಲಕ್ಷಣ

ಮತ್ತಮಾ ಭಾಷ್ಯದೊಳ್ ವಿಷಯ ಸಂಶಯ ಪೂರ್ವಪಕ್ಷ ಸಿದ್ಧಾಂತ ಸಂಗತಿಗಳೆಂಬ ಪಂಚಾವಯವಂಗಳಿಂದೊಡಗೂಡಿದ ನ್ಯಾಯವೇ ಅಧಿಕರಣಮಾಗಿಹುದು.

## ೪೬. ವ್ಯಾಖ್ಯಾನಲಕ್ಷಣ

ಮತ್ತಮಾ ಮೂಲಗ್ರಂಥಸ್ಥಮಾದ ಪದ ಪದಾರ್ಥ ವಾಕ್ಯಯೋಜನೆ ಪ್ರಶ್ನೆ ಪರಿಹಾರಗಳೆಂಬವೇ ವ್ಯಾಖ್ಯಾನ ಪಂಚಲಕ್ಷಣಂಗಳು.

## ೪೭. ಅನ್ವಯಲಕ್ಷಣ

ಬಳಿಕಾ ವ್ಯಾಖ್ಯಾನಾದಿಗಳಲ್ಲಿ ವಿಶೇಷಣ ವಿಶೇಷ್ಯ ಕರ್ತೃ ಕರ್ಮ ಕ್ರಿಯೆಗಳ ಸಂಬಂಧವೇ ಅನ್ವಯ ಪಂಚಲಕ್ಷಣಂಗಳು.

## ೪೮. ಅನುಬಂಧಚತುಷ್ಟಯ

ಬಳಿಕ ಶಾಸ್ತ್ರದೋಳ್ ವಿಷಯ ಸಂಬಂಧ ಪ್ರಯೋಜನ ಅಧಿಕಾರಿಗ ಳೆಂಬವೇ ಅನುಬಂಧಚತುಷ್ಟಯಮಾಗಿಪ್ಪು ದದರೊಳು ಜೀವ ಬ್ರಹ್ಮೈಕ್ಯವೀ ಶಾಸ್ತ್ರಕ್ಕೆ ವಿಷಯವೆನಿಸುವದು. ಬ್ರಹ್ಮಶಾಸ್ತ್ರಂಗಳಿಗೆ ಪ್ರತಿಪಾದ್ಯ ಪ್ರತಿಪಾದ ಕಭಾವವೇ ಸಂಬಂಧವೆನಿಸುವದು. ಸಕಲ ದುಃಖ ನಿವೃತ್ತ್ಯಭಿನ್ನಮಾದ ಸ್ವಸ್ವ ರೂಪಾವಸ್ಥಾನ ನಿತ್ಯಾನಂದಾತ್ಮಕ ಮೋಕ್ಷವೇ ಪ್ರಯೋಜನವೆನಿಸುವದು.

## ೪೯. ಅಧಿಕಾರಿಲಕ್ಷಣ

ಮತ್ತೀ ವೇದಾಂತ ಶ್ರವಣ ಮನನ ನಿದಿಧ್ಯಾಸನಗಳಿಗೆ ಧರ್ಮಜಿಜ್ಞಾ ಸಾಪೂರ್ವಕಮಾಗಿ ಕರ್ಮಕಾಂಡ ಸಿದ್ಧನಾದ ಸಚ್ಛ್ರೋತ್ರಿಯನೇ ಅಧಿಕಾರಿ ಯೆಂದು ಪೇಳ್ದೊಡಂ ಬ್ರಹ್ಮಜ್ಞಾನಸಾಧ್ಯಮಾದ ಮೋಕ್ಷವು ಜಾತ್ಯಾದಿ ನಿರ್ಬಂಧಗಳಿಲ್ಲದೆ ಪರಿಪಕ್ವಾಂತಃಕರಣೈಕಲಭ್ಯವಾಗಿರುವದರಿಂ ಸಾಧನ ಚತುಷ್ಟಯ ಸಂಪನ್ನನಾದವನೇ ಬ್ರಹ್ಮವಿದ್ಯೆಗೆ ಅಧಿಕಾರಿಯೆಂದು ಸಿದ್ಧಾಂತಿ ತಮಾಗಿರ್ಕುಂ.

## ೫೦. ಸಾಧನಚತುಷ್ಟಯ

ಬಳಿಕ ನಿತ್ಯಾನಿತ್ಯವಸ್ತುವಿವೇಕ, ಇಹಾಮುತ್ರಾರ್ಥ ಫಲಭೋಗವಿರಾಗ, ಶಮಾದಿಷಟ್ಕಸಂಪತ್ತಿ, ಮುಮುಕ್ಷುತ್ವವೆಂಬವೇ ಸಾಧನ ಚತುಷ್ಟಯ ಮಾಗಿರ್ಪುದದರೊಳ್ ಸಚ್ಚಿದಾನಂದರೂಪನಾದ ಆತ್ಮನೋರ್ವನೇ ನಿತ್ಯನು ; ಅನೃತ ಜಡ ದುಃಖಾತ್ಮಕಮಾದ ದ್ವೈತಪ್ರಪಂಚವೆಲ್ಲಾ ಮಿಥ್ಯೆಯೆಂದು ವಿಚಾರ ಪರೀಕ್ಷೆಗಳಿಂದ ದೃಢತರವಾಗಿ ತಿಳಿವುದೇ ನಿತ್ಯಾನಿತ್ಯವಸ್ತುವಿವೇಕವೆನಿಸು ವುದು. ಇಹಪರಂಗಳಲ್ಲಿ ಸ್ರಕ್ಚಂದನ ಧನ ವನಿತಾದಿ ವಿಷಯಂಗಳೆಲ್ಲಂ ಕರ್ಮ ಜನ್ಯಮಪ್ಪುದರಿಂದ ಅನಿತ್ಯಮಾಗಿಯುಂ, ಸಂಪಾದಿಸುವಾದಿ ಭೋಗಿಸುವಂ ತ್ಯಂಗಳಲ್ಲಿ ವಿಚಾರಿಸಲು ಕಷ್ಟಸಾಧ್ಯಮಾಗಿರುವದರಿಂ ವೈರಸ್ಯಕಾರಣವಾಗಿಯುಂ, ಅರಿಷಡ್ವರ್ಗಸನ್ನಿಹಿತಮಾಗಿ ಜ್ಞಾನ ಪ್ರತಿಬಂಧಕಮಾಗಿರುವದರಿಂ ನಿತ್ಯಾನಂದಪದಪ್ರತಿಬಂಧಕಮಾಗಿ, ಸಂಸೃತಿಯು ದುಃಖರೂಪವೆಂದರಿತು ಸ್ವವಾಂತಾಶನಮೂತ್ರ ಪುರೀಷದಂತೆ ಭೋಗದೋಳ್ ಮನವೆಳಸದೆ ಸನ್ಯಾಸಿ ಯಾಗಿಪುದೆ ಇಹಾಮುತ್ರಾರ್ಥ ಫಲಭೋಗ ವಿರಾಗವೆಂಬ ಸಾಧನವೆನಿಸು ವದು. ಶಮ ದಮ ತಿತಿಕ್ಷೆ ಸಮಾಧಾನ ಶ್ರದ್ಧಾ ಭಕ್ತಿಗಳಾರುಂ ಶಮಾದಿ

ಷಟ್ಕಮೆನಿಸುವದು. ಅದರೊಳು ಅಂತಃಕರಣನಿಗ್ರಹವೇ ಶಮವಕ್ಕುಂ. ಬಾಹ್ಯ ಕರಣನಿಗ್ರಹವೇ ದಮಮಕ್ಕುಂ. ಪ್ರಾರಬ್ಧಸಿದ್ಧಮಾದ ತಾಪತ್ರಯ ಶೀತೋಷ್ಣಾದಿ ದುಃಖಂಗಳಂ ಸೈರಿಪ್ಪುದೇ ತಿತಿಕ್ಷೆಯಕ್ಕುಂ. ಕಾಮಕ್ರೋಧಾದಿ ಕಲುಷಮಾಗದೆ ಸಾತ್ವಿಕರ್ಮಾದ ಚಿತ್ತಸ್ಥೈರ್ಯವೇ ಸಮಾಧಾನವಾಗಿರುವದು. ಗುರು ವೇದಾಂತವಾಕ್ಯಂಗಳೊಳು ದೃಢತರವಾದ ವಿಶ್ವಾಸವೇ ಶ್ರದ್ಧೆಯೆನಿಸುವದು. ಪರಮೇಶ್ವರನೊಳಗಾರಾಧ್ಯತ್ವ ತನ್ನೊಳಗಾರಾಧಕತ್ವ, ಗುರುವಿನೊಳು ಸೇವ್ಯತ್ವ ತನ್ನೊಳು ಸೇವಕತ್ವ. ವೇದಾಂತಶಾಸ್ತ್ರದೋಳ್ ಶಾಸನತ್ವ ತನ್ನೊಳು ಶಾಸ್ಯತ್ವವೀ ಮೇರೆ ನಂಬಿರುವದೇ ಭಕ್ತಿಯೆನಿಸುವದು. ತುಂಬಿದ ಮನೆಯು ಕಿಚ್ಚಿಂದಾವರಿಸಿ ಯುರಿಗೊಳಲೊಳಗಿಪ್ಪ ಕುಟುಂಬಿಗನು ಮಡದಿಮಕ್ಕಳು ಮೊದಲಾದವಂ ಬಿಟ್ಟು ತಾನುಳಿದೋಡುವಂತೆ ಜನನ ಮರಣ ದುಃಖಪ್ರವಾಹ ರೂಪಮಾದ ಸಂಸಾರತಾಪವಂ ಸಹಿಸಲಾರದೆ ಮೋಕ್ಷವಂ ಕಾಂಕ್ಷಿಸಿ ಸರ್ವಸನ್ಯಸ್ತನಾಗುವದೇ ಮುಮುಕ್ಷುತ್ವವೆಂಬ ಮುಖ್ಯ ಸಾಧನವೆಂದರಿವುದು.

## ೫೧. ಗುರುಲಕ್ಷಣ

ಬಳಿಕ ವಿಧಿವದಧೀತ ವೇದಾಂತನಿಷ್ಠಾಪರನಾಗಿ ಶರಣಾಗತನಾದ ಶಿಷ್ಯಂಗೆ ಮರಳಿ ಸಂಶಯಮಂಕುರಿಸದಂತೆ ತತ್ವೋಪದೇಶವಂ ಗೈದು ಅಜ್ಞಾನವಂ ಪರಿಹರಿಸುವನೇ ಗುರುವೆಂದೆನ್ನಿಸಿಕೊಳ್ಳುವನು.

## ೫೨. ಗುರುಸೇವಾಲಕ್ಷಣ

ಬಳಿಕ ಸಾಧನ ಸಂಪನ್ನನಾದಧಿಕಾರಿಯು ಮಾಳ್ಪ ಸದ್ಗುರು ಸೇವೆ ಯಾವದೆಂದೊಡೆ ಆಪ್ತ ಅಂಗ ಸ್ಥಾನ ಸದ್ಭಾವವೆಂದು ನಾಲ್ಕುತೆರನಾಗಿಹುದದರಲ್ಲಿ ಗುರುವಿಗೆ ಅನುಕೂಲವೃತ್ತಿಯೇ ಆಪ್ತನೆನಿಸುವದು. ಗುರುಪಾದ ಪ್ರಕ್ಷಾಳನಾದಿಕವೇ ಅಂಗವೆನಿಸುವದು. ಗುರುವಿನ ಗೃಹಕ್ಷೇತ್ರ ರಕ್ಷಣಾದಿಕವೇ ಸ್ಥಾನವೆನಿಸುವದು. ಗುರುವೇ ಸಾಕ್ಷಾತ್ಪರಮೇಶ್ವರನೆಂಬ ವಿಶ್ವಾಸವೇ ಸದ್ಭಾವ ಮೆನಿಸುವದು.

## ೫೩. ಅಧಿಕಾರಿಪ್ರಭೇದ

ಬಳಿಕ ಕರ್ಮಕಾಂಡಿ ಭಕ್ತಿಕಾಂಡಿ ಜ್ಞಾನಕಾಂಡಿ ಯೆಂಬುವರೇ ಮೂವರಧಿಕಾರಿಗಳುಂಟವರಲ್ಲಿ ದೇಹ ಗೃಹಕೃತ್ಯಾದಿಗಳಲ್ಲಿ ಕ್ರಮದಿಂ ನಾನು ನನ್ನದೆಂಬಹಂಕಾರ ಮಮಕಾರಗಳುಳ್ಳಾತನೇ ಕರ್ಮಕಾಂಡಿಯೆನಿಸುವನು.

ಸಕಲ ಕ್ರಿಯೆಗಳನೀಶ್ವರಾರ್ಪಣಂಗೈವಾತನೇ ಭಕ್ತಿಕಾಂಡಿಯೆನಿಸುವನು. ಸರ್ವಕರ್ಮಸಾಕ್ಷಿಕನು ತಾನೆಂಬಾತನೇ ಜ್ಞಾನಕಾಂಡಿಯಪ್ಪಂ.

### ೫೪. ಪಂಚಾಧಿಕಾರಿಗಳು

ಬಳಿಕ ಕರ್ಮಿ ಮುಮುಕ್ಷು ಅಭ್ಯಾಸಿ ಅನುಭವಿ ಆರೂಢರೆಂದು ಉತ್ತರೋತ್ತರ ವಿಶಿಷ್ಟಮಾದ ಅಧಿಕಾರಿ ಪಂಚವಿಧಂಗಳಲ್ಲಿ ಮೂಢತನದಿಂ ತನ್ನ ಜಾತಿಮಾತ್ರದ ಕರ್ಮವಿಡಿದು ಶತಜನ್ಮಧಿಂ ಮುಕ್ತನಪ್ಪಾತನೇ ಕರ್ಮಿಯೆನಿಸುವನು. ಜಗತ್ಸತ್ಯವೆಂದು ತಿಳಿದು ಬಾಹ್ಯಕರ್ಮ ನಿಷ್ಠನಾಗಿ ಮೂರುಜನ್ಮಗಳಿಂ ಮುಕ್ತನಪ್ಪಾತನೇ ಮುಮುಕ್ಷುವೆನಿಸುವನು. ಸ್ವಪ್ನದಂತೆ ಪ್ರಪಂಚವೆಲ್ಲಂ ಮಿಥ್ಯೆಯೆಂದಭ್ಯಂತರದಲ್ಲಿ ಧ್ಯಾನಾದಿಕರ್ಮಯುಕ್ತನಾಗಿ ಜನ್ಮದ್ವಯದಿಂ ಮುಕ್ತನಪ್ಪವನೇ ಅಭ್ಯಾಸಿಯೆನಿಸುವನು. ವ್ಯವಹಾರವೆಲ್ಲವನುಪೇಕ್ಷಿಸಿ ವಿವೇಕತತ್ಪರನಾಗಿ ಏಕಜನ್ಮದಿಂ ಮುಕ್ತನಪ್ಪಾತನೇ ಅನುಭವಿಯೆನಿಸುವನು. ವಿಶ್ವವಿಕೃತಿ ತೋರದೆ ಸ್ವಾತ್ಮಜ್ಞಾನದಿಂ ಸದ್ಯೋಮುಕ್ತನಪ್ಪಾತನೇ ಆರೂಢನಪ್ಪಂ.

### ೫೫. ಪುನರಧಿಕಾರಿತ್ರಯ

ಬಳಿಕ ಜಗತ್ತೆಂಬ ಕಮಲವಲ್ಲರಿಯ ಮೂಲವಾವುದೆಂಬ ವಿಚಾರಮುಖದಿಂ ಶ್ರೀಗುರುವನ್ನೈದಿ ಬ್ರಹ್ಮಜ್ಞಾನಿಯಾಗಿ ಮೋಕ್ಷವಂ ಬಡೆವಾತನೋರ್ವನು. ದೇಹಾದಿಗಳ ನಶ್ವರತ್ವವಂ ಕಂಡು ಭೋಗಾಪೇಕ್ಷೆ ದೊರೆದು ಶ್ರೀಗುರುವನ್ನೈದಿ ತತ್ವಜ್ಞಾನಿಯಾಗಿ ಮೋಕ್ಷಂ ಬಡೆವಾತನೋರ್ವನು. ಒಬ್ಬಾನೊಬ್ಬ ಶ್ರೀಗುರು ತನ್ನ ಶಿಷ್ಯಂಗುಪದೇಶವಂಗೈದುದಂ ಕೇಳಿ ತಾವನ್ಮಾತ್ರದಿಂ ತಾನಕಸ್ಮಾತ್ ಜ್ಞಾನಿಯಾಗಿ ನಿರ್ವಾಣಂ ಬಡೆವಾತನೋರ್ವನು. ಇಂತು ವಿವೇಕ ವಿರಕ್ತಿ ದೈವಗತಿಗಳಿಂ ಮುಕ್ತರಾಗುವರೇ ಬೇರೆ ಮೂವರಧಿಕಾರಿಗಳಕ್ಕುಂ.

### ೫೬. ಅಷ್ಟಗುರುಲಕ್ಷಣ

ಮತ್ತಮಾ ಶ್ರೀಗುರುವೇ ಸಾಧಕರಾದ ಶಿಷ್ಯರಧಿಕಾರ ಭೇದದಿಂ ಬೋಧಕಗುರು ವೇದಕಗುರು ನಿಷಿದ್ಧಗುರು ಕಾಮ್ಯಗುರು ಸೂಚಕಗುರು ವಾಚಕಗುರು ಕಾರಣಗುರು ವಿಹಿತಗುರು ವೆಂದೆಂಟುತೆರನಾಗಿರ್ಪನವರಲ್ಲಿ— ಶಾಸ್ತ್ರಶಬ್ದಾರ್ಥಂಗಳನೇ ಬೋಧಿಸುವಾತನು ಬೋಧಕಗುರು. ತತ್ವದರ್ಶ

ಕನೇ ವೇದಕಗುರು. ವಶ್ಯಾಕರ್ಷಣಾದಿಗಳಿಂ ಇಹಲೋಕದಲ್ಲಿ ಸುಖಮಂ ಪರಲೋಕದಲ್ಲಿ ದುಃಖಂಗಳನೀವಾತನೇ ನಿಷಿದ್ಧಗುರು. ಪುಣ್ಯ ಕರ್ಮೋಪ ದೇಶದಿಂದಿಹಪರಂಗಳಲ್ಲಿ ಸುಖಪ್ರದಾತನೇ ಕಾಮ್ಯಗುರು. ವಿವೇಕಮುಖದಿಂದ ಶಮದಮಾದಿ ಷಡ್ಗುಣಪ್ರದನೇ ಸೂಚಕಗುರು. ವಿಷಯಂಗಳಂ ಮಿಥ್ಯಾತ್ವ ದರ್ಶನದಿಂದಾತ್ಮಾನುರಾಗಪ್ರದನೇ ವಾಚಕಗುರು. ಶಿವ ಜೀವೈಕ್ಯಜ್ಞಾನ ಪ್ರದನೇ ಕಾರಣಗುರು. ಸಂಶಯ ನಿರಸನದ್ವಾರದಿಂ ನಿತ್ಯಮುಕ್ತಿಪ್ರದನೇ ವಿಹಿತಗುರುವಕ್ಕುಂ.

## ೫೭. ಶಿಷ್ಯೋಪಸನ್ನತಿ

ಮತ್ತಮಾ ಸದ್ಗುರು ಸಚ್ಛಿಷ್ಯರ ಮಧ್ಯದೊಳಾವನೋರ್ವಧಿಕಾರಿಯು ತಾಪತ್ರಯಾಗ್ನಿಯಿಂ ಬೆಂದು ವ್ಯಾಕುಲಚಿತ್ತನಾಗಿ ನಾನಾರು? ಎನಗೀ ಸಂಸಾರವೇನುಕಾರಣದಿಂ ಬಂದಿತು? ಇದಾರಮುಖದಿಂ ನಿವೃತ್ತಿಯಹು ದೆಂದು ವಿಚಾರಿಸಿ ನೋಡಿ ಪತ್ರ ಪುಷ್ಪ ಫಲ ಸಮಿದಾದ್ಯುಪಹಾರಪಾಣಿಯಾಗಿ ವಿದ್ಯಾ ವಿನಯ ವೈರಾಗ್ಯಗಳೊಡನೆ ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೋ ತ್ರಿಯ ಬ್ರಹ್ಮನಿಷ್ಠ ಸದ್ಗುರುವನ್ನೈದಿ "ಚೈತನ್ಯಂ ಶಾಶ್ವತಂ ಶಾಂತ" ಮೆಂಬುದು ಮೊದಲಾದ ಮಂತ್ರಾಷ್ಟಕ ಪಠನಪೂರ್ವಕಮಾಗಿ ಪದದ್ವಯ ಭುಜದ್ವಯ ಹಸ್ತದ್ವಯ ವಕ್ಷೋಲಲಾಟಗಳೆಂಬಷ್ಟಾಂಗವಂ ನೆಲಸೋಂಕುವಂತೆ ಪ್ರಣತ ನಾಗಿ ಬಳಿಕೆದ್ದು ಭಕ್ತಿಭಾವದಿಂ ಕರಕಮಲಂಗಳಂ ಮುಗಿದು ಕಿಂಕರಭಾವಮಂ ಕೈಮಿಕ್ಕು ಕಾರ್ಪಣ್ಯಮಂ ದೋರಿ ಕೂರ್ಮೆಯಿಂ ಕೊಂಡಾಡಿ ಜ್ಞಾನ ವೈರಾಗ್ಯ ಕೀರ್ತಿ ಶ್ರೀ ಬಲೈಶ್ವರ್ಯಗಳೆಂಬ ಷಡ್ಗುಣ ಸಮಗ್ರತೆಯಿಂ ಭಗ ವಂತನಾದೆಲೆ ಸದ್ಗುರುವೇಂ! ಆಯಾಸಮಿಲ್ಲದಾವತೆರದಿಂದೆನಗೀ ಭವಬಂಧನಂ ಬಿಡುವದೆಂದು ಭಿನ್ನಪವಂ ಗೈಯುವದೇ ಶಿಷ್ಯನ ವಿಧಿವದುಪಸನ್ನತ್ವಮಕ್ಕುಂ.

## ೫೮. ಉಪದೇಶಕ್ರಮ

ಮತ್ತಮಾ ಉಪಸನ್ನನಾದ ಶಿಷ್ಯನ ಅಧಿಕಾರವಂ ಪರೀಕ್ಷಿಸಿ ಕೃಪಾ ಕಟಾಕ್ಷದಿಂದೀಕ್ಷಿಸಿ ಅಂಜದಿರೆಂದಭಯಹಸ್ತಮಂ ಶಿಷ್ಯನ ಮಸ್ತಕದೊಳಿಟ್ಟು ಶ್ರುತಿಯುಕ್ತ್ಯನುಭವಗಳಿಂದಾತನ ದೇಹಾದ್ಯಾತ್ಮ ಬುದ್ಧಿಯಂ ನೆರೆಗಳೆದು ನೀನೆ ಪರಬ್ರಹ್ಮವೆಂದುಳ್ಳ ಪರಮಾರ್ಥತತ್ವವನರುಹಿಪುದೇ ಶ್ರೀಗುರುವಿನುಪ ದೇಶಮಕ್ಕುಂ.

## ೫೯. ಬೋಧಪ್ರಕಾರ

ಮತ್ತಮಾ ಉಪದೇಶಕ್ರಮದಲ್ಲಿ ಉದ್ದೇಶ ಲಕ್ಷಣ ಪರೀಕ್ಷೆಗಳೆಂಬವೇ ಬೋಧಪ್ರಕಾರತ್ರಯಮಪ್ಪು ದದರೊಳು ತಾನು ಸಮರ್ಥಿಸಲಿಷ್ಟಮಾದವಸ್ತು ವಂ ನಾಮಮಾತ್ರದಿಂ ಸಂಕೀರ್ತಿಪುದೇ ಉದ್ದೇಶಮೆನಿಸುವದು. ಗಂಗೆದೊಗ ಲುಳ್ಳದೇ ಗೋವೆಂಬಂತೆ ಬಳಿಕಾ ವಸ್ತುವಿನ ಅಸಾಧಾರಣ ಧರ್ಮಮಂ ಪೇಳ್ವುದೇ ಲಕ್ಷಣಮೆನಿಸುವದು. ಬಳಿಕ ಲಕ್ಷಿತಮಾದ ವಸ್ತುವಿಗಾಲಕ್ಷಣ ಮುಂಟೋ ಇಲ್ಲವೋ ಎಂದು ವಿಪ್ರತಿಪತ್ತಿಪೂರ್ವಕಮಾಗಿ ವಿಚಾರಮಂಗೆಯ್ಯು ವದೇ ಪರೀಕ್ಷೆಯಕ್ಕುಂ.

## ೬೦. ಪ್ರಮಾಣಲಕ್ಷಣ

ಬಳಿಕ ಪ್ರಮೆಯೆಂಬುವ ಯಥಾರ್ಥಜ್ಞಾನಕ್ಕೆ ಕಾರಣಗಳಾದ ಈಶ್ವರಾದೃಷ್ಟ ಕಾಲ ಕರ್ತೃಕಾರಣಾದಿಗಳೊಳು ಜ್ಞಾನೋತ್ಪತ್ತಿ ವ್ಯಾಪಾರಾ ಶ್ರಯಮಾದ ಅಸಾಧಾರಣ ಹೇತುವೇ ಪ್ರಮಾಣವೆನ್ನಿಸಿಕೊಂಬುವದು.

## ೬೧. ಪ್ರಮಾಣವಿಭಾಗ

ಬಳಿಕ ಪ್ರತ್ಯಕ್ಷಪ್ರಮಾಣ, ಅನುಮಾನಪ್ರಮಾಣ, ಆಗಮಪ್ರಮಾಣ, ಅರ್ಥಾಪತ್ತಿಪ್ರಮಾಣ, ಉಪಮಾನಪ್ರಮಾಣ, ಅನುಪಲಬ್ಧಿಪ್ರಮಾಣ, ಸಂಭವಪ್ರಮಾಣ, ಐತಿಹ್ಯಪ್ರಮಾಣ ವೆಂಬಿವೇ ವಸ್ತುಸಿದ್ಧಿಗಪ್ಪಪ್ರಮಾಣಂಗ ಳವುಗಳಲ್ಲಿ ಘಟಾದಿದರ್ಶನವೆಂಬ ಸಾಕ್ಷಾತ್ಕಾರಕ್ಕೆ ಮುಖ್ಯ ಕಾರಣಗಳಾದ ಚಕ್ಷುರಾದಿಗಳೇ ಪ್ರತ್ಯಕ್ಷ ಪ್ರಮಾಣವೆನಿಸುವದು. ಅಗ್ನಿವತ್ತಾಜ್ಞಾನ ಸಂಪಾ ದಕಮಾದ ಧೂಮವತ್ತಾಜ್ಞಾನವೇ ಅನುಮಾನಪ್ರಮಾಣಮಕ್ಕುಂ. ಬಳಿಕ ಆಯನುಮಾನಪ್ರಮಾಣಕ್ಕೆ ಪ್ರತಿಜ್ಞೆ, ಹೇತು, ದೃಷ್ಟಾಂತಗಳೆಂಬ ಅಂಗತ್ರ ಯಮುಂಟದರೊಳು ಪರಪ್ರತಿ ಪ್ರತ್ಯರ್ಥಮಾಗಿ ಪ್ರಯೋಗಿಸುವಾಗ ಪರ್ವ ತವಗ್ನಿಯುಳ್ಳದ್ದೆಂಬುವದೇ ಪ್ರತಿಜ್ಞಾವಾಕ್ಯವು. ಧೂಮುವುಂಟಾದ ಕಾರಣವೆಂ ಬುವದೇ ಹೇತು. ಮಹಾನಸದಂತೆ ಯೆಂಬುವದೇ ಸಪಕ್ಷದೃಷ್ಟಾಂತ. ಮತ್ತಿ ದಕೆ ನಿಗಮನಾದ್ಯಂಗಗಳುಂ ಸವ್ಯಭಿಚಾರ, ವಿರುದ್ಧ, ಸತ್ಪ್ರತಿಪಕ್ಷ, ಅಸಿದ್ಧ, ಬಾಧಗಳೆಂಬ ಹೇತ್ವಾಭಾಸ ದೋಷಗಳಿಲ್ಲದಿರುವಿಕೆಯುಂ ಅನುಕೂಲ ತರ್ಕ ವ್ಯಾಪ್ತ್ಯಾದಿಗಳಿರುವಿಕೆಯುಂ ಪ್ರಾಮಾಣ್ಯಕ್ಕೆ ಪರಂಪರಸಾಧಕಗಳಾಗಿರುವುವು ಬಳಿಕ ಯಥಾರ್ಥಮಂಪೇಳ್ವ ಪರಮೇಶ್ವರನು ಜಗತ್ತಿನ ಜೀವಕೋಟಿಗೆ ಆಪ್ತ

ನಾಗಿರುವವರಿಂ ವೇದಗಳುಂ, ತನ್ಮೂಲಕದಿಂ ಸ್ಮೃತಿ ಪುರಾಣೇತಿಹಾಸಗಳುಂ. ಲೋಕದೊಳು ಯಥಾರ್ಥದೃಷ್ಟಾರ್ಥವಾದಿಗಳಾದ ಸತ್ಪುರುಷರು ತತ್ತ್ವದಾಪ್ತ ರಾಗಿರುವವದರಿಂ ತದುಕ್ತಿಗಳುಂ. ನದೀತೀರಾದಿಗಳಲ್ಲಿರುವ ಫಲಾದಿ ಪರೋಕ್ಷಾ ರ್ಥಜ್ಞಾಪಕಗಳಾಗಿರುವುದರಿಂದ ಆಗಮಪ್ರಮಾಣಮೆನಿಸುತಿರ್ಕುಂ. ಇದಕ್ಕೆ ಪದ, ಪದಾರ್ಥ, ಅನ್ವಯ, ಆಕಾಂಕ್ಷೆ, ಯೋಗ್ಯತೆ, ಸಾಹಚರ್ಯ, ತಾತ್ಪ ರ್ಯಜ್ಞಾನಮುಂತಾದುವುಗಳು ಸಹಕಾರಿ ಕಾರಣಗಳಾಗಿರ್ಕುಂ. ಪಗಲು ಣ್ಣದ ದೇವದತ್ತನ ದೇಹದ ಪೀನತ್ವಮಂ ಕಂಡು ದೃಷ್ಟವಾದ ಪೀನತ್ವದಿಂ ತತ್ಕಾರಣಮಾದ ರಾತ್ರಿ ಭೋಜನಮಂ ಕಲ್ಪಿಸುವದೇ ದೃಷ್ಟಾರ್ಥಾಪತ್ತಿ ಯಕ್ಕುಂ. ಬದುಕಿದ ದೇವದತ್ತನಂ ಗೃಹದೊಳಗಿಲ್ಲವೆಂದೊಡೆ ಕೇಳಿ ಶ್ರುತ ಮಾದ ತದ್ವಚನದಿಂ ಸ್ಥಾನಾಂತರದೊಳಿರ್ಪ ನೆಂದು ತಿಳಿವುದೇ ಶ್ರುತಾರ್ಥಾ ಪತ್ತಿಯೆನಿಸುವುದು. ಇಂತೀ ಯೆರಡು ಬಗೆಯಾದ ಅರ್ಥಾಪತ್ತಿಗೂ ಅನ್ವಯ ವ್ಯತಿರೇಕಾದಿ ನಿಶ್ಚಯಗಳೇ ಸಹಕಾರಿ ಕಾರಣಗಳಾಗಿರ್ಕುಂ, ಗವಯಪದಾರ್ಥ ವನರಿಯದವಂಗೆ ಗೋಸದೃಶವೆಂಬಾಪ್ತವಾಕ್ಯ ಶ್ರವಣಾಂತರದಲ್ಲಿ ವನವನ್ನೈ ದಲು ಸಾದೃಶ್ಯಾದಿಗಳಿಂ ತದ್ವಿಷಯಕ ಜ್ಞಾನಸಿದ್ಧಿಯೇ ಉಪಮಾನ ಪ್ರಮಾ ಣಮಪ್ಪುದು. ಸಾಕ್ಷಾತ್ಕಾರಾಭಾವರೂಪಮಾದ ಅನುಪಲಬ್ಧಿಪ್ರಮಾಣದ ದೆಸೆಯಿಂದೀ ಭೂತಳದೊಳು ಘಟಮಿಲ್ಲವೆನಲ್ಕೆ ಘಟಾಭಾವಜ್ಞಾನಮುಂಟಾ ಗುವದುಂ, ತನ್ನ ಮರೆತು ಮಿಕ್ಕ ಒಂಬತ್ತುಮಂದಿಯುಂ ಲೆಕ್ಕಿಸುವಂಗೆ ದಶಮಾ ಭಾವಜ್ಞಾನಮುಂಟಾಗುವದುಂ ಅನುಪಲಬ್ಧಿಪ್ರಮಾಣವೆನಿಸುವುದು. ಸಹಸ್ರ ಸಂಖ್ಯಾಕದೊಳು ಶತಸಂಖ್ಯಾಕಮುಂಟೆಂಬುದೇ ಸಂಭವಪ್ರಮಾಣಮಕ್ಕುಂ. ಈ ವಟವೃಕ್ಷದೊಳು ಯಕ್ಷನಿಪ್ಪನೆಂಬ ಲೋಕವಾರ್ತೆಯಿಂದ ಯಕ್ಷವಿಷಯ ಜ್ಞಾನವೇ ಐತಿಹ್ಯಪ್ರಮಾಣಮಕ್ಕುಂ. ಮತ್ತಮೀ ಪ್ರತ್ಯಕ್ಷಾದಿ ಪ್ರಮಾಣಗ ಳೊಳು ಧ್ರುವಾದಿ ವಿಷಯದೇಶಗಳೊಳ್ ಪಸರಿಸಿತತ್ತದಾಕಾರದಿಂ ಪರಿಣ ಮಿಪ ಅಂತಃಕರಣವೃತ್ತ್ಯಾದಿ ವೈಚಿತ್ರ್ಯಗಳುಂ ತತ್ತದಧಿಷ್ಠಾನೋಪಾದ್ಯಾದಿ ಗಳುಂ ಸಂಪ್ರದಾಯಾಧ್ಯಯನ ಮನನಾದ್ಯನುಭವ ವೇದ್ಯಗಳಾಗಿರ್ಕುಂ. ಬಳಿಕ ಪ್ರಮಾಣಂಗಳಲ್ಲಿ ಚಾರ್ವಾಕರಿಗೆ ಪ್ರತ್ಯಕ್ಷಪ್ರಮಾಣವೊಂದು; ಜೈನ, ಬೌದ್ಧ, ವೈಶೇಷಿಕರ್ಗೆ ಅನುಮಾನಪ್ರಮಾಣಮುಂ ಕೂಡಿದೆರಡು; ಸಾಂಖ್ಯರ್ಗೆ ಆಗಮಮಂ ಕೂಡಿದ ಮೂರು; ನ್ಯಾಯೈಕ ದೇಶಿಗಳಿಗೆ ಉಪಮಾನಂ ಕೂಡಿ ನಾಲ್ಕು; ಪ್ರಾಭಾಕರರಿಗೆ ಅರ್ಥಾಪತ್ತಿಯೊಡಗೂಡಿದೈದು; ಭಾಟ್ಟ ವೇದಾಂತಿ

ಗಳಿಗೆ ಅನುಪಲಬ್ಧಿಯೆಂಬ ಅಭಾವದೊಡಗೂಡಿದಾರು; ಪೌರಾಣೇತಿಹಾಸಕರಿಗೆ ಸಂಭವೈತಿಹ್ಯಂಗಳೊಡಗೂಡಿ ಯೆಂಟು ಪ್ರಮಾಣಗಳಾಗಿರುವವೆಂದು ವಿವೇಕಿಸಲ್ಪೇಳ್ಕುಂ.

### ೬೨. ಪದಾರ್ಥವಿವೇಕ

ಬಳಿಕ ಪಾರಮಾರ್ಥಿಕ, ವ್ಯಾವಹಾರಿಕ, ಪ್ರಾತಿಭಾಸಿಕ, ತುಚ್ಛಮೆಂದು ಪದಾರ್ಥಗಳು ನಾಲ್ಕಾಗಿ ತಿಳಿಯಲಕ್ಕುಮವುಗಳೊಳು—ಶುದ್ಧ ಶಿವಚೈತನ್ಯಮೊಂದೇಪಾರಮಾರ್ಥಿಕಮಾಗಿರ್ಪುದು. ಗಗನಾದಿಪ್ರಪಂಚಮೆಲ್ಲಮುಂವ್ಯಾವಹಾರಿಕ ಮಾಗಿರ್ಪುದು. ರಜ್ಜುಭುಜಂಗ ಶುಕ್ತಿಕಾರಜತ ಮರುಮರೀಚಿಕಾದಿಗಳೇ ಪ್ರಾತಿಭಾಸಿಕಗಳಕ್ಕುಂ. ವಂಧ್ಯಾಪುತ್ರ ಶಶವಿಷಾಣಾದಿಗಳೇ ಅಸತ್ಯಾದ ತುಚ್ಛಮೆಂದು ತಿಳಿಯಲಪ್ಪುದು.

### ೬೩. ಪದಾರ್ಥದ್ವಯ

ಮತ್ತಮಾ ಪದಾರ್ಥಮೆಲ್ಲಮುಂ ಶಿವಶಕ್ತಿಗಳೆಂತಲುಂ ಬ್ರಹ್ಮಮಾಯೆಗಳೆಂತಲುಂ ಸತ್ಯಮಿಥ್ಯೆಗಳೆಂತಲುಂ ನಿತ್ಯಾನಿತ್ಯಗಳೆಂತಲುಂ ದ್ವಿಧಾವಿಭಾಗಿಸಿ ಪೇಳ್ಕುಂ.

### ೬೪. ದೃಗ್ದೃಶ್ಯವಿವೇಕ

ಬಳಿಕ ದೃಕ್ಕೆಂದೊಡೆ ಸಯುಕ್ತಿಕ ದೃಷ್ಟಾಂತೋಪಪನ್ನ ಮಾದ ವಿಚಾರದಿಂ ಪ್ರಾಮಾಣಿಕವಾಗಿ ತಾತ್ವಿಕಾರ್ಥಮಂ ವಿಚಾರಿಸಿ ತಿಳಿವುದದೆಂತೆಂದೊಡೆ—ದೃಶ್ಯಮಾದ ಪ್ರಪಂಚದೊಳು ಸ್ವಗತಭೇದ, ಸಜಾತೀಯಭೇದ, ವಿಜಾತೀಯಭೇದಮೆಂಬುದು ನಿರಾಕರಿಸಲ್ತಕ್ಕ ತ್ರಿವಿಧ ಭೇದಂಗಳಪ್ಪವವಕೆ ದೃಷ್ಟಾಂತಮೆಂತೆನೆ—ಲೋಕದೊಳೊಂದಾನೊಂದು ವೃಕ್ಷವು ತನ್ನೊಳು ಬೇರೆ ಬೇರೆ ತೋರ್ಪ ಪತ್ರ ಪುಷ್ಪ ಫಲಾದಿಗಳಿಂ ಭಿನ್ನಮಾಗಿರುವದರಿಂದದು ಸ್ವಗತಭೇದಮೆನಿಸುವುದು. ತನ್ನಂತೆ ಬೇರೊಂದು ವೃಕ್ಷವು ಬೇರೆಯಾಗಿರುವದರಿಂದದು ಸಜಾತೀಯ ಭೇದಮೆನಿಸುವುದು. ತನಗಿಂತಲೂ ವಿಲಕ್ಷಣಮಾದ ಪಾಷಾಣಾದಿಕವು ಬೇರ್ಪಟ್ಟಿರುವದರಿಂದದು ವಿಜಾತೀಯ ಭೇದಮಾಗಿರ್ಪುದು.

### ೬೫. ಭೇದನಿರಾಕರಣ

ಬಳಿಕ ಭೇದಮಾತ್ರವು ಕಾಲ್ಪನಿಕಮಾಗಿರುವದರಿಂದುಕ್ತ ಭೇದತ್ರಯ ಮದ್ವೈತ ಬ್ರಹ್ಮಮಾದ ಶುದ್ಧ ಚೈತನ್ಯದೊಳಗೆಂತು ಮಿಲ್ಲವೆಂದು ದೃಕ್ಕಿನಿಂ

ನಿರಾಕರಿಸಲಕ್ಕುಮೆಂತೆನೆ—ಸದ್ರೂಪಮಾದ ಬ್ರಹ್ಮವು ಗಗನದಂತೆ ನಿರವಯವಮಪ್ಪುದರಿಂ ಸತ್ತಿಗೆ ಬೇರೊಂದು ಸತ್ತೆಯಿಲ್ಲವಾಗಿಯುಂ, ಮತ್ತಮಾಸದ್ವಸ್ತುವು ಅಖಂಡಮಾಗಿಯುಂ, ಅಸದೃಶಮಾಗಿಯುಂ, ಅದ್ವಿತೀಯಮಾಗಿಯುಂ, ಶ್ರುತಿ ಗುರುವಾಕ್ಯಸದ್ಯುಕ್ತ್ಯನುಭವಗಳಿಂ ಸಿದ್ಧಾಂತಮಹುದಾಗಿ ಬ್ರಹ್ಮದೊಳು ಸ್ವಗತಸಜಾತೀಯ ಭೇದಮಾತ್ರ ಪ್ರಸಕ್ತಿಯಿಲ್ಲದೊಡಂ ಜಗತ್ಕಾರಣಮಾದ ಮಾಯೆಯುಂಟಾಗಿ ವಿಜಾತೀಯಭೇದಮಿಪ್ಪುದೆನೆ ಲೋಕದಲ್ಲಿ ಚಿತ್ರಕನಿಂ ಚಿತ್ರಶಕ್ತಿಗೆ ಬೇರೆ ತೋರ್ಕೆ ಯಿಲ್ಲದಂತೆ ಸನ್ಮಾತ್ರಬ್ರಹ್ಮದತ್ತಣಿಂ ಬಹ್ಮಾನತಿರಿಕ್ತ ಸತ್ತಾತ್ಮಕವಾದ ಮಾಯೆಗೆ ವಿಲಕ್ಷಣತ್ವಮೇ ಇಲ್ಲವಾಗಿ ಬ್ರಹ್ಮಕ್ಕೆ ವಿಜಾತೀಯ ಭೇದಮುಂ ಇಲ್ಲವೆಂದು ಸಿದ್ಧಮಕ್ಕುಂ.

### ೩೩. ಸಿದ್ಧಾಂತಶ್ರುತಿ

ಬಳಿಕೀಯರ್ಥದಲ್ಲಿ ಏಕಮೇವಾದ್ವಿತೀಯಂಬ್ರಹ್ಮ ಎಂಬ ಪ್ರಬಲತರ ಸಿದ್ಧಾಂತಶ್ರುತಿವಾಕ್ಯದ ಏಕಂ, ಏವ, ಅದ್ವಿತೀಯಂ ಎಂಬ ಪದತ್ರಯಕ್ಕೆ ಜೀವಬ್ರಹ್ಮೈಕ್ಯ, ಅವಧಾರಣೆ, ದ್ವೈತನಿಷೇಧಗಳೆಂಬ ಅರ್ಥತ್ರಯಮಪ್ಪುದರಿಂದ ಕ್ರಮದಿಂದವೇ ಬ್ರಹ್ಮದಲ್ಲಿ ಸ್ವಗತ, ಸಜಾತೀಯ, ವಿಜಾತೀಯ ಭೇದಗಳಿಲ್ಲಮೆಂಬುದಕೆ ಪ್ರಮಾಣವಕ್ಕುಂ.

### ೩೭. ಅಧ್ಯಾರೋಪವಿವೇಕ

ಬಳಿಕ ಅಧ್ಯಾರೋಪ ಅಪವಾದವೆಂಬವೇ ಕಲ್ಪಿತದ್ವಯಮಪ್ಪುದದರಲ್ಲಿ ಉಳ್ಳ ರಜ್ಜು, ಶುಕ್ತಿ, ಸ್ಥಾಣ್ವಾದಿಗಳಲ್ಲಿ ಕ್ರಮದಿಂದಿಲ್ಲದ ಅಹಿ, ರಜತ, ಚೋರಾದಿಗಳಂ ಕಲ್ಪಿಸುವಂತೆ ಸದ್ರೂಪಮಾದ ಬ್ರಹ್ಮದಲ್ಲಿಲ್ಲದ ಮಾಯಾಪಪ್ರಂಚದ ಕಲ್ಪನೆಯೇ ಅಧ್ಯಾರೋಪವೆನಿಸುವುದು.

### ೩೮. ಅಪವಾದವಿವೇಕ

ಬಳಿಕ ಅಹಿಯಲ್ಲ ರಜ್ಜುವೇ ಇದು. ರಜತವಲ್ಲ ಶುಕ್ತಿಯೇ ಇದು, ಚೋರನಲ್ಲ ಸ್ಥಾಣುವೇ ಯೆಂಬಂತೆ ವಿಚಾರಮುಖದಿಂ ಪ್ರಪಂಚವೆಲ್ಲಂಮಿಥ್ಯೆ ಬ್ರಹ್ಮವೇ ಸತ್ಯಮೆಂಬುದೇ ಅಪವಾದಮಕ್ಕುಂ.

### ೩೯. ಬ್ರಹ್ಮಲಕ್ಷಣವಿವೇಕ

ಬಳಿಕ ಅತದ್ವ್ಯಾವೃತ್ತಿಲಕ್ಷಣ, ತಟಸ್ಥಲಕ್ಷಣ, ಸ್ವರೂಪಲಕ್ಷಣವೆಂಬವೇ

ದೃಗ್ರೂಪಮಾದ ವಸ್ತುವಿನ ಸಾಕ್ಷಾತ್ಕಾರಕ್ಕುಪಾಯತ್ರಯಮಪ್ಪುವದವರಲ್ಲಿ ದೇಹಾದ್ಯನಾತ್ಮವರ್ಗಮಂ ಯುಕ್ತಿಯಿನ್ನೇತಿಗಳೆದುಳಿದಾತ್ಮನ ನರುಹಿಪ್ಪುದೇ ಅತದ್ವ್ಯಾವೃತ್ತಿ ಲಕ್ಷಣಮೆನಿಸುವುದು. ಶಾಖಾಗ್ರದಲ್ಲಿ ಚಂದ್ರನಿಪ್ಪನೆಂಬಂತೆ ಭೂತಾದಿ ಜಗತ್ಕಾರಣತ್ವದಿಂದಾತ್ಮನ ನರುಹಿಪುದೇ ತಟಸ್ಥಲಕ್ಷಣಮೆನಿಸುವದು. ಪ್ರಕೃಷ್ಟಪ್ರಕಾಶರೂಪನೇ ಸೂರ್ಯನೆಂಬಂತೆ ಆತ್ಮನ ನಿಜವನರುಹಿಪುದೇ ಸ್ವರೂಪ ಲಕ್ಷಣಮಕ್ಕುಂ.

## ೭೦. ಪಂಚಲಕ್ಷಣವಿವೇಕ

ಬಳಿಕ ಸತ್ತು, ಚಿತ್ತು, ಆನಂದ, ನಿತ್ಯ, ಪರಿಪೂರ್ಣವೆಂಬವೇ ಆತ್ಮನ ಪಂಚಸ್ವರೂಪಲಕ್ಷಣಂಗಳವುಗಳಲ್ಲಿ ಅರಿವೆನು, ಅರಿಯೆನು, ಅರಿತೆನು ಎಂಬಲ್ಲಿಯುಂ ಕಾಮಾದಿ ವೃತ್ತಿಗಳು ತೋರುವಲ್ಲಿ ತೋರದಿಹಲ್ಲಿಯುಂ ಜಾಗ್ರದಾದ್ಯವಸ್ಥೆಗಳಲ್ಲಿಯುಂ ಕನಗೊಂದು ಬಾಧೆಯಿಲ್ಲದೆ ಉಂಟೆನಿಪುದೇ ಸದ್ರೂಪಮಕ್ಕುಂ. ಸರ್ವಾವಸ್ಥೆಗಳಲ್ಲಿಯುಂ ವಿಷಯಂಗಳನೆಡವಿಡದಿದಿರಿಟ್ಟು ಅರಿವುದೇ ಚಿದ್ರೂಪಮಕ್ಕುಂ. ಪರಮ ಪ್ರೀತಿಗೆ ವಿಷಯವಹತನವೇ ಆನಂದರೂಪಮಕ್ಕುಂ. ಸತತೋದಿತಮಾಗಿರ್ಪುದೇ ನಿತ್ಯರೂಪಮಕ್ಕುಂ. ಸರ್ವಾರ್ಥಸಾಧಕಮಪ್ಪುದರಿಂ ಸರ್ವಸಂಬಂಧಿತ್ವವೇ ಪೂರ್ಣರೂಪಮಕ್ಕುಂ.

## ೭೧. ಆನಂದವಿಚಾರ

ಬಳಿಕಲ್ಲಿ ಸಚ್ಚಿದಾನಂದಂಗಳಾತ್ಮಸ್ವರೂಪಮಾಗೆ ಸದ್ರೂಪ ಚಿದ್ರೂಪಗಳಂತೆ ಸರ್ವಬುದ್ಧಿವೃತ್ತಿಗಳಲ್ಲಿಯುಂ ಆನಂದಸ್ವರೂಪಕ್ಕಭಿವ್ಯಕ್ತಿಯುಂಟಾಗಬೇಕದಿಲ್ಲಾಗಿ ಆನಂದಾತ್ಮಸ್ವರೂಪವಲ್ಲೆಂದೊಡದಕ್ಕೆ ಉಷ್ಣಪ್ರಕಾಶರೂಪಮಾದ ದೀಪದ ಪ್ರಕಾಶವೇ ಗೃಹದಲ್ಲಿ ವ್ಯಾಪಿಸಲು ಉಷ್ಣವು ವ್ಯಾಪ್ತಮಾಗದು. ಉದಕದಲ್ಲಿ ಉಷ್ಣವೇ ಪ್ರಕಟಮಹುದು, ಪ್ರಕಾಶಕ್ಕೆ ಪ್ರಕಟತೆಯಾಗದು. ಕಾಷ್ಠದಲ್ಲಿ ಉಷ್ಣಪ್ರಕಾಶವೆಂಬೆರಡಕ್ಕೆಯುಂ ತೋರ್ಕೆಯಪ್ಪಂತೆ ಪಾಷಾಣಾದಿಗಳಲ್ಲಿ ಬ್ರಹ್ಮಸದ್ರೂಪಕ್ಕಭಿವ್ಯಕ್ತಿಯೈಸ್ಸೆ, ಚಿದಾನಂದಗಳಿಗಬಿವ್ಯಕ್ತಿ ಘಟಿಸದು. ಬುದ್ಧಿಯ ತಮೋಗುಣದಿಂದ ಅಜ್ಞಾನಮಯವಾದ ಮೂಢವೃತ್ತಿಯಲ್ಲಿಯುಂ, ರಜೋಗುಣದಿಂದ ರಾಗಮಯವಾದ ಘೋರವೃತ್ತಿಯಲ್ಲಿಯುಂ, ಸಚ್ಚಿದ್ರೂಪಗಳೆರಡಕ್ಕೆ ಸ್ಪಷ್ಟತೆಯಲ್ಲದೆ ಆನಂದರೂಪಕ್ಕೆ ಸ್ಪಷ್ಟತೆದೊರಕೊಳ್ಳದು. ಸತ್ವಗುಣದಿಂ ವೈರಾಗ್ಯಮಯವಾದ ಶಾಂತವೃತ್ತಿಯಲ್ಲಿ

ಸಚ್ಚಿದಾನಂದವೆಂಬ ರೂಪತ್ರಯಕ್ಕುಂ ಸ್ಫುರಣಮುಪ್ಪುವದರಿಂ ದಾನಂದ ವಾತ್ಮಸ್ವರೂಪಮಕ್ಕುಂ.

## ೭೨. ಸತ್ತಾಸ್ವರೂಪ ವಿವೇಕ

ಬಳಿಕ ಕ್ರಮದಿಂ ಪೇಳಿದ ಪಂಚಸ್ವರೂಪಗಳಿಗುಪಾಧಿ ಭೇದಮೆಂತೆನೆ:—ವ್ಯಾವಹಾರಿಕಸತ್ತೆಯು, ಪ್ರಾತಿಭಾಸಿಕಸತ್ತೆಯು, ಪಾರಮಾರ್ಥಿಕ ಸತ್ತೆಯೆಂದು ಸತ್ತಾತ್ರಯಮದರಲ್ಲಿ ಜಾಗ್ರದವಸ್ಥೆಯೊಳು ಘಟಾದಿಗಳ ಸತ್ತೆಯು ವಿದೇಹಕೈವಲ್ಯಪರ್ಯಂತ ಮಧ್ಯ ಸುಪ್ತಿ ಮೂರ್ಛೆ ಮೊದಲಾದವಸ್ಥೆಗಳಲ್ಲಿ ತೋರದಿದ್ದು ಬಳಿಕೆಚ್ಚತ್ತು ನೋಡಿದೊಡೆ ಮೊದಲಿನಂತೆ ತೋರುತ್ತಿಹುದಾಗಿ ವ್ಯಾವಹಾರಿಕ ಸತ್ತೆಯೆನಿಸುವುದು. ಶುಕ್ತಿರಜತದ ಕನಸಿನ ವಿಷಯಾದಿಗಳ ಸತ್ತೆಯೋ ತೋರುವಕಾಲದಲ್ಲಿ ಅಲ್ಲದೆ ಎಚ್ಚತ್ತು ಮರಳಿ ಕಾಂಬ ಸ್ವಪ್ನದೊಳಗುಂ ಇಲ್ಲವಾಗಿ ಪ್ರಾತಿಭಾಸಿಕ ಸತ್ತೆಯೆನಿಸುವುದು. ಸಮಸ್ತ ಕಲ್ಪನೆಗಧಿಷ್ಠಾನಮಾಗಿ ತೋರದಡಗದ ಬ್ರಹ್ಮಸತ್ತೆಯೇ ಪಾರಮಾರ್ಥಿಕಸತ್ತೆಯಕ್ಕುಂ.

## ೭೩. ಚಿದ್ರೂಪೋಪಾಧಿ ಭೇದ

ಮತ್ತಂ ಜೀವ, ಈಶ್ವರ, ಕೂಟಸ್ಥ, ಬ್ರಹ್ಮವೆಂಬವೇ ಚಿತ್ತಿನ ಚತುರ್ವಿಧ ಭೇದಂಗಳವಕ್ಕೆ ಘಟಜಲದಲ್ಲಿ ಪ್ರತಿಬಿಂಬಿಸಿರ್ದ ಸಾಭ್ರನಕ್ಷತ್ರಾಕಾಶ, ಮೇಘಾಂಶತುಷಾರ ಜಲದಲ್ಲಿ ಪ್ರತಿಬಿಂಬಿಸಿರ್ದ ನಿಮಿತ್ತಾಕಾಶ, ಘಟಾವಚ್ಛಿನ್ನಾಕಾಶ, ಮತ್ತು ಮಹಾಕಾಶವೆಂಬವೇ ಕ್ರಮದಿಂ ದೃಷ್ಟಾಂತ ಚತುಷ್ಟಯಮಕ್ಕುಂ.

## ೭೪. ಆನಂದೋಪಾಧಿ ಭೇದ

ಮತ್ತಂ ವಿಷಯಾನಂದ, ಬ್ರಹ್ಮಾನಂದ, ವಾಸನಾನಂದ, ಮುಖ್ಯಾನಂದ, ನಿಜಾನಂದ, ಆತ್ಮಾನಂದ, ಅದ್ವೈತಾನಂದ, ವಿದ್ಯಾನಂದವೆಂಬವೇ ಆನಂದದಷ್ಟ ಭೇದಂಗಳವುಗಳಲ್ಲಿ ವನಿತಾದಿವಿಷಯಾನುಭವದಲ್ಲಿ ತೋರ್ಪುದೇ ವಿಷಯಾನಂದವೆನಿಸುವುದು. ನಿದ್ರೆಯೊಳು ತೋರ್ಪುದೇ ಬ್ರಹ್ಮಾನಂದವೆನಿಸುವದು. ನಿದ್ರೆ ತಿಳಿದಾಕ್ಷಣದಲ್ಲಿ ತೋರ್ಪುದೇ ವಾಸನಾನಂದವೆನಿಸುವುದು.

ಹಾನೋಪಾದಾನಮಿಲ್ಲದುಪೇಕ್ಷಾಬುದ್ಧಿಯಲ್ಲಿ ತೋರ್ಪುದೇ ಮುಖ್ಯಾನಂದ ಮೆನಿಸುವದು ಯೋಗಾಭ್ಯಾಸಬಲದಿಂ ಮನೋಲಯಮಾದಲ್ಲಿ ತೋರ್ಪುದೇ ನಿಜಾನಂದಮೆನಿಸುವುದು. ಪ್ರಿಯವಾದ ವನಿತಾದಿ ವಿಷಯಂಗಳ ಮಧ್ಯದೊಳು ತಾನೇ ಪ್ರಿಯತಮನೆಂದು ಅರಿತಲ್ಲಿ ತೋರ್ಪುದೇ ಆತ್ಮಾನಂದಮೆನಿಸುವದು. ನಾಮರೂಪಪ್ರಪಂಚವೆಲ್ಲಂ ಮಿಥ್ಯೆ, ತಾನೇ ಸತ್ಯವೆಂಬ ವಿವೇಕದಲ್ಲಿ ತೋರ್ಪುದೇ ಅದ್ವೈತಾನಂದಮೆನಿಸುವದು. ತತ್ತ್ವಮಸ್ಯಾದಿಮಹಾವಾಕ್ಯಜ ನಿತಮಾದ ಅಪರೋಕ್ಷಜ್ಞಾನದಲ್ಲಿ ತೋರ್ಪುದೇ ವಿದ್ಯಾನಂದಮಕ್ಕುಂ.

## ೭೫. ಅಭಾವ ವಿವೇಕ

ಮತ್ತಂ ಪ್ರಾಗಭಾವ, ಪ್ರಧ್ವಂಸಾಭಾವ, ಅನ್ಯೋನ್ಯಾಭಾವ, ಅಂತ್ಯಂ ತಾಭಾವ ಮೆಂಬಿವೇ ಬ್ರಹ್ಮದ ನಿತ್ಯಪದದೊಳ್ ಪೊಗದ ಅಭಾವ ಚತುಷ್ಟ ಯಮದರಲ್ಲಿ— ಮೃತ್ತಿಕೆಯೊಳು ಘಟಾದಿಕವು ಮೊದಲಿಲ್ಲದಿರುವಿಕೆಯೇ ಪ್ರಾಗಭಾವಮೆನಿಸುವದು. ಪುಟ್ಟಿದಘಟ ಮೊಡೆದ ಬಳಿಕಿನ್ನಿಲ್ಲವೆಂಬುದೇ ಪ್ರಧ್ವಂಸಾಭಾವಮೆನಿಸುವದು. ಘಟವು ಪಟಮಲ್ಲ, ಪಟವು ಘಟಮಲ್ಲವೆಂ ಬುದು ಮೊದಲಾದುದೇ ಅನ್ಯೋನ್ಯಾಭಾವ ಮೆನಿಸುವುದು. ವಂಧ್ಯಾ ಪುತ್ರ ಶಶವಿಷಾಣ ಗಗನಾರವಿಂದಾದಿಗಳೆಂದಿಗೂ ಇಲ್ಲವೆಂಬುದೇ ಅತ್ಯಂತಾಭಾವ ಮಕ್ಕುಂ.

## ೭೬. ಪರಿಚ್ಛೇದತ್ರಯ

ಮತ್ತಂ ಕಾಲಪರಿಚ್ಛೇದ, ದೇಶಪರಿಚ್ಛೇದ, ವಸ್ತುಪರಿಚ್ಛೇದವೆಂಬವೇ ಬ್ರಹ್ಮದ ಪರಿಪೂರ್ಣ ಪದದೊಳ್ ನಿರಾಕರಿಸಲ್ಪಕ್ಕ ಪರಿಚ್ಛೇದತ್ರಯಮದ ರೊಳಗೊಂದು ಕಾಲದಲ್ಲುಂಟೊಂದು ಕಾಲದಲ್ಲಿಲ್ಲಮೆನಿಸಿಕೊಂಬುದೇ ಕಾಲ ಪ ರಿಚ್ಛೇದಮಕ್ಕುಂ. ಒಂದು ದೇಶದಲ್ಲುಂಟು ಮತ್ತೊಂದು ದೇಶದಲ್ಲಿಲ್ಲವೆಂದೆನಿಸಿ ಕೊಂಬುದೇ ದೇಶಪರಿಚ್ಛೇದಮೆನಿಸುವುದು. ಒಂದು ವಸ್ತುವಿದಹುದೊಂದು ವಸ್ತುವಿದಲ್ಲವೆಂದೆನಿಸಿಕೊಂಬುದೇ ವಸ್ತುಪರಿಚ್ಛೇದಮಕ್ಕುಂ.

## ೭೭. ಜೀವಾದಿ ನಾಮಭೇದ

ಬಳಿಕ ಪೂರ್ವೋಕ್ತ ಚಿದ್ರೂಪಭೇದಮಾದ ಜೀವೇಶ್ವರಾದಿ ಚತುಷ್ಟ ಯಕ್ಕೆ ನಾಮಾದಿ ವ್ಯವಹಾರಕಲ್ಪನೆಗಳೆಂತೆನೆ—ಮೊದಲು ಜೀವನೇ ವಿಶ್ವ ತೈ ಜಸ ಪ್ರಾಜ್ಞನೆಂದು ತ್ರಿವಿಧಮಾಗಿರ್ಪನವರಲ್ಲಿ ಸ್ಥೂಲ ಶರೀರವ್ಯಷ್ಟ್ಯಭಿಮಾ

ನಿ. ವ್ಯಾವಹಾರಿಕ ಜೀವನು, ಬುದ್ಧಿಪ್ರತಿಫಲಿತ ಚೇತನನು, ಚಿದಾಭಾಸನು, ವಿಕ್ಷೇಪರೂಪನು, ಕ್ಷೇತ್ರಿ, ಶರೀರಿ, ಪ್ರಮಾತೃ, ಕರ್ತೃ, ಭೋಕ್ತೃ, ಸಂಸಾರಿ, ವಿಷಯಿ, ಪರಾಗಾತ್ಮನು, ವಿಜ್ಞಾನಮಯನು, ತ್ವಂಪದ ಮುಖ್ಯಾರ್ಥವೆಂಬಿವು ಮೊದಲಾದವೇ ಜಾಗ್ರದವಸ್ಥಾಭಿಮಾನಿಯಾದ ವಿಶ್ವನ ಪರ್ಯಾಯ ನಾಮಗಳಕ್ಕುಂ. ಬಳಿಕ ಸೂಕ್ಷ್ಮಶರೀರವ್ಯಷ್ಟ್ಯಭಿಮಾನಿ, ಪ್ರಾತಿಭಾಸಿಕಜೀವನು, ಸ್ವಪ್ನಕಲ್ಪಿತನೆಂಬಿವು ಮೊದಲಾದವೇ ಸ್ವಪ್ನಾವಸ್ಥಾಭಿಮಾನಿಯಾದ ತೈಜಸನ ಪರ್ಯಾಯನಾಮಗಳು. ಬಳಿಕ ಕಾರಣ ಶರೀರವ್ಯಷ್ಟ್ಯಭಿಮಾನಿ, ಅವಿದ್ಯೋಪಹಿತನು, ಕಾರ್ಯೋಪಾಧಿಕನೆಂಬಿವು ಮೊದಲಾದವೇ ಸುಷುಪ್ತ್ಯವಸ್ಥಾಭಿಮಾನಿಯಾದ ಪ್ರಾಜ್ಞನ ಪರ್ಯಾಯ ನಾಮಂಗಳು.

## ೭೮. ಆತ್ಮತ್ರಯ

ಬಳಿಕ ಜೀವಾತ್ಮ, ಅಂತರಾತ್ಮ, ಪರಮಾತ್ಮನೆಂದಾತ್ಮತ್ರಯದಲ್ಲಿ ತಪ್ತಾಯಃಪಿಂಡದಂತೆ ದೇಹಾದಿಗಳೊಡನೆ ತನ್ನ ಸಂಬಂಧದಿಂ ಸಕಲ ಸಂಸಾರ ವ್ಯವಹಾರಮುಳ್ಳಾತನೇ ಜೀವಾತ್ಮನು. ಕಮಲಪತ್ರೋದಕದಂತೆ ಜೀವನ ಸಂಸಾರಮಂ ಪೊಂದಿಯುಂ ಪೊಂದದಾತನೇ ಅಂತರಾತ್ಮನಕ್ಕುಂ. ಲೋಕವ್ಯವಹಾರಕ್ಕೆ ಸೂರ್ಯನಂತೆ ಜೀವಾಂತರಾತ್ಮ ವ್ಯವಹಾರಗಳಿಗೆ ಸಾಕ್ಷಿಯೇ ಪರಮಾತ್ಮನಪ್ಪಂ.

## ೭೯. ವಿಕಾರಸ್ಥಿತಿ

ಬಳಿಕ ಜಲದಲ್ಲಿ ನೆರಳು ಚಲಿಸಿತೆಂಬಂತೆ ಮುಗಿಲೋಡೆ ಚಂದ್ರನೋಡಿದನೆಂಬಂತೆ ನದಿಯ ಹರಿಗೋಲು ಗಮಿಸಿದೊಡೆ ತೀರದ ತರುಗಳು ಗಮಿಸಿದವೆಂಬಂತೆ ಮನೆಯಕಂಡಿಯೊಳ್ಬೈದಿರ್ದಸೂರ್ಯಾತಪದಲ್ಲಿ ಹಸ್ತದೆಡೆಯಾಟದಿಂದೆಡೆಯಾಡಿತೆಂಬಂತೆ ದೇಹದ ಜನನ ಮರಣಾದಿಗಳಾತ್ಮಂಗೆಂಬಂತೆ ನಿರ್ವಿಕಾರವಾದ ಆತ್ಮಚೈತನ್ಯಕ್ಕೆ ದೇಹಾದ್ಯುಪಾಧಿಯಿಂದಾದ ಜೀವಾವಸ್ಥೆಯು ಸಂಸಾರವ್ಯವಹಾರವೆಂದರಿಯಲ್ಪೇಳ್ಕುಂ.

## ೮೦. ಈಶ್ವರನಾಮಭೇದ

ಮತ್ತಮಾ ಈಶ್ವರನೇ ವಿರಾಟ್ಪುರುಷನು, ಹಿರಣ್ಯಗರ್ಭನು, ಅಂತರ್ಯಾಮಿಯೆಂದು ತ್ರಿವಿಧವಾಗಿರ್ಪನು. ಅವರಲ್ಲಿ ಸ್ಥೂಲಶರೀರ ಸಮಷ್ಟ್ಯ

ಭಿಮಾನಿ, ವೈಶ್ವಾನರನು ಎಂಬಿವು ಮೊದಲಾದವೇ ವಿರಾಟ್ಪುರುಷನ ಪರ್ಯಾಯನಾಮಂಗಳು. ಬಳಿಕ ಲಿಂಗಶರೀರಸಮಷ್ಟ್ಯಭಿಮಾನಿ, ಮಹಾಪ್ರಾಣನು ಸೂತ್ರಾತ್ಮಕನೆಂಬಿವು ಮೊದಲಾದವೇ ಹಿರಣ್ಯಗರ್ಭನ ಪರ್ಯಾಯನಾಮಂಗಳು. ಬಳಿಕ ಕಾರಣಶರೀರಸಮಷ್ಟ್ಯಭಿಮಾನಿ, ಅಜ್ಞಾನೋಪಹಿತಚೇತನನು, ಕಾರಣೋಪಾಧಿಕನು, ಮಾಯಾವಚ್ಛಿನ್ನನು, ಮಾಯಾಭಾಸನು, ಮಾಯಿ, ಮಾಯಾವಿ, ಜಗದ್ಯೋನಿ ಆನಂದಮಯನು, ಅಕ್ಷರನು, ಅವ್ಯಕ್ತನು, ಅವ್ಯಾಕೃತನು, ಶಬಳಬ್ರಹ್ಮವು, ಸಗುಣಬ್ರಹ್ಮವು, ಪರಮನು, ಪರಮೇಶ್ವರನು, ಮಹೇಶ್ವರನು, ಪರದೇವತೆ, ತತ್ಪದ ಮುಖ್ಯಾರ್ಥವೆಂಬಿವು ಮೊದಲಾದವೇ ಅಂತರ್ಯಾಮಿಯ ಪರ್ಯಾಯನಾಮಂಗಳಕ್ಕುಂ.

## ೮೧. ಉಪಾಧಿದೃಷ್ಟಾಂತ

ಮತ್ತಮಾ ಈಶ್ವರನ ತ್ರಿವಿಧತ್ವದಲ್ಲಿ ದೃಷ್ಟಾಂತಮೆಂತೆನೆ ಹೇಗೊಂದಾನೊಂದು ಚಿತ್ರಪಟವು ದ್ರವ್ಯಾಂತರ ಸಂಬಂಧವಿಲ್ಲದಿಹುದರಿಂ ತಾನೇ ಧೌತಮೆನಿಸಿಕೊಂಬುದೋ ಮೇಲೆ ಗಂಜಿಗೂಳಿನ ಅನುಲೇಪನದಿಂ ಘಟ್ಟಿತವೆನಿಸಿಕೊಂಬುದೋ ಬಳಿಕ ನೀಲಮಯವಾದಾಕಾರದಿಂ ಲಾಂಛಿತಮೆನಿಸಿಕೊಂಬುದೋ ಮೇಲೆ ಯಥಾಯೋಗ್ಯಮಾದ ವರ್ಣಪೂರಣದಿಂ ರಂಜಿತಮೆನಿಸಿಕೊಂಬುದೋ ಹಾಗೆ ಪರಬ್ರಹ್ಮವು ಮೊದಲು ಮಾಯಾತತ್ಕಾರ್ಯರಹಿತವಾದ ತಾನೇ ಚಿತ್ತೆನಿಸಿಕೊಂಬುದು. ಬಳಿಕ ಸರ್ವಕಾರಣಮಾದ ಮಾಯೋಪಾಧಿಯಿಂದಂತರ್ಯಾಮಿಯೆನಿಸಿಕೊಂಬುದು. ಮೇಲೆ ಅವ್ಯಕ್ತಮಾದ ಅಪಂಚೀಕೃತ ಭೂತಕಾರ್ಯ ಸೂಕ್ಷ್ಮಶರೀರಸಮಷ್ಟ್ಯುಪಾಧಿಯಿಂ ಸೂತ್ರಾತ್ಮಕವೆನಿಸಿಕೊಂಬುದು. ಮೇಲೆ ವ್ಯಕ್ತಮಾದ ಪಂಚೀಕೃತ ಭೂತಕಾರ್ಯರೂಪ ಸ್ಥೂಲಶರೀರಸಮಷ್ಟ್ಯುಪಾಧಿಯಿಂ ವಿರಾಟೆನಿಸಿಕೊಳುತಿರ್ಕುಂ.

## ೮೨. ದೃಷ್ಟಾಂತಸಮನ್ವಯ

ಬಳಿಕಿಲ್ಲಿ ಬ್ರಹ್ಮಕ್ಕೆ ಚಿತ್ರಪಟದೃಷ್ಟಾಂತಮಾಗಲಾ ಚಿತ್ರಂಗಳಾವವೆಂದೊಡೆ ವಿರಿಂಚ್ಯಾದಿ ತೃಣಾಂತಮಾದ ಚೇತನಪ್ರಾಣಿಗಳುಂ ಗಿರಿನದ್ಯಾದ್ಯಚೇತನ ವಿಷಯಂಗಳೆಂಬೀ ಜಡಾಜಡರೂಪಜಗವೇ ಚಿತ್ರದೃಷ್ಟಾಂತಮಕ್ಕುಂ.

## ೮೩. ಗುಣಾದಿಕಲ್ಪನೆ

ಮತ್ತಮಾ ಪಾರಮಾರ್ಥಿಕಮಾದ ಚಿದ್ರೂಪ ಬ್ರಹ್ಮಮೊಂದರಲ್ಲಿ ಮಿಥ್ಯಾತ್ಮಕ ಬಹುಚೇತನಾಚೇತನರೂಪ ಜಗತ್ತಿನ ತೋರ್ಕೆಯೆಂತೆಂದೊ

ಡೆ ಹೇಗೆ ಚಿತ್ರದಲ್ಲಿ ಬರೆಯಲ್ಪಟ್ಟ ಮನುಷ್ಯರುಟ್ಟು ಪೊದ್ದಿರ್ದ ನಾನಾವರ್ಣೋಪೇತಮಾದ ಶೀತಾದಿ ನಿವೃತ್ತಿಯಂ ಮಾಡಲಸಮರ್ಥಮಪ್ಪ ಆಭಾಸವಸ್ತ್ರಂಗಳಾದೊಡೆ ಏಕಾಕಾರಮಾದ ಶೀತಾದಿ ಪರಿಹಾರಕಮಪ್ಪ ತಥ್ಯಮಾದ ಆಧಾರಪಟದೊಡನೆ ಸದೃಶಂಗಳಾಗಿರ್ಪವಾಚಿತ್ರದಲ್ಲಿದ್ದ ಗಿರಿನದ್ಯಾದಿಗಳಿಗಾ ಚಿತ್ರಾಧಾರಪಟದೊಡನೆ ಹೋಲಿಕೆ ಘಟಿಸಲರಿಯದೋ ಹಾಗೆ ಚಿದ್ರೂಪ ಪರಬ್ರಹ್ಮದಲ್ಲಿ ಬೇರೆ ಬೇರೆ ತೋರುತಿರ್ದ ವ್ಯವಹಾರಿಕಜೀವರುಗಳೇ ಚಿತ್ತಿನ ಹೋಲಿಕೆಯೊಗಿ ಚಿದಾಭಾಸಚೇತನರುಗಳು, ಚಿತ್ತಿನ ಹೋಲಿಕೆಯಾಗದ ಮೃತ್ತಿಕೆ ಮೊದಲಾದುವೇ ಜಡರೂಪಂಗಳಪ್ಪುದರಿಂ ಚೇತನಾಚೇತನಾತ್ಮಕಮೂದ ಜಗತ್ತು ಚಿದ್ರೂಪಬ್ರಹ್ಮದಲ್ಲಿಯೇ ಕಲ್ಪಿತವೆಂದು ನಿಶ್ಚಯಿಸಲ್ವೇಳ್ಕುಂ. ಬಳಿಕಲ್ಲಿ ಸರ್ವಜ್ಞತ್ವ, ಸರ್ವೇಶ್ವರತ್ವ, ಸರ್ವನಿಯಂತೃತ್ವ, ಸರ್ವಾಂತರ್ಯಾಮಿತ್ವ, ಸರ್ವಾತ್ಮಕತ್ವ, ಸರ್ವಶಕ್ತತ್ವಾದಿಗಳು ಈಶ್ವರನ ಮುಖ್ಯ ಗುಣಂಗಳಾಗಿಯುಂ ಅಕರ್ತೃತ್ವ. ಕರ್ತೃತ್ವ, ಅನ್ಯಥಾಕರ್ತೃತ್ವವೆಂಬವೇ ಈಶ್ವರನ ಪ್ರಭುತ್ವ ಸಾಮರ್ಥ್ಯತ್ರಯಮಾಗಿಯುಂ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ. ಅನುಪ್ರವೇಶವೆಂಬವೇ ಈಶ್ವರನ ಪಂಚಕೃತ್ಯಗಳಾಗಿಯುಂ ತಿಳಿಯಲ್ವೇಳ್ಕುಂ,

## ೮೪. ಈಶ್ವರಕೃತ್ಯಕ್ಕೆ ದೃಷ್ಟಾಂತ

ಬಳಿಕ ನಿರ್ವಿಕಾರದಿಂದದ್ವಿತೀಯ ಬ್ರಹ್ಮಸ್ವರೂಪನಾದೀಶ್ವರನಲ್ಲಿ ಸೃಷ್ಟ್ಯಾದಿ ಬಹುಕೃತ್ಯವೆಂತು ಘಟಿಸುವದೆಂದೊಡೆ—ಹೇಗೆ ಸೂರ್ಯನು ಇಚ್ಛಾಯತ್ನಾದಿಕಮಿಲ್ಲದೆ ತನ್ನ ವರ್ಷ ಕಿರಣದಿಂ ವೃಷ್ಟಿರೂಪ ಜಲಮಂ ಕರೆದು ಬಳಿಕಾ ಜಲದಲ್ಲಿ ಪ್ರತಿಬಿಂಬರೂಪದಿಂ ತಾನೆಪೊಕ್ಕು ಮೇಘಾದಿಗಳಿಂ ಜಲಪ್ರತಿಬಿಂಬಮಂ ಮರಸಿ ಹಿಮಕಿರಣಾದಿಗಳಿಂದಾ ಜಲಪ್ರತಿಬಿಂಬಮಂ ತಡೆದು ಉಷ್ಣಕಿರಣದಿಂದಾಜಲಮಂ ಪೀರ್ದು ಬಳಿಕ ಪ್ರತಿಬಿಂಬವಂ ತನ್ನೊಡಗೂಡಿಕೊಳುತಿರ್ಪನೋಹಾಗೆ. ಮಹೇಶ್ವರನು ತನ್ನ ಮಾಯಾಶಕ್ತಿಯೊಡನೆ ಚಿತ್ಪ್ರಧಾನತ್ವದಿಂ ನಿಮಿತ್ತಕಾರಣಮಾಗಿ ಜಡಪ್ರಧಾನತ್ವದಿಂದುಪಾದಾನಕಾರಣಮೆಂದೆನಿಸಿ ಬುದ್ಧ್ಯಾದಿ ಕಾರ್ಯಮಂ ಸೃಜಿಸಿ ಜೀವರೂಪದಿಂದಲ್ಲಿ ತಾನೇ ಪ್ರವೇಶಿಸಿ ಕರ್ಮದಿಂ ಭೋಕ್ತೃವೆನಿಸಿ ನಿಯಾಮಕಶಕ್ತಿಯಿಂದಾ ಭೋಗ್ಯಭೋಕ್ತೃಗಳಂ ನಿಯಮಿಸಿ ರುದ್ರರೂಪದಿಂದಾಕಾರ್ಯಮಂ ಸಂಹ

ರಿಸಿ ಬಳಿಕ ಶ್ರುತ್ಯಾಚಾರ್ಯರೂಪದಿಂದಾ ಜೀವನಂ ತನ್ನೊಡನೈಕ್ಯವಂ ಮಾಡಿಕೊಳುತಿರ್ಪನೆಂಬುದೇ ಸಂಸ್ಕೃತಿಯಕ್ಕುಂ.

### ೮೫. ವ್ಯಷ್ಟಿ ಸಮಷ್ಟಿ ವಿವೇಕ.

ಬಳಿಕ ವ್ಯಷ್ಟಿಸಮಷ್ಟಿಯೆಂಬವೇ ಜೀವೇಶ್ವರರ್ಗೆ ವಿಭಾಗೋಪಾಧಿದ್ವಯಮದರಲ್ಲಿ ಅನೇಕ ವೃಕ್ಷಗಳುಳ್ಳದನೊಂದು ವನಮಾಗಿ ತಿಳಿವಂತೆ ಅನೇಕಜೀವರೆಲ್ಲರನ್ನೂ ತನ್ನಾತ್ಮರೆಂಬಭಿಮಾನವೇ ಈಶ್ವರಂಗೆ ಸಮಷ್ಟಿರೂಪಮಹುದು. ಆ ವನದಲ್ಲಿ ಇದೊಂದುವೃಕ್ಷ ವಿದೊಂದು ವೃಕ್ಷವೆಂದು ಬೇರೆ ಬೇರೆ ಕುರುಹಿಡುವಂತೆ ಭಿನ್ನ ಭಿನ್ನ ದೇಹಿತ್ವಭಿಮಾನವೇ ಜೀವಂಗೆ ವ್ಯಷ್ಟಿರೂಪಮಕ್ಕುಂ.

### ೮೬. ಕೂಟಸ್ಥಾದಿ ನಾಮವಿವೇಕ

ಮತ್ತಮಾ ವಿಶ್ವಾದಿ ಜೀವತ್ರಯಾಧಿಷ್ಠಾನಚೇತನನು, ತುರ್ಯನು, ಸ್ವಯಂಶಬ್ದಾರ್ಥನು, ಸಾಕ್ಷಿಕನು, ಪಾರಮಾರ್ಥಿಕ ಜೀವನು, ಪ್ರತ್ಯಗಾತ್ಮನು ಅಂತರ್ಯಾಮಿ, ಅನುಸಂಧಾತೃ, ಅವಚ್ಛಿನ್ನಜೀವನು, ತ್ವಂಪದಲಕ್ಷ್ಯಾರ್ಥಮೆಂಬಿವು ಕೂಟಸ್ಥನ ಪರ್ಯಾಯನಾಮಗಳಕ್ಕುಂ.

### ೮೭. ಬ್ರಹ್ಮಪರ್ಯಾಯ ನಾಮಗಳು

ಮತ್ತಮಾ ಅಂತರ್ಯಾಮಿ ಮೊದಲಾದ ಈಶ್ವರತ್ರಯಕ್ಕೆ ಅಧಿಷ್ಠಾತೃ, ಪರಬ್ರಹ್ಮ, ಪರತತ್ವ, ಪರಮಾತ್ಮ, ಸರ್ವಾಧಿಷ್ಠಾತೃ, ವಿಶುದ್ಧಚಿತ್ತು, ನಿರ್ಗುಣ, ನಿರ್ವಿಶೇಷ, ನಿಷ್ಕಳ, ನಿರವದ್ಯ, ನಿರಂಜನ, ಅಸಂಗ. ನಿರುಪಪ್ಲವಾನಂದ, ನಿರ್ವಿಕಾರ, ನಿರ್ಮಾಯಿ' ನಿರುಪದ್ರವ, ಸತ್ತಾಮಾತ್ರ, ಸತ್ಯ, ತತ್ಪದಲಕ್ಷ್ಯಾರ್ಥಮೆಂಬಿವು ಮೊದಲಾದವೇ ಅದ್ವೈತ ಬ್ರಹ್ಮಪರ್ಯಾಯ ನಾಮಂಗಳಕ್ಕುಂ.

### ೮೮. ದೃಗ್ವಿವೇಕಸಾರ

ಬಳಿಕ ಮೃತ್ತಿಕೆಯೊಂದೇ ನಾಮರೂಪಗಳಿಂ ಘಟಾದಿ ಬಹು ಭೇದಮೂದಂತೆ ಸುವರ್ಣಮೊಂದೇ ವಾಚಾರಂಭಣದಿಂ ಕಟಕ ಮಕುಟಾದಿ ಪಲವಾಭರಣಮಾದಂತೆ, ಜಲಮೊಂದೇ ವಾಯುವಶದಿಂ ಫೇನತರಂಗಾದಿ ಸಮುದಾಯವಾದಂತೆ, ದೀಪಮೊಂದೇ ಘಟಪಿವರಗಳಿಂ ಬಹುರೂಪಮಾದಂತೆ

ಮಾರುತವೊಂದೇ ವಂಶವಿವರಗಳಿಂ ಮಧುರ ಮಂದ್ರಾದಿ ವಿಭಿನ್ನಮಾದಂತೆ, ಸ್ವರವೊಂದೇ ಗಾಯಕನ ಕರಣವೃತ್ತಿಯಿಂ ನಾನಾರಾಗವೊದಂತೆ, ಗಗನ ಮೊಂದೇ ಗೃಹಾದ್ಯುಪಾಧಿಯಿಂದನೇಕಮಾದಂತೆ, ಧ್ವನಿಯೊಂದೇ ವಾದ್ಯ ಭೇದದಿಂದ ಹಲವು ಬಗೆಯಾದಂತೆ, ನಭವೊಂದೇ ಕದಳೀದಳದ ಖಂಡಂಗಳಲ್ಲಿ ಕರಿ ತುರಗಾದಿ ವಿಚಿತ್ರಮಾದಂತೆ, ರವಿಯೋರ್ವನೇ ಜಲಕುಂಭಾದಿಕದಿಂ ನಾನಾತ್ವವನ್ನೈದಿದಂತೆ, ಮುಖವೋದೇ ದರ್ಪಣಭೇದದಿಂದನೇಕಮಾದಂತೆ, ಲೆಕ್ಕವೊಂದೇ ಬಹುಬಿಂದುಗಳಿಂ ದಶ ಶತ ಸಹಸ್ರಾದಿಕಮಾದಂತೆ, ಚಿತ್ತೊಂ ದರಲ್ಲಿ ಉಪಾಧಿ ಭೇದಕಲ್ಪನೆಯಿಂ ಪೂರ್ವೋಕ್ತ ಜೀವೇಶಾದಿ ಸಕಲ ಭೇದವ್ಯವಹಾರಕಲ್ಪನಮಪ್ಪುದೆಂಬಿವು ಮೊದಲಾದವಲ್ಲಂ ದೃಗ್ದೃಶ್ಯವಿವೇಕಸಾರ ಮಾಗಿರ್ಕುಂ.

## ೪೯. ಮಾಯಾಸ್ವರೂಪ ವಿವೇಕ

ಬಳಿಕನಾದಿಯಿಂ ಚಂದ್ರನ ಕಳಂಕು ಚಂದ್ರನಂ ನೆಮ್ಮಿ ಚಂದ್ರನಂ ಮುಸುಕದೆ ಚಂದ್ರನಿಂ ಬೆಳಗಿಸಿಕೊಂಡು ಚಂದ್ರಪೂರ್ಣ ಕಳೆಯಿಂದಡಗಿ ತೋ ರದಂತೆ ಅನಾದಿಯಾದ ಭಾವರೂಪಾಜ್ಞಾನವು ನಾನೆನ್ನರಿಯನೆಂಬ ಪ್ರಸಿದ್ಧ ಮಾದ ಲೋಕವ್ಯವಹಾರದಲ್ಲಿ ಆತ್ಮನಂ ನೆಮ್ಮಿ ಆತ್ಮನನಾಚ್ಛಾದಿಸದೆ ಆತ್ಮನಿಂ ದರುಹಿಸಿಕೊಂಡು ಆತ್ಮಜ್ಞಾನದಿಂ ತೋರದೆಯುಂ, ಮತ್ತಮಗ್ನಿಯ ದಾಹ ಶಕ್ತಿಯು ಹೇಗೆ ಮಣಿಮಂತ್ರಾದಿ ಪ್ರಯೋಗದಿಂ ತಾನೇ ಬಂಧಿಸಿಕೊಳ್ಳುತ್ತಿ ಹುದರಿಂದ ಅಗ್ನಿಸ್ವರೂಪವಲ್ಲದೆ ಅಗ್ನಿಯಂ ಬಿಟ್ಟು ತೋರದೆ ಸ್ಫೋಟಕಾದಿ ಕಾರ್ಯಗಮ್ಯಮಾಗಿರ್ಪುದೋ ಹಾಗೆ ಬ್ರಹ್ಮಸ್ವರೂಪನಲ್ಲದೆ, ಬ್ರಹ್ಮವಿಲಕ್ಷಣ ಮಾಗಿ ತೋರದೆ ವಿಯದಾದಿ ಕಾರ್ಯಗಮ್ಯಮಾಗಿಯುಂ, ಅಘಟಿತ ಘಟನಾ ಸಾಮರ್ಥ್ಯಮಾಗಿಯುಂ, ಸರ್ವಾನರ್ಥಗಳಿಗೆ ಕಾರಣಮಪ್ಪುದೇ ದೃಶ್ಯರೂಪ ಮಾಯಾಶಕ್ತಿಯಕ್ಕುಂ.

## ೫೦. ಮಾಯಾಲಕ್ಷಣ

ಬಳಿಕ ಅಸತ್ತು, ಜಡ, ದುಃಖ, ಅನಿತ್ಯ, ಖಂಡಿತವೆಂಬವೇ ಮಾಯಾ ಪಂಚಲಕ್ಷಣಂಗಳು. ಅವುಗಳಲ್ಲಿ—ಇಲ್ಲದ ಶಶವಿಷಾಣಾದಿಕವೇ ಅಸದ್ರೂಪು, ಪಾಷಾಣಾದಿಕವೇ ಜಡರೂಪು, ರಜಸ್ತಮೋಮಯವಾದ ಬುದ್ಧಿಯ ಘೋರ

ವೃತ್ತ್ಯಾದಿಗಳೇ ದುಃಖರೂಪು; ತೋರಿ ಕೆಡುವ ದೇಹಾದಿಕವೇ ಅನಿತ್ಯ ರೂಪು; ಕಾಲಪರಿಚ್ಛೇದಾದಿಕವೇ ಖಂಡಿತರೂಪವಕ್ಕುಂ.

## ೯೧. ಅನಿರ್ವಾಚ್ಯ ನವಪ್ರಕಾರ

ಬಳಿಕ ಭಿನ್ನ, ಅಭಿನ್ನ, ಭಿನ್ನಾಭಿನ್ನ; ಸತ್ತು, ಅಸತ್ತು, ಸದಸತ್ತು; ಸಾವಯುವ, ನಿರವಯುವ, ಸಾವಯುವನಿರವಯುವವುಲ್ಲೆಂಬುದು ಇಂತು ಮಾಯೆಗನಿರ್ವಾಚ್ಯ ನವ ಪ್ರಕಾರಂಗಳು. ಅವುಗಳೊಳು ಘಟಪಟಾದಿಗಳು ಬೇರೆ ಬೇರೆ ತೋರ್ಪುದೇ ಭಿನ್ನ; ಘಟವೊಂದಾಗಿ ತೋರ್ಪುದೇ ಅಭಿನ್ನ; ಶರೀರದೊಳು ಅವಯುವಗಳು ಬೇರೆ ಬೇರೆ ತೋರಿದರುಂ ಎಲ್ಲವೂ ಶರೀರವಾಗಿರುವುದುಂ, ರೋಮ ನಖಾದಿಗಳು ಭೋಗಸಾಧನವಾದ ಶರೀರಕ್ಕೆ ಸೇರಿಯುಂ ಸೇರದೆಯುೞ ಯಿರುವುದೇ ಭಿನ್ನಾಭಿನ್ನ. ಇದೆಯೆಂಬ ಗಗನಾದಿಕವೇ ಸತ್ತು, ಇಲ್ಲವೆಂಬ ಗಗನ ಕುಸುಮವೇ ಅಸತ್ತು, ಇದೆ ಯಿಲ್ಲವೆಂಬ ಶುಕ್ತಿಕಾ ರಜತಾದಿಕವೇ ಸದಸತ್ತು. ಸಾಕಾರವಾಗಿರ್ಪುದೇ ಸಾವಯುವ, ನಿರಾಕಾರವಾಗಿ ವ್ಯವಹಾರವುಳ್ಳ ಅಭಾವವೇ ನಿರವಯುವ, ಅನಿರ್ವಾಚ್ಯವಾದ ಮರಹೆಂಬ ಅಜ್ಞಾನವೇ ಸಾವಯುವನಿರವಯುವವುಲ್ಲೆಂಬುದಕ್ಕುಂ.

## ೯೨. ಮಾಯಾಪ್ರತೀತಿತ್ರಯ

ಬಳಿಕ ಮಾಯೆಯೇ ಶ್ರುತಿಸಂಬಂಧಿಜ್ಞಾನ, ಯುಕ್ತಿಸಂಬಂಧಿಜ್ಞಾನ, ಲೋಕಸಂಬಂಧಿಜ್ಞಾನವೆಂಬ ಜ್ಞಾನತ್ರಯದಿಂ ಕ್ರಮವಿಡಿದು ಗಗನ ಕುಸುಮದಂತೆ ತುಚ್ಛವೆನಿಸಿ, ಶುಕ್ತಿಕಾ ರಜತದಂತ ಅನಿರ್ವಾಚ್ಯವೆನಿಸಿ, ಆತ್ಮನಂತೆ ಅಸ್ತಿಯೆಂದೆನಿಸಿಕೊಳ್ಳುತಿರ್ಕುಂ.

## ೯೩. ಮಾಯಾಪಂಚಕ

ಮತ್ತಮಾ ತಮಸ್ಸು, ಮಾಯೆ, ಮೋಹ, ಅವಿದ್ಯೆ, ಅನೃತಾತ್ಮಿಕೆಯೆಂಬಿವೇ ಮಾಯಾಪಂಚಕವುದರಲ್ಲಿ—ಜೀವಚೇತನವನಾಚ್ಛಾದಿಪುದರಿಂ ತಮಸ್ಸೆನಿಸುವುದು. ಜಗದ್ರೂಪವಾದನ್ಯಥಾ ತೋರ್ಕೆಗೆ ಕಾರಣವಪ್ಪುದರಿಂದ ಮಾಯೆಯೆನಿಸುವುದು. ಆ ತೋರಿದ ಜಗತ್ತಿನಲ್ಲಿ ಶುಕ್ತಿಕಾ ರಜತಾದಿ ವಿಪರೀತ ಜ್ಞಾನವುಂ ಪುಟ್ಟಿಸುವುದಾಗಿ ಮೋಹವೆನಿಸುವದು. ವಿದ್ಯೆಯಿಂ ಕೆಡು

ವುದರಿಂ ದವಿದ್ಯೆಯೆನಿಸುವದು. ಸದ್ರೂಪಕ್ಕೆ ವಿಲಕ್ಷಣಮಪ್ಪುದರಿಂ ದನೃತಾತ್ಮಿಕೆಯಕ್ಕುಂ.

### ೯೪. ಮಾಯಾಧರ್ಮದ್ವಯ

ಬಳಿಕ ಸಂಕೋಚ ವಿಕಾಸಗಳೇ ಮಾಯಾಧರ್ಮದ್ವಯಮದರಲ್ಲಿ ಹೇಗೆ ಚಿತ್ರಪಟವು ಉನ್ನತ ಪ್ರಸರಣದಿಂ ಚಿತ್ರಂಗಳಂ ಬಹುಳವಾಗಿ ಕಾಣಿಸಿ ಸಂಕೋಚದಿಂ ಚಿತ್ರಂಗಳಂ ಮರೆಸುತ್ತಿಹುದೋ ಹಾಗೆ ಮಾಯೆಯು ತನ್ನ ವಿಕಾಸಧರ್ಮದಿಂ ಜಗತ್ಪ್ರಪಂಚಮಂ ತೋರಿ, ಸಂಕೋಚಧರ್ಮದಿಂದದನಡಗಿಸಿಕೊಳ್ಳುತಿರ್ಕುಂ.

### ೯೫. ಮಾಯಾಗುಣದ್ವಯ

ಬಳಿಕ ಅಸ್ವತಂತ್ರತೆ ಸ್ವತಂತ್ರತೆಗಳೆಂಬೆರಡು ಮಾಯಾಗುಣಂಗಳವುಗಳಲ್ಲಿ ಮಾಯೆಯು ಮಿಥ್ಯೆಯಪ್ಪುದರಿಂ ಸದ್ರೂಪ ಚೈತನ್ಯಮಂ ಬಿಟ್ಟು ತೋರದಿಹುದೇ ಅಸ್ವತಂತ್ರತೆಯೆನಿಸುವುದು. ಸಾಕ್ಷಿಕನಾಗಿರ್ಪುದರಿಂ ದಸಂಗನಾದಾತ್ಮನಂ ಜೀವಾದಿಪ್ರಪಂಚಮಯನಾಗಿ ಮಾಳ್ಪುದೇ ಸ್ವತಂತ್ರತೆಯಕ್ಕುಂ.

### ೯೬. ಮಿಥ್ಯಾತ್ವನಿರುಕ್ತಿ

ಬಳಿಕ ವಸ್ತುಗತ್ಯಾ ಪರಮಾರ್ಥ ವಿಚಾರದೊಳು ಮಾಯೆಯೆಂಬುದು ಯಿಲ್ಲವಾಗಿ ತಾನಿಲ್ಲದ ಕಡೆ ತೋರುತ್ತಿರುವದೇ ಮಿಥ್ಯೆ. ಇದೆ ಇಲ್ಲವೆನ್ನಲಳವಲ್ಲದ್ದೇ ಮಿಥ್ಯೆ. ಬ್ರಹ್ಮಜ್ಞಾನಮಾತ್ರದಿಂದಳಿದು ಪೋಪುದೇ ಮಿಥ್ಯೆ. ಕಾಲತ್ರಯದಲ್ಲಿಯೂ ನಿಷೇಧಿಸಲ್ಪಡತಕ್ಕದ್ದೇ ಮಿಥ್ಯೆ. ಸತ್ತಿಗಿಂತಲೂ ಬೇರೆಯಾಗಿ ತೋರ್ಪುದೇ ಮಿಥ್ಯೆ. ಇಂತು ಮಿಥ್ಯಾರೂಪವಾದ ಮಾಯೆ. ತತ್ಕಾರ್ಯಮಾದ ಪ್ರಪಂಚ, ತನ್ನಿಷ್ಟವಾದ ಮಿಥ್ಯಾತ್ವ, ತದ್‌ಜ್ಞಾನ ಮುಂತಾದವೆಲ್ಲವು ಸ್ವರೂಪತಃ ಮಿಥ್ಯೆಯಾಗಿರಲು ಬ್ರಹ್ಮಾತಿರಿಕ್ತವಾಗಿ ಮಾಯೆಯುಸರ್ವಥಾ ಶೂನ್ಯಮಾದರುಂ ಬ್ರಹ್ಮಜ್ಞಾನಪರ್ಯಂತಮುಂ ಸ್ವಪ್ನಗಜಾದಿಗಳಂತೆ ತೋರುತಿರ್ದು ಬಳಿಕ ವಿಚಾರಬಾಧ್ಯಮಪ್ಪುದೇ ಮಿಥ್ಯಾತ್ವಮೆಂದು ಮುಮುಕ್ಷುಗಳು ನಿರ್ಧರಿಸೆ ಪೇಳ್ಕುಂ.

## ೯೭. ಮಾಯಾವೃತ್ತಿತ್ರಯ

ಮತ್ತಂ ವಿಶುದ್ಧ ಸತ್ವಸ್ವರೂಪಮಾಯೆ, ಮಲಿನಸತ್ವಸ್ವರೂಪಾವಿದ್ಯೆ, ತಮಃಪ್ರಧಾನರೂಪ ಪ್ರಕೃತಿಯೆಂಬಿವೇ ಮೂರು ಮಾಯಾ ವೃತ್ತಿಗಳವುಗಳಲ್ಲಿ ಮಾಯೆಯು ಸುಷ್ಪ್ತಿಪ್ರಳಯಂಗಳಲ್ಲಿ ಪರಬ್ರಹ್ಮದೊಡನೆ ಐಕ್ಯಾಧ್ಯಾಸಮಾಗಿದ್ದು ಸ್ವಪ್ನ ಜಾಗರಣಂಗಳಲ್ಲಿ ನಿಂತು ಭೇದಾವಸ್ಥೆಯನ್ನೈದುತ್ತಿಹುದಾಗಳಾ ಬ್ರಹ್ಮಚೈತನ್ಯಮದರಲ್ಲಿ ಪ್ರತಿಫಲಿಸಿ ಸರ್ವಜ್ಞತ್ವಾದಿ ಗುಣವಿಶಿಷ್ಟನಾದೀಶ್ವರನೆನಿಸಿ ತತ್ಪದಾರ್ಥ (ಪ್ರತಿಪದಾರ್ಥ) ಮೆನಿಸಿ ಪ್ರೇರಯಿತೃವೆನಿಸಿಕೊಂಬುದರಿಂದ ಆ ಮಾಯೆ ಈಶ್ವರಂ ಗುಪಾಧಿಯಾಗಿ ಅಮೋಹಕಾರಿಣಿಯೆನಿಸಿಕೊಂಬುದು. ಮತ್ತಮಾ ಅವಿದ್ಯೆ ತನ್ನ ನಾನಾತ್ವದಿಂ ಭೋಕ್ತೃಗಳಾದ ಪಶುಪದಾರ್ಥಮೆನಿಪ ಜೀವರಿಗೆ ಉಪಾಧಿಯಾಗಿ ಮೋಹಿಸುತ್ತಿಹುದು. ಮತ್ತಮಾ ಪ್ರಕೃತಿಯೇ ಭೋಗ್ಯಾತ್ಮಕತ್ವದಿಂ ಪಾಶಪದಾರ್ಥಮೆನಿಸಿಕೊಂಡು, ಗುಣತ್ರಯ ಸಮಾನಾವಸ್ಥೆಯಿಂದಿರ್ದು ಬಳಿಕ ಅವಿದ್ಯೆಯೊಳ್ ಪ್ರತಿಬಿಂಬಿಸಿದ ಜೀವರ ಭೋಗಾರ್ಥಮಾಗಿ ಸಕಲಕಾರ್ಯಮಾಗಲೋಸುಗ ಈಶ್ವರಸನ್ನಿಧಾನ ಲಕ್ಷಣವೀಕ್ಷಣಮಾತ್ರದಿಂ ವಿಕಸಿಸಿ ಪ್ರಪಂಚವಂ ಕಲ್ಪಿಸುತಿರ್ಕುಂ.

## ೯೮. ಮಹದಾದಿ ಸೃಷ್ಟಿಕ್ರಮ

ಮತ್ತಮಾ ಪ್ರಕೃತಿಯು ವಿಕೃತಿಯಿಂ ಕಾಲತತ್ವಮಂ ಪಡೆವುದು. ಮೇಲಾ ಕಾಲವಶದಿಂ ಪರಿಣಮಿಸಿ ಮಹತ್ತತ್ವಮೆನಿಸುವುದು. ಬಳಿಕಾ ಮಹತ್ತತ್ವಮಾದೊಡೆ ಬಿತ್ತಿನೀರೆರದ ರಂಕುರಿಸದೆ, ಮೊದಲಂತಿರದೆ, ಉದ್ಭಿಜ್ಜಾವಸ್ಥೆಯನ್ನೈದಿದ ಬೀಜದಂತೆ ಕಾರಣಪ್ರಕೃತಿಯಲ್ಲದೆ ಕರಣಮಾದಹಂಕಾರಮಲ್ಲದೆ ಮಿಥ್ಯಾಜ್ಞಾನದ ನಿರ್ವಿಕಲ್ಪ ಸ್ವರೂಪದಿಂ ಮಧ್ಯಾವಸ್ಥೆಯೆನಿಸುವದು. ಮತ್ತಮಾ ಮಹತ್ತತ್ವದಿಂ ಗುಣಭೇದವಡೆದು ಮಿಥ್ಯಾಜ್ಞಾನದ ಸವಿಕಲ್ಪ ಸ್ವರೂಪಮಾದ ಪ್ರಥಮಾಧ್ಯಾಸಮೆನಿಸಿಕೊಂಬ ಮೂಲಾಹಂಕಾರ ಜನಿಸುತಿರ್ಕುಂ. ಬಳಿಕ ಸತ್ವಗುಣ, ರಜೋಗುಣ, ತಮೋಗುಣವೆಂಬವೇ ಗುಣತ್ರಯಮಾಗಿಪ್ಪುದು. ಪ್ರಕಾಶ, ಪ್ರವೃತ್ತಿ, ಮೋಹವೆಂಬವೇ ಸತ್ವಾದಿ ಗುಣರೂಪಂಗಳು. ವೈಕಾರಿಕ, ತೈಜಸ, ಭೂತಾದಿಯೆಂದು ಆ ಸತ್ವಾದಿಗುಣ ಪರ್ಯಾಯನಾಮಗಳವುಗಳಲ್ಲಿ ಸತ್ವಗುಣದಿಂ ಮಾನಸಾದ್ಯಂತಃಕರಣ ಚತು

ಷ್ಟಯಮುಂ, ಶ್ರೋತ್ರಾದಿ ಜ್ಞಾನೇಂದ್ರಿಯ ಪಂಚಕಮುಂ ಪುಟ್ಟಿದವು. ರಜೋಗುಣದಿಂ ವಾಗಾದಿಕರ್ಮೇಂದ್ರಿಯಪಂಚಕಮುಂ, ಪ್ರಾಣಾದಿವಾಯು ಪಂಚಕಮುಂ ಉದಿಸಿದವು. ತಮೋಗುಣದಿಂದ ಆಕಾಶಾದಿ ಭೂತಪಂಚಕಂಗಳು ಆ ಭೂತಪಂಚಕಂಗಳ ಪಂಚೀಕರಣಮೇಳದಿಂ ಬ್ರಹ್ಮಾಂಡ, ಭುವನ, ಶರೀರ, ಘಟಾದಿ ವಿಷಯುಂಗಳುದಿಸಿದವು.

## ೯೯. ಅಂತಃಕರಣ ಚತುಷ್ಟಯ

ಬಳಿಕ ಮನಸಾದಿ ಅಂತಃಕರಣ ಚತುಷ್ಟಯಕ್ಕೆ ವಿಷಯುಂಗಳಂ ನೆನೆವುದು ನಿಶ್ಚಯಿಸುವುದು ಅಭಿಮಾನಿಸುವುದು ಅವಧರಿಸುವದೆಂಬುವವೇ ವ್ಯಾಪಾರಂಗಳು. ಚಂದ್ರ, ಚತುರ್ಮುಖ, ಕ್ಷೇತ್ರಜ್ಞ, ತ್ರಿಪುರಾಂತಕರೆಂಬುವರೇ ಅಧಿದೇವತೆಗಳು. ಹೃದಯಗೋಳಕವೇ ಸ್ಥಾನಮಕ್ಕುಂ.

## ೧೦೦. ಜ್ಞಾನೇಂದ್ರಿಯಪಂಚಕ

ಮತ್ತಮಾ ಶ್ರೋತ್ರಾದಿ ಜ್ಞಾನೇಂದ್ರಿಯುಂಗಳಿಗೆ ಕ್ರಮದಿಂ ಶಬ್ದಾದಿಗಳಂ ವಿಷಯುಗೊಳಿಸುವದೆಂದರೆ—ಶಬ್ದವಂ ಕೇಳುವದು, ಸ್ಪರ್ಶವಂ ಸೋಂಕುವದು, ರೂಪವಂ ನೋಡುವದು, ರಸವಂ ರುಚಿಸುವದು, ಗಂಧವಂ ವಾಸಿಪ್ಪುದೆಂಬುವದೇ ವ್ಯಾಪಾರಂಗಳು. ದಿಕ್ಕು, ಮಾರುತ, ಮಿತ್ರ, ವರುಣ, ಅಶ್ವಿನೇಯರೆಂಬವರೇ ಅಧಿದೇವತೆಗಳಾಗಿಹರು. ಕರ್ಣಾದಿ ಗೋಳಕಂಗಳೇ ಸ್ಥಾನಂಗಳಕ್ಕುಂ. ಬಳಿಕ ಶ್ರೋತ್ರಾದೀಂದ್ರಿಯುಂಗಳಿಗೆ ಬಾಹ್ಯದೊಳಗೆ ಶಬ್ದಾದಿಗಳ ನರಿವಂತೆ ಕಿವಿಗಳಂ ಅಂಗುಳಿಯಿಂ ಮುಚ್ಚುವಲ್ಲಿ ಪ್ರಾಣವಾಯು ಜಠರಾಗ್ನಿಗಳಲ್ಲುಂಟಾದಶಬ್ದಗ್ರಹಣಾನುಭವದಿಂ, ನೇತ್ರಮಂ ಮುಚ್ಚಿದಲ್ಲಿ ಯೊಳಗಣ ತಮೋರೂಪಗ್ರಹದಿಂ, ಅನ್ನಪಾನ ಸ್ವೀಕಾರಮಾದಲ್ಲಿ ಉಷ್ಣಶೀತಾದಿ ಸ್ಪರ್ಶಗ್ರಹಣದಿಂ, ಉದ್ಗಾರವಾದಲ್ಲಿ ರಸ ಗಂಧಗ್ರಹಣದಿಂ ಅಂತರಶಬ್ದಾದಿ ವಿಷಯುಗ್ರಹಣಗಳುಂಟೆಂಬುದೇ ಸಿದ್ಧಮಕ್ಕುಂ.

## ೧೦೧. ಕರ್ಮೇಂದ್ರಿಯಪಂಚಕ

ಮತ್ತಮಾ ವಾಗಾದಿ ಕರ್ಮೇಂದ್ರಿಯುಂಗಳಿಗೆ ಕ್ರಮದಿಂ ನುಡಿವುದು ಪಿಡಿವುದು ನಡೆವುದು ಬಿಡುವುದು ಆನಂದಗೊಳಿಸುವದೆಂಬವೇ ವ್ಯಾಪಾರಂಗಳು. ಅಗ್ನಿ, ಇಂದ್ರ, ಹರಿ, ಮೃತ್ಯು, ಪ್ರಜಾಪತಿಗಳೆಂಬವರೇ ಅಧಿದೇವತೆಗಳು. ಮುಖಾದಿ ಗೋಲಕಂಗಳೇ ಸ್ಥಾನಗಳಕ್ಕುಂ.

## ೧೧೨. ಆಧ್ಯಾತ್ಮಿಕಾದಿ ವಿವೇಕ

ಬಳಿಕವುಗಳಲ್ಲಿ ಅಂತಃಕರಣಚತುಷ್ಟಯ ಜ್ಞಾನೇಂದ್ರಿಯ ಪಂಚಕ ಕರ್ಮೇಂದ್ರಿಯಪಂಚಕಮುಂ ಗೂಡಿ ಹದಿನಾಲ್ಕು ಆಧ್ಯಾತ್ಮಿಕಂಗಳು. ಅವುಗಳ ವಿಷಯಗಳೇ ಆಧಿಭೌತಿಕಂಗಳು. ಅವುಗಳಿಗಧಿದೇವತೆಗಳೇ ಆಧಿದೈವಿಕಂಗಳೆನ್ನಿಸಿಕೊಳ್ಳುತಿರ್ಕುಂ.

## ೧೧೩. ಇಂದ್ರಿಯಮೂಲ ಸಮನ್ವಯ

ಮತ್ತಮಾ ಇಂದ್ರಿಯಾಧಿದೇವತೆಗಳೇ ವಿರಾಟ್ಪುರುಷನ ಇಂದ್ರಿಯಂಗಳು. ಆ ಇಂದ್ರಿಯಂಗಳೇ ಹಿರಣ್ಯಗರ್ಭನ ಶರೀರವು. ಆ ಶರೀರವೇ ತಮೋರೂಪದಿಂ ಅಂತರ್ಯಾಮಿಗಾವರಣಮಾಗಿರ್ಕುಂ.

## ೧೧೪. ಪ್ರಾಣಪಂಚಕಾದಿ

ಮತ್ತಮಾ ಪ್ರಾಣವಾಯುವು ಹೃದಯಸ್ಥಾನದಲ್ಲಿರ್ದು ಉಚ್ಛ್ವಾಸನಿಃಶ್ವಾಸಗಳಂಗೈಯುತ್ತಿಹುದು. ಅಪಾನವಾಯುವು ಗುದಸ್ಥಾನದಲ್ಲಿರ್ದು ಮಲಮೂತ್ರಂಗಳಂ ತ್ಯಜಿಸುತ್ತಿಹುದು. ಸಮಾನವಾಯುವು ನಾಭಿಸ್ಥಾನದಲ್ಲಿರ್ದು ಉಂಡನ್ನರಸಮಂ ಸರ್ವಾಂಗಗಳಿಗೆ ಹಂಚುತ್ತಿಹುದು. ಉದಾನವಾಯುವು ಕಂಠಸ್ಥಾನದಲ್ಲಿರ್ದು ಉದ್ಗಾರಮಂ ಮಾಡುತ್ತಿಹುದು. ವ್ಯಾನವಾಯುವು ಸರ್ವಾಂಗದಲ್ಲಿರ್ದು ದೇಹಮಂ ಧರಿಸಿಕೊಂಡಿರ್ಕುಂ. ಮತ್ತಮಾ ಉಪವಾಯುಗಳೊಳು ನಾಗವಾಯುವಿನಿಂ ಮೈಮುರಿಯುವಿಕೆ ಆಕಳಿಕೆ; ಕೂರ್ಮವಾಯುವಿನಿಂ ತೇಗು ಬಿಕ್ಕು; ಕೃಕರವಾಯುವಿನಿಂ ಸೀನು ಕೆಮ್ಮು; ದೇವದತ್ತವಾಯುವಿನಿಂ ನಗೆ, ನುಡಿ ; ಧನಂಜಯವಾಯುವಿನಿಂ ಶೋಕಮೋಹಂಗಳಹವಾಧನಂಜಯವಾಯುವು ಮೃತಮಾದೈದುದಿನಪರ್ಯಂತಮಾದೇಹದಲ್ಲಿರ್ದು ದೇಹವನೂದಿಸಿ ಕೆಡಿಸಿ ತಾನೂ ಪೋಗುವುದು. ಬಳಿಕ ನಾಗಾದಿಗಳೇ ಬಾಹ್ಯವಾಯುಗಳೆನಿಸಿಕೊಂಡು ವಾಗಾದಿಕರ್ಮೇಂದ್ರಿಯ ಚೇಷ್ಟಾಹೇತುಗಳಾಗಿಹವು. ಪ್ರಾಣಾದಿವಾಯುಗಳೇ ಶ್ರೋತ್ರಾದಿಜ್ಞಾನೇಂದ್ರಿಯ ಚೇಷ್ಟಾನಿಮಿತ್ತಗಳಾಗಿಹವು. ವೈರಂಭ ಮುಖ್ಯ ಪ್ರಭಂಜನ ಅಂತರ್ಯಾಮಿ ಸಂಜ್ಞೆಯುಳ್ಳ ಚತುರ್ವಿಧ ಜೀವಸಂಬಂಧವಾದ ವಾಯುಗಳೇ ಮಾನಸಾದ್ಯಂತಃಕರಣಚೇಷ್ಟಾಕಾರಣಗಳಾಗಿರ್ಕುಂ.

## ೧೧೫. ಭೂತಗುಣವಿಕಾರ

ಮತ್ತಮಾ ಭೂಮ್ಯಾದಿ ಪಂಚಭೂತಂಗಳಿಗೆ ಕ್ರಮದಿಂ ಧಾರಣ, ಪಿಂಡೀಕರಣ, ಪಾಕ, ವ್ಯೂಹಕರಣ, ಅವಕಾಶಂಗಳೆಂಬವೇ ವ್ಯಾಪಾರಂಗಳು. ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವರೆಂಬುವರೇ ಅಧಿದೇವತೆಗಳು. ಗಂಧಾದಿಗಳೇ ಮುಖ್ಯ ಗುಣಂಗಳಕ್ಕುಂ. ಮತ್ತಮಾ ಭೂತಗುಣಂಗಳಲ್ಲಿ ಆಕಾಶಕ್ಕೆ ಪ್ರತಿಧ್ವನಿಯೆಂಬ ಶಬ್ದಮೊಂದೇ ಮುಖ್ಯಗುಣ; ವಾಯುವಿಗೆ ವಿಸ್ಸೆಂಬಶಬ್ದ, ಅನುಷ್ಣಾ ಶೀತಸ್ಪರ್ಶಮೆಂಬೆರಡುಗುಣ; ಅಗ್ನಿಗೆ ಭುಗಭುಗೆಂಬ ಶಬ್ದ, ಉಷ್ಣಸ್ಪರ್ಶ, ಭಾಸ್ವರಶುಕ್ಲರೂಪವೆಂಬ ಮೂರು ಗುಣ; ಜಲಕ್ಕೆ ಬುಳು ಬುಳೆಂಬ ಶಬ್ದ, ಶೀತಸ್ಪರ್ಶ, ಅಭಾಸ್ವರಶ್ವೇತರೂಪ, ಮಧುರರಸವೆಂಬವೇ ನಾಲ್ಕುಗುಣ; ಭೂಮಿಗೆ ಗಡಗಡೆಂಬಶಬ್ದ, .ಕಠಿಣಸ್ಪರ್ಶ, ನೀಲಾದಿ ಚಿತ್ರ ರೂಪ, ಮಧುರಾಮ್ಲಾದಿನಾನಾರಸ, ಸುಗಂಧ ದುರ್ಗಂಧಗಳೆಂಬೈದು ಗುಣ ಮಾದೊಡಂ ಶಬ್ದ, ಸ್ಪರ್ಶ, ರೂಪ, ರಸ, ಗಂಧವೆಂಬ ಗುಣಪಂಚಕದಲ್ಲಿ ಶಬ್ದ ವಾಕಾಶಕ್ಕೆ, ಸ್ಪರ್ಶವಾಯುವಿಗೆ, ರೂಪತೇಜಸ್ಸಿಗೆ, ರಸಜಲಕ್ಕೆ, ಗಂಧಪೃಥಿವಿ ಗೆ ಪ್ರಧಾನಗುಣಮಾಗಿಯುಂ ಮತ್ತೀ ಭೂತಪಂಚಕವು ವಿಕೃತಿಯಿಂಭೌತಿಕಗ ಳಾದ ಘಟಾದಿಗಳಾಗಿ ಪರಿಣಮಿಸೆ ತದ್ವೈಚಿತ್ರ್ಯದಿಂದುಚ್ಚಾವಚಮಾಗಿ ತೋರ್ಪಪ್ರಪಂಚದೊಳು ಸಕಲಗುಣಗಳುಂ ಅಭಿವ್ಯಕ್ತಿ, ಅನಭಿವ್ಯಕ್ತಿಗಳೆಂ ಬವಸ್ಥೆಗಳಿಂದವುಗಳೊಳು ಸಂಸೃಷ್ಟಗಳಾಗಿಪ್ಪಂತೆ ಪರೀಕ್ಷಿಸೆ ತಿಳಿಯಲಕ್ಕುಂ.

## ೧೧೬. ತ್ರಿಪುಟಿಲಕ್ಷಣ

ಬಳಿಕ ಜ್ಞಾತೃ, ಜ್ಞಾನ, ಜ್ಞೇಯಗಳೆಂಬ ಮೂರೇ ತ್ರಿಪುಟಿಯಾಗಿರ್ಪು ದದರೊಳು ಮೂಲಾಹಂಕಾರದಲ್ಲಿ ಪ್ರತಿಫಲಿಸಿರ್ದ ಜೀವಚೈತನ್ಯವೇ ಜ್ಞಾತೃವೆ ನಿಸುವದು. ಮನದಲ್ಲಿ ಪ್ರತಿಫಲಿಸಿರ್ದ ಜೀವಚೈತನ್ಯವೇ ಜ್ಞಾನಮೆನಿಸು ವದು. ಭೂತಾದಿವಿಷಯಾವಚ್ಛಿನ್ನ ಚೈತನ್ಯವೇ ಜ್ಞೇಯಮೆನಿಸುವದು. ಈ ಮೂರುಂ ಸೋಪಾಧಿಕಮಾಗಿ ಇದಕ್ಕಧಿಷ್ಠಾನಚೇತನವೇ ತಾನಾಗಿರ್ಕುಂ.

## ೧೧೭. ತತ್ವಗಳು

ಬಳಿಕ ಭೂತಪಂಚಕ, ಜ್ಞಾನೇಂದ್ರಿಯಪಂಚಕ, ಕರ್ಮೇಂದ್ರಿಯ ಪಂಚಕ, ಪ್ರಾಣಾದಿಪಂಚಕ, ಅಂತಃಕರಣಚತುಷ್ಟಯಮೆಂಬ ಇಪ್ಪತ್ತು

ನಾಲ್ಕು ತತ್ವಗಳಾಗಿರಲ್ಕು, ಅಹಂಕಾರಾಕಾರವಾದ ಮೂಲಾವಿದ್ಯೆಯೇ ಇಪ್ಪತ್ತೈದನೆಯ ತತ್ವವೆನಿಸುವದು. ಈಯಹಂಕಾರಗತಚಿದಾಭಾಸಜೀವನೇ ಇಪ್ಪತ್ತಾರನೇ ತತ್ವವಾಗಿರ್ಪನು. ಮಾಯೋಪಾಧಿಯೇ ಇಪ್ಪತ್ತೇಳನೆಯದಾಗಿರ್ಪುದು. ಮಾಯಾವಚ್ಛಿನ್ನನಾದ ಈಶ್ವರನೇ ಇಪ್ಪತ್ತೆಂಟನೆಯ ತತ್ವವು. ಅಹಂಕಾರಜೀವರ್ಗಧಿಷ್ಠಾನವಾದ ಕೂಟಸ್ಥನೇ ಇಪ್ಪತ್ತೊಂಭತ್ತನೇ ತತ್ವವಾಗಿಹನು. ಮಾಯೇಶ್ವರರ್ಗಧಿಷ್ಠಾನವಾದ ಬ್ರಹ್ಮವೇ ಮೂವತ್ತನೆಯ ತತ್ವವೆಂದರಿವುದು. ಅನನ್ಯಮಾಯಿಕವಾದ ಮಾಯೋಪಹಿತ ಬ್ರಹ್ಮಚೈತನ್ಯವೇ ಮೂವತ್ತೊಂದನೆಯ ತತ್ವವಾಗಿಪ್ಪುದು. ಸಚ್ಚಿದಾನಂದೈಕರಸಸ್ಫೂರ್ತಿಯಪ್ಪ ಉಪರಿತತ್ವವೇ ಮೂವತ್ತೆರಡನೆಯ ತತ್ವಮಪ್ಪುದು. ಮತ್ತಂ ವಿಚಾರಲಕ್ಷ್ಯಭೇದದಿಂ ತತ್ವಸಂಖ್ಯೆಯು ಬಹುವಿಧಮಾಗಿರ್ದೊಡಂ ಪೇಳ್ದ ತತ್ವಗಳೊಳಗಂತರ್ಭಾವಮಪ್ಪುದಾಗಿ ಇಂತೀ ಮೂವತ್ತೆರಡು ತತ್ವಂಗಳಿಗ ಸಂಗವಾದ ನಿರ್ಗುಣಸತ್ತಾಮಾತ್ರಮಪ್ಪ ಮಾಯೋಪಲಕ್ಷಿತ ಪರಾತ್ಪರ ಶಿವಚೈತನ್ಯವೇ ನಿತ್ಯ ಮುಕ್ತ ಬ್ರಹ್ಮನೆಂದು ಸಸ್ವರೂಪವನರಿಯಲ್ವೇಳ್ಕುಂ.

## ೧೦೮. ಸೃಷ್ಟಿಕ್ರಮ

ಮತ್ತಮಾ ಪ್ರಕೃತಿಯಿಂ ಕಾರ್ಯೋದಯಮಾದೊಡೆ ಕ್ರಮ ಸೃಷ್ಟಿಯೆಂದು ಯುಗಪತ್ ಸೃಷ್ಟಿಯೆಂದು ದ್ವಿಪ್ರಕಾರಮಹುದದರಲ್ಲಿ ಮೂಲಪ್ರಕೃತಿಯಿಂ ಮಹತ್ತತ್ವ, ಅಹಂಕಾರ, ಪಂಚತನ್ಮಾತ್ರಗಳೆಂಬ ಸಪ್ತಪ್ರಕೃತಿಗಳವುಗಳಿಂ, ಪಂಚಭೂತಂಗಳವುಗಳಿಂ ಬ್ರಹ್ಮಾಂಡ ದೇಹ ಘಟಾದಿ ಪ್ರಪಂಚೋದಯಮೇ ಕ್ರಮಸೃಷ್ಟಿಯೆನಿಸುವದು.

## ೧೦೯. ಯುಗಪತ್ಸೃಷ್ಟಿ

ಬಳಿಕ ನಿಸ್ತರಂಗಸಮುದ್ರದೊಳೊಂದೇ ಕಾಲದಲ್ಲಿ ವಾಯುವಶದಿಂ ವಿಚಿತ್ರಫೇನತರಂಗ ಬುದ್ಬುದಾದಿಗಳಾಗುವಂತೆ, ಸಚ್ಚಿದಾನಂದಾತ್ಮಕ ಬ್ರಹ್ಮದಲ್ಲಿ ಮಾಯಾಮಯ ನಾಮರೂಪ ಪ್ರಸರಣವೇ ಯುಗಪತ್ಸೃಷ್ಟಿಯೆನಿಸುವದಿದೆರಡುತೆರನುಂ ಶ್ರುತಿಸಿದ್ಧಮಪ್ಪುದರಿಂದಂಗೀಕೃತಮಕ್ಕುಂ.

## ೧೧೦. ಸೃಷ್ಟಿದೃಷ್ಟಾಂತ

ಬಳಿಕಿಲ್ಲಿ ಅತಿರೋಹಿತ ಬ್ರಹ್ಮಸ್ವರೂಪನಪ್ಪುದರಿಂ ವಿಕಾರವಿಲ್ಲದ ಈಶ್ವರನಿಂ ಜಡಪ್ರಕೃತಿಯಲ್ಲಿ ಕಾರ್ಯೋದಯಮೆಂತೆನೆ ಇಚ್ಛಾದಿಕವಿಲ್ಲದ ಸೂ

ರ್ಯನಿಂ ಯತ್ನಾದಿಕವಿಲ್ಲದ ಸೂರ್ಯಕಾಂತದಲ್ಲಿ ವಹ್ನಿಯುಜ್ವಲಿಸುವಂತೆ ಪರಬ್ರಹ್ಮನಿಂಪ್ರಕೃತಿಯಲ್ಲಿ ಮಹದಾದಿಕಾರ್ಯಮುದಿಸಲ್ ವಿರೋಧಮಿಲ್ಲಂ.

## ೧೧೧. ಚತುರ್ವಿಧ ಕಾರ್ಯಕಲ್ಪನೆ

ಬಳಿಕ ವೃತ್ತಿ, ಪರಿಣಾಮ, ಆರಂಭ, ವಿವರ್ತಮೆಂದು ಚತುರ್ವಿಧ ಮಾಗಿ ಕಾರ್ಯೋದಯಮಪ್ಪುದವುಗಳಿಗೆ ಪಟಕುಟೀಭಾವ, ಕ್ಷೀರದಧ್ಯಾಕಾರ, ತಂತುಪಟನ್ಯಾಯ, ರಜ್ಜುಸರ್ಪತೋರ್ಕೆಯೆಂಬವೇ ಕ್ರಮದಿಂ ದೃಷ್ಟಾಂತ ಚತುಷ್ಟಯಮಕ್ಕುಂ.

## ೧೧೨. ಮಿಥ್ಯಾದೃಷ್ಟಾಂತ

ಬಳಿಕ ರಜ್ಜುಸರ್ಪ, ಸ್ಥಾಣುಚೋರ, ಸ್ವಪ್ನೇಂದ್ರಜಾಲ, ಗಂಧರ್ವ ನಗರ, ಶುಕ್ತಿಕಾರಜತ, ನೀಲನಭ, ಮರುಮರೀಚಿಕಾಜಲ, ಶಂಖಪೀ ತಿಮಾ, ಜಪಾಕುಸುಮಸನ್ನಿಹಿತಸ್ಫಟಿಕಲೌಹಿತ್ಯ, ಶರೀರಸ್ವಜ್ಞಪ್ತಿ ಮೊದ ಲಾದವೇ ಸದ್ರೂಪ ವಸ್ತುವಿನಲ್ಲಿ ಮಿಥ್ಯಾವಸ್ತುಕಲ್ಪನೆಗೆ ದೃಷ್ಟಾಂತ ಸಮೂ ಹಗಳಕ್ಕುಂ.

## ೧೧೩. ಕಾರಣತ್ವದೋಷಪರಿಹಾರ

ಬಳಿಕಿಲ್ಲಿ ನಿರ್ವಿಕಾರ ಸ್ವರೂಪದಿಂದದ್ವಯನಾದಾತ್ಮನಲ್ಲಿ ಮಿಥ್ಯಾವಸ್ತು ಕಲ್ಪಿತಮಾಯಿತೆನೆ—ಮೊದಲಾ ಭ್ರಾಂತಿಯಾವಾತಂಗಾಯಿತೆಂದೊಡೊಬ್ಬಾ ನೊಬ್ಬಯತೀಶ್ವರಂಗೆ ಸತಿ, ಪತಿ, ರತಿಕಾಂಕ್ಷೆಯೆಂಬ ತ್ರಿವಿಧರೂಪಸ್ವಪ್ನ ಮೊಂದೇ ಕಾಲದಲ್ಲಿ ತೋರಲಾತಂಗದರಿಂದಾವ ಹಾನಿಯೂ ಇಲ್ಲದಂತೆ ಸಾಕ್ಷಿಕನಾದಾತ್ಮನಲ್ಲಿ ಗುಣತ್ರಯಾತ್ಮಕಪ್ರಕೃತಿಯಿಂ ಭ್ರಾಂತಿಸುವ ಜ್ಞಾತೃ ಭ್ರಾಂತಿ, ಜ್ಞಾನಭ್ರಾಂತಿ, ವಿಷಯಜ್ಞೇಯತೆಯೆಂಬ ತ್ರಿಪುಟಿಮಯ ಪ್ರಪಂಚ ಮೇಕಕಾಲದಲ್ಲಿ ಕಲ್ಪಿತವಾಗಲಾತ್ಮಂಗಾವಹಾನಿಯೂ ಇಲ್ಲಮೆಂಬುದೇ ಸಿದ್ಧ ಮಕ್ಕುಂ.

## ೧೧೪. ಪ್ರಪಂಚತ್ರೈವಿಧ್ಯಭಾವನಾ

ಮತ್ತಮಾ ಈಶ್ವರನಿಂ ಸೃಷ್ಟವಾದ ಮಾಯಾಮಯವ್ಯೋಮಾದಿ ಪ್ರಪಂಚಮಾದೊಡೆ ತನ್ನ ಸ್ವರೂಪದಿಂದೊಂದೇ ಪ್ರಕಾರಮಾಗಿಹುದದರಲ್ಲಿ ಜೀವಬುದ್ಧಿವೃತ್ತಿಕಲ್ಪಿತವಾದ ಬೇರೊಂದುಭೋಗ್ಯರೂಪವೇ ಪ್ರೀತಿವಿಷಯ ಮೆಂದು, ದ್ವೇಷವಿಷಯಮೆಂದು ಉಪೇಕ್ಷಾವಿಷಯಮೆಂದು ತ್ರಿವಿಧಮಾ

ಗಿರ್ಪುದದರಲ್ಲಿ ವನಿತಾದಿಕವೇ ಪ್ರೀತಿವಿಷಯಮೆನಿಸುವದು. ವ್ಯಾಘ್ರಾದಿಕವೇ ದ್ವೇಷವಿಷಯಮೆನಿಸುವುದು. ಬೀದಿಯ ತೃಣಾದಿಕವೇ ಉಪೇಕ್ಷಾವಿಷಯ ಮಕ್ಕುಂ.

## ೧೧೫. ಹಲವುಬಗೆಯಾಗಿ ತೋರ್ಪುದು

ಮತ್ತಮಾ ವಿಷಯಮೊಂದರಲ್ಲಿಯೇ ಈಶ್ವರನಿರ್ಮಿತಮಾದೇಕಾಕಾರಮುಂ, ಜೀವನಿರ್ಮಿತಮಾದನಂತಾಕಾರಮುಂ ತೋರ್ಪುದದಕೆ ದೃಷ್ಟಾಂತ ಮೆಂತೆನೆ—ಈಶಕಲ್ಪಿತಮಾದರತ್ನಾದಿವಸ್ತುಜಾತ ಮೇಕಾಕಾರಮಾಗಿರ್ದೊಡಂ ಭೋಕ್ತೃಗಳಾದ ಜೀವರ ಬುದ್ಧಿ ವೃತ್ತಿ ಕಲ್ಪಿತನಾನಾತ್ವದಿಂದ ಆ ರತ್ನಾದಿಕ ವೇತನ್ನ ಪಡೆದಾತಂಗೆ ಪ್ರೀತಿವಿಷಯಮಾಗಿ ಪಡೆವಾತಂಗೆ ಇಚ್ಛಾವಿಷಯವಾಗಿ ಪಡೆಯದಾತಂಗೆ ದ್ವೇಷವಿಷಯವಾಗಿ ವಿರಕ್ತಂಗುಪೇಕ್ಷಾ ವಿಷಯವಮಾಗಿಯುಂ ತೋರ್ಪುದು. ಮತ್ತಮಾ ಪರಮೇಶ್ವರನಿರ್ಮಿತಮಾದ ವಸ್ತುರೂಪಮೊಂದೇ ಬಗೆಯಾಗಿರ್ದು ಜೀವರಿಂಕಲ್ಪಿತವಾದ ಭೋಗ್ಯತ್ವಾಕಾರದಲ್ಲಿ ನಾನಾಪ್ರಕಾರ ಮಾಗಿಹುದು. ಅದನಭಿವ್ಯಕ್ತಮಾಡಲೋಸುಗಮಿನ್ನೊಂದು ದೃಷ್ಟಾಂತಮೆಂತೆನೆ ಪಿತೃಜನ್ಯಮಾದೊಬ್ಬಾಳೊಬ್ಬಸ್ತ್ರೀಯ ಮಾಂಸಮಯವಾದ ರೂಪಮೊಂದೇತೆರದಿಂದಿಹುದಾ ಸ್ತ್ರೀಯೇ ಭೋಕ್ತೃಗಳ ಬುದ್ಧಿಕಲ್ಪಿತವಾದಾಕಾರದಿಂ ತಂದೆಗೆ ಮಗಳೆನಿಸಿ, ಗಂಡನಿಗೆ ವಧುವೆನಿಸಿ, ಸುತಂಗೆ ತಾಯಿಯೆನಿಸಿ, ಮಾವಂಗೆ ಸೊಸೆಯೆನಿಸಿ, ಬಹುವಿಧವಾಗುತ್ತಿಹಳಾಕೆಯೇ ಚಿಕ್ಕವರಿಗೆ ನಿಯಾಮಕಳೆಂದೆನಿಸಿ, ದೊಡ್ಡವರಿಗೆ ನಿಯಾಮ್ಯಳೆಂದೆನಿಸಿ, ಪುತ್ರಾದಿಗಳಿಗೆ ಪೂಜ್ಯಳೆಂದೆನಿಸಿ, ಪಿತ್ರಾದಿಗಳಿಗೆ ಪೂಜಕಳೆಂದೆನಿಸಿ, ಪತಿಗರ್ಧಶರೀರಿಯಾಗಿ, ತನಗಿಂತಲೂ ಪಶ್ಚಿಮದಲ್ಲಿಪ್ಪವರಿಗೆ ಮೂಡಲೊಳಿಪ್ಪಳೆಂದೆನಿಸಿ, ಟೆಂಕಲೊಳಿಪ್ಪವರಿಗೆ ಬಡಗಲೊಳಿಪ್ಪಳೆಂದೆನಿಸಿ, ಪೂರ್ವದೊಳಿಪ್ಪವರಿಗೆ ಪಡವಲೊಳಿಪ್ಪಳೆಂದೆನಿಸಿ ಯಾಕೆಯೇ ದಿಕ್ಕಾಲ ಕರ್ಮೋಪಾಧಿಗಳಿಂ ಪಲವು ಬಗೆಯಾಗಿ ವ್ಯವಹರಿಸಲಪ್ಪಳಿಂತು ಸರ್ವ ವಿಷಯಮುಂ ಈಶ್ವರನಿರ್ಮಿತಮಾದೇಕಾಕಾರದಿಂ ಜೀವನಿರ್ಮಿತಮಾದನಂತಾಕಾರದಿಂದಿತ್ತೆರಮಪ್ಪುದವುಗಳೊಳು.

## ೧೧೬. ಈಶ್ವರಪ್ರಪಂಚ

ಈಶ್ವರನಿರ್ಮಿತಪ್ರಪಂಚವು ಗುರುಶಾಸ್ತ್ರಾದಿ ರೂಪದಿಂ ಮೋಕ್ಷಸಾಧಕಮಾಗಿಯುಂ, ಪಾಪನಿವರ್ತಕಕರ್ಮಸಾಧನಮಪ್ಪುದರಿಂ ಬಾಧಕಮಲ್ಲದ್ದಾ

ಗಿಯುಂ, ಜೀವಾದೃಷ್ಟಸಿದ್ಧಮಪ್ಪುದರಿಂ ತನ್ನಂ ಬಿಡಲಾರಿಗುಮಶಕ್ಯಮಾಗಿ ಯುಮುದಂತಿರ್ಕೆ.

### ೧೧೭. ಜೀನಪ್ರಪಂಚತ್ರಯ ನಿಷೇಧ

ಬಳಿಕ ಜೀವಕಲ್ಪಿತಮಾದ ಪ್ರಪಂಚವು ಬಂಧಕರಮಪ್ಪುದರಿಂ ಮುಮುಕ್ಷುಗಳಿಂ ಬಿಡಲ್ತಕ್ಕದ್ದಾದೊಡೆ ಅದು ಅಶಾಸ್ತ್ರೀಯ ಪ್ರಪಂಚವು. ಶಾಸ್ತ್ರೀಯ ಪ್ರಪಂಚವೆಂದು ದ್ವಿವಿಧಮಾಗಿಪ್ಪುದಾ ಅಶಾಸ್ತ್ರೀಯಪ್ರಪಂಚವೇ ಬಂಧಕರಮಪ್ಪುದರಿಂ ತೀವ್ರವೆಂದು, ಮಂದವೆಂದೆರಡುತೆರನಾಗಿಹುದು. ಬಳಿಕ ಆತ್ಮ ಬ್ರಹ್ಮವಿಚಾರಾದಿಕವೇ ಶಾಸ್ತ್ರೀಯಪ್ರಪಂಚವೆನಿಸುವದು. ಕಾಮಕ್ರೋಧಾದಿಕವೇ ತೀವ್ರಪ್ರಪಂಚವೆನಿಸುವದು. ಮನಃಕಲ್ಪಿತರಾಜಸ ಕರ್ಮಾದಿಕವೇ ಮಂದಪ್ರಪಂಚವೆನಿಸುವದು. ಜೀವಕಲ್ಪಿತ ತ್ರಿವಿಧ ಪ್ರಪಂಚದಲ್ಲಿ ಶಾಸ್ತ್ರೀಯ ಪ್ರಪಂಚವು ಜ್ಞಾನಸಾಧನದಿಂದಾತ್ಮ ಸಾಕ್ಷಾತ್ಕಾರವಾದ ಬಳಿಕ ಆರೂಢನಿಂ ಬಿಡಲ್ತಕ್ಕದ್ದು. ಅಶಾಸ್ತ್ರೀಯಗಳಾದ ತೀವ್ರ ಮಂದ ಪ್ರಪಂಚಗಳೇ ಆತ್ಮ ಸಾಕ್ಷಾತ್ಕಾರಕ್ಕೆ ವಿರುದ್ಧಗಳಾಗಿರುವದರಿಂ, ಜ್ಞಾನಾಭ್ಯಾಸಕ್ಕೆ ಮುನ್ನವೇ ಬಿಡಲ್ತಕ್ಕವಾ ಬಳಿಕ ಜೀವೇಶ್ವರ ಕಲ್ಪಿತ ಪ್ರಪಂಚದ್ವಯಮುಂ, ಶುದ್ಧ ಶಿವ ಸಾಕ್ಷಾತ್ಕಾರಮಾದ ಬಳಿಕ ಬಿಡಲ್ಪಟ್ಟರುಂ, ಕಸ್ತೂರಿಯಂ ತೊರೆದ ಕರಂಡದೊಳು ವಾಸನಾ ಮಾತ್ರಮವಶಿಷ್ಟಮಾಗಿರ್ಪಂತೆ ಪ್ರಪಂಚಾಕಾರ ಭಾನಮೆಂಬ ಚಿದಾಭಾಸ ಭ್ರಾಂತಿವಾಸನಾಮಾತ್ರಮುಂ, ಜೀವನ್ಮುಕ್ತನಾದೊಡಂ ಬಿಡದೆ, ವಿದೇಹ ಕೈವಲ್ಯಪರ್ಯಂತಮನಿವಾರ್ಯಮಾಗಿರ್ದು ಬಳಿಕ ತಾನಾಗಿ ನಾಶಮಾದೊಡೆ ಸ್ವೇತರಜ್ಞಪ್ತಿ ಶೂನ್ಯಮಾದ ಚಿನ್ಮಾತ್ರ ಶುದ್ಧಾನಂದ ನಿತ್ಯ ಪೂರ್ಣತ್ವವೇ ನಿರ್ವಾಣ ಮಪ್ಪುದೆಂದು ರಹಸ್ಯಾರ್ಥಮಕ್ಕುಂ.

### ೧೧೮. ಉಪಾಧಿತ್ರಯ

ಅನಂತರವಚ್ಛಿನ್ನೋಪಾಧಿ, ಪ್ರತಿಬಿಂಬೋಪಾಧಿ, ಅಧ್ಯಾಸೋಪಾಧಿ. ಯೆಂಬವೇ ಉಪಾಧಿತ್ರಯಮವುಗಳಲ್ಲಿ ಪ್ರತ್ಯಗಾತ್ಮಂಗೆ ಸುಪ್ತಿ ರೂಪಾವಿದ್ಯೆಯೇ ಅವಚ್ಛಿನ್ನೋಪಾಧಿಯೆನಿಸುವದು. ತತ್ಕಾರ್ಯಮಾದ ಬುದ್ಧಿಯಲ್ಲಿ ಆತ್ಮನು ಪ್ರತಿಫಲಿಸುವದೇ ಪ್ರತಿಬಿಂಬೋಪಾಧಿಯೆನಿಸುವದು. ಬುದ್ಧಿಗತ ಸುಖದುಃಖಾದಿಗಳನಾತ್ಮನು ಭುಂಜಿಸುವಂತಿರ್ಪುದೇ ಅಧ್ಯಾಸೋಪಾಧಿಯಕ್ಕುಂ.

## ೧೧೯. ಅಧ್ಯಾಸಲಕ್ಷಣ

ಮತ್ತಮದಲ್ಲದ್ದರಲ್ಲಿ ಅದೆಂಬ ಬುದ್ಧಿಯೇ ಶುಕ್ತಿಕಾರಜತ ದೃಷ್ಟಾಂತ ದಿಂದಧ್ಯಾಸಲಕ್ಷಣಮಹುದಾ ಅಧ್ಯಾಸವೇ ಮಿಥ್ಯಾಧ್ಯಾಸ, ಇತರಾಧ್ಯಾಸ, ಇತ ರೇತರಾಧ್ಯಾಸ, ಸತ್ಯಾಧ್ಯಾಸವೆಂದು ನಾಲ್ಕುತೆರನಾಗಿಹುದದರಲ್ಲಿ ಅಗ್ನಿಸಂಪ ರ್ಕದಿಂ ಜಲಕ್ಕೆ ದಾಹಕತನವಾದಂತೆ, ಪ್ರತ್ಯಗಾತ್ಮ ಸನ್ನಿಧಿಯಿಂ ಕ್ರಮದಿಂ ದೆಡೆಯಾಡುವ, ನೋಡುವ, ನೆನೆವ, ಅರಿವ ಶಕ್ತಿಗಳುಂಟಾಗಿ ಸ್ಥೂಲಶರೀ ರವೇ ಮಿಥ್ಯಾಧ್ಯಾಸವೆನಿಸುವದು: ಇಂದ್ರಿಯವರ್ಗವೇ ಇತರಾಧ್ಯಾಸವೆನಿಸು ವದು; ಅಂತಃಕರಣವೇ ಇತರೇತರಾಧ್ಯಾಸವೆನಿಸುವದು; ಮೂಲಾಹಂಕಾ ರವೇ ಸತ್ಯಾಧ್ಯಾಸಮಕ್ಕುಂ. ಬಳಿಕ ಅಹಂ ಎಂಬುವದರಿಂ ಪ್ರತ್ಯಗಾತ್ಮಾಹಂಕಾ ರಗಳಿಗೆ ರಜ್ಜುಸರ್ಪವೆಂಬಂತೆ ನಿರುಪಾಧಿಕಾಧ್ಯಾಸವೆನಿಸುವದು. ಅಹಂಕರ್ತಾ ಎಂಬುವದರಿಂ ಅಹಂಕಾರ ಧರ್ಮಾತ್ಮರ್ಗೆ ರಕ್ತಸ್ಫಟಿಕವೆಂಬಂತೆ ಸೋಪಾಧಿ ಕಾಧ್ಯಾಸವೆನಿಸುವದು. ಇಚ್ಛಾಮ್ಯಹಂ ಎಂಬುವದರಿಂ ಅಂತಃಕರಣ ಧರ್ಮಾ ತ್ಮರ್ಗೆ ಪ್ರವಾಹಜಲಪತಿತ ಪತಂಗ ಪ್ರತಿಬಿಂಬದಂತೆ ತದ್ಧರ್ಮತಾಧ್ಯಾಸ ವೆನಿಸುವದು. ಕುಟುಂಬವಾನಹಂ ಎಂಬುದರಿಂ ಆತ್ಮಪುತ್ರಾದಿಕಕ್ಕೆ ಛತ್ರ ತ್ರಸ್ಥ ವ್ಯವಹಾರದಂತೆ ಸಂಬಂಧಮಾತ್ರಾಧ್ಯಾಸವೆನಿಸುವದು. ಇಂತಧ್ಯಾಸ ದಿಂದಲೇ ನಿರ್ವಿಕಾರನಾದಾತ್ಮಂಗೆ ಸಂಸಾರ ಕಲ್ಪನೆಯಕ್ಕುಂ.

## ೧೨೦. ಪಂಚಾವಸ್ಥೆಗಳು

ಮತ್ತಂ ಜಾಗರಣ, ಸ್ವಪ್ನ, ಸುಷುಪ್ತಿ, ತುರ್ಯ, ತುರ್ಯಾತೀತಗ ಳೆಂಬವೇ ಪಂಚಾವಸ್ಥೆಗಳವುಗಳಲ್ಲಿ ಸ್ಥೂಲ ಪಂಚಭೂತಗಳು, ದಶೇಂದ್ರಿಯ ಗಳು, ಪ್ರಾಣಪಂಚಕವು, ಅಂತಃಕರಣಚತುಷ್ಟಯವೆಂಬ ಚತುರ್ವಿಂಶತಿ ತತ್ವಾ ತ್ಮಕ ಸ್ಥೂಲಶರೀರದಲ್ಲಿ ಸತ್ವಗುಣ ಅಕಾರಾಕ್ಷರ ವಿಷ್ಣುವಧಿದೇವತೆ ಲೋಚನ ಸ್ಥಾನ ಹೃದಯಕಮಲದ ಅಷ್ಟದಳಗತಿಗಳಿಂ ವಿಶ್ವಜೀವನು ವಿರಾಟ್ಸಂಜ್ಞಿಕ ನಾದೀಶ್ವನು ಮೊಂದಾಗಿ ವನಿತಾದಿ ವಿಷಯಭೋಗಮಂ ಸಕಲ ಕರಣ ಸಾಮಗ್ರಿಯಿಂ ದನುಭವಿಸುತ್ತಿಹುದೇ ಜಾಗರಣಾವಸ್ಥೆಯೆನಿಸುತ್ತಿಹುದು. ಮತ್ತಮಾ ಇಪ್ಪತ್ತುನಾಲ್ಕು ತತ್ವಂಗಳೊಳಗೆ ಸ್ಥೂಲಭೂತಂಗಳೈದನು ಚಿತ್ತ ಬುದ್ಧಿಗಳೆರಡನುಂ ಬಿಟ್ಟು, ಮಿಕ್ಕ ಹದಿನೇಳು ತತ್ವರೂಪ ಸೂಕ್ಷ್ಮತನುವಿ ನಲ್ಲಿ ರಜೋಗುಣ ಉಕಾರಾಕ್ಷರ ಬ್ರಹ್ಮನಧಿದೇವತೆ ಕಂಠಸ್ಥಾನ ಹೃತ್ಕಮಲ

ಕರ್ಣಿಕಾ ಗತಿಗಳಿಂ ತೈಜಸಜೀವನು ಸೂತ್ರಾತ್ಮಕಸಂಜ್ಞಿಕನಾದೀಶ್ವರನು ಪೊಂದಾಗಿ ಜಾಗ್ರದ್ವಾಸನಾ ವಿಷಯ ಭೋಗಮುಂ ಮನವೆಂಬ ಕರಣದಿಂ ದನುಭವಿಸುತ್ತಿಹುದೇ ಸ್ವಪ್ನಾವಸ್ಥೆಯೆನಿಸುತ್ತಿಹುದು. ಮತ್ತಂ ಪರದು ಮೇಯುತ್ತಿರ್ದ ಮರಿಗಳೆಲ್ಲಮುಂ ಪಕ್ಕದ ಮರೆಯೊಳಗಡಗಿಸಿಕೊಂಡೊಂದೆಡೆಯಲ್ಲಿ ನಿದ್ರೆ ಗೈಯುತಿರ್ದ ಚರಣಾಯುಧನಂತಾ ಸಮಸ್ತ ಕಾರ್ಯವನೊಳ ಕೊಂಡು ತತ್ಸಂಸ್ಕಾರ ಸಹಿತಮಾಗಿ ಆತ್ಮಾಶ್ರಯದಲ್ಲಿ ನಿರವಸ್ಥೆಯಿಂದಿರ್ಪ ಪ್ರಕೃತಿರೂಪ ಕಾರಣದೇಹದಲ್ಲಿ ತಮೋಗುಣ ಮಕಾರಾಕ್ಷರ ರುದ್ರನಧಿದೇವತೆ ಹೃದಯಸ್ಥಾನ ತತ್ಕಮಲ ಕರ್ಣಿಕಾ ಮಧ್ಯಗತಿಗಳಿಂ ಪ್ರಾಜ್ಞನೆಂಬ ಜೀವನು ಅಂತರ್ಯಾಮಿಯೆಂಬ ಈಶ್ವರನು ಪೊಂದಾಗಿ ಬ್ರಹ್ಮಾನಂದ ವಿಷಯಭೋಗಮುಂ ಮಾಯಾವೃತ್ತಿಯೆಂಬ ಸೂಕ್ಷ್ಮಕರಣದಿಂದನುಭವಿಸುತ್ತಿಹುದೇ ಸುಷುಪ್ತ್ಯವಸ್ಥೆಯಕ್ಕುಂ. ಬಳಿಕೀ ಜಾಗ್ರದಾದ್ಯವಸ್ಥೆಗಳಿಗೆ ಅವಸ್ಥಾತ್ರಯ ಧಾಮ ತ್ರಯ ಪುರತ್ರಯ ಸ್ಥಾನತ್ರಯಗಳೆಂಬವೇ ಪರ್ಯಾಯನಾಮಂಗಳಕ್ಕುಂ. ಮತ್ತಮಾ ಜಾಗರಣದಲ್ಲಿಯೇ ತತ್ಕಮಲವನುಳಿದು ಮನೋವ್ಯಾಪಾರವನ ಳಿದು ಪರಮಾತ್ಮಚಿಂತನಂ ಗೈವುದೇ ತುರ್ಯಾವಸ್ಥೆಯೆನಿಸುವದು, ಮತ್ತಮಾತ್ಮನಲ್ಲಿಯೇ ಮನಸ್ಸು ಮಗ್ನಮಾಗಿರ್ಪುದೇ ತುರ್ಯಾತೀತಾವಸ್ಥೆಯಕ್ಕುಂ. ಇಂತೀ ಅವಸ್ಥಾ ಪಂಚಕದಲ್ಲಿ ಸ್ಥಾವರಕ್ಕೆ ಸುಪ್ತಿಯೊಂದೇ, ಪಶ್ವಾದಿಗಳಿಗೆ ಸ್ವಪ್ನಸುಷುಪ್ತಿಗಳೆರಡು. ದೇವತೆಗಳಿಗೆ ಜಾಗರಣಮೊಂದೇ, ಮನುಷ್ಯರಿಗೆ ಜಾಗ್ರತ್ಸ್ವಪ್ನಸುಷುಪ್ತಿಗಳು ಮೂರು, ಮರುಳುಗಳಿಗೆ ತುರ್ಯಾವಸ್ಥೆಯೊಂದು, ಯೋಗಿಗಳಿಗೆ ತುರ್ಯಾತೀತಮೊಂದು ಸಹಜಗುಣಗಳಾಗಿರುವವಾಗಿ ಮನುಷ್ಯರಿಗೆ ಮೊದಲನೆಯ ಮೂರವಸ್ಥೆಗಳು ತಮ್ಮಿಂದ ತಾವೇ ತೋರಿ ಸಂಸಾರಾತ್ಮಕ ಮಾಗಿಹವು. ಮಿಕ್ಕೆರಡವಸ್ಥೆಗಳೇ ಯೋಗಾಭ್ಯಾಸಬಲದಿಂ ಜನಿಸಿ ಮುಕ್ತಿ ಸಾಧನಗಳಾಗಿರ್ಪುವುಂ.

## ೧೨೧. ಅವಸ್ಥಾಮಿಥ್ಯಾತ್ವ

ಮತ್ತಮಾ ಅವಸ್ಥೆಗಳೊಳು ಜಾಗ್ರದವಸ್ಥೆಯು ತದ್ವಿಷಯಗಳುಂ ಸ್ವಪ್ನ ಕಾಲದೊಳಗಿಲ್ಲ, ಸ್ವಪ್ನಾವಸ್ಥೆಯು ತದ್ವಿಷಯಗಳುಂ ಜಾಗ್ರತ್ಕಾಲದೊಳಗಿಲ್ಲ, ಈಯೆರಡವಸ್ಥೆಗಳುಂ ಉಭಯ ವಿಷಯಗಳುಂ ಸುಷುಪ್ತಿಕಾಲದೊಳಗಿಲ್ಲವಾಗಿ ಕಾಲ ದೇಶ ವಸ್ತು ನೈಯತ್ಯಮಿಲ್ಲದಿರುವದರಿಂ ಅಧಿಕಾರಿ ಭೇದದಿಂ ಪಲವು

ಬಗೆಯಾಗಿ ತೋರ್ಪುದರಿಂ ಅಭಿಸಂಧಿಬಲಾನುಗುಣವಾಗಿ ಕಾರ್ಯವೈಚಿತ್ರ್ಯ ತೋರ್ಪುದರಿಂ ತ್ರಿಕಾಲಾಬಾಧ್ಯಮಲ್ಲವಾಗಿ ಸತ್ಯವಲ್ಲವೆಂತಲುಂ, ಬ್ರಹ್ಮ ಜ್ಞಾನದಿಂ ಸಮೂಲವಾಗಿ ಅಳಿವುದರಿಂ ಸಾವಸ್ಥೆಯೆಲ್ಲವುಂ ಮಿಥ್ಯೆ ಯೆಂದರಿಯಲ್ವೇಳ್ಕುಂ, ಮತ್ತಮಾ ಅವಸ್ಥೆಗಳೆಲ್ಲದರೊಳಗನುಸೂತ್ಯನಾ ಗಿಯುಂ, ಜ್ಞಪ್ತಿ ಸತ್ತಾಮಾತ್ರನಾಗಿಯುಂ, ಅವಿನಾಶಿಯಾಗಿಯುಂ, ಸಾಕ್ಷಿ ಯಾಗಿಯುಂ, ಅಸಂಗನಾಗಿಯುಂ, ಬಿಡದರಿವ ನಿಜತುರ್ಯನಾದಾತ್ಮನೋ ರ್ವನೇ ಸತ್ಯವೆಂದರಿವುದು.

## ೧೨೨. ಆತ್ಮಸಿದ್ಧಿ

ಮತ್ತಮಾ ಜಾಗ್ರತ್ಸ್ವಪ್ನಂಗಳಲ್ಲಿ ಅರಿವುಂಟೆಂಬುದು ಪ್ರಸಿದ್ಧವಾಗಿಯೇ ಯಿಪ್ಪುದಾ ಸುಷುಪ್ತಿಯಲ್ಲಿ ಅರಿವುಂಟೆಂಬುದಕ್ಕೆ ಎಚ್ಚತ್ತಮೇಲೆ ಇದುವರಿಗು ನಾನೇನು ಮರಿಯದೆ ಮಲಗಿದ್ದೆನು, ಸುಖದಿಂ ನಿದ್ರೆಗೈದೆನೆಂಬ ಸ್ಮರಣದ್ವ ಯವು ಅನುಭವವಿಲ್ಲದೇ ಪುಟ್ಟದೆಂಬ ಅರ್ಥಾಪತ್ತಿ ಪ್ರಮಾಣದಿಂದ ಸುಷುಪ್ತಿ ಯಲ್ಲಾತ್ಮನು ಸಮಸ್ತ ಘಟಾದಿರೂಪವನೊಳಕೊಂಡ ಕತ್ತಲೆಯಂ ಕಣ್ಣು ಕಾಂಬಂತೆ ಸಕಲ ಶರೀರಾದಿಕಾರ್ಯಗಳನೊಳಕೊಂಡವಿದ್ಯೆಯನುಂ ಆ ಯವಿ ದ್ಯೆಯ ಸೂಕ್ಷ್ಮವೃತ್ತಿಗಳ ಗತಿಗಳಲ್ಲಿ ಚಂಚಲತರುಪಲ್ಲವಾಂತರದ ಚಂದ್ರಿಕಾ ಲೇಶಂಗಳಂತೆ ಪೊಳದಡಗುತಿರ್ದ ನಿಜಸ್ವರೂಪದಾನಂದಾಂಶಗಳನುಂ ಕರ ಣಾಂತರಾಪೇಕ್ಷೆಯಿಲ್ಲದೇ ಅನುಭವಿಸುತಿರ್ಪುದರಿಂದ ಅಲ್ಲರಿವಿಪ್ಪುದೆಂಬುದೇ ಸಿದ್ಧಮಕ್ಕುಂ. ಬಳಿಕೇನನೂ ಅರಿಯದೆ ಸುಖದಿಂ ಮಲಗಿದ್ದೆನೆಂಬುವದಕ್ಕೆ ಕ್ರಮದಿಂ ಸಕಲ ವಿಷಯ ಜ್ಞಾನವಿಲ್ಲದೆ, ಸಂಸಾರದುಃಖನಿವೃತ್ತಿಯಲ್ಲದೆ, ದುಃಖಾನುಭವ ತೋರದೆ ಸರ್ವದಾ ಸುಪ್ತಿಯಲ್ಲಿ ಅವಿದ್ಯೆಗೆ ಸಾಕ್ಷಿಕನಾದಾ ನಂದಮಯನಪ್ಪಾತ್ಮನುಂಟಾದೊಡೆ ಓರ್ವನೂ ಅಲ್ಲರಿದೆನೆಂಬುದೇನುಕಾರಣ ಮಿಲ್ಲೆನಲು ಒಡವೆಯನರಸಲೆಂದು ಭಾವಿಯೊಳು ಮುಳುಗಿದಾತಂಗೆ ಆ ಒಡ ವೆಯಿಲ್ಲುಂಟೆಂಬುದು ಅಲ್ಲಿಂದ ಪೊರಮೊಟ್ಟಲ್ಲದೆ ಪೇಳಲೆಂತು ಘಟಿಸದೋ ಅಂತು ಸುಷುಪ್ತಿಯಲ್ಲರಿವುಂಟಾದೊಡಂ ಕಾಲಕರ್ಮವಶದಿಂದೆಚ್ಚತ್ತು ಕರಣ ಸಹಕೃತನಾಗದೆ ಅಲ್ಲಿ ತಾನರಿದರ್ಥಮಂ ಪೇಳಲ್ ಘಟಿಸದು. ಇಂತಾಗಲಾ ಸರ್ವಾವಸ್ಥೆಗಳಿಗೂ ಸಾಕ್ಷಿಕನಾದಾತ್ಮಂಗೆ ಸಚ್ಚಿದಾನಂದ ಸ್ವಯಂ ಪ್ರಕಾಶ ರೂಪತ್ವವನುಭವ ಸಿದ್ಧಮಕ್ಕುಂ.

## ೧೨೩. ಪಂಚಕೋಶವಿವೇಕ

ಬಳಿಕ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯವೆಂಬವೇ ಪಂಚಕೋಶಂಗಳವುಗಳಲ್ಲಿ ಪಿತೃಮಾತೃಗಳ ಶುಕ್ಲ ಶೋಣಿತಗಳಿಂದಾದ ಸ್ಥೂಲಶರೀರವೇ ಅನ್ನಮಯ ಕೋಶವೆನಿಸುವದು. ಸೂಕ್ಷ್ಮತನುವಿನಲ್ಲಿ ಪ್ರಾಣವಾರುತಕರ್ಮೇಂದ್ರಿಯಂಗಳುಂ ಕೂಡಿ ಪ್ರಾಣ ಮಯ ಕೋಶವೆನಿಸುವದು, ಮನಸ್ಸು ಜ್ಞಾನೇಂದ್ರಿಯಂಗಳಂಕೂಡಿ ಮನೋ ಮಯ ಕೋಶವೆನಿಸುವದು. ಪ್ರತ್ಯಗಾತ್ಮಚೈತನ್ಯ ಛಾಯೆಯೊಡಗೂಡಿ ಲೋಹಕಾಂತಾಂತರ ಕುಂತ ವಂತಿರ್ಪ ಹಂಕಾರ ಜ್ಞಾನೇಂದ್ರಿಯಂಗಳುಂ ಕೂಡಿ ವಿಜ್ಞಾನಮಯ ಕೋಶವೆನಿಸುವದು. ಕಾರಣದೇಹ ರೂಪವಾದ ಅವಿದ್ಯೆಯುಂ ಜಾಗರದಲ್ಲಿ ವನಿತಾದಿ ಇಷ್ಟವಿಷಯ ದರ್ಶನ, ಸಾಮಿಪ್ಯ, ಸಂಯೋಗಾದಿಗಳಿಂ ಕ್ರಮದಿಂ ಪುಟ್ಟಿದ ಪ್ರಿಯ ಮೋದ ಪ್ರಮೋದಗಳೆಂಬ ತ್ರಿವಿಧಸುಖವೃತ್ತಿಯುಂ ಕೂಡಿ ಆನಂದಮಯಕೋಶಮಕ್ಕುಂ.

## ೧೨೪. ಅಹಂಕಾರಕ್ಕಾತ್ಮತ್ವ ಖಂಡನೆ

ಬಳಿಕೀ ವಿಜ್ಞಾನಮಯಕೋಶರೂಪವಾದಹಂಕಾರವನ್ನೇ ಆತ್ಮಾನಾತ್ಮ ವಿವೇಕಶೂನ್ಯರು ಅಹಮೆಂಬ ತಮ್ಮನುಭವದಿಂದ ಆತ್ಮನೆಂಬುವರು. ನೀಲೋ ತ್ಪಲಮೆಂಬಲ್ಲಿ ನೀಲಗುಣ ವಿಶೇಷಣದೊಡನೆ ವಿಶೇಷ್ಯವಾದುತ್ಪಲವು ವೇದ್ಯ ಮಪ್ಪಂತೆ ಕೃಶೋಹಮೆಂಬಲ್ಲಿ ಸ್ಥೂಲತನುವಿನೊಡನೆ, ದ್ರಷ್ಟಾಹಮೆಂಬಲ್ಲಿ ಚಕ್ಷುರಿಂದ್ರಿಯದೊಡನೆ, ಕಾಣೋಹಮೆಂಬಲ್ಲಿ ಚಕ್ಷುರಭಾವದೊಡನೆ, ಸ್ಮರ್ತಾಹಮೆಂಬಲ್ಲಿ ಸ್ಮರಣವೆಂಬಂತಃಕರಣ ವೃತ್ತಿಯೊಡನೆಯುಂ ಕೂಡಿ ಪ್ರತ್ಯಗಾತ್ಮ ವೇದ್ಯವಪ್ಪುದರಿಂ ಮತ್ತಮಾ ಅಹಂಕಾರಕ್ಕೆ ಸಾಕ್ಷಿಯಾಗಿ ಅಹಂಕಾರ್ಯಹಮೆಂಬಲ್ಲಿ ಅಹಂಕಾರದೊಡಗೂಡಿ ಅಹಮೆಂಬಲ್ಲಿ ಅಹಮಾ ಕಾರಾಂತಃಕರಣ ವೃತ್ತಿವಿಷ್ಟನಾಗಿ ಪ್ರತ್ಯಭಿಜ್ಞೆಯೊಳಗರಿವುದರಿಂ ವಿಶೇಷ ಣಾಂಶಮೆಲ್ಲಂ ಜಡವಾಗಿಪ್ಪುದರಿಂ ಚೇತನನಾದ ಆತ್ಮನಿಗಿಂತಲೂ ವಿಲಕ್ಷಣ ಮಾಗಿರ್ಪುದಾಗಿ ಅಹಂಕಾರವೇ ಆತ್ಮನೆಂಬುವದಸಿದ್ಧಮಕ್ಕುಂ.

## ೧೨೫. ಅಹಂಕಾರ ಚೈತನ್ಯ ವಿವೇಕ

ಬಳಿಕಂತಾದೊಡೆ ಅಚೇತನವಾದಹಂಕಾರಕ್ಕೆ ಬಾಹ್ಯವಿಷಯವನರಿವ ತನವದೆಂತೆನೆ ಸೂಜಿಕಲ್ಲಿನ ಸನ್ನಿಧಿಯಿಂ ಸೂಜಿ ಚಲಿಸುವಂತೆ, ಬಿಸಿಲಲ್ಲಿ

ಪಿಡಿದ ಕನ್ನಡಿಯು ಕೋಣೆಯ ಕತ್ತಲೆಯುಂ ಬೆಳಗುವಂತೆ, ಪ್ರತ್ಯಗಾತ್ಮ ಸನ್ನಿಧಿಯಿಂದ ಚೈತನ್ಯಪ್ರತಿಬಿಂಬವು ತನ್ನಲ್ಲಿರ್ಪುದರಿಂದಲೂ ಜಡವಾದಹಂಕಾರವೇ ಬಾಹ್ಯವಿಷಯದರಿಕೆಯಿಂ ಜಾಗ್ರತ್ಸ್ವಪ್ನಂಗಳಲ್ಲಿ ಸಂಚರಿಸಿ, ಸುಷುಪ್ತಿಯೊಳಗಡುಗಹುದು. ತತ್ಪ್ರಪಂಚಕ್ಕುಪಮಾನಮೆಂತೆನೆ—ಅಹಂಕಾರದ ಲಯಾವಸ್ಥಾತ್ಮಕ ಸುಷುಪ್ತಿಯೊಳು ಅವಿದ್ಯೆಯೆಂಬ ಕೋಣೆಯುವಳಗಭಿವ್ಯಕ್ತಿಯಿಂ ನಿದ್ದೆಯೆಂಬ ಕವಾಟದೊಳಗೆ ನಿಷ್ಕಂಪರೂಪನಾದ ತನ್ನ ತಾನೇ ಬೆಳಗುತಿರ್ಪನೇ ಪ್ರತ್ಯಗಾತ್ಮಜ್ಯೋತಿರೆನಿಸುವನು. ಬಳಿಕ ಕಾಲಕರ್ಮಾದಿ ಸಮೀರಣ ಪ್ರೇರಣೆಯಿಂದ ತಾಮಸಮಪ್ಪ ನಿದ್ರಾಕವಾಟೋದ್ಘಾಟನಮಾಗೆ, ಅವಿದ್ಯಾ ಪ್ರಥಮಾವಸ್ಥಾತ್ಮಕ ಮಹತ್ತತ್ವಮೆಂಬ ದೇಹಳಿಯಮೇಲಿರ್ದ ಸಾತ್ವಿಕಮಾದಹಂಕಾರಮೆಂಬ ಸ್ಫಟಿಕಮಣಿಯು ಪ್ರತ್ಯಗಾತ್ಮ ಪ್ರದೀಪ ಪ್ರತಿಬಿಂಬಗರ್ಭಿತಮಾಗಿ ಮುನ್ನಿನಂತೆ ಜೀವನೆನಿಸಿ, ಸ್ವಪ್ನಾವಸ್ಥೆಯೆಂಬ ನಡುಮನೆಯಂ ಬೆಳಗಿ, ಮೇಲಿಂದ್ರಿಯಂಗಳೆಂಬ ಗವಾಕ್ಷದಿಂ ಪೊರಮೊಟ್ಟು ಜಾಗ್ರದವಸ್ಥೆಯೆಂಬ ಬಾಹ್ಯಾಂಗಣಮಂ ಪ್ರಕಾಶಿಸುತಿರ್ಕುಂ. ಮತ್ತಮಾ ಕಾಲಕರ್ಮಾದಿ ಸಮೀರಣಪ್ರೇರಣೆಯಿಂದ ನಿದ್ದೆಯೆಂಬ ಕವಾಟ ಮುಚ್ಚಲೊಡನೆ, ಆ ಯಹಂಕಾರವೆಂಬ ಸ್ಫಟಿಕಮಣಿಯು ತನಗೆ ಕಾರಣಮಾದ ಅವಿದ್ಯೆಯೊಳಗಡಗಲ್ಕು, ಆ ಜಾಗ್ರತ್ಸ್ವಪ್ನಗಳೆಂಬ ಅಂಗಣ ನಡುಮನೆಗಳಂಧಕಾರಮಯಮಪ್ಪವಹಂಕಾರಮಣಿಯಲ್ಲಿ ಪ್ರತಿಫಲಿಸಿರ್ದ ಚೇತನ ಪ್ರಕಾಶವೇ ತನಗೆ ಮೂಲಭೂತಮಾದ ಪ್ರತ್ಯಗಾತ್ಮ ಪ್ರದೀಪದಲ್ಲಿ ಏಕಮಾಗುತ್ತಿಹುದಿಂತು ಜಾಗ್ರದಾದ್ಯವಸ್ಥಾತ್ರಯದೊಳು ಹಮ್ಮಿನ ಭಾವಾಭಾವಂಗಳ ನವಿಕಾರಿಯಾಗಿ ಅರಿವ ಆತ್ಮನೋರ್ವಂ ಬೇರಿಪ್ಪುದರಿಂದ ಅಹಂಭಾವಮಾತ್ಮ ಸ್ವರೂಪಮಲ್ಲೆಂದು ಸ್ಥಿರಮಕ್ಕುಂ.

## ೧೨೬. ಅಹಂಕಾರಸಂಬಂಧ

ಬಳಿಕ ಬಾಹ್ಯವಿಷಯಕ್ಕಾತ್ಮನಂತೆ ತೋರಿ ಅಂತರದೊಳು ಪ್ರತ್ಯಗಾತ್ಮವೇದ್ಯಮಪ್ಪುದರಿಂ ಜಡಾಜಡಸ್ವರೂಪಮಾಗಿ ದರ್ಪಣದ ಮುಂಭಾಗ ಹಿಂಭಾಗದಂತೆ ಪ್ರಕಾಶಾಪ್ರಕಾಶಾತ್ಮಕಮಾ ದಹಂಕಾರಕ್ಕೆ ದೇಹ, ಚಿಚ್ಛಾಯೆ, ಪ್ರತ್ಯಗಾತ್ಮನೆಂಬ ಮೂವರೊಡನೆ ಸಂಬಂಧಮುಂಟವರಲ್ಲಿ ಅಹಂ ಜ್ವರಾಮಿಯೆಂಬುವಲ್ಲಿ ಚಿತ್ಪ್ರತಿಬಿಂಬಯುಕ್ತಮಾದಹಂಕಾರ ಸಂಬಂಧದಿಂ ಸ್ಥೂಲದೇಹಕ್ಕೆ

ಉಷ್ಣಾದಿಗಳ ಪರಿವರ್ತನವೇ ಕರ್ಮಜನಿತವಾಗಿ ಕರ್ಮಜವೆನಿಸುವದು. ಅಹಂ ಜಾನಾಮಿ ಯೆಂಬುವಲ್ಲಿ ಚಿಚ್ಛಾಯಾಹಂಕಾರ ಸಂಬಂಧವು ಸೃಷ್ಟಿತೊಡಗಿ ಮೋಕ್ಷಾವಧಿ ಕೆಡದಾಗಿ ಸಹಜವೆನಿಸುವದು. ಅಹಂಕರ್ತಾ ಯೆಂಬುವಲ್ಲಿ ಅಸಂಗನಾದ ಪ್ರತ್ಯಗಾತ್ಮನಿಗೆ ಅಹಂಕಾರ ಸಂಬಂಧವು ಭ್ರಾಂತಿಜನ್ಯವೆಂದು ವ್ಯಕ್ತವಾಗಿ ತಿಳಿಯಲಕ್ಕುಂ.

## ೧೨೭. ಬಿಂಬ ಪ್ರತಿಬಿಂಬಭಾವ

ಬಳಿಕ ನಿರ್ಗುಣಾಖಂಡ ಚಿನ್ಮಾತ್ರ ಬ್ರಹ್ಮವೆನಿಪ ಪರಶಿವನೇ ಬಿಂಬ. ಮೂಲಭೂತ ಮಾಯೆಯೇ ದರ್ಪಣ, ಸಗುಣಬ್ರಹ್ಮವೆನಿಪ ಈಶ್ವರಲಿಂಗವೇ ಪ್ರತಿಬಿಂಬ; ಮತ್ತಮಾ ಪರಶಿವನೇ ಬಿಂಬ, ಅವಿದ್ಯೆಯೇ ದರ್ಪಣ, ಜೀವಲಿಂಗವೇ ಪ್ರತಿಬಿಂಬ; ಇನ್ನುಮಾ ಈಶ್ವರಲಿಂಗವೇ ಬಿಂಬ, ಗುಣಸಾಮ್ಯವೆಂಬ ಮಾಯೋಪಾಧಿಯೇ ದರ್ಪಣ, ಬ್ರಹ್ಮಾಂಡಪ್ರಪಂಚವೇ ಪ್ರತಿಬಿಂಬ; ಬಳಿಕ ಜೀವಲಿಂಗವೇ ಬಿಂಬ, ಅಂತಃಕರಣವೇ ದರ್ಪಣ, ಸುಖಾದಿ ವಿಷಯವೇ ಪ್ರತಿಬಿಂಬವೀಪರಿ ತಿಳಿಯಲು ಜೀವಸಾಕ್ಷಿ, ಈಶ್ವರಸಾಕ್ಷಿಗಳೇ ನಿರುಪಾಧಿಕ ಮೂಲಬಿಂಬಗಳಾಗೆ ಅವರೊಳಗೈಕ್ಯಮುಪಪನ್ನಮಕ್ಕುಂ.

## ೧೨೮. ನಿರಾಕಾರಕ್ಕೆ ಪ್ರತಿಬಿಂಬ

ಬಳಿಕ ಲೋಕನ್ಯಾಯ ವಿರುದ್ಧಮಾಗಿ ನಿರಾಕಾರವಸ್ತುವೆಂತ ಪ್ರತಿಫಲಿಸಿ ಪ್ರತಿಬಿಂಬಮಪ್ಪುದೆನೆ—ಗಗನವು ನಿರೂಪಮಾದೊಡಂ ಜಲದಲ್ಲಿ ಪ್ರತಿಬಿಂಬಿಸಿತೆಂಬಂತೆ ಇತರ ಪ್ರತಿಬಿಂಬನ್ಯಾಯವು ನಿಯತಮಾಗೆ ಚಿತ್ಪ್ರಭಾವದೊಳಗವಿರುದ್ಧಮಕ್ಕುಂ.

## ೧೨೯ ಪ್ರತಿಬಿಂಬಕ್ಕೆ ಪ್ರತಿಬಿಂಬ

ಮತ್ತಮಾ ಬಿಂಬವು ಪ್ರತಿಬಿಂಬಿಸುವದು ನ್ಯಾಯಸಂಮತಮಾದರುಂ, ಪ್ರತಿಬಿಂಬಮಾದೀಶ್ವರನು ಜಗದಾಕಾರಮಾಗಿ ಪ್ರತಿಬಿಂಬಿಸುವದೆಂತೆನೆ— ಕನ್ನಡಿಯೊಳ್ ಪ್ರತಿಫಲಿಸಿ ಕನ್ನಡಿಯಿಂ ಗೋಡೆಯೊಳು ತೋರ್ಪ ಸೂರ್ಯನ ಬೆಳಕು ಬೇರೆ ಪ್ರತಿಬಿಂಬಿಸಿದಂತೆ ಭಾನಮಾತ್ರಮೆಂಬಲ್ಲಿ ಯೆಂತಾದರುಂ ವಿರೋಧಮಿಲ್ಲದಿರ್ಕುಂ.

## ೧೩೦. ಬಿಂಬಸಾಮ್ಯಭಂಗ

ಬಳಿಕ ನಿಷ್ಕಳಂಕಮಾದ ಚಿತ್ತಿನೊಳು ಸಕಳಂಕಮಾದ ಚಿದಾಭಾಸ ಮೆಂತೆನೆ—ಚಿಹ್ನವಿಲ್ಲದ ಮುಖವು ರಸಸಿಡಿದು ಚಿಹ್ನಿತಮಾದ ಕನ್ನಡಿಯೊಳ್ ಪ್ರತಿಫಲಿಸೆರಾ ಚಿಹ್ನಿತಮಾಗಿ ತೋರ್ಪಂತೆ ಉಪಾಧಿಗಳಾದ ಮಾಯಾವಿದ್ಯಾದಿ ಗಳ ಸಕಳಂಕತ್ವವೇ ಚಿದಾಭಾಸಾದಿ ಕಾರಣಮಪ್ಪುದಾಗಿ ಪ್ರತಿಬಿಂಬಮಾದು ದೆಲ್ಲಂ ಬಿಂಬ ಸಮಾನಮಾಗಿರ್ಪುದೆಂಬುದು ನಿರಾಕೃತಮಕ್ಕುಂ,

## ೧೩೧. ಉಪಾಧಿಸಾಮ್ಯ

ಅಂತಾದೊಡೀ ಪ್ರತಿಬಿಂಬಮಾವುದಕೆ ಸಮನಿಯತಮಪ್ಪುದೆನೆ—ಉಪಾ ಧಿಯಾದ ದರ್ಪಣವಿಲ್ಲದಿರಲಿರದೆ, ದರ್ಪಣವಿರಲಿದ್ದು, ದರ್ಪಣವು ದೂಷಿತ ಮಾದೊಡೆ ದುಷ್ಟಮಾಗಿ, ದರ್ಪಣವು ಚೇಷ್ಟಿಸೆ ಚೇಷ್ಟಿಸಿ, ದರ್ಪಣವು ಭಂಗಮಾಗೆ ತಾನುಂಭಂಗಮಾಗಿ ಬಿಂಬದೊಳಗೈಕ್ಯಮಪ್ಪುದರಿಂ ಪ್ರತಿಬಿಂಬವು ತದುಪಾಧಿಸಮನಿಯತಮಾಗೆ ಅಂತಃಕರಣವೆಂಬ ಅವಿದ್ಯೋಪಾಧಿಯು ಕಾಮ ಕ್ರೋಧಾದಿ ಮಲಯುಕ್ತಮಾಗೆ ಜೀವಲಿಂಗಸ್ವರೂಪಮುಂ ಸಕಳಂಕಮಾಗಿ ಅಂತಃಕರಣವು ಮೈತ್ರ್ಯಾದಿ ಪರಿಕರತ್ವದಿಂ ವೈರಾಗ್ಯ ವಿವೇಕಾದಿ ಪರಿಶು ದ್ಧಮಾದೊಡೆ ಜೀವಲಿಂಗಸ್ವರೂಪವು ಶಿವಲಿಂಗದಂತೆ ನಿಷ್ಕಳಂಕಮಾಗಿ, ಅಂತಃಕರಣನಾಶಮಾದೊಡೆ ಜೀವತ್ವಕ್ಕೆ ಹಾನಿಯುಂಟಾಗಲು ಶಿವಲಿಂಗ ದೊಳಗೈಕ್ಯಮೆಂಬುದೇ ನಿಶ್ಚಿತಮಕ್ಕುಂ.

## ೧೩೨. ಉಪಾಧೇಯಭಿನ್ನತ್ವ

ಮತ್ತಮಾ ಚೈತನ್ಯಮೊಂದೇಯಾಗಿ ತತ್ಸಾನ್ನಿಧ್ಯಮಾತ್ರದಿಂ ಮಾಯಾ ದ್ಯುಪಾಧಿಗಳು ಚೇಷ್ಟಿಪವೆನೆ—ಚೈತನ್ಯಮೆಂಬುದು ಸರ್ವದಿಕ್ಕಾಲ ವ್ಯಾಪಕ ಮಾಗಿರಲ್ಕೆ ಉಪಾಧಿಕಾರ್ಯವು ಸಾರ್ವತ್ರಿಕಮಾಗಿಯುಂ ಸಾರ್ವಕಾಲಿಕ ಮಾಗಿಯುಂ ಪುಟ್ಟದೇತಕೆನೆ—ಏಕಮಾದಘಂಡಾಕಾಶದೊಳು ಖಂಡಗಳಾದ ವೀಣಾ, ವೇಣು, ಮೃದಂಗಾದಿವಾದ್ಯಗಳೊಳು ಭಿನ್ನಗಳಾದ ಶಬ್ದ ವೈಚಿತ್ರ್ಯ ಗಳಪ್ಪುದರಿಂದವಿಕೃತಮಾದಾಕಾಶಕ್ಕೆ ವೀಣಾಕಾಶ, ವೇಣ್ವಾಕಾಶ, ಮೃದಂ ಗಾಕಾಶಮೆಂದು ಭೇದಮುಂ ಕಲ್ಪಿಸುವಂತೆ ತತ್ತದಂತಃಕಣಾದಿ ಶರೀರೋ ಪಾಧಿಗಳಿಂ ತತ್ತಜ್ಜೀವಾದಿ ಚೈತನ್ಯಭಿನ್ನತ್ವಮುಂ ಬಂಧ ಮೋಕ್ಷ ಭೇದಮುಂ ವ್ಯವಹಾರಸಿದ್ಧಮಾಗಿಪ್ಪುದು.

## ೧೩೩. ಅನಾದಿಷಟ್ಕ

ಬಳಿಕ ಶುದ್ಧಚಿತ್ತೆಂಬ ಪರಶಿವನು, ಜಗತ್ಕಾರಣನಾದ ಪರಮೇಶ್ವರನು, ಸಂಸಾರಿಯಾದ ಜೀವನು, ಸಂಸಾರ ಮೂಲವಾದಜ್ಞಾನ, ಜೀವೇಶ್ವರಭೇದ, ಚಿಜ್ಜಡಭೇದವೆಂಬೀ ಆರುಂ ಅನಾದಿಸಿದ್ಧಗಳಾಗಿ ಇವುಗಳಿಗೆ ಕಾರಣಮಿಲ್ಲದಿರಲ್ಕೆ ಇವುಗಳಿಂದೊಡಗೂಡಿದ ಪ್ರಪಂಚಮಂ ಪರಮೇಶ್ವರನೆಂತು ಪುಟ್ಟಿಸಿದನೆನೆ ಮುನ್ನಪೇಳ್ದ ಅನಾದಿಪದಾರ್ಥಗಳಲ್ಲದೆ ಶಶಶೃಂಗಾದಿಗಳಂತೆ ತುಚ್ಛಮಾಗದೆ ಜೀವಕಲ್ಪಿತಮಾದ ಶುಕ್ತಿರಜತದಂತೆ ಅನಿರ್ವಚನೀಯಮಾದ ವ್ಯೋಮಾದಿಪ್ರಪಂಚವೇ ಪುಟ್ಟಿತಾಗಿ ಪರಮೇಶ್ವರ ಕಲ್ಪಿತತ್ವಮಬಾಧಿತಮಕ್ಕುಂ.

## ೧೩೪. ಸಪ್ತಾವಸ್ಥೆಗಳು

ಅನಂತರದಲ್ಲಿ ಅಜ್ಞಾನ, ಆವರಣ, ವಿಕ್ಷೇಪ, ಪರೋಕ್ಷಜ್ಞಾನ, ಅಪರೋಕ್ಷಜ್ಞಾನ, ಶೋಕನಿವೃತ್ತಿ, ನಿರಂಕುಶತೃಪ್ತಿಯೆಂಬವೆ ಜೀವನ ಸಪ್ತಾವಸ್ಥೆಗಳವುಗಳಲ್ಲಿ ಸಂಸಾರಾಸಕ್ತನಾದ ಚಿದಾಭಾಸಜೀವನು ಶ್ರುತಿವಿಚಾರಕ್ಕೆ ಮುನ್ನವೇ ತನ್ನ ನಿಜಸ್ವರೂಪಮಾದ ಸ್ವಯಂಪ್ರಕಾಶನಪ್ಪ ಪ್ರತ್ಯಗಾತ್ಮನನರಿಯದಿಹುದೇ ಅಜ್ಞಾನವೆನಿಸುವದು. ಬಳಿಕೊಂದಾನೊಂದುವೇಳೆ ಚಿದಾತ್ಮಪ್ರಸಂಗಂ ಬರಲಾಗಿ ಪ್ರತ್ಯಗಾತ್ಮನಿಲ್ಲೆಂಬ, ಪ್ರತ್ಯಗಾತ್ಮ ತೋರನೆಂಬ ಉಭಯವಿಧಮೋಸವೇ ಆ ಅಜ್ಞಾನಕಾರ್ಯಮಾದ ಆವರಣವೆನಿಸುವದು. ಬಳಿಕ ತಾನೇ ಕರ್ಮಕರ್ತೃ, ತಾನೇ ಕರ್ಮಫಲಭೋಕ್ತೃವೆಂದು ಬಗೆದು ದೇಹಾಭಿಮಾನಿಯಾದ ಚಿದಾಭಾಸಜೀವನೇ ವಿಕ್ಷೇಪವೆನಿಸುವನು. ಬಳಿಕ ಆತ್ಮನ ಅಸ್ತಿತ್ವಮಂ ಪೇಳ್ವಶ್ರುತ್ಯಾಚಾರ್ಯವಾಕ್ಯ ವಿಶ್ವಾಸದಿಂ ಪ್ರತ್ಯಗಾತ್ಮನುಂಟೆಂದು ತಿಳಿವುದೇ ಮೊದಲನೆಯ ಅಸತ್ವಾವರಣ ನಿವರ್ತಕಮಾದ ಪರೋಕ್ಷಜ್ಞಾನವೆನಿಸುವದು. ಬಳಿಕ ನೀನೇ ಬ್ರಹ್ಮವೆಂದು ಪೇಳ್ವ ವೇದವಾಕ್ಯ ವಿಚಾರ ಪರಿಪಾಕವಶದಿಂ ಪ್ರತ್ಯಗಾತ್ಮನೇ ತಾನೆಂದು ಬಗೆವುದು ಎರಡನೆಯ ಅಭಾನಾವರಣ ನಿವರ್ತಕಮಾದ ಅಪರೋಕ್ಷಜ್ಞಾನವೆನಿಸುವದು. ಬಳಿಕ ಪ್ರತ್ಯಗಾತ್ಮ ಸಾಕ್ಷಾತ್ಕಾರದಿಂ ಮೇಲೆ ನಾನು ಕರ್ಮಕರ್ತೃ, ಕರ್ಮಫಲ ಭೋಕ್ತೃವೆಂಬ ಜೀವರೂಪ ದುಃಖಪರಿತ್ಯಾಗವೆ ಶೋಕನಿವೃತ್ತಿಯೆನಿಸುವದು. ಬಳಿಕ ಮಾಡಲ್ತಕ್ಕ ಕೃತ್ಯವೆಲ್ಲಂ ಮಾಡಲ್ಪಟ್ಟಿತು. ಐದ

ಲ್ಲುಕ್ಕ ಫಲಜಾತವೆಲ್ಲಂ ಐದಲ್ಪಟ್ಟಿತೆಂದು ಸಹಜ ಪರಿತುಷ್ಟಿವಡೆದಿರ್ಪುದೇ ನಿರಂಕುಶ ವೃತ್ತಿಯೆನಿಸುವದು. ಈ ಶೋಕನಿವೃತ್ತಿ ನಿರಂಕುಶವೃತ್ತಿಗಳೆರಡೇ ಅಪರೋಕ್ಷಜ್ಞಾನಕ್ಕೆ ಫಲಮಕ್ಕುಂ.

## ೧೩೫. ಸಪ್ತಾವಸ್ಥಾಸಮನ್ವಯ

ಬಳಿಕ ಸ್ವಯಂಪ್ರಕಾಶ ಚಿದ್ರೂಪನಾದಾತ್ಮಂಗೆ ನಿತ್ಯಾಪರೋಕ್ಷತ್ವಮುಂಟಾದುದರಿಂದಾತ್ಮನೊಳೀ ಅಜ್ಞಾನಾದಿ ಸಪ್ತಾವಸ್ಥೆಗಳು ಘಟಿಸವೆಂದೊಡದಕ್ಕೆ ದೃಷ್ಟಾಂತಮೆಂತೆನೆ–ಪೂರ್ವದಲ್ಲಿ ದಶಪುರುಷರೊಂದು ನದಿಯಂ ದಾಂಟಿ ಪೋಗಿ ಮೇಲೆ ಪರಾಮರ್ಶಂಗೈವ ಸಮಯದೊಳವರಲ್ಲಿ ನವಸಂಖ್ಯಾಕ ಪುರುಷರುಗಳ ನಿದಿರಿಟ್ಟೆಣಿಸುತಿರ್ದ್ದೋರ್ವ ಪುರುಷನು ತಾನೇ ದಶಮಪುರುಷನೆಂಬುದನರಿಯದಿಹುದೇ ಅಜ್ಞಾನವೆನಿಸುವುದು. ಬಳಿಕ ಹತ್ತನೆಯಾತನೇಯಿಲ್ಲ, ಆತನು ಕಾಣಿಸುತ್ತಿರನೆಂಬುಭಯವಿಧ ಭ್ರಾಂತಿಯೇ ಆಯಜ್ಞಾನಕಾರ್ಯಮಾದಾವರಣವೆನಿಸುವದು. ಬಳಿಕ ಹತ್ತನೆಯಾತನು ನದಿಯಲ್ಲಿ ಮೃತನಾದನೆಂಬ ದುಃಖವೇ ವಿಕ್ಷೇಪವೆನಿಸುವದು. ಬಳಿಕ ಬೇರೊಬ್ಬಾಪ್ತವಚನದಿಂದ ಆ ದಶಮಪುರುಷನು ಸ್ವರ್ಗದೆಂತುಂಟೆಂದರಿವುದೇ ದಶಮನಿಲ್ಲೆಂಬ ಮೊದಲಾವರಣಕ್ಕೆ ವಿರೋಧಿಯಾದ ಪರೋಕ್ಷಜ್ಞಾನವೆನಿಸುವದು. ಬಳಿಕ ಆ ನವಸಂಖ್ಯಾಕ ಪುರುಷರುಗಳೊಡಗೂಡಿ ಕ್ರಮದಿಂದೆಣಿಸಿ ನೀನೇ ದಶಮನೆಂದು ಪೇಳೆ ತನ್ನಂ ತಾನೇ ಸಾಕ್ಷಾತ್ಕರಿಪುದೇ ದಶಮಂ ಕಾಣಿಸನೆಂಬ ಎರಡನೆಯಾವರಣಕ್ಕೆ ವಿರೋಧಿಯಾದ ಅಪರೋಕ್ಷಜ್ಞಾನವೆನಿಸುವದು. ಬಳಿಕಾ ದಶಮನ ಮೃತಿದುಃಖವಂ ಬಿಡುವದೇ ಶೋಕನಿವೃತ್ತಿಯೆನಿಸುವದು. ಬಳಿಕ ನಿಜಸ್ಥಿತಿಯಿಂ ಸುಖಮಾಗಿಹುದೇ ನಿರಂಕುಶವೃತ್ತಿಯಕ್ಕುಂ.

## ೧೩೬. ವೇದವಾಕ್ಯವಿಚಾರ

ಬಳಿಕ ವೇದವಾಕ್ಯವಿಚಾರಮೆಂತೆನೆ ವಿಧಿವಾಕ್ಯ, ನಿಷೇಧವಾಕ್ಯ, ಸಿದ್ಧಾರ್ಥಬೋಧಕ ವಾಕ್ಯಮೆಂದು ವೇದವಾಕ್ಯವು ತ್ರಿವಿಧಮಾಗಿರ್ಪುದದರಲ್ಲಿ ಯಜ್ಞಾದಿಗಳಂ ಮಾಡಬೇಕೆಂಬುವದೇ ವಿಧಿವಾಕ್ಯವು. ಸುರಾಪಾನಾದಿಗಳಂ ಮಾಡಬಾರದೆಂಬುವದೇನಿಷೇಧವಾಕ್ಯವು. ವಿಧಿಶೂನ್ಯಮಾಗಿ ಬ್ರಹ್ಮಾತ್ಮೈಕ

ಕ್ಯರೂಪ ವಸ್ತುಮಾತ್ರಮಂ ಬೋಧಿಸುವದೇ ಸಿದ್ಧಾರ್ಥಬೋಧಕ ವಾಕ್ಯಮಕ್ಕುಂ.

### ೧೩೭. ವೇದಾಂತಮಹಾವಾಕ್ಯಾರ್ಥ

ಬಳಿಕ ಋಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕು ವೇದಂಗಳಲ್ಲಿ ಕ್ರಮದಿಂ ಪ್ರತಿಪಾದಿಸಲ್ಪಟ್ಟ ನಿತ್ಯ ಶುದ್ಧ ಪೂರ್ಣ ಜ್ಞಾನವೇ ಪ್ರಜ್ಞಾನ, ಇದೇ ಬ್ರಹ್ಮವೆಂದರ್ಥವುಳ್ಳ ಪ್ರಜ್ಞಾನಂಬ್ರಹ್ಮಯೆಂಬ ಮಹಾವಾಕ್ಯವೊಂದು ; ನಾನೇ ಬ್ರಹ್ಮನಾದೆಯೆಂಬರ್ಥವುಳ್ಳ ಅಹಂಬ್ರಹ್ಮಾಸ್ಮಿಯೆಂಬ ಮಹಾವಾಕ್ಯ ವೊಂದು; ಆ ಬ್ರಹ್ಮವೇ ನೀನಾದೆಯೆಂಬರ್ಥವುಳ್ಳ ತತ್ತ್ವಮಸಿಯೆಂಬ ಮಹಾ ವಾಕ್ಯವೊಂದು; ಈ ಯಾತ್ಮನೇ ಬ್ರಹ್ಮವೆಂದರ್ಥಮುಳ್ಳ ಅಯಮಾತ್ಮಾಬ್ರಹ್ಮ ವೆಂಬ ಮಹಾವಾಕ್ಯವೊಂದುಂಗೂಡಿ ಮಹಾವಾಕ್ಯ ಚತುಷ್ಟಯ ಮೆನಿಸು ತಿರ್ಕುಂ. ಈ ಮಹಾವಾಕ್ಯಗಳು ನಾಲ್ಕುಂ ಸರ್ವವೇದಾಂತ ಮುಖ್ಯಗಳಾಗಿರು ವವೆಂತೆನೆ ಕರ್ಮಕಾಂಡದೊಳು ಶ್ರೀ ರುದ್ರಾಧ್ಯಾಯವೇ ಮುಖ್ಯವದರೊಳಗೆ ಶಿವಪಂಚಾಕ್ಷರೀ ಮಹಾಮಂತ್ರವೇ ಮುಖ್ಯವೆಂಬಂತೆ ಬ್ರಹ್ಮಕಾಂಡದೊಳು ಉಪನಿಷದ್ಗತ ಬ್ರಹ್ಮಬೋಧಕ ವಾಕ್ಯಗಳೇ ಮುಖ್ಯ, ಅವುಗಳೊಳು ಮಹಾ ವಾಕ್ಯ ಸಹಸ್ರ ರತ್ನಾವಳಿಯೇ ಮುಖ್ಯ, ಅವುಗಳೊಳು ಮಹಾವಾಕ್ಯ ಚತುಷ್ಟ ಯವೇ ಮುಖ್ಯಮಾದ ಕಾರಣದಿಂದೀ ಸಿದ್ಧಾರ್ಥ ಬೋಧಕಗಳಾದ ನಾಲ್ಕು ವಾಕ್ಯಗಳಂ ಮುಮುಕ್ಷುಗಳು ತಮ್ಮಧಿಕಾರಕ್ಕನುರೂಪಮಾಗಿ ಪಡೆದು ಪಠಿಸಿ ಅರ್ಥವಿಚಾರದಿಂ ಸರ್ವದಾಮನನಾದಿಗಳಂ ಮಾಳ್ಪರು. ಇಂತೀ ನಾಲ್ಕುವಾಕ್ಯ ಗಳೊಳು "ತತ್ತ್ವಮಸಿ" ಎಂಬ ಮಹಾವಾಕ್ಯವು ಮುಖ್ಯಮಾಗಿರ್ಪುದದೆಂತೆಂ ದೊಡೆ "ವೇದಾನಾಂ ಸಾಮವೇದೋಸ್ಮಿ" ಎಂಬ ಪ್ರಮಾಣದಿಂ ಈಶ್ವರನ ವೇದಿವಿಭೂತಿಯೊಳು ಮುಖ್ಯಮಾದ ಸಾಮವೇದಶಿಖೆಯೇ ಛಾಂದೋಗ್ಯೋ ಪನಿಷತ್ತಾಗಿರುವದು. ಅದರೊಳಗಾರನೆಯ ಅಧ್ಯಾಯವು ಸಮಗ್ರವಾಗಿ ತತ್ತ್ವೋಪದೇಶಮಹುದರಿಂದದರೊಳು ಶ್ವೇತಕೇತುವೆಂಬ ಯೋಗ್ಯಾಧಿಕಾರಿಗೆ ಸರ್ವಸಂಶಯ ನಿವೃತ್ತಿಪೂರ್ವಕ ಜ್ಞಾನದಾರ್ಢ್ಯ ಸಿದ್ಧಿಗಾಗಿ ತತ್ತ್ವಮಸಿ ಯೆಂಬ ಮಹಾವಾಕ್ಯವೊಂಭತ್ತು ಸಾರಿ ಸಾರಲ್ಪಟ್ಟಿದ್ದರಿಂದಿದಕನುಕೂಲ ಮಾಗಿ ಸರ್ವವೇದಾಂತಗಳುಂ ಸಾರುತ್ತಿರಲಿದಂ ಮುಖ್ಯೋಪದೇಶಮೆಂದನು ಗ್ರಹಿಸಲಕ್ಕುಂ. ಬಳಿಕ 'ತತ್', 'ತ್ವಂ', 'ಅಸಿ' ಯೆಂಬ ಪದತ್ರಯಕ್ಕೆ ಕ್ರಮದಿಂ ಶಿವ ಜೀವ ಐಕ್ಯವೇ ಅರ್ಥಮಹುದಾಗಿ ಶಿವ ಜೀವ ಲಿಂಗಾಂಗ

ಸಂಗೋಪಾಧಿಭಂಗ ಚಿನ್ಮಾತ್ರ ಕೈವಲ್ಯಮೆಂಬ ಸಿದ್ಧಾಂತಾರ್ಥವೆ ನಿರ್ಧರಿಸಲಪ್ಪುದು.

## ೧೩೮. ವಾಕ್ಯಾರ್ಥ ಸಂಬಂಧತ್ರಯವು

ಬಳಿಕ ಪದ, ಪದಾರ್ಥ, ವಾಕ್ಯಾರ್ಥಂಗಳಿಗೆ ಸಾಮಾನಾಧಿಕರಣ್ಯ ಸಂಬಂಧ, ವಿಶೇಷಣ ವಿಶೇಷ್ಯಭಾವ ಸಂಬಂಧ, ಲಕ್ಷ್ಯಲಕ್ಷಣ ಸಂಬಂಧವೆಂಬವೇ ಕ್ರಮದಿಂ ಸಂಬಂಧತ್ರಯಮಕ್ಕು.

## ೧೩೯. ತತ್ತ್ವಂಪದ ವಾಚ್ಯಾರ್ಥ

ಬಳಿಕ ಪದಗಳಿಗೆ ವಾಚ್ಯಾರ್ಥ ಲಕ್ಷ್ಯಾರ್ಥಮೆಂದರ್ಥದ್ವಯಮಿಪ್ಪುದು ಅದರಲ್ಲಿ ಪೂರ್ವೋಕ್ತ ಸ್ಥೂಲಾದಿ ತನುತ್ರಯ ಸಮಷ್ಟಿರೂಪವಾದ ವಿರಾಟ್ಪುರುಷ, ಹಿರಣ್ಯಗರ್ಭ, ಈಶ್ವರರುಗಳನೂ ಬ್ರಹ್ಮವನೂ ಕೂಡಿ ತಪ್ತಾಯಃಪಿಂಡದಂತೆ ಏಕರೂಪವಾಗಿ ಕಾಣುವದೇ ತತ್ಪದಕ್ಕೆ ವಾಚ್ಯಾರ್ಥಮೆಂದು, ಮುಖ್ಯಾರ್ಥಮೆಂದು, ಅಭಿಧಾನಾರ್ಥಮೆಂದು, ಶಕ್ಯಾರ್ಥಮೆಂದು ತಿಳಿಯಲಕ್ಕುಂ. ಬಳಿಕ ತನುತ್ರಯ ವ್ಯಷ್ಟಿರೂಪವಾದ ವಿಶ್ವ, ತೈಜಸ, ಪ್ರಾಜ್ಞರುಗಳನೂ ಪ್ರತ್ಯಗಾತ್ಮನನೂ ಕೂಡಿ ತಪ್ತಾಯಃಪಿಂಡದಂತೆ ಒಂದೆಂದು ಕಂಡಲ್ಲಿ ತ್ವಂಪದಕ್ಕೆ ವಾಚ್ಯಾರ್ಥವೆಂದು, ಶಕ್ಯಾರ್ಥವೆಂದು, ಮುಖ್ಯಾರ್ಥಮೆಂದು, ಅಭಿಧಾನಾರ್ಥವೆಂದು ತಿಳಿಯಲಕ್ಕುಂ.

## ೧೪೦. ತತ್ತ್ವಂಪದಲಕ್ಷ್ಯಾರ್ಥ

ಬಳಿಕ ವಿರಾಟ್ಪುರುಷಾದಿಗಳಂ ಬೇರ್ಪಡಿಸಿದ ನಿರುಪಾಧಿಕ ಬ್ರಹ್ಮವೇ ತತ್ಪದಲಕ್ಷ್ಯಾರ್ಥಮೆಂದು, ಶೋಧಿತ ತತ್ಪದಾರ್ಥಮೆಂದು ವೇಳ್ಕುಂ. ಮತ್ತಮಾ ವಿಶ್ವಾದಿಗಳಂ ಪೃಥಕ್ಕರಿಸಿದ ನಿರುಪಾಧಿಕ ಪ್ರತ್ಯಗಾತ್ಮನೇ ತ್ವಂಪದಕ್ಕೆ ಲಕ್ಷ್ಯಾರ್ಥಮೆಂದು, ಶೋಧಿತ ತ್ವಂಪದಾರ್ಥಮೆನಿಸುತಿರ್ಕುಂ.

## ೧೪೧. ಲಕ್ಷಣಾಭೇದ

ಮತ್ತಮಾ ಪದಗಳಿಗೆ ವ್ಯಾಕರಣ, ಉಪಮಾನ, ಕೋಶ, ಆಪ್ತವಾಕ್ಯ, ಲೋಕವ್ಯವಹಾರ, ವಾಕ್ಯಶೇಷ, ವಿವೃತಿ, ಸಿದ್ಧಪದಸಾನ್ನಿಧ್ಯಗಳೆಂಬ ಸಾಮಗ್ರಿಗಳಿಂ ಘಟಪದಕ್ಕೆ ಪೃಥುಬುಧ್ನೋದರಾದ್ಯಾಕಾರಮುಳ್ಳ ಕಲಶವರ್ಥವ

ಪ್ಪಂತೆ ಈಶ್ವರಸಂಕೇತದಿಂದೀಪದಕ್ಕೆ ಈಯರ್ಥಮೆಂದು ತಿಳಿಯಲ್ಪಡುವದೇ ಶಕ್ಯಾರ್ಥವೆನಿಸುವದು. ವಾಕ್ಯಾರ್ಥದಲ್ಲಿ ಅರ್ಥಕ್ಕಾದರುಂ, ತಾತ್ಪರ್ಯಕ್ಕಾದರುಂ ಪ್ರಕರಣಲಿಂಗಷಟ್ಕಾದಿಗಳಿಂ ಅನುಪಪತ್ತಿಯುಂಟಾಗುವಲ್ಲಿ ಶಕ್ಯಾರ್ಥಸಂಬಂಧಮುಳ್ಳ ಉಪಪನ್ನಮಾದ ಮತ್ತೊಂದರ್ಥಮಂ ಆ ಪದಕ್ಕೆ ಪೇಳ್ವುದೇ ಲಕ್ಷ್ಯಾರ್ಥಮೆನಿಸುವದಾಗಿ ಶಕ್ಯಸಂಬಂಧವೇ ಲಕ್ಷಣೆಯೆನ್ನಿಸಿಕೊಳ್ಳುತಿರ್ಕುಂ. ಬಳಿಕಾ ಲಕ್ಷಣೆಯೇ ಜಹಲ್ಲಕ್ಷಣೆ, ಅಜಹಲ್ಲಕ್ಷಣೆ, ಜಹದಜಹಲ್ಲಕ್ಷಣೆಯೆಂದು ತ್ರಿವಿಧಮಾಗಿರ್ಪುದದಕ್ಕೆ ಗಂಗಾಯಾಂ ಘೋಷಃ ಪ್ರತಿವಸತಿ, ಕುಂತಾಃ ಪ್ರವಿಶಂತಿ, ಸೋಽಯಂದೇವದತ್ತಃ ಎಂಬವೇ ಕ್ರಮದಿಂದುದಾಹರಣತ್ರಯಮದರಲ್ಲಿ,

## ೧೪೨. ಜಹಲ್ಲಕ್ಷಣೆ

ಗಂಗಾಶಬ್ದವು ಭಾಗೀರಥೀಜಲಪ್ರವಾಹಮಂ ವಾಚಿಸಲು ಅದರೊಳು ಘೋಷಮಿಪ್ಪುದೆಂಬರ್ಥಮಪ್ರಸಿದ್ಧತ್ವದಿಂ ದನುಪಪನ್ನಮಾಗಿ ವಾಚ್ಯಾರ್ಥಮಾದ ಜಲಪ್ರವಾಹಮಂ ಬಿಟ್ಟು ತತ್ಸಾನ್ನಿಧ್ಯ ಸಂಬಂಧಮುಳ್ಳ ತೀರದೊಳು ಗೊಲ್ಲವಳ್ಳಿಯಿಪ್ಪುದೆನಲಾಶ್ರಯತ್ವ ಘಟಿಸುವದರಿಂ ದುಪಪನ್ನಮಾಗೆ ಗಂಗಾಪದಕ್ಕೆ ತೀರವೇ ಜಹಲ್ಲಕ್ಷ್ಯಾರ್ಥಮೆನಿಸುವದು.

## ೧೪೩. ಅಜಹಲ್ಲಕ್ಷಣೆ

ಕುಂತಾಃಪ್ರವಿಶಂತಿಯೆಂಬಲ್ಲಿ ಅಚೇತನಗಳಾದ ಕುಂತಾಯುಧಗಳು ಚೇತನಸಂಬಂಧಮಿಲ್ಲದೇ ಪ್ರವೇಶಿಸುವ ದನುಪಪನ್ನಮಾಗಿ ಕುಂತಶಬ್ದವು ತನಗೆ ವಾಚ್ಯಾರ್ಥವಾದ ಕುಂತಾಯುಧಗಳಂ ಬಿಡದೇ ಕುಂತಧಾರಿಗಳಂ ಲಕ್ಷಿಪುದೇ ಅಜಹಲ್ಲಕ್ಷ್ಯಾರ್ಥಮೆನಿಸುವುದು.

## ೧೪೪. ಜಹದಜಹಲ್ಲಕ್ಷಣೆ

ಸೋಽಯಂದೇವದತ್ತಃ ಎಂಬಲ್ಲಿ ಸಃ ಎಂಬ ತಚ್ಛಬ್ದಕ್ಕೆ ಪೂರ್ವಪರಾಮರ್ಶೆಯಿಂ ಗತಿಸಿದ ಭೂತಕಾಲ, ಕಾಶೀದೇಶ, ಬಾಲ್ಯವಯಸ್ಸುಗಳಿಂದೊಡಗೂಡಿದ ದೇವದತ್ತನೆಂಬುವನು ವಾಚ್ಯಾರ್ಥಮಾಗಿಹನು. ಅಯಂ ಎಂಬ ಶಬ್ದಕ್ಕೆ ವರ್ತಮಾನಕಾಲ ಈದೇಶ ಮುದಿತನಗಳಿಂದೊಡಗೂಡಿದ ದೇವದತ್ತನೆಂಬುವನುವಾಚ್ಯಾರ್ಥಮಾಗಿಹನು. ತಚ್ಛಬ್ದಕ್ಕೆ ಸ್ಮರಿಸಲ್ಪಟ್ಟ ದೇವದತ್ತನೇ ಶಕ್ಯಾರ್ಥ. ಅಯಂ ಶಬ್ದಕ್ಕೆ ಚಾಕ್ಷುಷ ಪ್ರತ್ಯಕ್ಷವಿಷಯನಾದ ದೇವದತ್ತನೇ ಶಕ್ಯಾರ್ಥ.

ಕಾಲ, ದೇಶ, ವಯಸ್ಸು, ಜ್ಞಪ್ತಿಗಳಿಂ ಪರಸ್ಪರವಾಗಿ ಬೇರ್ಪಟ್ಟಿರುವ ದೇವದ ತ್ತರಿಬ್ಬರಿಗೂ ಐಕ್ಯವಂ ಪೇಳಲು ತತ್ತದ್ಧರ್ಮಗಳು ವಿರುದ್ಧಗಳಾಗಿರುವದ ರಿಂ ದನುಪಪನ್ನಮಹುದು. ಭೇದವಂಪೇಳಲು ವಿಶೇಷಣ ವಿಶೇಷ್ಯಭಾವ ಘಟಿ ಸದು. ಮತ್ತಮಾ ದೇವದತ್ತರಿಬ್ಬರಿಲ್ಲದೇ ಮುನ್ನ ಕಾಶಿಯೊಳು ಚಿಕ್ಕವಯಸ್ಕ ನಾಗಿ ನೋಡಲ್ಪಟ್ಟಿದ್ದ ದೇವದತ್ತನೇ ಈಗ ಈ ದೇಶದಲ್ಲಿ ವೃದ್ಧನಾಗಿ ಕಾಣ ಲ್ಪಡುವದರಿಂ ವಾಚ್ಯಾರ್ಥದಲ್ಲೇ ವಿರುದ್ಧಗಳಾದ ತತ್ಕಾಲ, ತದ್ದೇಶಾದಿ ವಿಶೇ ಷಣಾಂಶಗಳನ್ನು ಮಾತ್ರ ಬಿಟ್ಟು, ಮಿಕ್ಕ ಅವಿರುದ್ಧಮಾದ ವಿಶೇಷ್ಯಮಂ ಬಿಡದೆ ಶುದ್ಧ ದೇವದತ್ತನೇ ಪ್ರತ್ಯಭಿಜ್ಞೆಗೆ ವಿಷಯನೆಂದು ಸೋಽಯಂ ಶಬ್ದ ಗಳಿಂದ ದೇವದತ್ತಗತಮಾದ ಐಕ್ಯವಂ ಲಕ್ಷಿಸಿ ಬಳಿಕೀತನೇ ಆತನು, ಆತನೇ ಈತನೆಂದು ಪರಸ್ಪರಾಭೇದತಾದಾತ್ಮ್ಯಂಘಟಿಸುವಂತೆ ಬೋಧಿಪುದೇ ಜಹದ ಜಹಲ್ಲಕ್ಷಣೆಯೆಂದು, ಅರ್ಧಲಕ್ಷಣೆಯೆಂದು, ಖಂಡಲಕ್ಷಣೆಯೆಂದು, ಭಾಗತ್ಯಾಗ ಲಕ್ಷಣೆಯೆಂದು ಪರ್ಯಾಯನಾಮಗಳುಳ್ಳದ್ದಾಗಿ ತತ್ತ್ವಮಸಿಯೆಂಬ ಮಹಾ ವಾಕ್ಯಾರ್ಥದೊಳಗುದಾಹರಿಸಲು ಯೋಗ್ಯಮಾಗಿರ್ಪುದೆಂತೆನೆ :—

## ೧೪೫. ತತ್ತ್ವಮಸ್ಯರ್ಥ

ಬಳಿಕ ತತ್ತ್ವಮಸಿಯೆಂಬ ಪದತ್ರಯದಲ್ಲಿ ತತ್ ಎಂಬ ಪದವು ಬ್ರಹ್ಮ ನಿರ್ದೇಶಮಾಗಿರುವದರಿಂ ತನಗೆ ವಾಚ್ಯಾರ್ಥಮಾದ ಸರ್ವಜ್ಞತ್ವಾದಿ ಸದ್ಗು ಣವಿಶಿಷ್ಟನಪ್ಪ ಪರೋಕ್ಷಬ್ರಹ್ಮವಂ ಬೋಧಿಪುದು. ತ್ವಮೆಂಬ ಪದವು ತನಗೆ ವಾಚ್ಯಾರ್ಥಮಾದ ಕಿಂಚಿಜ್ಞತ್ವಾದಿ ಹೀನಗುಣವಿಶಿಷ್ಟನಪ್ಪ ಅಪರೋಕ್ಷನಾದ್ದ ಚಿದಾಭಾಸಜೀವನಂ ಬೋಧಿಸುವದು. "ನೇಹ ನಾನಾಸ್ತಿ ಕಿಂಚನ" "ನಾತ್ರ ಕಾಚನಭಿದಾಸ್ತಿ" "ಏಕಮೇವಾದ್ವಿತೀಯಂ" ಇತ್ಯಾದಿ ಶ್ರುತಿ ಪ್ರಾಬಲ್ಯದಿಂದದ್ವೈತವೇ ತಾತ್ಪರ್ಯ ವಿಷಯಮಪ್ಪುದಾಗಿ ಬ್ರಹ್ಮಜೀವರ್ಗೈ ಕ್ಯಮಂ ಪೇಳಲು ಸರ್ವಜ್ಞತ್ವ ಕಿಂಚಿಜ್ಞತ್ವಾದಿಗಳು ವಿರುದ್ಧಗಳಪ್ಪವೆಂತೆನೆ—ಬ್ರಹ್ಮನೇ ಜೀವನಾದಲ್ಲಿ ಸರ್ವಜ್ಞತ್ವವಿಲ್ಲದಿಹ ಅನುಭವವೇ ವಿರೋಧ. ಮತ್ತಂ ಪರೋಕ್ಷತ್ವಮುಂಟಾಗಬೇಕದಿಲ್ಲಾಗಿ ತಾನೆಂಬ ಸಾಕ್ಷಾತ್ಕಾರಮಿಪ್ಪು ದರಿಂದದೊಂದು ವಿರೋಧ "ತತ್ತ್ವಮೇವ ತ್ವಮೇವ ತತ್" ಎಂಬ ಪ್ರಮಾ ಣದಿಂ ತ್ವಂಪದಾರ್ಥಾಭೇದತತ್ಪದಾರ್ಥದೊಳ್ ಪೇಳೆ ಸರ್ವಾನುಭವಸಿದ್ಧ ಮಪ್ಪ ಕಿಂಚಿಜ್ಞತ್ವವು ಬ್ರಹ್ಮದೊಳು ಶ್ರುತಿಸಿದ್ಧಮಲ್ಲುತ್ತ; ಇಂತು ವಿರೋಧ

ಪರಂಪರೆಗವಕಾಶಮಪ್ಪುದಾಗಿ ಅವಿರುದ್ಧಮಪ್ಪರೀತಿಯಿಂ ವಾಕ್ಯಾರ್ಥಮಂ ತಿಳಿಯಲು ವಾಚ್ಯಾರ್ಥಗಳಿಗೈಕ್ಯಂ ಘಟಿಸದಾಗಿ ಶ್ರುತಿತಾತ್ಪರ್ಯಮಾದ್ಯೈಕ್ಯಮಂ ನಿರ್ಧರಿಸಲ್ಕೆ ಭಾಗತ್ಯಾಗಲಕ್ಷಣೆಯ ಸ್ವೀಕರಿಸಲದು ಸಿದ್ಧಿಪುದೆಂತೆನೆ— ತತ್ತ್ವಂಪದಗಳಿಗೆ ವಾಚ್ಯಾರ್ಥಗಳಾದ ಬ್ರಹ ಜೀವರಲ್ಲಿ ಕ್ರಮದಿಂದಿಪ್ಪ ಸರ್ವಜ್ಞತ್ವಕಿಂಚಿಜ್ಞತ್ವಗಳಂ ಪರೋಕ್ಷತ್ವಾಪರೋಕ್ಷತ್ವಾದಿ ವಿರುದ್ಧಧರ್ಮಾಂಶಗಳಂ ಬಿಟ್ಟು ಅವಿರುದ್ಧಮಾದ ಚೈತನ್ಯಮಾತ್ರಮಪ್ಪ ಬ್ರಹ್ಮತ್ವೋಪಲಕ್ಷಿತ ಶುದ್ಧ ಶಿವಚೈತನ್ಯಮಕ್ಕುಂ. ಜೀವತ್ವೋಪಲಕ್ಷಿತ ಕೂಟಸ್ಥ ಪ್ರತ್ಯಗಾತ್ಮ ಚೈತನ್ಯಮಕ್ಕುಂ. ಅಸಿಯೆಂಬುವದೈಕ್ಯಮಂ ಬೋಧಿಸಿ ಸಫಲಮಹುದಾಗಿ ಇಂತು ಲಕ್ಷಿತಜೀವಬ್ರಹ್ಮೈಕ್ಯಾನುಸಂಧಾನ ಬಲದಿಂದ ಅವಿದ್ಯಾಕಲ್ಪಿತಗಳಾದ ಪರಿಪರಿ ವಿಶೇಷಾಭಾಸಂಗಳಡಗಿ ಪೋಗೆ ಅಖಂಡ ಸಚ್ಚಿದಾನಂದ ಶಿವಸ್ವರೂಪವೊಂದೇ ಸತ್ಯಮೆಂದು ಮಹಾವಾಕ್ಯಾರ್ಥತಾತ್ಪರ್ಯ ಸಿದ್ಧಮಕ್ಕುಂ.

## ೧೪೩. ತತ್ತ್ವಮಸಿದೃಷ್ಟಾಂತ

ಬಳಿಕ ತತ್ತ್ವಮಸಿಯೆಂಬ ಮಹಾವಾಕ್ಯದಲ್ಲಿ ಪ್ರತ್ಯಗಾತ್ಮ ಪರಾತ್ಮರಿಗೆ ತತ್ತ್ವಮೆಂಬ ಪದದ್ವಯವು ಘಟಾದ್ಯುಪಾಧಿಗಳುಂ ನೆರೆಗಳಿದು ಆಕಾಶಮೊಂದೇ ಆಯಿತೆಂಬಂತೆ, ರಾಮಚಂದ್ರನ ಮನುಜತ್ವಮಂ ಬಿಡಿಸಿ ನೀನೆ. ವಿಷ್ಣುವೆಂಬಂತೆ, ಕರ್ಣನ ವ್ಯಾಧ ಭಾವಕ್ಕೆ ಕಾರಣಮಾದ ರಾಧಾಪುತ್ರತ್ವಮಂ ಬಿಡಿಸಿ ಕ್ಷತ್ರಿಯತ್ವಕ್ಕೆ ಕಾರಣಮಾದ ಕುಂತೀಪುತ್ರತ್ವಮಂ ಬೋಧಿಸುವಂತೆ ದಶಮಪುರುಷನ ಮರಣದುಃಖಮಂ ಬಿಡಿಸಿ ನೀನೇ ದಶಮನೆಂಬಂತೆ ಸ್ವಭಾವಸಿದ್ಧಮಾದ್ಯೈಕ್ಯಮಂ ಬೋಧಿಸುವದು.

## ೧೪೪. ವಾಕ್ಯಾರ್ಥಪ್ರತಿಪತ್ತಿ ನಿರಾಕರಣೆ

ಇಂತುಮಲ್ಲದೆ ಬಳಿಕೊಂದು ಪೂವಿಗೆ ಸಗ್ಗಮೆಂಬ ವಾಕ್ಯದಂತೆ ಮೋಕ್ಷದೊಳಗಪೇಕ್ಷೆಯಂ ಪುಟ್ಟಿಸುವ ಅರ್ಥವಾದವೆಂದು, ಪ್ರತಿಮೆಯಂ ದೇವತಾಕೃತಿಯೆಂಬಂತೆ ಉಪಾಸನಾ ಪರವೆಂದು, ಮನುಜನಂ ದೇವೇಂದ್ರನೆಂಬ, ವಾಕ್ಯದಂತೆ ಸ್ತುತಿಪರವೆಂದು, ಆಳನರಸೆಂಬ ವಾಕ್ಯದಂತೆ ಔಪಚಾರಿಕವೆಂದು ಅಗ್ನಿಮಾಣವಕನೆಂಬ ವಾಕ್ಯದಂತೆ ಗುಣಸಾದೃಶ್ಯವೆಂದು, ಇದು ಗೋವಿನ ದೇಹವೆಂಬ ವಾಕ್ಯದಂತೆ ಜಾತಿವ್ಯಕ್ತಿಪರವೆಂದು, ಘಟಮೃತ್ತಿಕೆಗ

ನನ್ಯವೆಂಬ ವಾಕ್ಯದಂತೆ ಕಾರ್ಯಕಾರಣವೆಂದು, ನೀಲೋತ್ಪಲ ವಾಕ್ಯದಂತೆ ಗುಣಗುಣಿಗಳೆಂದು, ಕ್ಷೀರದಧಿಗಭೇದ ವಾಕ್ಯದಂತೆ ವಿಕಾರವೆಂದು, ವಾರಿಕ ಣಂಗಳಿಗೈಕ್ಯಮೆಂಬಂತೆ ಅಂಶಾಂಶಿಕವೆಂದು, ಬಿಂಬವೇ ಪ್ರತಿಬಿಂಬವೆಂಬ ವಾಕ್ಯದಂತೆ ಬಿಂಬ ಪ್ರತಿಬಿಂಬಭಾವವೆಂದು, ಔಪಚಾರಿಕಾಭೇದಪರಮೆಂತ ಲುಂ, ಪದಾರ್ಥಾಂತರ್ಗತಾಭೇದಪರಮೆಂತಲುಂ, ಅಂತರ್ಯಾಮ್ಯಭೇದಪರ ಮೆಂತಲುಂ, ತಾತ್ವಿಕ ಭೇದ ತಾತ್ಪರ್ಯಕಮೆಂತಲುಂ, ಸಂಬಂಧಮಾತ್ರ ಬೋಧಕಮೆಂತದುಂ ವಾದಿಗಳು ಹಲವು ಬಗೆಯಾಗಿ ಭೇದವಂ ಕಲ್ಪಿಸಿ ವಾಕ್ಯಾರ್ಥಮಂ ಆಭಾಸಗೊಳಿಸೆ "ಸತ್ಯಮದ್ವೈತಂ, ಅದ್ವೈತಂ ಪರಮಾ ರ್ಥತಃ, ನಾನಾಪಶ್ಯನ್ ಮೃತ್ಯುಂ ಗಚ್ಛತಿ, ವಿಭಕ್ತಿರೇವೈನಯೋರ್ನಸ್ಯಾತ್, ಯೋವೈಸ್ವೇತರಂ ಮನುತೇ ನಸವೇದಃ, ತದೇಕಂ ನೈವನಾನಾಸ್ತಿ, ನಾತ್ರ ಕಾಚನಭಿದಾಸ್ತಿ, ಏಕೋ ಹವೈ. ಏಕೋ ರುದ್ರಃ, ಏಕಮೇವಾದ್ವಿತೀಯಂ, ಏಕತ್ವಮನುಪಶ್ಯತಿ ಶಿವಮದ್ವೈತಂ ಚತುರ್ಥಂ, ಪೂರ್ಣಮದಃ ಪೂರ್ಣ ಮಿದಂ, ಯಥಾ ಸ್ವಪ್ನಸ್ತಥಾ ಮೃಷಾ" ಇತ್ಯಾದಿ ಪರಸ್ಸಹಸ್ರ ಪ್ರಬಲತರ ಶ್ರುತಿವಾಕ್ಯ ವಿರೋಧಮಪ್ಪುದರಿಂ ಉಪಕ್ರಮಾದಿ ಷಡ್ವಿಧ ಲಿಂಗಗಳಿಂ ಸರ್ವವೇದಾಂತಶಾಸ್ತ್ರದೊಳಗೆಲ್ಲಿಯುಮದ್ವೈತವೇ ತಾತ್ಪರ್ಯ ವಿಷಯಮಾಗಿ ಪರಮಾರ್ಥ ಸತ್ಯಮಹುದರಿಂ ದ್ವೈತಕ್ಕೆ ಮಾಯಾಮಾತ್ರತ್ವಮುಂ ಮಿಥ್ಯಾ ತ್ವಮುಂ ನಿಷೇಧಮುಂ ಶ್ರುತಿಸಿದ್ಧಮಪ್ಪಂತೆ ಅದ್ವೈತಕ್ಕೆ ಮಿಥ್ಯಾತ್ವ ನಿಷೇಧ ಗಳೆಲ್ಲಿಯುಂ ಪೇಳಲ್ಪಡದರಿಂ, ದ್ವೈತಕ್ಕೆ ಸತ್ವಮಂ ಪೇಳ್ವ ಶ್ರುತಿಯೊಂದಾ ದರು ಇಲ್ಲದರಿಂ, ಕರ್ಮಾದಿ ವ್ಯವಹಾರ ಪ್ರಕರಣ ಪಠಿತಮಾದ ಸತ್ಯತ್ವವು ಅವಿರುದ್ಧಮಪ್ಪುದರಿಂ ಭೇದವಾದಿಗಗಳಿಭಿಮತವಾದ ವಾಕ್ಯಾರ್ಥ ಪ್ರತಿಪ ತ್ತಿಯು ನಿರಾಕರಿಸಲಕ್ಕುಂ.

## ೧೪೪೮. ತತ್ವಾರ್ಥ

ಬಳಿಕ ಶ್ರುತ್ಯಾಚಾರ್ಯ ನಿಜಾನುಭವ ಯುಕ್ತಿ ಸಮ್ಮತಮಾಗಿ ತತ್ಪ ದಾರ್ಥಮಾದ ಶಿವಲಿಂಗವೇ ತ್ವಂಪದಾರ್ಥಮಾದ ಜೀವಲಿಂಗಮಾಗಿಪ್ಪುದೇ ತತ್ವವೆಂಬುದು ಯಥಾರ್ಥವೆಂದು ದೃಢತರಮಾಗಿ ಪ್ರಮಾಣಿಸೆ ಸಿದ್ಧಾಂತ ಮಕ್ಕುಂ.

## ೧೪೪೯. ಮಿಥ್ಯಾತ್ವಾವಿರೋಧ

ಬಳಿಕಿಂತು ವಿಶೇಷಣಾಂಶಮಾದ ದ್ವೈತಕ್ಕೆ ಮಿಥ್ಯಾತ್ವಮಂ ಪೇಳಿ

ಸತ್ಯವಾದ ವಿಶೇಷ್ಯಚಿನ್ಮಾತ್ರಕ್ಕೆ ಐಕ್ಯಮಂ ಪೇಳ್ವೊಡೆ ಅದ್ವೈತ ಸಿದ್ಧಿಯಪ್ಪುದೆನಲು ಮಿಥ್ಯಾತ್ವವೆಂಬುದಕೆ ಗತಿಯಿಲ್ಲವಾಗಿ ಅದ್ವೈತವುಪಪನ್ನವಲ್ಲದೆಂತೆನೆ—ಜಗವು ಮಿಥ್ಯೆಯಾಗೆ ಮಿಥ್ಯೆಯಹತನವು ಜಗದೊಳಗಿರಬೇದಕೆ ಆಶ್ರಯಮಿಲ್ಲವಾಗಿ ಎಂತಿರ್ಪುದು? ಶಿವನೊಳಗಿಪ್ಪುದೆನಲ್ಕೆ ಶಿವಂ ಸತ್ಯನಾಗಲದು ಘಟಿಸದು. ಮತ್ತಮಾಮಿಥ್ಯೆಯಹತನವು ಸತ್ಯವೆಂದೊಡೆ ಶಿವನೊಂದುಸತ್ಯ ವದೊಂದುಸತ್ಯವೆಂದು ಸತ್ಯವೆರಡಾಗೆ ಏಕಮೆಂಬ ಶ್ರುತಿವಿರೋಧವಂತಲ್ಲದೆ ಮಿಥ್ಯೆಯಹತನವೇ ಮಿಥ್ಯೆಯೆಂದೊಡೆ ಸತ್ಯವಹತನ ಮಿಥ್ಯೆಯಹತನವೆಂಬೆರಡರೊಳಗೊಂದು ಸತ್ಯಮಾಗೆ ಮತ್ತೊಂದು ನಿಷೇಧಿಸಲಕ್ಕು ಮೊಂದುಮಿಥ್ಯೆಯಾಗೆ ಮತ್ತೊಂದುಸತ್ಯಮಕ್ಕು ಮಿಂತು ಶುಕ್ತಿರಜತವಂ ನೋಡಿ ರಜತವಹುದೋ ಅಲ್ಲವೋ ಎಂದು ಸಂದೇಹಿಸಿ ಬಳಿಕ ನಿಶ್ಚಿಪಂಗನುಭವವಿರಲು ಪ್ರಪಂಚದೊಳಿಪ್ಪ ಮಿಥ್ಯೆಯಹತನ ಮಿಥ್ಯೆಯಾಯಿತಾಗಿ ಪ್ರಪಂಚವು ಸತ್ಯಮಾಗಲದರಿಂ ಸತ್ಯಾದ್ವೈತ ಹಾನಿಯಾಗಬೇಕಲ್ಲವೇ? ಅಂತದಲ್ತುಮೆಂತೆನೆ ದೂರಸ್ಥವಾದ ಗಜವಂ ಕಂಡರಿಯದೆ ಮಹಿಷವೋ ಅಶ್ವವೋ ಎಂದು ಸಂಶಯಿಪಂಗೆ ಮಹಿಷವಲ್ಲೆಂದು ನಿಶ್ಚಯಮಾದೊಡೆ ಬಳಿಕಾ ಜಗದೊಳಗಶ್ವತ್ವವೆಂತು ಸತ್ಯಮಾಗದೋ ಅಂತು ಮಿಥ್ಯೆಯಹತನ ಮಿಥ್ಯೆಯಾದೊಡೇನು ವಿರೋಧಮಿಲ್ಲ. ಮತ್ತಮಾ ಮಿಥ್ಯೆಯಹತನ ಮಿಥ್ಯೆಯಾಗದೆ ಅದರ ಸ್ವರೂಪವೆಂದಿಗುಂ ಸತ್ಯಮಾಗದದೇತಕೆನೆ ಸುಳ್ಳೆಂಬ ಮಾತು ದಿಟವಾದರುಂ ಸುಳ್ಳು ಸುಳ್ಳಾಗಿಯೇ ಇಪ್ಪುದಲ್ಲದೆ ಸುಳ್ಳಿನ ಸ್ವರೂಪವೆಂದಿಗೂ ದಿಟವಾಗಲರಿಯದಾಗಿ ನಾನಾವಿಕಾರಮಾಗಿ ತೋರ್ಪ ದ್ವೈತವಡಗಲು ತದ್ಜ್ಞಾನಮುಂ ವನದೊಳುದಿಸಿದಗ್ನಿ ವನವಂ ದಹಿಸಿ ತಾನಡಗಿ ಪೋದಂತೆ ಕ್ಷಯಿಸಿ ಪೋಗಲು ಆಶ್ರಯಮಾತ್ರವಾದ ಮೊದಲಧಿಷ್ಠಾನವೆಂದರಿಯಲ್ಪಟ್ಟ ಶಿವಚೈತನ್ಯವೊಂದೇ ಸತ್ಯಮೆಂಬುದಕಾವಹಾನಿಯೂ ಇಲ್ಲವೆಂಬುದೇ ದೃಢಮಕ್ಕುಂ.

### ೧೫೦. ಮಿಥ್ಯೆಯರಿತರೆ ಸತ್ಯಸಿದ್ಧಿ

ಬಳಿಕ ಸಕಲ ಪ್ರಪಂಚಕ್ಕೆ ಮಿಥ್ಯಾತ್ವವಂ ಪೇಳ್ವ ವೇದಾಂತಪಕ್ಷದಲ್ಲಿ ಶ್ರುತಿವಿಚಾರದಿಂದೆಂತು ಸತ್ಯವಾದ ಮುಕ್ತಿ ಘಟಿಸುವದೆನೆ ಭ್ರಾಂತಿಯಾದ ಸ್ವಪ್ನವನಿತಾ ಸಂಭೋಗಾದಿಕದಿಂ ಸತ್ಯವೆನಿಪ ವೀರ್ಯಪತನಾದಿಕಮುಂ

ಕಲ್ಪಿತವಪ್ಪ ಶಿಲಾಭೈರವಾದಿ ಭಜನೆಯಿಂ ತಥ್ಯವೆನಿಪ ಸಂಪದಾದಿ ಸಿದ್ಧಿಗಳುಂ, ಯಥಾರ್ಥಮಲ್ಲದ ದರ್ಪಣ ಪ್ರತಿಬಿಂಬಾದಿಗಳಿಂ ಸತ್ಯವೆನಿಪ ಮುಖಲಾವಣ್ಯಾದಿಗಳುಂ, ಮರುಮರೀಚಿಕಾ ಜಲದಿ ಸಟಿತನವು ದಿಟವೆಂಬುವದುಂ ನಿಶ್ಚಿತದೃಷ್ಟಮಪ್ಪಂತೆ ಮಿಥ್ಯಾಭೂತ ಜಗತ್ತಿನೊಳಗಂತರ್ಭೂತಮಾದ ಪ್ರಣವಾತ್ಮಕ ಶ್ರುತಿವಿಚಾರದಿಂ ಪರಮಾರ್ಥಮಾದ ಮುಕ್ತಿ ಸಿದ್ಧಿಯಕ್ಕುಂ.

## ೧೫೫. ನಿರಂಜನತ್ವಸಿದ್ಧಿ

ಬಳಿಕ ಪ್ರಣವಾರ್ಥಮಾದ ಶಿವನು ಜಗಚ್ಚನ್ಮಾದಿ ಕಾರಣವಾಗೆ ಆತನರುಹಿಂ ಶುದ್ಧ ಚಿನ್ಮಾತ್ರಜ್ಞಾನಪ್ರಯುಕ್ತಮಾದ ದುಃಖವೆಂತಳಿವುದು? ಶುಕ್ತಿಯರುಹಿಲ್ಲದರಿಂ ತೋರುವ ಪ್ರಾತಿಭಾಸಿಕ ರಜತವು ಶುಕ್ತಿಜ್ಞಾನವಿಲ್ಲದೆ ಸ್ಫಟಿಕಜ್ಞಾನದಿಂದಳಿಯದಂತೆ ಜಗವಳಿಯದು. ಮತ್ತಮಾ ಪರಶಿವನೇ ಜ್ಞಾನವಿಷಯನೆಂದೊಡೆ ಅವಾಙ್ಮಾನಸಗೋಚರತ್ವ ಭಂಗಮಹುದಾಗಿ ಸವಿಶೇಷತ್ವಾಪತ್ತಿಯಕ್ಕುಂ. ಇಷ್ಟಾಪತ್ತಿಯೆಂದೊಡೆ ನಿಷ್ಕಳಂ, ನಿರಂಜನಂ, ಶಿವಂ, ಶಾಂತವೆಂಬ ಶ್ರುತಿವ್ಯಾಕೋಪಮಕ್ಕುಮದರಿಂದೀತು ಸಿದ್ಧಾಂತಿತವು ಸಮಂಜಸಮೆನೆ—ಮಧುರವಾದ ರುಚಿ ಚೆನ್ನಾಗಿಪ್ಪುದೆನೆ ಚೆನ್ನಪತನವೆಂತನತಿರಿಕ್ತವೋ ಅರಿವೆನೆಂದು ಕುರುಹಿಡುವರುಹನೊಳಕೊಂಬರುಹಿಂಗೆ ಸಾಕ್ಷಿಯಾದರುಹೇತು ನಿರ್ವಿಕಲ್ಪವೃತ್ತಿಯಿಂ ನಿರಾಕಾರಮಾಗಿದ್ದರುಂ ವೃತ್ತಿಗಳ ಕುಸು ರಿಲ್ಲದೆ ಪಸರಿಸಿ ಸ್ವಯಂ ಪ್ರಕಾಶಮಪ್ಪುದೋ ಅಂತು ಸಚ್ಚಿದಾನಂದೈಕಸ್ವರೂಪ ಸ್ವಭಾವಮಾದ ಪರಬ್ರಹ್ಮಶಿವಚೈತನ್ಯವು ಜಲಲೇಪವಿಲ್ಲದ ಪುಷ್ಕರಪಲಾಶದಂತೆ ದ್ವೈತಲೇಪವಿಲ್ಲದೆ ನಿರ್ಲಿಪ್ತಮಾಗಿರುವದರಿಂದಾ ಶಿವನೊಳು ನಿರಂಜನತ್ವವು ನಿರ್ದುಷ್ಟಮಪ್ಪುದಾಗಿ ಮುನ್ನು ಸರ್ಪವೆಂದರಿಯಲ್ಪಟ್ಟ ವಸ್ತುವೇ ರಜ್ಜುವೆಂಬ ಆಪ್ತವಚನಾಪರೋಕ್ಷದಂತೆ ಜಗತ್ತಿಗೆ ಕಾರಣಮಾಗಿ ಮಾಯೆಯಿಂದೊಡಗೂಡಿದ ಪರಮೇಶ್ವರನೆಂದರಿಯಲ್ಪಟ್ಟುದೇ ನಿರುಪಾಧಿಕ ನಿರಂಜನಾದ್ವಿತೀಯ ಪರಬ್ರಹ್ಮನಾದ ಶಿವನಿರ್ಗುಣ ಲಿಂಗಮೆಂಬ ವೇದಾಂತ ವಾಕ್ಯದಿಂದಾದ ಶಾಬ್ದಾಪರೋಕ್ಷದಿಂ ದುಃಖನಿವೃತ್ತಿಯಪ್ಪುದೆನೆ ಜ್ಞಾನಾಜ್ಞಾನಗಳಿಗೆ ಸಮಾನವಿಷಯಕತ್ವಮಹುದಾಗಿ ಸಿದ್ಧಾಂತಮನವದ್ಯಮಕ್ಕುಂ.

## ೧೫೬. ನಿರ್ಗುಣಸಾಧನೆ

ಮತ್ತಮಾ ಬ್ರಹ್ಮವು ಲೋಕನ್ಯಾಯ ಸಹಕೃತಾನುಮಾನಾದಿಗಳಿಂ

ಸಗುಣವಾಗೆ ನಿರ್ಗುಣಸಿದ್ಧಿ ದುರ್ಘಟವೆಂದೊಡದಂ ಬಲ್ಲನುಭವಿಗಳಹು ದೆನೆ ಭವಿಗಳು ಪರಾಭೂತರಾಗಲು ಶಾಸ್ತ್ರಯೋನಿಯಾದ ಬ್ರಹ್ಮಶಬ್ದೈಕ ಮೇಯವಾಗಿ ನಿರ್ಗುಣ ತಾತ್ಪರ್ಯಮುಳ್ಳ "ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ" ಎಂಬುದು ಮುಂತಾದ ಪ್ರಬಲ ಶ್ರುತಿಗಳಿಂದನುಗ್ರಹೀತವಾ ಗದಿರೆ ವಾದಿಕಲ್ಪಿತಾನುಮಾನಮಪ್ರಮಾಣಮಹುದಾಗಿ ಬ್ರಹ್ಮಾದಿ ಬ್ರಹ್ಮ ವಿದ್ಯಾ ಸಂಪ್ರದಾಯ ಕರ್ತೃಗಳಿಗೆ ಪರಶಿವನಿಂದುಪದಿಷ್ಟವಾದ ಮತವಿದು ನಿಸ್ಸಂಶಯದಿಂದಿರಲ್ಕೆ ನಿರ್ಗುಣಸಿದ್ಧಿಯಿಂ ನಿಃಶ್ರೇಯಸವೆಂಬ ಕೈವಲ್ಯ ಸಿದ್ಧಿಯಕ್ಕುಂ.

## ೧೫೩. ಜ್ಞಾನಕ್ಕೆ ಪ್ರತಿಬಂಧಕ

ಬಳಿಕ ಪರಬ್ರಹ್ಮ ಚೈತನ್ಯವಾದ ನಿರ್ಗುಣಶಿವಜ್ಞಾನವು ಪ್ರಪಂಚ ಭಾನವಳಿಯೊಡಲ್ಲದೆ ಸಿದ್ಧಿಸದಾಗಿ ಪಾಪಶೇಷದಿಂ ದ್ವೈತಭ್ರಾಂತಿ ಸಂಶಯಂಗ ಳಿಪ್ಪ ಪ್ರವೃತ್ತಿಕರ್ಮ ಜಡರಾದ ಭವಿಗಳಿಗೆ ಸತ್ಸಂಗದಿಂ ಮುಕ್ತಿ ದೊರಕೊ ಳಲು ಸತ್ಕರ್ಮದೀಕ್ಷೆ, ಶಿವಧ್ಯಾನ, ಮಾನಸಪೂಜಾದಿಗಳೇ ಕಾರಣಮಾಗಿ ಅದಿಲ್ಲದಿರುವಿಕೆಯೇ ಬ್ರಹ್ಮವಿದ್ಯೆಗೆ ಪ್ರತಿಬಂಧಕಮಕ್ಕುಂ.

## ೧೫೪. ಮುಕ್ತಿಗೆ ವಿಘ್ನತ್ರಯ

ಬಳಿಕ ಅಸಂಭಾವನೆ, ಸಂಶಯಭಾವನೆ, ವಿಪರೀತಭಾವನೆಗಳೇ ಮುಕ್ತಿಗೆ ಪ್ರತಿಬಂಧಕಮಾಗಿರ್ಪವದೆಂತೆನೆ, ನೀನೇ ಪರಬ್ರಹ್ಮವಾದ ಪರಮ ಶಿವಚೈತನ್ಯಮೆಂದರಿತು ಶಿವೋಽಹಂ ಎಂದು ಭಾವಿಸಿ ನಿಶ್ಚಯದಿಂ ಸುಖಿ ಯಾಗಿ ಮೋಕ್ಷವಂ ಪಡೆವುದೆಂದು ಸವಿಮರ್ಶಮಾಗಿ ಗುರುವಿನುಪದೇಶವಂ ಕೊಂಡ ಶಿಷ್ಯನು ಬ್ರಹ್ಮಧರ್ಮಗಳಾದ ಸರ್ವಜ್ಞತ್ವಾದಿಗಳೆನ್ನೊಳಿಲ್ಲವಾಗಿ ನಾನು ಬ್ರಹ್ಮನಲ್ಲವೆಂದು ಭಾವಿಸುವ ಅಜ್ಞಾನವೇ ಅಸಂಭಾವನೆಯೆನಿಸು ವದು. ಬಳಿಕ ಜಹದಜಹಲ್ಲಕ್ಷಣೆಯಿಂ ತತ್ತ್ವಮಸ್ಯಾದಿ ವಾಕ್ಯಾರ್ಥಮಂ ತಿಳಿ ದರುಂ ನಂಬಿಕೆ ಸಾಲದೆ ನಾನು ಬ್ರಹ್ಮವಹುದೋ ಅಲ್ಲವೋ ಎಂದು ಸಂದೇ ಹಗೊಳ್ಳುವದೇ ಸಂಶಯ ಭಾವನೆಯೆನಿಸುವದು. ಶ್ರುತಿಯುಕ್ತಿಗಳಿಂ ನಾನು ಬ್ರಹ್ಮನಾದೊಡಂ ನನಗಿನ್ನು ಜೀವತ್ವ ಬಿಡಲಿಲ್ಲವಾಗಿ ಈಗ ನಾನು ಜೀವನೆ ಯೆಂದರಿದಿಹುದೇ ವಿಪರೀತಭಾವನೆಯೆನಿಸುವದು.

## ೧೫೫. ವಿಘ್ನತ್ರಯ ಪರಿಹಾರ

ಅಂಥಾ ಮುಕ್ತಿಗೆ ಪ್ರತಿಬಂಧಗಳಾದ ಮೂರು ವಿಘ್ನಗಳುಂ ಎಂತು ನಿವಾರಿಸಲಕ್ಕುಮೆನೆ ಶ್ರವಣ, ಮನನ, ನಿದಿಧ್ಯಾಸನಗಳೆಂಬ ಪ್ರಾಯಶ್ಚಿತ್ತ ರೂಪಮಾದ ಮಂಗಳಗಳಿಂ ಕ್ರಮವಾಗಿ ವಿಘ್ನತ್ರಯವಳಿವುದು. ಆಪ್ತವಚನದಿಂದ ಅಶೌಚಶ್ರವಣವಾಗಲು ತಾನು ಸೂತಕಿಯೆಂದು ದೃಢತರವಾಗಿ ನಂಬುವಂತೆ ಪ್ರತ್ಯಗಾತ್ಮ ಬ್ರಹ್ಮರಿಗೈಕ್ಯಮೆಂಬುಪನಿಷದ್ವಾಕ್ಯ ತಾತ್ಪರ್ಯವನವಧರಿಸುವದೇ ಶ್ರವಣವೆನಿಸುವುದಾಗಿ ಇದರಿಂದ ಅಸಂಭಾವನೆ ನಿರಾಕೃತಮಕ್ಕುಂ. ಅಂತು ಶ್ರುತಮಾದ ವೇದಾಂತಾರ್ಥಮಂ ಸದ್ಯುಕ್ತಿ ಸತ್ತರ್ಕಗಳಿಂ ಚಿಂತನಂ ಗೈವುದೇ ಮನನಮೆನಿಸುವುದು. ಇದರಿಂ ಸಂಶಯಭಾವನೆ ನಿವರ್ತಿಯಕ್ಕುಂ. ಆ ಶ್ರವಣ ಮನನಗಳ ದೆಸೆಯಿಂದ ದೃಢತರವಾಗಿ ನಿಶ್ಚಿತಮಾದರ್ಥಮಂ ನಿಶ್ಚಲಚಿತ್ತದಿಂದನುಸಂಧಾನಗೊಂಡು ಬ್ರಹ್ಮಾಕಾರಾಂತಃಕರಣನಾಗಿಪ್ಪುದೇ ನಿದಿಧ್ಯಾಸನವೆನಿಸುವುದು. ಇದರಿಂ ವಿಪರೀತಭಾವನೆಯೆಂಬ ವಿಘ್ನವು ಪರಿಹರಮಕ್ಕುಂ.

## ೧೫೬. ಸಹಕಾರಿಕಾರಣ

ಬಳಿಕಿಲ್ಲಿ ಶ್ರವಣದಿಂದುತ್ಪನ್ನಮಾದ ಜ್ಞಾನದಿಂದಲೇ ಆತ್ಮಸಾಕ್ಷಾತ್ಕಾರಮುಪ್ಪುದಾಗಿ ಶ್ರವಣವೇ ಮುಖ್ಯಮುಪ್ಪುದರಿಂ ಅಂಗಿಯೆನಿಸುವದು. ಅಂತು ಶ್ರವಣಜನ್ಯಮಾದ ಬ್ರಹ್ಮಜ್ಞಾನವು ದೃಢತರವಾಗಿ ವಸ್ತುಸಾಕ್ಷಾತ್ಕಾರಕ್ಕುಪಯೋಗಿಸುವಂತದಕ್ಕೆ ಸಹಕಾರಿಗಳಾಗಿರುವ ಮನನ ನಿದಿಧ್ಯಾಸನಗಳು ಅಂಗಗಳಕ್ಕುಮದೆಂತೆನೆ ಘಟಾದಿವಸ್ತುಸಾಕ್ಷಾತ್ಕಾರಕ್ಕೆ ಚುಕ್ಷುಸ್ಸು ಕರಣಮಾದೊಡಂ ಕತ್ತಲೆಯೊಳು ನಿಷ್ಪ್ರಯೋಜಕವಾಗಿರಲು ಆಲೋಕಾದಿಗಳು ಸಹಕಾರಿ ಕಾರಣಗಳಾದಂತೆ ಮನನ ನಿದಿಧ್ಯಾಸನಗಳು ತತ್ವಜ್ಞಾನಕ್ಕೆ ಸಹಕಾರಿಗಳಾಗಿರ್ಕುಂ. ಮತ್ತಮಾ ಮನನವು ಅರ್ಥಪ್ರಕಾಶಕಮಾದ ದೀಪದ ಚಂಚಲಾವಸ್ಥೆಯಲ್ಲಿ ಕಾರ್ಯಸಮರ್ಥವಿಲ್ಲವಾಗಿ ಬಳಿಕ ವಾಯು ಸಂಚಾರಕ್ಕೆ ಮರೆಗಟ್ಟುವ ತೆರೆಯಂತೆ ಸಹಕಾರಿಯಹುದು. ನಿದಿಧ್ಯಾಸನಮಾದೊಡೆ ಆ ದೀಪವು ಕ್ಷೀಣಪ್ರಕಾಶಮಾಗಲು ಬತ್ತಿಯಂ ನೆರೆ ನೂಕಿ ಪ್ರಜ್ವಲಂ ಮಾಡುವಂತೆ ಸಹಕಾರಿಯಾಗಿಪ್ಪುದು.

## ೧೫೭. ಶ್ರುತಿತಾತ್ಪರ್ಯ ನಿರ್ಣಯಲಿಂಗ

ಬಳಿಕ ಉಪಕ್ರಮೋಸಂಪಹಾರಗಳು, ಅಭ್ಯಾಸ, ಅಪೂರ್ವತೆ, ಫಲ, ಅರ್ಥವಾದ, ಉಪಪತ್ತಿಯೆಂಬ ಲಿಂಗಷಟ್ಕದಿಂ ಶ್ರವಣದೋಳ್ ತಾತ್ಪರ್ಯವಂ ನಿರ್ಣಯಿಸಲಪ್ಪುದವುಗಳೊಳು ಛಾಂದೋಗ್ಯಾದಿ ಶ್ರುತಿಗಳಲ್ಲಿ ಪ್ರಕರಣದ ಪ್ರಥಮಭಾಗದೊಳು ಸೃಷ್ಟಿಗಿಂ ಮೊದಲೀಜಗತ್ತು ಸದ್ರೂಪ ಬ್ರಹ್ಮವೇ ಆಗಿತ್ತೆಂದು ಮತ್ತಾಬ್ರಹ್ಮಕ್ಕೆ ಸ್ವಗತಾದಿ ಭೇದತ್ರಯವುಮಂ ನಿವಾರಿಸುತ್ತ ಅಖಂಡೈಕರಸಮಂ ಪೇಳ್ವುದೇ ಉಪಕ್ರಮವೆನಿಸುವುದು. ಪ್ರಕರಣ ಪರಿಸಮಾಪ್ತಿಯೊಳು ನಾಮರೂಪಾತ್ಮಕಪ್ರಪಂಚಕ್ಕೆ ಆ ಬ್ರಹ್ಮದೊಳು ಲಯಮಂ ಪೇಳಿ ಪ್ರತ್ಯಗಾತ್ಮಕ್ಕೆ ಆ ಬ್ರಹ್ಮದೊಡನೈಕ್ಯವಂ ಬೋಧಿಸುತ್ತ ಬ್ರಹ್ಮಾದ್ವಿತೀಯವೆಂದು ಪೇಳ್ವುದೇ ಉಪಸಂಹಾರವೆನಿಸುವದು. ಈ ಉಪಕ್ರಮೋಪಸಂಹಾರಗಳೆರಡೂ ಕೂಡಿ ಪ್ರಥಮಲಿಂಗಮೊಂದಕ್ಕುಂ. ಮತ್ತಂ ತತ್ತ್ವಮಸ್ಯಾದಿ ವಾಕ್ಯಂಗಳಿಂ ಪ್ರಕರಣ ಮಧ್ಯದೊಳು ಪ್ರತ್ಯಗಾತ್ಮನೇ ಬ್ರಹ್ಮವೆಂದು ಮರಳಿ ಮರಳಿ ಪೇಳುವದೇ ಅಭ್ಯಾಸವೆನಿಸುವದು. ಮತ್ತಂ ಪ್ರತ್ಯಗಾತ್ಮಂಗೆ ಪ್ರತ್ಯಕ್ಷಾದಿ ಪ್ರಮಾಣಾತೀತತ್ವಮಂ ಪೇಳ್ವುದೇ ಅಪೂರ್ವತೆಯೆನಿಸುವದು. ಮತ್ತಮಾತ್ಮನೋರ್ವನರಿಯಲ್ಪಡಲಾಗಿ ಸರ್ವವೂ ಅರಿಯಲ್ಪಟ್ಟಿತೆಂದು ಪೇಳ್ವುದೇ ಫಲವೆನಿಸುವದು. ಮತ್ತಂ ಪ್ರತ್ಯಗಾತ್ಮರೂಪ ನಿರ್ವಿಕಾರಬ್ರಹ್ಮಕ್ಕೆ ಸ್ಥಿತಸ್ಯ ಗತಿಶ್ಚಿಂತನೀಯವೆಂಬ ನ್ಯಾಯವುಮುಂಟಾಗಿ ಜಗತ್ಸೃಷ್ಟ್ಯಾದ್ಯನುಪ್ರವೇಶಾಂತಮಾದ ಪಂಚಕೃತ್ಯ ಕರ್ತೃತ್ವಮಂ ಪೇಳ್ವುದೇ ಭೂತಾರ್ಥವಾದವೆನಿಸುವದು. ಮತ್ತಂ ಘಟಕ್ಕೆ ಮೃತ್ತಿಕೆ, ತಂತುವಿಗೆ ಊರ್ಣನಾಭಿ, ನಿಮಿತ್ತವೆಂಬಂತೆ ಬ್ರಹ್ಮವೇ ಜಗತ್ಕಾರಣವೆಂದು ಪೇಳ್ವುದೇ ದೃಷ್ಟಾಂತಮಕ್ಕುಂ.

## ೧೫೮. ಮನನ ಸಾಮಗ್ರಿ

ಬಳಿಕ ಯುಕ್ತಿ ತರ್ಕ ಅನುಮಾನಂಗಳೇ ಮನನ ಸಹಾಯಂಗಳವುಗಳಲ್ಲಿ ಆತ್ಮರನೇಕರು ಸದ್ವ್ಯಾಪಕರೆಂಬ ಸಾಂಖ್ಯಾದಿಮತದೊಳು ಆ ಸಮಸ್ತಾತ್ಮರ್ಗೆಯುಂ ಪ್ರತ್ಯೇಕಮೋರ್ವೋರ್ವಾತ್ಮನಿಗೆ ಸರ್ವ ಶರೀರಗಳೊಳಹೊರಗೆಯುಂ ಸಂಬಂಧಮುಂಟಾಗಿ ಸರ್ವಾತ್ಮರುಂ ಸರ್ವಪೂರ್ಣರೆಂಬಲ್ಲಿ ಈತನಿಗೆ ಈ ಶರೀರವೇ ಭೋಗಸಾಧನವು ಅನ್ಯಶರೀರಗಳಲ್ಲವು. ಅನ್ಯರಿಗೆ ಈ ಶರೀರಭೋಗ

ಸಾಧನವಲ್ಲೆಂಬ ಲೋಕಾನುಭವ ವಿರೋಧಮಪ್ಪುದು. ಅದೇತಕೆನೆ–ಶರೀರ ಸಂಬಂಧವು ಭೋಗಸಾಧನವಪ್ಪಲ್ಲಿ ಆತ್ಮನು ವ್ಯಾಪಕನೆಂಬುವದರಿಂ ಸರ್ವ ಶರೀರಸಂಬಂಧಮುಂಟಾಗಿ ಅನ್ಯನ ಶರೀರದೊಳು ಬೇರೆ ಮತ್ತೋರ್ವನಿಗೆ ಸುಖದುಃಖಗಳೇತಕೆ ತೋರವು? ಏಕ ಶರೀರದಲ್ಲಿ ಮಾತ್ರವಭಿಮಾನ ಮಿಕ್ಕ ಶರೀರಗಳಲ್ಲಿ ಅಭಿಮಾನವಿಲ್ಲದೆ ವ್ಯಾಪಕತನವಪ್ಪುದರಿಂ ಪೂರ್ಣತೆಯೆಂದೊಡೆ ಅಂತಭಿಮಾನವಾವುದು? ಅಂತಃಕರಣವಲ್ಲವೆ? ಅದು ಯಾವ ಶರೀರದೊಳಗಿಲ್ಲ? ಅದಕ್ಕೆ ಬೇರೆ ಉಪಾಧಿಯಿಪ್ಪುದೆನೆ—ಅದು ಯಾವುದು? ಮೂಲಾಜ್ಞಾನವೆಂ ದೊಡೆ ಅದು ಪ್ರತಿ ಶರೀರದಲ್ಲಿಯೂ ಇರುವುದರಿಂದ ಸುಖದುಃಖಾನುಭವ ವ್ಯಾವೃತ್ತಿ ತೋರದಾಗಿ ಅನೇಕ ವಿಭು ಜೀವವಾದಿಗಳಾದ ಸಾಂಖ್ಯಕಣಾದಾದಿ ಗಳಮತವು ಸಲ್ಲದು. ಇನ್ನು ಏಕಜೀವವಾದವಂ ಪೇಳ್ವ ಪಕ್ಷದಲ್ಲಿ ಆತ್ಮಂಗೆ ಕರ್ತೃತ್ವವು ಸಲ್ಲದು. ಏತಕ್ಕೆಂದೊಡೆ ಶರೀರವು ಕರ್ಮಸಾಧ್ಯಮಾಗಿ ಆ ಶರೀ ರಕ್ಕೆ ಸಾಧಕಮಾದ ಅದೇ ಕರ್ಮ ಶರೀರದಿಂದೆಂತುಮಾಳ್ಪನು? ಆಯಾಶರೀರ ಸಾಧಕಕರ್ಮವಂ ಆಯಾಶರೀರದ ಪೂರ್ವಶರೀರಗಳಾದ ಭೂತಸೂಕ್ಷ್ಮಗಳಿಂ ಮಾಡಿದನೆನೆ—ಅವುಗಳಿಗೆ ಪರಿಣಾಮ್ಯುಪಾದಾನ ಕಾರಣವಾವುದು? ಆಯಾ ಮೂಲಾವಿದ್ಯೆಗಳೆನೆ ಏಕಜೀವನಿಗಾಗಿ ಬಹ್ವವಿದ್ಯೆಗಳಂ ಕಲ್ಪಿಸಿ ಪೇಳ್ವುದು ದೋಷಮಕ್ಕುಂ. ಮತ್ತಮಾ ಅವಿದ್ಯೆಯೊಂದೇ ಆತ್ಮನೋರ್ವನಿಗೆ ಬಹು ಭೋಗ ಸಾಧಕಮಾದ ಬಹುಶರೀರಗಳಾಗಿ ಪರಿಣಮಿಸಿತೆನೆ ಅವಿದ್ಯಾನಾ ಶವೇ ಮೋಕ್ಷಮೆಂಬುದರಿಂ ಒಂದು ಶರೀರದಲ್ಲಿ ಬ್ರಹ್ಮಜ್ಞಾನವಂ ಪಡೆದು ಮುಕ್ತಿಯಾಗಲು ಸರ್ವಶರೀರಗಳಿಗೂ ಮುಕ್ತಿಯಾಗಬೇಕಾಯಿತು. ಅಂತು ಇದುವರಿಗೂ ನಡೆಯಲಿಲ್ಲವೆನೆ ಶಾಸ್ತ್ರವಿರೋಧಮಪ್ಪುದರಿಂ ಮುಂದೆಯೂ ನಂಬಿಕೆ ಸಾಲದಾಗಿ ಮುಕ್ತಿಯೆಂಬುವದೇ ಇಲ್ಲವಾಗಬೇಕಾಯಿತು. ಅದಿಲ್ಲದಿ ರ್ದೊಡೆ ಮತಪ್ರವೃತ್ತಿಗೇ ಅವಕಾಶವಿಲ್ಲವಾಯಿತು. ಮತ್ತಮಾ ಜಡಕ್ಕೆ ಕರ್ತೃತ್ವ ಸಲ್ಲದಾಗಿ ಏಕಜೀವನಿಗೆ ಏಕ ಕಾಲದೊಳಗೆ ಅನೇಕ ಜ್ಞಾನೇ ಚ್ಛೆಗಳು ಘಟಿಸದಾದುದರಿಂದೇಕಜೀವವಾದವು ಸಲ್ಲದು. ಜೀವನೇ ಇಲ್ಲವೆಂ ದೊಡೆ ಸಂಸಾರವಾರಿಗೆ? ಈಶ್ವರನಿಗೆನೆ–ಆತಂ ಬದ್ಧನಾಗಬೇಕಾಯಿತು. ಈ ಮೇರೆಗೆ ಮತದ್ವಯಮುಂ ಅನುಪಪನ್ನಮೆನೆ ಯುಕ್ತಿಯಿಂದಿವನುಪಪತ್ತಿಗೊ ಳಿಸಬೇಕದೆಂತೆನೆ—ಅನೇಕ ಜೀವಪಕ್ಷದಲ್ಲಿ ವ್ಯಾಪಕತ್ವಮುಳಿಯೆ ದೋಷಕ್ಕವ ಕಾಶವಿಲ್ಲಂ. ಪರಿಚ್ಛಿನ್ನತ್ವದಿಂ ದನಿತ್ಯತ್ವಮೆನೆ ಉಪಾಧಿಕೃತಮೆಂದೊಡೇನು

ಹಾನಿಯಿಲ್ಲಂ. ಮತ್ತಮಂತಂಗೀಕರಿಸೆ ಜೀವಂಗೆ ಪರಲೋಕ ಗಮನಾಗಪ್ಪುನಾದಿಗಳುಪಪನ್ನ ಮಕ್ಕುಮೆಂಬುದೇ ಯುಕ್ತಿ. ಏಕಜೀವಪಕ್ಷದಲ್ಲಿ ಅನಾದ್ಯವಿದ್ಯಾನಾನಾತ್ವವು ಉಪಾಧಿನಾನಾತ್ವಕ್ಕೆ ಪ್ರಯೋಜಕಮಾಗೆ ಉಪಾಧಿಗೆ ಬಂಧಮೋಕ್ಷಗಳಪ್ಪುದರಿಂ ಪೂರ್ಣಾತ್ಮನೊಳು ಕರ್ತೃತ್ವಾದಿಗಳು ಭಾತಮಪ್ಪವೆಂಬುದೇ ಯುಕ್ತಿ. ಜೀವೇಶ್ವರಭೇದಮುಂ ಆದಿಕರ್ತೃತ್ವಮುಂ ಅಸಮಂಜಸಪ್ಪುಪ್ಪುದೆನೆ ಅವುಗಳನಾದಿಯೆಂದೊಡೆ ಹಾನಿಯಿಲ್ಲಂ. ನಿತ್ಯಮಾಗಲೆಂದೊಡೆ ಅಧ್ಯಸ್ತಮೆಂಬುದರಿಂದದು ಘಟಿಸಲ್ದೆಂಬುದೇ ಯುಕ್ತಿ. ಇಂತು ಶ್ರುತಿವಿರುದ್ಧಗಳಾಗದ ಸದ್ಯುಕ್ತಿ ಸಹಸ್ರಗಳಿಂ ತತ್ತದ್ವಿಷಯಂಗಳಂ ಉಪಪನ್ನಮಾಗೆ ಮನನಂಗೊಳಲಪ್ಪುದು. ಬಳಿಕ ತರ್ಕಾನುಮಾನಂಗಳ ಲಕ್ಷಣಮಾದೊಡೆ ಶ್ರೀ ಹರ್ಷಮಿಶ್ರ ಬ್ರಹ್ಮಾನಂದ ಪ್ರಮುಖರಾದ ಆಚಾರ್ಯರಿಂ ಖಂಡನಾದಿ ಗ್ರಂಥಗಳಲ್ಲಿ ಪ್ರಸಿದ್ಧಮಾಗಿರ್ಪುದರಿಂ ಈ ಗ್ರಂಥವು ಸುಖಾಸುಭವಪ್ರಕರಣಮಪ್ಪುದಾಗಿ ಗ್ರಂಥಬಾಹುಳ್ಯಮಹುದೆಂಬಭೀತಿಯಿಂ ಕುಲಿಶ ಕರ್ಕಶ ತರ್ಕಾದಿಗಳಲ್ಲಿ ಪ್ರತಿಪಾದಿಸಲ್ಪಟ್ಟುದಿಲ್ಲಮಾದೊಡೆ ವಾದಕಾಂಕ್ಷಿಗಳಿಗದನಾತ್ಮತರ್ಕಚಿಂತಾಮಣಿಯೊಳುಸುರಿರ್ಪೆಂ.

## ೧೫. ನಿದಿಧ್ಯಾಸನ ಪಂಚಯೋಗ

ಬಳಿಕ ಮಂತ್ರಯೋಗ, ಸ್ಪರ್ಶಯೋಗ, ಭಾವಯೋಗ, ಅಭಾವಯೋಗ, ಮಹಾಯೋಗವೆಂಬವೇ ನಿದಿಧ್ಯಾಸನರೂಪ ಯೋಗಪಂಚಕಮದರಲ್ಲಿ ಪ್ರಣವಾದಿ ಮಂತ್ರಾನುಸಂಧಾನದಿಂ ಪರಮಾತ್ಮನಲ್ಲಿ ಮನೋಲಯವಹುದೇ ಮಂತ್ರಯೋಗವೆನಿಸುವದು. ಮತ್ತಮಾ ಮಂತ್ರಯೋಗ ಸಹಿತ ಪವನಮನಂಗಳೊಂದುಗೂಡಿ ಮೂಲಾಧಾರದಿಂ ಸುಷುಮ್ನಾನಾಡೀ ಮಾರ್ಗದೊಳ್ಪೈದಿ ಶಿರೋಮಧ್ಯಗತ ಪರಮಾತ್ಮ ತೇಜಸ್ಸಿನೊಳು ಆ ಮನೋಲಯವಹುದೇ ಸ್ಪರ್ಶಯೋಗಮೆನಿಸುವುದು. ಮತ್ತಂ ಮೊದಲು ಸ್ವರ್ಗವೇ ಮೂರ್ಧ್ನ, ದಿಕ್ಕೇ ಶ್ರೋತ್ರ, ಚಂದ್ರಾರ್ಕರೇ ನೇತ್ರ, ಅಗ್ನಿಯೇ ಮುಖ, ಅಂತರಿಕ್ಷವೇ ನಾಭಿ, ಭೂಮಿಯೇ ಪಾದಂಗಳಾದ ಈಶ್ವರನ ವಿರಾಡ್ರೂಪಮಂ ನೆನೆದು ಅಥವಾ ಪರಿಮಿತ ಭುಜಾಸ್ತ್ರಾಭರಣಾದಿ ಸಹಿತನಾದೀಶ್ವರನ ದಿವ್ಯ ಮೂರ್ತಿಯಂ ಪರಿಭಾವಿಸಿ ಬಳಿಕದರವಯವಂಗಳೊಂದೊಂದು ಬಿಟ್ಟುಳಿದ ಅವಯವಿ ಮಾತ್ರಮಾದ ಸದ್ರೂಪ ಬ್ರಹ್ಮದಲ್ಲಿ ಮನೋಲಯವಹುದೇ ಭಾವಯೋಗ

ವೆನಿಸುವದು. ಮತ್ತಂ ಕರಣಗೋಚರವಲ್ಲದ ಪ್ರಮಾಣಾತೀತಮಪ್ಪ ನಿರು ಪಾಧಿಕ ಬ್ರಹ್ಮದಲ್ಲಿ ಮನೋಲಯುವಹುದೇ ಅಭಾವಯೋಗವೆನಿಸುವದು, ಮತ್ತಮಾ ಜಗದುದಯ ಲಯಂಗಳಲ್ಲಿಯುಂ ಅರಿಯೆನರಿದೆನೆಂಬಲ್ಲಿಯುಂ ತನಗಾವ ಹಾನಿಯುಂ ಇಲ್ಲದೊಂದೇ ಪ್ರಕಾರಮಾದ ಪ್ರತ್ಯಗಾತ್ಮರೂಪ ಬ್ರಹ್ಮದಲ್ಲಿ ಮನೋಲಯವಹುದೇ ಮಹಾಯೋಗಮಕ್ಕುಂ.

## ೧೬೦. ಪ್ರತಿಬಂಧಕತ್ರಯ

ಬಳಿಕ ಭೂತಪ್ರತಿಬಂಧ, ವರ್ತಮಾನಪ್ರತಿಬಂಧ, ಆಗಾಮಿಪ್ರತಿಬಂಧ ವೆಂಬವೇ ಆತ್ಮಸಾಕ್ಷಾತ್ಕಾರಕ್ಕೆ ವಿರೋಧಿತ್ರಯಮದರಲ್ಲಿ ಮೋಕ್ಷಾಪೇ ಕ್ಷೆಯಿಂ ಸರ್ವಸಂಗಪರಿತ್ಯಾಗಮಂ ಮಾಡಿ ಶ್ರೀಗುರುವನ್ನೈದಿ ಶ್ರವಣಾದಿಗ ಳೊಡಗೂಡಿದೊಡಂ ಮೊದಲು ಗೃಹಸ್ಥಾಶ್ರಮದಲ್ಲಿ ಸ್ವೀಕರಿಸಿದ್ದ ವನಿತಾದಿ ವಸ್ತುಗಳ ರೂಪ ಯೌವನ ಶೃಂಗಾರಾದಿ ಸದ್ಗುಣಂಗಳನುಭವದ ಸವಿಯು ಸಂಸ್ಕಾರಬಲದಿಂ ಬಂದು ಬಂದು ಮನವನಳ್ಕಿರಿದು ಅಡಿಗಡಿಗೆ ಚಿಂತೆಯುಂ ಪುಟ್ಟಿಸುತ್ತ ಆತ್ಮಸಾಕ್ಷಾತ್ಕಾರವನಾಗಲೀಯದಿಹುದೇ ಭೂತಪ್ರತಿಬಂಧವೆನಿ ಸುವದು. ಮತ್ತಂ ಜಡಬುದ್ಧಿಜನಸಂಗ ಕುರತಿ ವಿಷಯಾಸಕ್ತಿ ಕುತರ್ಕ ಅಭಿ ಮಾನ ಚಪಲತ್ವಾದಿಗಳುಂಟಾಗಿ ತತ್ವವಿಚಾರಂಗೈದೊಡಂ ಆತ್ಮಸಾಕ್ಷಾ ತ್ಕಾರವನಾಗಲೀಯದಿಪುದೇ ವರ್ತಮಾನಪ್ರತಿಬಂಧವೆನಿಸುವದು. ಮತ್ತಂ ಮುಂದೆ ಕೆಲವು ಜನ್ಮಾಂತರವನಿತ್ತಲ್ಲದೇ ತೀರದಾ ಪ್ರಾರಬ್ಧ ವಿಶೇಷವೆಂಬ ಬ್ರಹ್ಮಾದಿಲೋಕವಾಂಛೆಯೆಂಬ ದೋಷದ್ವಯಯುಕ್ತಮಾಗಿರ್ದು ವೇದಾರ್ಥ ವನರಿದೊಡಂ ಆತ್ಮಸಾಕ್ಷಾತ್ಕಾರವನಾಗಲೀಯದಿಹುದೇ ಭಾವಿಪ್ರತಿಬಂಧ ಮಕ್ಕುಂ.

## ೧೬೧. ಪ್ರತಿಬಂಧ ನಿವರ್ತಕ

ಬಳಿಕ ಬಂಧತ್ರಯಮಂ ಜಯಿಸಲೋಸುಗಮಾಗಿ ಜ್ಞಾನ, ವೈರಾಗ್ಯ, ಉಪರತಿಗಳೆಂಬ ಮುಖ್ಯಸಾಧನಂಗಳನು ಕ್ರಮದಿಂ ಬಿಡದಭ್ಯಾಸಂಗೈಯು ವುದಕ್ಕೆ ಸಹಾಯಮಪ್ಪುದಾ ಜ್ಞಾನಾದಿಗಳಿಗೆ ಮೂರು ಮೂರಂಗಂಗಳೊಡ ಗೂಡಿ ಲಕ್ಷಣಮಪ್ಪುದವುಗಳಂ ಬೇರೆಬೇರೆ ಪೇಳ್ವೆನದೆಂತೆನೆ :—

## ೧೬೨. ಜ್ಞಾನಲಕ್ಷಣ

ಬಳಿಕ ವೇದಾಂತಶ್ರವಣ ಜನ್ಯಾಭ್ಯಾಸ ವಿವೇಕಪ್ರಯುಕ್ತ ಸಾಕ್ಷಿತ್ವ ದರ್ಶನವೇ ಜ್ಞಾನಲಕ್ಷಣಮಾಗಿರ್ಪುದು. ಇದಕ್ಕೆ ಕಾರಣ ಸ್ವರೂಪ ಕಾರ್ಯ

ವೆಂಬುವದೇ ಅಂಗತ್ರಯುಪ್ಪಾಗಿರ್ಪುದೆಂತೆನೆ ಜ್ಞಾನಕ್ಕೆ ಶ್ರವಣಾದಿಕವ್ಕೇ ಕಾರಣವೆನಿಸುವದು. ಆತ್ಮಾಹಂಕಾರಗಳ ಅಧ್ಯಾಸೈಕ್ಯಮಂ ಬೇರ್ಪಡಿಸುವದೇ ಸ್ವರೂಪವಹುದು. ಬಳಿಕ ಆಹಂಕಾರಗತ ಸಂಸಾರಸಾಕ್ಷಿತ್ವವ್ಕೇ ಕಾರ್ಯಮಕ್ಕುಂ.

## ೧೬೩. ವೈರಾಗ್ಯಲಕ್ಷಣ

ಬಳಿಕ ಭೋಗಾನಿತ್ಯತ್ವದರ್ಶನ ಜನ್ಯವೈರಸ್ಯಪ್ರಯುಕ್ತ ವಿಷಯುಪೈಮುಖ್ಯವೇ ವೈರಾಗ್ಯಲಕ್ಷಣಮಹುದದಕೆ ವನಿತಾದಿವಿಷಯುಂಗಳಲ್ಲಿ ಅನಿತ್ಯತ್ವ ದೋಷದರ್ಶನವೇ ಕಾರಣಮಹುದು. ಮೇಲಾವಪ್ರಕಾರದಿಂದಾದರವಂ ಬಿಡುವದೇ ಸ್ವರೂಪವಹುದು. ಬಳಿಕ ವಿಷಯುಂಗಳಿಗೆರಗದಿಹುದೇ ಕಾರ್ಯಮಕ್ಕುಂ.

## ೧೬೪. ಉಪರತಿ

ಬಳಿಕ ಯೋಗಜನ್ಯಚಿತ್ತಸ್ಥೈರ್ಯಪ್ರಯುಕ್ತ ಬಾಹ್ಯಪ್ರಪಂಚಲಯುವೇ ಉಪರತಿಗೆ ಲಕ್ಷಣಮಪ್ಪುದದಕೆ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿಗಳೆಂಬ ಅಷ್ಟಾಂಗಗಳುಳ್ಳ ಯೋಗವೇ ಕಾರಣಮಪ್ಪುದು. ಚಿತ್ತವು ಸ್ವಸ್ಥಾನದೊಳೇಕಾಗ್ರವಾಗಿಪ್ಪುದೇ ಸ್ವರೂಪವೆನಿಸುವದು. ಬಾಹ್ಯಕರಣಾದಿ ವ್ಯಾಪಾರಕ್ಕೆರಗದಿಹುದೇ ಕಾರ್ಯಮಕ್ಕುಂ.

## ೧೬೫. ಜ್ಞಾನಾದಿಗಳಿಗವಧಿ

ಬಳಿಕ ಕುಡ್ಯವೆಂದರೆ ಗೋಡೆಯೆಂಬರ್ಥವು ದೃಢಪಟ್ಟಿರುವಂತೆ ನಾನೆಂದರೆ ದೇಹವೆಂಬ ಭ್ರಾಂತಿ ಸ್ಥಿರವಾಗಿಪ್ಪಂತೆ ಸೂರ್ಯನುದಯಿಸಲು ಬೆಳಕಾಗುವದು ನಿಯತವಾದಂತೆ ಬ್ರಹ್ಮವೇ ತಾನೆಂಬ ಅನಾಹಾರ್ಯಾಪ್ರಾಮಾಣ್ಯ ಜ್ಞಾನಾನಾಸ್ಕಂದಿತ ಪಟುತಮ ಸಂಸ್ಕಾರಸಹಕೃತ ದೃಢತರನಿಶ್ಚಯುಸಿದ್ಧಿಯೇ ಪೂರ್ವೋಕ್ತ ಜ್ಞಾನಕ್ಕವಧಿ. ಬ್ರಹ್ಮಲೋಕ ಪ್ರಾಪ್ತ್ಯಾದಿ ಮಹತ್ಕಾರ್ಯಗಳಂ ಬುದ್ಧಿಯೊಳು ಸರ್ವಾತ್ಮನಾ ತೃಣೀಕರಿಸಿ ಅಕಿಂಚಿತ್ಕರವೆಂಬ ಅನಪೇಕ್ಷಾ ಸಿದ್ಧಿಯೇ ವೈರಾಗ್ಯಕ್ಕವಧಿ. ಸುಷುಪ್ತನಂತೆ ಸರ್ವಾವಸ್ಥೆಗಳೊಳು ಅವಸ್ಥಾಧರ್ಮಗಳನಿರ್ಬಂಧವಿಲ್ಲದೆ ಸಕಲಕಾರ್ಯಸ್ಮೃತಿಹೀನನಾಗಿ ದಗ್ಧಪಟನ್ಯಾಯದಿಂದಿಪ್ಪುದೇ ಉಪರತಿಗವಧಿಯಕ್ಕುಂ.

## ೧೬೩. ಮೋಕ್ಷ ಕಾರಣ

ಬಳಿಕವುಗಳೊಳಗೆ ಜ್ಞಾನ, ವೈರಾಗ್ಯೋಪರತಿಗಳೆಂಬ ಸಿದ್ಧಿತ್ರಯಮನು ಕೂಲಿಸೆ ಮುಕ್ತಿ ಸಿದ್ಧಿಸುವದು. ಹಾಗಿಲ್ಲದೆ ಅಂತಾ ಸಿದ್ಧಿತ್ರಯಮಧಿಕಾರಿಯ ತಪಸ್ಸಿದ್ಧಿಗೆ ಮಹಾಫಲದಂತಿರಲು ವೈರಾಗ್ಯೋಪರತಿಗಳೆರಡುಂ ಸಂಪೂರ್ಣ ವಾಗಿ ಸಿದ್ಧಿಸಿ ಜ್ಞಾನಮೊಂದುಸಿದ್ಧಿಸದಿರಲಾತಂಗೆ ಮುಕ್ತಿಘಟಿಸದಾದೊಡಂ ಮಹಾಸುಖಸ್ಥಾನಮಾದೂರ್ಧ್ವಲೋಕಪ್ರಾಪ್ತಿಯಹುದು. ಜ್ಞಾನಮೊಂದು ಸಿದ್ಧಿಸಿ ವೈರಾಗ್ಯೋಪರತಿಗಳು ಸಿದ್ಧಿಸದಿರುವಾತಂಗೆ ಮರದ ಕೊನೆ ಮುರಿ ದೊಡಲ್ಲಿರ್ಪ ಮನುಜಂಗೆ ಪತನೇಚ್ಛೆಯಿಲ್ಲದಿರ್ದೊಡಾತನವಶ್ಯವಾಗಿಬೀಳ್ವಂತೆ ಯೋಗಸಿದ್ಧಿಯಿಲ್ಲದಿದ್ದರುಂ ಜ್ಞಾನಸಿದ್ಧನು ದೇಹಾವಸಾನದಲ್ಲಿ ಮುಕ್ತನಪ್ಪಂ. ಮತ್ತಾತಂ ಜೀವನ್ಮುಕ್ತನಾದರುಂ ವಿದೇಹಕೈವಲ್ಯ ಪರ್ಯಂತಮೀ ಪ್ರಾರಬ್ಧ ಜನಿತ ಭೋಗಮುಂಟೆಂಬುದೇ ಸಿದ್ಧಮಪ್ಪುದಾಗಿ ಮುಕ್ತಿಗೆ ಬ್ರಹ್ಮಜ್ಞಾನವೇ ಮುಖ್ಯಕಾರಣವೆಂದು ಸಿದ್ಧಾಂತಮಕ್ಕುಂ.

## ೧೬೭. ಸಪ್ತಭೂಮಿಕಾಕ್ರಮ

ಬಳಿಕ ಸುಖೇಚ್ಛೆ, ವಿಚಾರಣೆ, ತನುಮಾನಸ, ಸತ್ವಾಪತ್ತಿ, ಅಸಂಸಕ್ತಿ, ಪದಾರ್ಥಾಭಾವನೆ, ತುರ್ಯಗಾಮಿ, ಎಂಬವೇ ಸಪ್ತಜ್ಞಾನ ಭೂಮಿಕೆಗಳವು ಗಳಲ್ಲಿ ನಾನು ಮೂಢನಾಗಿಹ ಕಾರಣದಿಂ ಶ್ರುತಿ ಗುರುಗಳಿಂದರಿಯಬೇಕೆಂ ಬುದೇ ಸುಖೇಚ್ಛೆಯಹುದು. ಮೇಲೆ ಗುರುಶಾಸ್ತ್ರಾದಿಗಳಿಂ ಜನಿಸಿದ ಕಿಂಚಿ ದ್ವೈರಾಗ್ಯದಿಂದ ಸದಾಚಾರ ಪ್ರವೃತ್ತಿಯೇ ವಿಚಾರಣೆಯೆನಿಸುವದು. ಬಳಿಕಾ, ಸುಖೇಚ್ಛೆ ವಿಚಾರಣೆಗಳ ಬಲದಿಂ ವಿಷಯಾಸಕ್ತಿ ಕೆಡುವದೇ ತನುಮಾನಸ ಮೆನಿಸುವದು. ಮೇಲಾಭೂಮಿಕಾತ್ರಯದಭ್ಯಾಸ ಸಾಮರ್ಥ್ಯದಿಂ ಜಾಗ್ರ ತ್ತಪಂಚವಲ್ಲವಂ ಕನಸೆಂದು ಕಂಡಾತ್ಮನ ಸನ್ಮಾತ್ರಾನುಸಂಧಾನವೇ ಸತ್ವಾ ಪತ್ತಿಯೆನಿಸುವದು. ಬಳಿಕಾ ಸಕಲ ಪ್ರಪಂಚದ ತೋರಿಕೆಯಡಗಿ ಸುಷುಪ್ತ ನಂತಾತ್ಮ ಚಿನ್ಮಾತ್ರಾವಶೇಷತ್ವವೇ ಅಸಂಸಕ್ತಿಯೆನಿಸುವದು. ಬಳಿಕ ಸರ್ವ ವಾಸನಾವಿಲಯದಿಂ ಗಾಢನಿದ್ರಿತನಂತಾನಂದಾತ್ಮಲೀನತೆಯೇ ಪದಾರ್ಥಾ ಭಾವನೆಯೆನಿಸುವದು. ಮೇಲುಂಟೆನಿಸದಿಲ್ಲವೆನಿಸದೆ ಅಹಂಕೃತಿ ನಿರಹಂಕೃತಿ ದೋರದೆ ಕೇವಲಜ್ಞಪ್ತಿರೂಪಮಾದ ಅದ್ವೈತಪದದಲ್ಲಿ ಬಯಲಬರಿಗೊಡ ದಂತೊಳ ಹೊರಗೆ ಶೂನ್ಯಮಾಗಿರ್ಪುದೇ ತುರ್ಯಗಾಮಿಯಕ್ಕುಂ.

## ೧೩೮. ಷಟ್ಸಮಾಧಿಗಳು

ಮತ್ತಮಾ ಉಪರತಿಗನುಸಾರಿಗಳಾದ ದೃಶ್ಯಾನುವಿದ್ಧ, ಶಬ್ದಾನುವಿದ್ಧ, ನಿರ್ವಿಕಲ್ಪಕವೆಂಬವೇ ಬಾಹ್ಯಾಭ್ಯಂತರಭೇದದಿಂ ಷಟ್ಸಮಾಧಿಗಳವುಗಳಲ್ಲಿ ಘಟಾದಿವಿಷಯಜಾತದೊಳಾವುದಾನೊಂದನಾದರು ಕುರಿತು ಅದರ ನಾಮ ರೂಪಗಳೆಂಬ ಮಾಯಾಂಶಗಳೆರಡನು ಪಿರಿಚಿ ಅಸ್ತಿ ಭಾತಿ ಪ್ರಿಯಗಳೆಂಬ ಸಚ್ಚಿದಾನಂದಬ್ರಹ್ಮಾಂಶತ್ರಯುವನನುಸಂಧಾನಂ ಗೈವುದೇ ಬಾಹ್ಯದ ದೃಶ್ಯಾನುವಿದ್ಧವೆಂಬ ಸವಿಕಲ್ಪಕ ಸಮಾಧಿಯೆನಿಸುವದು. ಮತ್ತಮಖಂಡಸಚ್ಚಿದಾನಂದಾದ್ವಿತೀಯ ಸ್ವರೂಪವಮಾದುದೇ ಬ್ರಹ್ಮವೆಂದು ಧ್ಯಾನಿಸಲದೇ ಬಾಹ್ಯ ಶಬ್ದಾನುವಿದ್ಧಸವಿಕಲ್ಪಕ ಸಮಾಧಿಯೆನಿಸುವದು. ಮೇಲಾ ಸಮಾಧಿದ್ವಯದ ಅಭ್ಯಾಸಬಲದಿಂದಲಾದ ಬ್ರಹ್ಮಾನಂದಾಸ್ವಾದನದಲ್ಲಿಯೇ ಮನಸ್ಸು ಮಗ್ನಮಾಗಿ ನಿಸ್ತರಂಗಸಮುದ್ರದಂತೆ ನಿಶ್ಚಲಾತ್ಮಕಮಾಗಿಹುದೇ ಬಾಹ್ಯನಿರ್ವಿಕಲ್ಪಕ ಸಮಾಧಿಯಕ್ಕುಂ. ಬಳಿಕ ಮನೋಗತ ಕಾಮ ಸಂಕಲ್ಪಾದಿಗಳ್ಗೆ ದೃಶ್ಯಂಗಳು; ತಾನವಕೆ ಸಾಕ್ಷಿಕನೆಂಬನುಸಂಧಾನವೇ ಅಭ್ಯಂತರದೃಶ್ಯಾನುವಿದ್ಧ ಸವಿಕಲ್ಪಕ ಸಮಾಧಿಯಕ್ಕುಂ. ಮತ್ತಮಸಂಗ ಸಚ್ಚಿದಾನಂದ ಸ್ವಯಂ ಪ್ರಕಾಶಾದ್ವಯಸ್ವರೂಪನೇ ತಾನೆಂನು ಚಿಂತನಂ ಗೈವುದೆ ಅಭ್ಯಂತರಶಬ್ದಾನುವಿದ್ಧವೆಂಬ ಸವಿಕಲ್ಪಕ ಸಮಾಧಿಯೆನಿಸುವದು. ಮತ್ತಮಾ ಸ್ವಾನುಭೂತ ರಸಾವೇಶದಿಂದ ಆ ದೃಶ್ಯ ಶಬ್ದಂಗಳೆರಡನುಳಿದು ನಿವಾತಸ್ಥಿತದೀಪದಂತೆ ನಿಷ್ಪಂದರೂಪಮಾಗಿಹುದೇ, ಅಭ್ಯಂತರ ನಿರ್ವಿಕಲ್ಪಕ ಸಮಾಧಿಯಾಗಿರ್ಕುಂ. ಇಂತೀ ಆರು ಸಮಾಧಿಗಳಿಂದಲೇ ಕಾಲವಂ ಕಳೆಯುತಿರ್ಪ ಯೋಗೀಶ್ವರಂಗೆ ಮನವೆಲ್ಲೆಲ್ಲಿ ಸಂಚರಿಸಿದೊಡಲ್ಲಿಯೇ ಸಮಾಧಿಯಕ್ಕುಂ.

## ೧೩೯. ಜ್ಞಾನಫಲಚತುಷ್ಟಯ

ಬಳಿಕ ದುಃಖಾಪಸರ್ಪ, ಕಾಮಾಪ್ತಿ, ಕೃತಕೃತ್ಯತ್ವ, ಪ್ರಾಪ್ಯಪ್ರಾಪ್ತಿಗಳೆಂಬ ಚತುರ್ವಿಧ ಜ್ಞಾನಫಲಂಗಳವುಗಳಲ್ಲಿ ದುಃಖಾಭಾವವೆಂಬುವದು ಇಹಪರಲೋಕ ಭೇದದಿಂದ ಇತ್ತೆರನಾಗಿಹುದು. ಆದರೊಳಗೆ ಸ್ಥೂಲ ಶರೀರದಲ್ಲಿ ಕುರೂಪ ದುರ್ಗಂಧ ವ್ಯಾಧ್ಯಾದಿಗಳುಂ, ಸೂಕ್ಷ್ಮ ತನುವಿನಲ್ಲಿ ತೋರುವ ಕಾಮ ಕ್ರೋಧಾದಿ ವಿಕಾರಗಳುಂ, ಕಾರಣ ದೇಹದಲ್ಲಿ ಆಧಿ ವ್ಯಾಧಿಗಳಿಗೆ ಬೀಜಭೂತವಮಾದ ಸಂಸ್ಕಾರಗಳು ಎಂಬ ತ್ರಿವಿಧ ಸಂತಾಪವೇ ಇಹ

ಲೋಕ ದುಃಖವಹುದು. ಮಿಥ್ಯಾತ್ಮಕ ಮಾಯಾಕಾರ್ಯಮಾದ ಶರೀರಾದಿ ಗಳತ್ತಣಿಂ ಬೇರ್ಪಡಿಸಲ್ಪಟ್ಟ ಅದ್ವಿತೀಯವಾದ ಪ್ರತ್ಯಗಾತ್ಮಜ್ಞಾನದಿಂ ಮೇಲೆ ಪರಮಾರ್ಥಮಾದ ಭೋಗ್ಯಭೋಕ್ತೃಗಳಿಲ್ಲಾಗಿ ಜ್ಞಾನಿಗಾ ದುಃಖತ್ರಯ ಸಂಬಂಧವಿಲ್ಲದಿರಲು ಅದೇ ಇಹಲೋಕ ದುಃಖಾಭಾವವೆನಿಸುವದು. ಬಳಿಕ ಪುಣ್ಯವೆಂತು ಬರ್ಪುದೋ ಪಾಪವೆಂತು ಪೋಪುದೋ ಎಂಬ ಚಿಂತೆಯೇ ಪರ ಲೋಕ ದುಃಖವಹುದಲ್ಲಿ ಸಮ್ಯಜ್ಞಾನ ಸಿದ್ಧಿಯಾದ ಬಳಿಕ ಅತಿಥ್ಯಾಪವಾದಿ ಗಳಿಂದವು ಕಳೆದುಪೋಗೆ ಮಿಕ್ಕುಳಿದ ತನಗೆ ಕಮಲಪತ್ರೋದಕದಂತೆ ಕರ್ಮ ದ್ವಯಲೇಪವಿಲ್ಲಾಗಿಯುಂ ಕಾಷ್ಠದಲ್ಲಿ ವಹ್ನಿಯಿಹುದಾವಹ್ನಿಯಲ್ಲಿಕಾಷ್ಠವಿಲ್ಲ ದಂತೆಯುಂ ಕರ್ಮದ್ವಯ ವ್ಯವಹಾರದಲ್ಲಿ ವಿವೇಕಿಯಿರ್ಪನವನೊಳಾ ವ್ಯವ ಹಾರವಿಲ್ಲಾಗಿಯುಂ ದಾವಾನಲವಡಸಿದ ನಗವನಾವ ಮೃಗಪಕ್ಷಿಗಳುಂಪೊಗ ದಂತೆ ಜ್ಞಾನಾಗ್ನಿಮಯನಂ ಸುಕೃತಾದಿಗಳು ಸೋಂಕಲಪ್ಪುವಾಗಿಯುಂ ಅದರಿಂದ ಚಿಂತೆ ತೋರದಿಹುದೇ ಪರಲೋಕ ದುಃಖಾಭಾವವಾಕ್ಕುಂ.

### ೧೭೦. ಕಾಮಾಪ್ತಿ

ಮತ್ತಂ ಸರ್ವೈಶ್ವರ್ಯಸಂಪನ್ನನಾದ ಸಾರ್ವಭೌಮನಂ ಮೊದಲು ಗೊಂಡು ಹಿರಣ್ಯಗರ್ಭಾಂತಮಾದ ಉತ್ತರೋತ್ತರ ಬಯಸಲ್ಕಕ್ಕ ಶತಗು ಣೋತ್ತರಾನಂದಗಳೆಲ್ಲಂ ನಿಸ್ಪೃಹನಾದ ವಿವೇಕಿಗುಂಟಾಗಿಯುಂ ಬಳಿಕಾನಂ ದಂಗಳೆಲ್ಲಂ ಜ್ಞಾನಿಯಿಂದರಿಯಲ್ಪಟ್ಟ ಬ್ರಹ್ಮಾಂಶಗಳಪ್ಪುದರಿಂ ಆತಂಗಖಂ ಡಾನಂದವು ಸಿದ್ಧಿಸಿತಾಗಿಯುಂ ಅದೇ ಸರ್ವಕಾಮಾಪ್ತಿಯೆನಿಸುವುದು.

### ೧೭೧ ಕೃತಕೃತ್ಯತೆ

ಮತ್ತಮಾ ವಿವೇಕಿಗೆ ತತ್ವಜ್ಞಾನಕ್ಕಿಂ ಮೊದಲೇ ಇಹಲೋಕಸಂಬಂಧ ಮಾದ ಇಷ್ಟಪ್ರಾಪ್ತ್ಯನಿಷ್ಟನಿವೃತ್ತಿಗಳಿಗೋಸುಗ ಕೃಷಿವಾಣಿಜ್ಯಾದಿಕಮುಂ, ಸ್ವರ್ಗಾದಿಸಿದ್ಧಿಗೋಸುಗ ಯಾಗೋಪಾಸನಾದಿಕಮುಂ, ಮೋಕ್ಷಸಾಧನ ಜ್ಞಾನಸಿದ್ಧಿಗೋಸುಗ ಶ್ರವಣಾದಿಕಮುಂ, ಎಂಬ ತ್ರಿವಿಧಕರ್ತವ್ಯ ಮಾಗಿ ಹುದೀಗಲೀ ತತ್ವಜ್ಞಾನಾನಂತದೊಳಾದೊಡೆ ಸಂಸಾರಿಕಫಲ ಭೋಗೇ ಚ್ಛೆಯಿಲ್ಲಾಗಿ, ಕೃಷಿವಾಣಿಜ್ಯ ಮೊದಲಾದ ವ್ಯವಹಾರಮಿಲ್ಲಂ. ಬಳಿಕ ಗವಾಕ್ಷಗತ ಸೂರ್ಯಕಿರಣದಲ್ಲಿ ತೋರ್ಪ ಪರಮಾಣುಗಳಾಟವು ಬಯಲ ಮಹಾಬೆಳಕಿನಲ್ಲಿ ಕಾಣಿಸದಂತೆ ಅಲ್ಪಜ್ಞಾನಿಗಳ ವಿಷಯಮಾದ ಕರ್ಮವೆಲ್ಲಂ

ಸಮ್ಯಗ್ಜ್ಞಾನಿಗಳ ಮಧ್ಯದಲ್ಲಿ ತೋರದಿಹುದೆಂದು ಅನುಷ್ಠಿಸಲ್ತಕ್ಕುದಲ್ಲಾಗಿ ಜ್ಞಾನಿಗೆ ಯಾಗಾದಿವಾಂಛೆ ತೋರದು. ಬಳಿಕ ಬ್ರಹ್ಮಾನಂದ ಸಾಕ್ಷಾತ್ಕಾರ ವಾಯಿತಾಗಿ ಶ್ರವಣಾದಿಕವೆಲ್ಲಂ ಕೃತಪ್ರಾಯಮಹುದಿಂತಿದೇ ಕೃತಕೃತ್ಯತೆ ಯೆನಿಸುವದು.

### ೧೭೨. ಪ್ರಾಪ್ಯಪ್ರಾಪ್ತಿ

ಮತ್ತಂ ತನಗೆ ವಿಶಿಷ್ಟಪುಣ್ಯಪರಿಪಾಕ, ಮುಮುಕ್ಷುತ್ವ, ಗುರೂಪಾಸನೆ, ಶಾಸ್ತ್ರಶ್ರವಣ, ಆತ್ಮಾನಾತ್ಮವಿವೇಕ, ಅಜ್ಞಾನನಿವೃತ್ತಿ, ಆತ್ಮಸಾಕ್ಷಾತ್ಕಾರ, ದುಃಖನಿವೃತ್ತಿ, ನಿಜಾನಂದಾದಿಗಳ ಸಿದ್ಧಿ ಎಂಬುವ ಕ್ರಮಸಿದ್ಧಿಯೇ ಪ್ರಾಪ್ಯ ಪ್ರಾಪ್ತಿಯೆನಿಸುವದು.

### ೧೭೩. ಜೀವನ್ಮುಕ್ತಿ

ಬಳಿಕ ಜೀವನ್ಮುಕ್ತಿ, ವಿದೇಹಕೈವಲ್ಯವೆಂಬವೇ ದ್ವಿವಿಧ ಮೋಕ್ಷಂಗಳವು ಗಳಲ್ಲಿ ವಿವೇಕಿಗೆ ಅಹಮಾತ್ಮರ್ಗನ್ಯೋನ್ಯಾಧ್ಯಾಸಲಕ್ಷಣವಾದ ಹೃದಯಗ್ರಂ ಥಿಯು ಶಿಥಿಲತೆಯನ್ನೈದಿತಾಗಿ ಪರಶರೀರದೊಳಗೆಂತಂತೆ ಸ್ವಶರೀರದಲ್ಲಿಯುಂ ದೃಢಾಭಿಮಾನವಿಲ್ಲದಿರಲಾಗ ಅನುಭವಸಾಮ್ಯಮಪ್ಪುದರಿಂ ಸಮದರ್ಶನವೆಂಬ ಪ್ರಾರಬ್ಧಭೋಗ ಸಾಕ್ಷಾತ್ಕಾರದೊಳು ಸುಪ್ತ, ಬಾಲ, ಉನ್ಮತ್ತ, ಪಿಶಾಚಕ ರಂತೆ ಕ್ರಮದಿಂ ಜಡಲೀನ, ಮೃದುದುರ್ಬಲ, ಶಿಥಿಲಾನಾವಶ್ಯಕ, ಸ್ವೈರನಿ ರಂಕುಶಾನುಸಂಧಾನವಹುದರಿಂ ದೇಹಾದ್ಯಭಿಮಾನ ತೋರದೆ ಘಟೋತ್ಪ ತ್ತಿಯಿಂ ಮೇಲೆ ಕೃತಕೃತ್ಯಮಾದ ಕುಲಾಲಚಕ್ರಭ್ರಮಣವು ಸಂಸ್ಕಾರಕ್ಷಯಾ ವಧಿ ಕ್ರಮದಿಂದಲಸಮಾಗುತಿಪ್ಪಂತೆ ಪ್ರಾರಬ್ಧವಾಸನಾ ವಶದಿಂ ಹೆದೆಯಿಂ ಬಿಡಲ್ಪಟ್ಟು ಗಗನವನ್ನೈದುವ ಕೋಲಗತಿಯಂ ಹೋಲಿ ಪ್ರಾಪಂಚಿಕನಂತೆ ತೋರುತ್ತ ಬದುಕುತ್ತಿಹುದೇ ಜೀವನ್ಮುಕ್ತಿಯೆನಿಸುವದು.

### ೧೭೪. ಜೀವನ್ಮುಕ್ತಿಸಂಗತಿ

ಬಳಿಕ ಬ್ರಹ್ಮಜ್ಞಾನೋದಯಾನಂತರದಲ್ಲಿ ತಕ್ಷಣವೇ ಸೂರ್ಯೋದ ಯದಿಂ ಕತ್ತಲೆ ಕೆಡುವಂತೆ ಅಜ್ಞಾನದೊಡನದರ ಕಾರ್ಯಮಾದ ಶರೀರಾದಿ ಕವಳಿದು ವಿದೇಹಕೈವಲ್ಯ ಮಾಗಬೇಕಂತಾಗದೆ ಮಧ್ಯದಲ್ಲಿ ಜೀವನ್ಮುಕ್ತಿಕಲ್ಪನೆ ಯೆಂತಾಗುವದೆಂದೊಡೆ ವಿವೇಕದಿಂ ರಜ್ಜುವಿನಲ್ಲಿ ಆ ಸರ್ಪಭ್ರಾಂತಿ ಕೆಟ್ಟೊಡಂ

ತತ್ಕಾರ್ಯರ್ಮವಾದ ಭಯಕಂಪಾದಿಗಳಿಪ್ಪಂತೆ ಜ್ಞಾನದಿಂದಜ್ಞಾನವಳಿದೊಡು ಅದರ ಕಾರ್ಯರ್ಮವಾದ ಶರೀರಾದಿಗಳಿಗೆ ಸ್ಥಿತಿಯುಂಟಾಗಿ ಬ್ರಹ್ಮವಿದ್ಯೋತ್ಪತ್ತಿ ಸಮಕಾಲದೊಳು ನಿಶ್ಶೇಷವಾಗಿ ಅಜ್ಞಾನದೊಡಗೂಡಿ ದೇಹಪಾತವಾಗೆ ಬ್ರಹ್ಮವಿದ್ಯಾಸಂಪ್ರದಾಯ ವಿಚ್ಛಿತ್ತಿಯಹುದಾಗಿಯುಂ ಬಳಿಕಂತಾದೊಡೇನಾ ಯಿತೆನೆ ಪರಶಿವನಿಂ ಬ್ರಹ್ಮನು, ಬ್ರಹ್ಮನಿಂ ಪ್ರಜಾಪ್ರತಿ, ಪ್ರಜಾಪ್ರತಿಯಿಂ ಮನು, ಮನುವಿನಿಂ ಪ್ರಜೆಗಳರಿದರೆಂದು ಬ್ರಹ್ಮವಿದ್ಯಾಸಂಪ್ರದಾಯ ಪ್ರವರ್ತ ಕರ ಪರಂಪರೆಯಂ ಪೇಳ್ವ ಛಾಂದೋಗ್ಯ ಬೃಹದಾರಣ್ಯಾದಿ ಶ್ರುತಿವಿರೋಧಮ ಹುದಾಗಿಯುಂ, ಮತ್ತಂಬಿಲುಗಾರನಿಂ ಬಿಡಲ್ಪಡತಕ್ಕ ಕೋಲು ಬಿಲ್ಲಿನ ಹೆದೆ ಯೊಳು ಸಂಧಾನಮಾಡಿರುವದಂ ಬಿಡದಂತೆ ಸಂಚಿತಕರ್ಮಭೋಗವಂ ತಪ್ಪಿ ಸಬಹುದಾದರು, ಬಿಡಬೇಕಾದ ಕೋಲಂ ಸಂಧಾನವೇಗೊಳಿಸದಂತೆ ಆಗಾ ಮಿಕರ್ಮಕ್ಕವಕಾಶವೇ ಇಲ್ಲದೆ ಮಾಡಿದೊಡಂ ಹೆದೆಯಿಂ ತೆಗೆದೆಚ್ಚಲ್ಪಟ್ಟಿರುವ ದಂತರಾಳದೊಳು ನಿಲ್ಲದೆ ವೇಗಸಂಸ್ಕಾರಬಲವಿರುವ ಪರ್ಯಂತಮುಂ ಪೋಗಿ ಬೀಳ್ವಂತೆ ಫಲಭೋಗಕ್ಕೊಡಂಬಟ್ಟಂಗೀಕರಿಸಲ್ಪಟ್ಟಿರ್ದಿರುವೀ ವರ್ತಮಾನ ಜನ್ಮವೆಂಬ ಪ್ರಾರಬ್ಧಕರ್ಮವು "ನಾಭುಕ್ತಂ ಕ್ಷೀಯತೆ ಕರ್ಮ ಕಲ್ಪಕೋಟಿ ಶತೈರಪಿ। ಅವಶ್ಯಮನು ಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ॥" ಎಂಬ ಪ್ರಮಾಣದಿಂ ನಿಯತಾನುಭಾವ್ಯಮಾಗಿರಲ್ಕೆ ಜ್ಞಾನಿಗೆ ಜೀವನ್ಮುಕ್ತಿ ಸಿದ್ಧಿಸ ಲೋಸುಗಮಾಗಿ ಪ್ರಾರಬ್ಧ ಕರ್ಮವಾಸನೆ ಅಜ್ಞಾನಲೇಶಭಾವಂಗಳನಂಗೀ ಕರಿಪುದರಿಂ ದೇಹಸ್ಥಿತಿಯುಂ ಶಿಷ್ಯೋಪದೇಶಾದಿಕವುಂ ಸಿದ್ಧಿಸುತಿರ್ಕುಂ.

## ೧೭೫. ಜ್ಞಾನಪ್ರಭಾವ

ಮತ್ತಮಾ ಜೀವನ್ಮುಕ್ತಂಗೆ ಪ್ರಾರಬ್ಧವಾಸನೆಯುಮಾತ್ರ ಬಿಡದೆನೆ "ಜ್ಞಾನಾಗ್ನಿಸ್ಸರ್ವಕರ್ಮಾಣಿ ಭಸ್ಮಸಾತ್ಕುರುತೆ" ಎಂಬ ಪ್ರಮಾಣದಿಂ ಜ್ಞಾನಾಗ್ನಿಯು ಆ ವಾಸನೆಯನುಂ ಪೋಗಗೊಳಿಸದೇತಕೆನೆ ಸಂಚಿತಕರ್ಮವು ಜ್ಞಾನಾಗ್ನಿಯಿಂದೆ ಸುಬುಲ್ಲಸುಂಕಿನಂತುರಿದು ಪೋಗೆ ಪ್ರಾರಬ್ಧಕರ್ಮವು ಉಂಡು ತೀರುವದು. ಆಗಾಮಿ ಕರ್ಮವು ಅನಧಿಕಾರಿಯಪ್ಪುದರಿಂ ಫಲಿಸ ದೆಂದರಿವುದು. ಮತ್ತಮಾ ಜ್ಞಾನಾಗ್ನಿಯಿಂ ದಗ್ಧಮಾದ ಕರ್ಮವೇ ಪ್ರಾರಬ್ಧಭೋಗವನೀವುದರಿಂ ಮುಂದೆ ದೇಹೋತ್ಪತ್ತಿಯಮಾಡಲುಳ್ಳದ್ದೆಂ ದೊಡೆ ಹುರಿದ ಚಣಕಾದಿ ಬೀಜವು ಭೋಗಮಾತ್ರಕ್ಕೆ ಯೋಗ್ಯವಲ್ಲದೆ ಅಂಕು

ರೋತ್ಪತ್ತಿಗೆ ಕಾರಣವಾಗದಂತೆ ಜ್ಞಾನಿಯ ಕರ್ಮವು ಪ್ರಾರಬ್ಧ ಭೋಗ ದಿಂದಲೇ ತೀರುವದಾಗಿ ಜನ್ಮಾಂತರಕ್ಕೆ ಹೇತುವಲ್ಲವೆಂದು ತಿಳಿಯಲ್ಪೇಳ್ಕುಂ.

## ೧೭೬. ಜನ್ಮಾವಧಿ

ಮತ್ತಮಾ ಪ್ರಾರಬ್ಧ ಕರ್ಮವಾದೊಡೆ ಲೋಕಯಾತ್ರೆಗಳನಧಿಕರಿಸಿದ ಅಸ್ಮದಾದಿನರರ್ಗೆ ಏಕದೇಹದಲ್ಲೇ ಭೋಗದಿಂ ಪರಿಹರವಹುದು. ಲೋಕಯಾತ್ರೆಯೊಳಗಧಿಕೃತರಾದ ಮನು ವ್ಯಾಸಾದಿ ಮಹಾಪುರುಷರ್ಗೆ ದಶಸಂಖ್ಯಾಕ ದೇಹಗಳಿಂದಲ್ಲದೆ ತೀರದಾದೊಡಂ ಜ್ಞಾನಕ್ಕೆ ತಿರೋಧಾನವಿಲ್ಲಾಗಿ ಬಾಲ್ಯ ಕೌಮಾರಾದಿ ಭೇದವಮುಂಟಾದೊಡಂ ನರನಿಗೊಂದೇ ದೇಹಮಿಪ್ಪಂತರಿಯ ಲ್ಪೇಳ್ಕುಂ.

## ೧೭೭. ಜ್ಞಾನಿಗೆಭೋಗಸಿದ್ಧಿ

ಬಳಿಕ ಸಕಲ ವಿಷಯಂಗಳಿಗುಂ ಮಿಥ್ಯಾತ್ವಮಂ ಸಾಧಿಸುತಿರ್ದ ಜ್ಞಾನ ಕ್ಕಿಯುಂ ವಿಷಯಂಗಳಿಗೆ ಸತ್ಯತ್ವಮುಂ ಸಂಪಾದಿಸುತಿರ್ದ ಪ್ರಾರಬ್ಧಭೋಗ ಕ್ಕೆಯುಂ ಅನ್ಯೋನ್ಯ ವಿರೋಧಮುಂಟಾಗಿ ಜ್ಞಾನಿಗೆಂತು ಭೋಗಸಿದ್ಧಿಯಹು ದೆನೆ ಮಿಥ್ಯಾತ್ಮಕ ಸ್ವಪ್ನೇಂದ್ರಜಾಲಾದಿಗಳಲ್ಲಿ ಕ್ರಮದಿಂ ವನಿತಾದಿ ಸ್ವರ್ಗಾದಿ ತೋರ್ಕೆಗಳಿಂ ಮೈಥುನಾದಿ ವಿಸ್ಮಯಾದಿ ನಿಜಭೋಗವಹುದೆಂತಂತೆ ವ್ಯಾವ ಹಾರಿಕಪ್ರಾರಬ್ಧ ಭೋಗದೊಳು ವಿಷಯುಗಳಿಗೆ ಸತ್ಯತ್ವಮುಂಟಾದಲ್ಲದಾಗ ದೆಂಬ ನಿಯಮವಿಲ್ಲಾಗಿ ಪ್ರಾರಬ್ಧಭೋಗಕ್ಕೆಯುಂ ಜ್ಞಾನಕ್ಕೆಯುಂ ಅನ್ಯೋನ್ಯ ವಿರೋಧಮಿಲ್ಲದರಿಂ ಜ್ಞಾನಿಗೆ ಪ್ರಾರಬ್ಧಭೋಗ ಮುಂಟೆಂದು ವಿದಿತವಕ್ಕುಂ.

## ೧೭೮. ಭೋಗದೃಷ್ಟಾಂತ

ಬಳಿಕಿಲ್ಲಿ ಭ್ರಾಂತಿ ಕೆಟ್ಟಾಕ್ಷಣವೇ ಶುಕ್ತಿಯ ರಜತಸ್ವರೂಪಕ್ಕೆ ಹಾನಿ ಯಪ್ಪಂತೆ ಜ್ಞಾನದಿಂದಜ್ಞಾನವಳಿದಾಗಲೇ ಜಗತ್ಪ್ರಪಂಚದ ತೋರ್ಕೆಯೇ ಇಲ್ಲಾಗಿ ವಿವೇಕಿಗೆ ಪ್ರಾರಬ್ಧಭೋಗವೆಂತಪ್ಪುದೆಂದೊಡೆ ಶುಕ್ತಿಕಾ ರಜತ ಭಾನಮೆಂಬಿದು ನಿರುಪಾಧಿಕ ಭ್ರಮೆಯಪ್ಪುದರಿಂದ ಅಲ್ಲಿ ತಿಳಿದಾಗಲೇ ರಜತ ಸ್ವರೂಪ ಮಿಥ್ಯೆಯಹುದು. ಈ ಸೋಪಾಧಿಕ ಭ್ರಮೆಯೊಳಂತಲ್ಲವದೆಂತೆನೆ ತಿಳಿಗೊಳನ ತೀರದಲ್ಲಿರ್ದ ಮನುಷ್ಯನು ತಾನಾ ಜಲದೊಳಧೋಮುಖನಾಗಿ ರ್ಪುದು ಪುಸಿಯೆಂಮ ತನ್ನಲ್ಲಿಯೇ ವಿವೇಕತತ್ಪರನಾಗಿದ್ದರೂ ಅಂತಧೋಮು

ಖರೂಪ್ಪು ತೋರುತಿರ್ಪಂತೆ ಅಹಂಕಾರ ಸಂಬಂಧಮಾದ ಜೀವಭಾವಾದಿ ಕವೇ ಮಿಥ್ಯೆ. ಸತ್ಯಮಾದ ಪ್ರತ್ಯಗಾತ್ಮನೇ ತಾನೆಂದರಿದರೂ ಜೀವತ್ವಾದಿ ಪ್ರಪಂಚವಿಹುದಾಗಿ ಜೀವನ್ಮುಕ್ತಂಗೆ ಪ್ರಾರಬ್ಧಭೋಗ ವ್ಯವಹಾರಮುಂಗೀಕೃತಮಕ್ಕುಂ.

### ೧೭೯. ಜೀವನ್ಮುಕ್ತ ಸದ್ಗುಣ

ಮತ್ತಮಾ ಜೀವನ್ಮುಕ್ತಂಗೆ ಮೈತ್ರಿ, ಕರುಣೆ, ಮುದಿತೆ, ಉಪೇಕ್ಷೆ ಎಂಬ ಸದ್ಗುಣಚತುಷ್ಟಯಮುಂಟದರಲ್ಲಿ ಸತ್ಪುರುಷರೊಡನೆ ಸ್ನೇಹವೇ ಮೈತ್ರಿಯೆನಿಸುವದು ದುಃಖಾತ್ಮಕರಲ್ಲಿ ಮರುಕವೇ ಕರುಣೆಯೆನಿಸುವದು. ಪುಣ್ಯಕಾರಿಗಳಲ್ಲಿ ಸಂತೋಷವೇ ಮುದಿತೆಯೆನಿಸುವದು. ಪಾಪಿಗಳಲ್ಲಿ ರಾಗ ದ್ವೇಷಾದಿಕವಿಲ್ಲದಿಹುದೇ ಉಪೇಕ್ಷೆಯೆನಿಸುವದು.

### ೧೮೦. ಜೀವನ್ಮುಕ್ತ ಪ್ರಯೋಜನಪಂಚಕ

ಬಳಿಕ ಜೀವನ್ಮುಕ್ತಂಗೆ ಜ್ಞಾನರಕ್ಷೆ, ತಪಸ್ಸು, ಸರ್ವಸಂವಾದ, ದುಃಖ ಸಂಕ್ಷಯ, ಸುಖಾವಿರ್ಭಾವವೆಂಬವೇ ಪಂಚಪ್ರಯೋಜನಂಗಳವುಗಳೊಳು ವಾಸನಾಕ್ಷಯ ಮನೋನಾಶಂಗಳಿಂ ಬುದ್ಧಿ ನಿರ್ಮಲವಾಗಿರ್ಪುದೇ ಜ್ಞಾನ ರಕ್ಷೆ ಯೆನಿಸುವದು. ಬಳಿಕದರತ್ತಣಿಂ ಕರಣೈಕ್ಯದಿಂ ಲಕ್ಷ್ಯೈಕಾಗ್ರತೆಯೇ ತಪಸ್ಸೆನಿಸುವದು. ಬಳಿಕಾ ತಪೋನಿಷ್ಠನಂ ಆಬಾಲಪಂಡಿತಮಾಗಿ ಸರ್ವರುಂ ಯೋಗೀಶ್ವರನೆಂದು ಸ್ತುತಿಸಿ ನಮಸ್ಕಾರಾದಿಗಳಿಂ ಬಹುಮಾನಂ ಗೈವುದೇ ಸರ್ವಸಂವಾದವೆನಿಸುವದು. ಬಳಿಕ ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶಗಳೆಂಬ ಪಂಚಕ್ಲೇಶಂಗಳಿಲ್ಲದಿರುವದೇ ದುಃಖಸಂಕ್ಷಯವೆನಿಸುವದು. ಬಳಿಕಾ ಸಾಧನಗಳಿಂದಾತಗೊಂದು ಪ್ರತಿಬಂಧಕವಿಲ್ಲದಿರುವದೇಸುಖಾವಿರ್ಭಾವವೆನಿಸುವದು. ಇಂತೀ ಪ್ರಯೋಜನಂಗಳೈದರೊಳು ಜ್ಞಾನಿಗೆ ನಿರಂಕುಶ ವೃತ್ತಿಯಪ್ಪುದರಿಂದಡ್ಡಿಯಿಲ್ಲದಿಹ ಸುಖಾವಿರ್ಭಾವವೇ ಮುಖ್ಯಮೆಂದು ಪೇಳ್ಕುಂ.

### ೧೮೧. ಜ್ಞಾನಚಿಹ್ನೆಗಳು

ಬಳಿಕ ಕಾಮ ಕ್ರೋಧಾದಿ ಅರಿಷಡ್ವರ್ಗವು ಮುಮುಕ್ಷುಗಳಿಗನುಗ್ರಹಾರ್ಥಮಾಗಿ ನಟನೆಮಾತ್ರವಲ್ಲದೆ ಅವುಗಳಿಗೊಳಪಡದೆ ನಿರ್ಲಿಪ್ತನಾಗಿಪ್ಪ

ದೆಂತೆನೆ ಮುಮುಕ್ಷುಗಳಿಗಭಿರುಚಿಯುಂಟಾಗಬೇಕಾಗಿ ಶಿವಧ್ಯಾನಾದಿಗಳಂ ಮಾಡಬೇಕೆಂಬ ಕಾಮ, ಅಸದ್ವಿಷಯದೊಳು ಕ್ರೋಧ, ಅಪಾತ್ರಂಗೆ ಕೊಡಬಾರದೆಂಬುದರಿಂ ಬ್ರಹ್ಮವಿದ್ಯೆಯಂ ಪೇಳ್ವುದರೊಳು ಲೋಭ, ಪರರಿಗುಪಕೃತಿ ಮಾಡಬೇಕೆಂಬುದರಿಂ ದುಃಖಿಗಳೊಳು ದಯೆ ಎಂಬ ಮೋಹ, ಅಸದ್ವಿಷಯಗಳಂ ಪರಿಗ್ರಹಿಸದೆ ಶಿಷ್ಟನಾಗಿರುವೆನೆಂಬ ಮದ, ಇಂದ್ರಿಯಂಗಳಂ ಗೆಲ್ವೆನೆಂಬ ಮಾತ್ಸರ್ಯವೆಂಬಿವಂ ನಟಿಸುವಿಕೆ, ಸ್ವಭಾವಸಿದ್ಧಮಾದ ದೃಢತರಮಪ್ಪ ಶಾಂತಿ, ಸಾತ್ವಿಕಸಂಪತ್ತು, ಸರ್ವಭೂತಸಮತ್ವ, ವೈರಾಗ್ಯ, ಅಧ್ಯಾತ್ಮನಿಷ್ಠೆ, ನಿಶ್ಚಲಸ್ಥಿತಿ, ಅಹಂಕಾರಮಮಕಾರವರ್ಜ್ಯ, ನಿತ್ಯಸಂತುಷ್ಟಿ, ಭಯಶೋಕರಾಹಿತ್ಯ, ಪಾರಿಶುದ್ಧ್ಯ, ತನ್ನಂತೆ ಶಿಷ್ಯನಂ ಮಾಳ್ಪಶಕ್ತಿ ಎಂಬೀ ಹನ್ನೆರಡು ಗುಣಂಗಳುಂ ಜ್ಞಾನಿಗೆ ಚಿಹ್ನೆಗಳಕ್ಕುಂ.

## ೧೮೨. ಗುಣಪ್ರಾಚುರ್ಯ

ಬಳಿಕ ಜ್ಞಾನಿಯಾದ ಜೀವನ್ಮುಕ್ತನು ಪ್ರಾಯಿಕಮಾಗಿ ಎಂಥವರ ಸಹವಾಸ ಮಾಳ್ಪನಾವಾವ ಗುಣಂಗಳೊಳಗಭಿರುಚಿ ಲೀಲಾನಟನೆಯಂ ಮಿಗೆ ತೋರ್ಪನೆನೆ ಅಹಿಂಸೆ, ಪರೋಪಕಾರ, ಶೌಚ, ತಪಸ್ಸು, ಸತ್ಯ, ಶಾಂತಿ, ದಾಂತಿ, ತಿತಿಕ್ಷೆ, ದಯೆ, ದಾಕ್ಷಿಣ್ಯ, ಮೃದುತ್ವ, ವಿರಕ್ತಿ, ಪುಣ್ಯ, ವಿವೇಕ, ಪಾರಿಶುದ್ಧ್ಯ, ಶ್ರವಣಾದಿ ಸಾಧನ, ದೀನತ್ವ, ದೈವಭಕ್ತಿ ಮುಂತಾದವುಗಳಂ ತೋರಿ ಎಂತವರುಗಳಲ್ಲಿಯುಂ ಪ್ರಾಯಿಕಮಾಗಿ ಸುಳಿದಾಡುತಿರ್ಪಂ.

## ೧೮೩. ಜ್ಞಾನಿಯಿಂದೀಲೋಕಕ್ಕೆ ಪ್ರಯೋಜನ

ಮತ್ತಮಾ ಜೀವನ್ಮುಕ್ತನಿದ್ದ ದೇಶದೊಳು ನಿರುಪದ್ರವಮಾಗಿರ್ಪುದಲ್ಲದೆ ಶಿಷ್ಯರು, ಭಕ್ತರು, ಉದಾಸೀನರು, ಪಾಪಿಗಳೆಂಬ ನಾಲ್ಕು ತೆರನಾದ ಜನಗಳುಂ ಜ್ಞಾನಿಯಿಂದನುಗ್ರಹಿಸಿಕೊಳ್ಳುವರದೆಂತೆನೆ—ತತ್ತ್ವೋಪದೇಶಂಗೈವ ಜೀವನ್ಮುಕ್ತನಲ್ಲಿ ಶಿಷ್ಯಂಗೆ ವಿಶ್ವಾಸದಿಂ ಜ್ಞಾನಸಿದ್ಧಿಯುಂ, ಬಳಿಕನುರಾಗದಿಂದಾತನಂ ಆರಾಧಿಸುವ ಭಕ್ತಂಗೆ ಸುಕೃತಾತಿಶಯಮುಂ, ಬಳಿಕಾತನ ಸಚ್ಚರಿತ್ರೆಯಂ ಕಂಡ ಉದಾಸೀನಂಗೆ ಪುಣ್ಯಕೃತ್ಯಾಭಿರತಿಯುಂ, ಬಳಿಕಾತನ ದರ್ಶನ ಸ್ಪರ್ಶನಾದಿಗಳಿಂ ಪಾಪಿಗೆ ಪಾಪಕ್ಷಯಮುಂ ಸಿದ್ಧಿಸುತಿರ್ಕುಂ.

## ೧೮೪. ಉಪದೇಶ ಸಂಗತಿ

ಬಳಿಕಿಲ್ಲಿ ಕರ್ತೃತ್ವಾದಿಕಮಿಲ್ಲದೆ ಜೀವನ್ಮುಕ್ತನಿಂ ವೇದಾಂತವಾಕ್ಯ

ಶಕ್ತಿ, ತಾತ್ಪರ್ಯ, ಪ್ರಮಾಣ ಅನುಕೂಲತರ್ಕ, ದೃಷ್ಟಾಂತ, ಯುಕ್ತಿಗಳಿಂ ಯತ್ನಪುರಸ್ಸರವಾಗಿ ಬ್ರಹ್ಮೋಪದೇಶಾದಿಕವೆಂತು ಘಟಿಸುವದೆನೆ—ಅತಿರೋಹಿತ ಬ್ರಹ್ಮಸ್ವರೂಪನಪ್ಪುದರಿಂ ರಾಗದ್ವೇಷಾದಿಗಳಿಲ್ಲದೀಶ್ವರಂಗೆ ಅನುಗ್ರಾಹ್ಯ ನಿಗ್ರಾಹ್ಯವು, ಜನರ ಸುಕೃತ ದುಷ್ಕೃತವಶದಿಂದ ಅನುಗ್ರಹನಿಗ್ರಹಚೇಷ್ಟೆ ದೊರಕೊಂಬಂತೆ ಸಾಧಕರ ಸುಕೃತಾದಿ ಪ್ರಭಾವದಿಂ ಜ್ಞಾನಿಯಿಂದುಪದೇಶಾದಿಗಳಹವೆಂಬುದೇ ಸಿದ್ಧಮಕ್ಕುಂ.

## ೧೮೫. ಜೀವನ್ಮುಕ್ತರ ಪ್ರಾರಬ್ಧವು

ಬಳಕಿಲ್ಲಿ ಜೀವನ್ಮುಕ್ತರಿಂತು ಪೇಳ್ದ ಲಕ್ಷಣದಿಂದಿರದೆ ಪ್ರಾರಬ್ಧಬಲದಿಂ ಬಹುಪ್ರಕಾರಮಾಗಿರ್ಪರದೆಂತೆನೆ—ಪ್ರಾರಬ್ಧಕರ್ಮ ಸಂಸ್ಕಾರವೆಂಬುವದು ತೀವ್ರವೆಂತಲೂ, ಮಧ್ಯವೆಂತಲೂ, ಮಂದವೆಂತಲೂ, ಸುಪ್ತವೆಂತಲೂ, ನಾಲ್ಕು ತೆರನಾಗಿಪುದದರಲ್ಲಿ ಸಮ್ಯಜ್ಞಾನಿಯಾದರೂ ಭೋಗದಲ್ಲಿಯೇ ತತ್ಪರನಾಗಿ ಪಶುವಿನಂತಾತ್ಮ ಪ್ರೀತನಹುದೇ ತೀವ್ರಸಂಸ್ಕಾರವೆನಿಸುವದು. ಭೋಗವೇ ಮುಖ್ಯವಾಗಿದ್ದರೂ "ಗಚ್ಛನ್ ತಿಷ್ಠನ್ ಸ್ವಪನ್ ಜಿಘ್ರನ್" ಎಂಬಂತೆ ಸರ್ವದಾ ತಾನಾತ್ಮತತ್ಪರನಾಗಿ ಬಾಲಕನಂತೆ ವಿನೋದದಿಂದಿರ್ಪುದೇ ಮಧ್ಯಸಂಸ್ಕಾರವೆನಿಸುವುದು. ಸಕಲಭೋಗವನುಳಿದು ಪರಮಾತ್ಮನಲ್ಲಿಯೇ ತತ್ಪರನಾಗಿ ಸುರತಸುಖಿ ಮಿಥುನದಂತೆ ನಿಜಾನಂದದಿಂದಿರ್ಪುದೇ ಮಂದಸಂಸ್ಕಾರವೆನಿಸುವದು. ಸರ್ವವ್ಯಾಪಾರವಳಿದು ನಿರುಪಾಧಿಕಾತ್ಮನಲ್ಲಿಯೇ ತತ್ಪರನಾಗಿ ಪರಮುಕ್ತನಂತೆ ಪರಮಸುಖದಿಂದಿರ್ಪುದೇ ಸುಪ್ತಸಂಸ್ಕಾರಮಕ್ಕುಂ. ಬಳಿಕಿಂತು ನಾಲ್ಕು ಪ್ರಕಾರಮಾದ ಪ್ರಾರಬ್ಧ ಕರ್ಮವಿಚಿತ್ರ ವಿಲಕ್ಷಣ ಸಂಸ್ಕಾರವಶದಿಂ ಜೀವನ್ಮುಕ್ತರು ನಾನಾವರ್ತನಂಗಳಿಂದಿದ್ದರೂ ಋಜು ಕುಟಿಲ ಗತಿಗಳುಳ್ಳ ನದಿಗಳು ಕಡಲೊಳಗೊಂದಪ್ಪಂತೆ ಕಡೆಯೊಳು ಬ್ರಹ್ಮಸ್ವರೂಪಮಾಗಿರ್ಪ ವಿದೇಹಕೈವಲ್ಯಸುಖಮೊಂದೇ ಬಗೆಯಾಗಿ ಪಡೆವರೆಂದು ಸಿದ್ಧಮಕ್ಕುಂ.

## ೧೮೬. ಪ್ರಾರಬ್ಧತ್ರಯವು

ಬಳಿಕ ಇಚ್ಛಾಪ್ರಾರಬ್ಧ, ಅನಿಚ್ಛಾಪ್ರಾರಬ್ಧ. ಪರೇಚ್ಛಾಪ್ರಾರಬ್ಧವೆಂಬ ತ್ರಿವಿಧ ಪ್ರಾರಬ್ಧಂಗಳು ಬ್ರಹ್ಮಾದಿಗಳಿಂದಲೂ ನಿವಾರಿಸಲಶಕ್ಯಮಾಗಿರ್ಪವಪ್ಪುಗಳಲ್ಲಿ ಅಪಥ್ಯಸೇವನಾದಿಕದಿಂ ತನಗೆ ಬಪ್ಪನರ್ಥವನರಿತಿದ್ದರುಂ ರಾಗೋ

ತ್ಕರ್ಷದಿಂ ಬಿಡಲೀಯದೇ ಮಾಡಿಸುವದೇ ಇಚ್ಛಾಪ್ರಾರಬ್ಧವೆನಿಸುವದು. ತಾನು ಮಾಡಲೊಲ್ಲೆನೆಂದರೂ ಸಿಟ್ಟಡರ್ದು ರಾಜಾಜ್ಞೆಯಂತೆ ಕ್ಷಿಪ್ರಾನಿವಾರ್ಯವಾಗಿ ಬಲಾತ್ಕರಿಸಿ ಹಿಂಸಾದಿ ಪಾಪಕರ್ಮವಂ ಮಾಡಿಸುವುದೇ ಅನಿಚ್ಛಾಪ್ರಾರಬ್ಧವೆನಿಸುವದು, ತನಗಿಚ್ಛಾನಿಚ್ಛೆಗಳಿಲ್ಲದಿದ್ದರೂ ಪರದಾಕ್ಷಿಣ್ಯವೆಂಬುವದು ಬಿಡದೆ ಸುಖದುಃಖಾದಿಕವನುಣಿಸುವದೇ ಪರೇಚ್ಛಾ ಪ್ರಾರಬ್ಧವೆನಿಸುವದು.

## ೧೮೭. ಜೀವನ್ಮುಕ್ತರು

ಇಂತು ಬ್ರಹ್ಮಾತ್ಮೈಕ್ಯಾನುಸಂಧಾನ ವಿಧ್ವಸ್ತದ್ವೈತಬಂಧ ರಹಿತನದಿಂ ಬ್ರಹ್ಮಭೂತರಾದ ಜೀವನ್ಮುಕ್ತರು ಜ್ಞಾನಕ್ಕೆ ವಿರುದ್ಧವಾಗಿರುವ ವಿಲಕ್ಷಣ ಚರ್ಯೆಗಳಿಂ ಪ್ರಾರಬ್ಧವನನುಭವಿಸುವ ರದೆಂತೆನೆ "ಕೃಷ್ಣೋ ಭೋಗೀ ಶುಕಸ್ತ್ಯಾಗೀ ನೃಪೌಜನಕರಾಘವೌ। ವಶಿಷ್ಠಃ ಕರ್ಮಕರ್ತಾಚ ಪಂಚೈತೇ ಜ್ಞಾನಸಮ್ಮತಾಃ॥ ದತ್ತಾತ್ರೇಯಸ್ತಥೋನ್ಮತ್ತಃ ಪ್ರಹ್ಲಾದೋ ಭಕ್ತಿನಮ್ರಧೀಃ। ನಾರದೋ ಗಾನಲೋಲಸ್ತು ಸನಕಾದ್ಯಾಸ್ತು ಯೋಗಿನಃ॥ ಹನುಮಾನಪಿ ದೂತೋಽಭೂಜ್ಜೀವನ್ಮುಕ್ತಾ ಇಮೇ ಮತಾಃ" ಎಂಬುದಾಗಿ ಸನಕ, ಜನಕ, ಭಾರತ, ಯಾಜ್ಞವಲ್ಕ್ಯ, ಶುಕ, ವಾಮದೇವ, ಗೌತಮ, ಪ್ರಹ್ಲಾದ, ವಿಶ್ವಾಮಿತ್ರ, ವಶಿಷ್ಠ, ದೂರ್ವಾಸ, ನಾರದ, ಸೌಭರಿ, ಭೃಗು ದಧೀಚಿ, ಶ್ವೇತಕೇತು, ದತ್ತಾತ್ರೇಯ, ರಾಮ, ಕೃಷ್ಣ, ವಾಯುಪುತ್ರ, ಭರದ್ವಾಜ, ಶಕ್ರ, ರಾವಣ, ಬಾಣ, ವೃಷಭ, ಭರತಾದಿಗಳ ವರ್ತನಾಭೇದಂಗಳೇ ನಿದರ್ಶನವಾಗಿರ್ಕುಂ.

## ೧೮೮. ಜ್ಞಾನ್ಯಜ್ಞಾನಿಭೇದ

ಬಳಿಕಿಲ್ಲಿ ಪ್ರಾಬ್ಧಭೋಗವನಂಗೀಕರಿಸೆ ಅಜ್ಞಾನಿ ಜ್ಞಾನಿಗಳಿಗೇನು ಭೇದಮೆಂದೊಡೆ ವ್ರಾತ್ಯಶ್ರೋತ್ರಿಯರ್ಗೆ ವೇದಾಧ್ಯಯನ ಪರಿತ್ಯಾಗ, ವೇದಾಧ್ಯಯನ ಯುಕ್ತತೆಗಳಿಂದಲೇ ಭೇದವಲ್ಲದೆ ನಿದ್ರಾಹಾರಾದಿಗಳಿಂ ಭೇದತೋರದಂತೆ ಅಜ್ಞಾನಿ ಜ್ಞಾನಿಗಳಲ್ಲಿ ಹೃದಯ ಗ್ರಂಥಿಯ ಸಂಬಂಧಾಸಂಬಂಧಗಳಿಂ ಭೇದವೈಸೆ ಭೋಗಸ್ಥಿತಿಯಿಂ ಭೇದವಿಲ್ಲದಿರ್ಕುಂ.

## ೧೮೯. ಸ್ವನಾಶಪ್ರಯತ್ನೋಪಪತ್ತಿ

ಬಳಿಕ ತತ್ವಜ್ಞಾನದಿಂ ಬ್ರಹ್ಮಪ್ರಾಪ್ತಿಯಾಗೆ ವ್ಯಾಘ್ರಸಂದಷ್ಟನಂತೆ

ಜೀವತ್ವಂ ಕೆಡುಗುವುದಾಗಿ ತನ್ನ ನಾಶಕ್ಕೆಂತು ಜೀವಂ ಪ್ರವರ್ತಿಪನೆಂದೊಡೆ ಎಂತು ಲೋಕದಲ್ಲಿ ದೇವತ್ವದಭಿವಾಂಛೆಯಿಂ ಭೃಗು, ಅಗ್ನಿ, ಗಂಗೆ, ಪ್ರಯಾಗ, ಕುರುಕ್ಷೇತ್ರ, ಮಹಾಪಥಗಳಲ್ಲಿ ನರತ್ವಪರಿತ್ಯಾಗವನಂಗೀಕರಿಸುತಿರ್ಪ ನರರಂತೆ ಪ್ರತ್ಯಗಾತ್ಮರೂಪ ಬ್ರಹ್ಮತ್ವದಿಂದಿರಲೋಸುಗಮಾಗಿ ತತ್ವಜ್ಞಾನದಿಂ ತನ್ನ ನಾಶವನೊಡಂಬಡುತಿರ್ಪನೆಂಬುದೇ ಪ್ರಸಿದ್ಧಮಕ್ಕುಂ.

## ೧೯೦. ಜೀವನ್ಮುಕ್ತ ಪ್ರಶಂಸೆ

ಬಳಿಕ ವ್ಯಾಸಾದಿಗಳಂತೆ ಶಾಪಾನುಗ್ರಹಸಾಮರ್ಥ್ಯಮಾವಾತಂಗುಂಟಾದೊಡಾತನೇ ತತ್ವಜ್ಞಾನಿಯಲ್ಲದೆ ಬೇರೊಬ್ಬನಿಲ್ಲೆನಲಾ ಸಾಮರ್ಥ್ಯವು ತಪಸ್ಸಿನ ಫಲವೈಸೆ, ತತ್ವಜ್ಞಾನದ ಫಲವಲ್ಲವೆಂದು ಕಾಂಬುದು. ಬಳಿಕಂತಾದೊಡೆ ತತ್ವಜ್ಞಾನಕ್ಕೆ ತಪವೇ ಮೂಲವೆಂಬ ಶ್ರುತಿಯುಂಟಾಗಿ, ತಪೋರಹಿತನಿಗೆ ತತ್ವಜ್ಞಾನವೆತ್ತಣದೆನೆ—ಶಾಪಾದಿಗಳಿಗೆ ಕಾರಣಮಾದ ಕಾಮ್ಯತಪದಿಂದನ್ಯಮಾದ ನಿಷ್ಕಾಮ್ಯ ತಪಸ್ಸಿನಿಂ ತತ್ವಜ್ಞಾನವಹುದೆಂದು ಪರಾಮರ್ಶಿಂಗೈಯಲಕ್ಕುಂ. ಮತ್ತಮಾ ವ್ಯಾಸಾದಿಗಳಿಗೆ ತತ್ವಜ್ಞಾನ ಸಾಮರ್ಥ್ಯಂಗಳೆರಡುಂ ಉಂಟೆನಲವರ್ಗೆ ಉಭಯವಿಧತಪಮುಂ ಸಿದ್ಧಿಸಿತಾಗಿ ಜ್ಞಾನಸಾಮರ್ಥ್ಯಗಳೆರಡೂ ಸಂಭವಿಸುತ್ತಿಹವು. ಬಳಿಕೊಂದೇ ತಪವನಾಚರಿಸಿದೊಡಾತಂಗೊಂದೇ ಸಿದ್ಧಿಸುತ್ತಿಹುದಾಗಿ ವಿರೋಧಮಿಲ್ಲ. ಬಳಿಕ ಶಾಪಾದಿಸಾಮರ್ಥ್ಯಮಿಲ್ಲದ ವಿಧಿಶೂನ್ಯನಾದ ತತ್ವಜ್ಞಾನಿಯುಂ ಕ್ರಿಯಾನಿಷ್ಠರೆಲ್ಲರುಂ ನಿಂದಿಸುತ್ತಿಹರಲಾಯೆನಲಾ ಕ್ರಿಯಾನಿಷ್ಠರ್ಗೆಯುಂ ವಿಷಯಲಂಪಟರಾದ ಪಾಮರರಿಂ ನಿಂದ್ಯತ್ವಮುಂಟಪ್ಪುದರಿಂ ವೈಷಮ್ಯವಿಲ್ಲ. ಮತ್ತಮಾ ವಿಷಯಲಂಪಟರಿಂದಾದ ನಿರಾಕರಣದಿಂ ಕ್ರಿಯಾನಿಷ್ಠರಾದ ಶಿಷ್ಟರ್ಗಾವ ಹಾನಿಯೆನೆ ದೇಹವೇ ಆತ್ಮನೆಂಬ ಬುದ್ಧಿಯುಳ್ಳ ಕ್ರಿಯಾನಿಷ್ಠರ್ಮಾಳ್ಪ ದೂಷಣದಿಂ ತತ್ವಜ್ಞಾನಿಗಾವ ಹಾನಿಯೂ ಇಲ್ಲವೆಂಬುವದೇ ಯಥಾರ್ಥಮಕ್ಕುಂ. ಮತ್ತಮಾ ಜೀವನ್ಮುಕ್ತನಲೌಕಿಕನಪ್ಪುದರಿಂ ಪ್ರಾರಬ್ಧದ ತವಕದಿಂ ವಿದ್ವದವಿದ್ವದವಸ್ಥೆಯೊಳಿರ್ದೊಡಂ ಮಾರುತನಿಂ ಶ್ರಿತಾಶ್ರಿತ ಮೇಘಪಟಲ ಗಗನದಂತೆ ನಿತ್ಯನಿರ್ಮಲನಪ್ಪಂ. ಮತ್ತಮಾ ಅದೃಷ್ಟವೆಂಬ ಪರಿಚಾರಕನಿಂ ದತ್ತಮಾದ ಸ್ರಕ್ಚಂದನಾದಿ ಭೋಗಸ್ವೀಕಾರಮಿರ್ದೊಡಂ ನಿಜಭರ್ತೃವಿನೊಡನೆ ಸುರತಂಗೈವ ಪುಂಶ್ಚಲಿಯಂತೆ ಪರಾಗತೆಯುಕ್ಕುಂ. ಮತ್ತಂ ಮೂಢನಂತೆ ಕಲಾಭಿಜ್ಞತ್ವ

ಮೊಳ್ ಮಾನಸನಾಗಿರ್ದೊಡಂ ಕಲ್ಪಿತ ದ್ವೈತ ಪರಶ್ರುತಿವಾಕ್ಯವೈಖರೀ ವಿಷಯದೊಳಲಸನಪ್ಪಂ. ಮತ್ತಂ ಪ್ರಸ್ತುತವನರಿಯದ ಬಹುಭಾಷಣನಂತೆ ಏನನುಡಿದರದುವೇ ಗೂಢಾಭಿಪ್ರಾಯಗರ್ಭಿತವಾದ ಸತ್ಯಾದ್ವೈತನಿಷ್ಠಾ ನಿಗಮಾಭಿಪ್ರಾಯಮಕ್ಕುಂ. ಮತ್ತಮಾಚಾರ್ಯನಂತೆ ಶಿಷ್ಯರನುಪದೇಶಿಸು ತಿರ್ದೊಡಾತ್ಮನು ನಿತ್ಯಮುಕ್ತನಪ್ಪುದರಿಂ ಬೋಧ್ಯಬೋಧಕತ್ವವೇ ಮಾಯಾ ರಚನಾತ್ಮಕವೆಂಬ ಕೃತನಿಶ್ಚಯದಿಂ ಗಗನವಾಣಿಯಂತೆ ಗುರುತ್ವಾಭಿಮಾನ ರಹಿತನಪ್ಪಂ, ಮತ್ತ ಮುನ್ಮತ್ತನಂತೆ ಅನುಚಿತ ವಕ್ತನಾದೊಡಂ ದ್ವೈತ ಭಾವವಳಿದಾತ್ಮಾರಾಮನಪ್ಪುದರಿಂ ಸುರತಾಂತದೊಳಗೆ ರತಿ ಕಾಮಾಸಕ್ತ ಮಿಥನವಾಕ್ಯದಂತೆ ಅನಭಿದೇಯ ವಿಷಯನಕ್ಕುಂ. ಮತ್ತಂ ಪುತ್ರವಿಯೋ ಗಾನುಭವಮುಳ್ಳ ಗ್ರಾಮ್ಯಜನದಂತೆ ಶೋಕಂಗೈಯಲದೇ ಸರ್ವೇಂದ್ರಿಯಂ ಗಳ್ ಬ್ರಹ್ಮಾಂಶಂಗಳೆಂದಾಲೋಚನಂಗೈಯದೇ ಕಲ್ಪಿತಸಾಧಕಾವಸ್ಥೆಯೊಳ್ ದಂಡಿತ ಸರ್ವೇಂದ್ರಿಯ ಧರ್ಮವಿಷಯಮಾದ ಕರುಣಾರಸಮಕ್ಕುಂ. ಮತ್ತಂ ವಿಕೃತ ಬಹುರೂಪದರ್ಶನ ವಿನೋದದೊಳಟ್ಟಹಾಸಂ ಗೈದೊಡಂ ವಿಚಿತ್ರ ಪುಣ್ಯಪಾಪಾದಿ ವ್ಯವಹಾರಮಂ ಸತ್ಯವೆಂದು ಪ್ರತಿಪಾದಿಪ ಮೀಮಾಂಸಾದಿ ದರ್ಶನವಿಷಯಮಾದ ಪರಿಹಾಸಮಕ್ಕುಂ. ಮತ್ತಂ ವಿಟನಂತೆ ಸ್ತ್ರೀಲೋಲ ನಾಗಿರ್ದೊಡಂ ಪೂರ್ಣೈಕಸ್ವಭಾವನಪ್ಪುದರಿಂ ನಿಜಾನಂದಾನುಭವಿಯಪ್ಪಂ. ಮತ್ತಂ ಪಿಶಾಚಗ್ರಹಾವಿಷ್ಟನಂತೆ ಗಡಗಡನೆ ನಡೆದೊಡಂ ಪೂರ್ಣೈಕಸ್ವಭಾ ವನಿಷ್ಠನಪ್ಪುದರಿಂ ವಿರಹಿಯ ಗಮನದಂತೆ ಅಪ್ರಾಪ್ಯಾನುಸಂಧಾನಮಕ್ಕುಂ. ಮತ್ತಂ ಶತ್ರುವಿನಂತಾವಾತನಂ ಕ್ರೋಧದಿಂ ಸಂತಾಪಂ ಬಡಿಸಿದೊಡಂ ಕ್ಷೇತ್ರ ದಾಹಕಾಗ್ನಿಯಂತೆ ವಿಶಿಷ್ಟ ಫಲಸಂಪತ್ತಿಗಾತನನಾಶ್ರಯಂ ಮಾಡುವಾತ ನೆಂದು ವಿಶ್ವಾಸಂ ಗೈಯಲ್ ಪೇಳ್ಕುಂ.

## ೧೯೧. ವಿದೇಹ ಕೈವಲ್ಯ

ಅನಂತರದೊಳಾವ ಕಾಲದಲ್ಲಿಯು ಯಾವದೇಶದಲ್ಲಿಯು ಯಾವುದಾ ನೊಂದು ಶರೀರಂ ಬಡೆಯದೆ ಸಚ್ಚಿದಾನಂದ ಬ್ರಹ್ಮಸ್ವರೂಪದಿಂದಿಹುದೇ ವಿದೇಹಕೈವಲ್ಯಮಕ್ಕುಂ. ಬಳಿಕ ವಿದೇಹಕೈವಲ್ಯವನೈದುವ ಕ್ರಮವೆಂತೆಂ ದೊಡೆ—ಆವನಾದೊಡೋರ್ವಮುಮುಕ್ಷುವಿಗೆ ನಿತ್ಯಕರ್ಮಾನುಷ್ಠಾನಬಲದಿಂ ಧರ್ಮೋತ್ಕರ್ಷಮುಂಟಾಗಿಯದರಿಂ ಸರ್ವಪಾಪ ನಿವೃತ್ತಿಯಾಗೆ ಬಳಿಕ ಚಿತ್ತ

ಶುದ್ಧಿಯಪ್ಪುದದರಿಂ ಸಂಸಾರದೋಷದರ್ಶನವದರಿಂ ವಿಷಯವಿರಕ್ತಿಯದರಿಂ ಮೋಕ್ಷಾಪೇಕ್ಷೆಯದರಿಂ ಬಾಹ್ಯಕರ್ಮೋಪರತಿಯದರಿಂ ಯೋಗಸಿದ್ಧಿಯದರಿಂ ಪ್ರತ್ಯಗಾತ್ಮಾಭಿರತಿಯದರಿಂ ತತ್ವಮಸ್ಯಾದಿ ಮಹಾ ವಾಕ್ಯವಿಚಾರವದರಿಂದ ದ್ವೈತ ಜ್ಞಾನವದರಿಂದವಿದ್ಯಾನಾಶವದರಿಂ ಕಲ್ಪಿತದ್ವೈತಭ್ರಾಂತಿನಷ್ಟವಹುದದರಿಂ ಶುಭಾಶುಭಬುದ್ಧಿ ಪರಿತ್ಯಾಗವದರಿಂ ರಾಗದ್ವೇಷಹಾನಿಯದರಿಂ ವಿಧಿನಿಷೇಧನಾಶನವದರಿಂ ಪುಣ್ಯಪಾಪವಿಮೋಚನವದರಿಂ ದೇಹವಿಚ್ಛಿತ್ತಿಯದರಿಂ ಸರ್ವಪಾಪ ಮೂಲಾಜ್ಞಾನವಾಸನಾನಾಶವಹುದದರಿಂ ಸರ್ವೋತ್ಕರ್ಷವಾದ ಚರಮಮಪ್ಪ ಪುನರಾವೃತ್ತಿರಹಿತವಾದ ಸಕಲಶಾಸ್ತ್ರ ಪರ್ಯಾವಸಾನಮಪ್ಪ ನಾಮ, ಜಾತಿ, ಕ್ರಿಯಾವಾಸನೆ ಪೊಗದ ಮನೋವಾಗಗೋಚರಮಪ್ಪ ನಿತ್ಯಾನಂದ ಸ್ವರೂಪವಾದ ವಿದೇಹಕೈವಲ್ಯಮಹುದೆಂದು ನಿಶ್ಚಿಪ್ಪುದೇ ಶ್ರುತ್ಯಾಚಾರ್ಯಪ್ರಸಾದ ಸಿದ್ಧಿಯಕ್ಕುಂ.

ಇಂತೆಂಬಲ್ಲಿಗೆ ನಿಜಗುಣ ಶಿವಯೋಗೀಂದ್ರ ವಿರಚಿತವಾದ

ವಿವೇಕಚಿಂತಾಮಣಿಯೆಂಬ ಗ್ರಂಥದಲ್ಲಿ ಕೈವ

ಲ್ಯೋಪಾಯ ಕಥನಮೆಂಬ

ಪ್ರಥಮ ಪ್ರಕರಣಕ್ಕೆ

**ಮಂಗಳಮಸ್ತು**

—೦—

# ಸಮಷ್ಟಿ ಪ್ರಕರಣ ಅಂಶ

---

## ಮುರ್ಜೀವನ ಮುನ್ವೃತ್ತಿ ದೋಷಂಗಳು (ಪದಾರ್ಥ ಕೋಶ)

ಬಳಿಕ ವಾಣಿಜ್ಯ, ಕೃಷಿ, ಅಧಿಕಾರ, ಸೇವನ ಯಾಚನೆಗಳಿಂದಲೇ ಕೃಳುಜೀವಿಗಳೆನಿಸಿ, ಸಿದ್ಧವಿದ್ಯೆಯ ಕೀಲು ಕಾಣದ ನರಕುರಿಗಳು, ಕಷ್ಟಾನ್ನ ಭೋಜಿಗಳಾಗಿ, ಅಶುಚಿ, ಅನಿತ್ಯ, ಅನಾತ್ಮ, ಅಸುಖಂಗಳಲ್ಲಿ ಕ್ರಮದಿಂ ಶುಚಿ, ನಿತ್ಯ, ಆತ್ಮ, ಸುಖಗಳ ಭ್ರಾಂತಿಯೆಂಬಧ್ಯಾಸದಿಂ, ಮಾಯೆಯಿಂ ಮೋಹಿಸಿ, ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶಗಳೆಂಬ ಪಂಚಕ್ಲೇಶ ಗಳಿಂ ಘಾಸಿಯಾಗಿ ಜ್ಞಾನ ವಿಕೃತಿಭಾವ, ವರ್ತನ ವಿಕೃತಿಭಾವ, ಮೋಹನ ವಿಕೃತಿಭಾವವೆಂಬ ಭಾವತ್ರಯದಿಂ ಭ್ರಮಿಸಿ ಅರ್ಥೇಷಣ, ಪುತ್ರೇಷಣ, ದಾರೇಷಣವೆಂಬ ಈಷಣತ್ರಯದಿಂ ಕಟ್ಟುವಡೆದು, ಜಾತಿವರ್ಣಾಶ್ರಮ ಕುಲ ಗೋತ್ರನಾಮಂಗಳೆಂಬ ಷಡ್ಭ್ರಮೆಯಿಂ ಭ್ರಾಂತಿಸಿ, ಪ್ರಾಣ, ಬುದ್ಧಿ, ದೇಹಗ ಳಿಗೆ ಕ್ರಮದಿಂದೆರಡೆರಡಾದ ಅಶನ ಪಿಪಾಸೆ, ಶೋಕ ಮೋಹ, ಜರೆ ಮರ ಣವೆಂಬ ಷಡೂರ್ಮಿಯಿಂ ಪ್ರಜ್ಞೆಯಡಗಿ: ತನುವ್ಯಸನ, ರಾಜ್ಯವ್ಯಸನ, ವಿಶ್ವ ವ್ಯಸನ, ಸ್ತ್ರೀವ್ಯಸನ, ಧಾನ್ಯವ್ಯಸನ, ದ್ರವ್ಯವ್ಯಸನ, ವಿದ್ಯಾವ್ಯಸನ, ಉತ್ಸಾ ಹವ್ಯಸನ, ಸೇವಕ ವ್ಯಸನ, ಕಾಷ್ಠವ್ಯಸನಂಗಳೆಂಬ ದಶವ್ಯಸನಗಳಿಂ ಹಸೆ ಗೆಟ್ಟು; ಕುಲ, ಬಲ, ಧನ, ರೂಪ, ಯೌವನ, ವಿದ್ಯೆ, ರಾಜ್ಯ, ತಪದೇಳ್ಗೆಯೆಂ ಬಷ್ಟಮದದಿಂ ಮದಿಸಿ, ತೃಷೆ, ಶಂಕೆ, ಭೀತಿ, ಲಜ್ಜೆ, ಜಿಗುಪ್ಸೆ, ಕುಲ, ಶೀಲ, ಗರ್ವವೆಂಬ ಪಾಶಾಷ್ಟಕದಿಂ ಮಿಗೆ ಬಿಗಿವಡೆದು; ಭೂಮಿ, ಜಲ, ವಹ್ನಿ, ವಾಯು, ನಭ, ಮನಸ್ಸು, ಬುದ್ಧಿ, ಅಹಂಕಾರವೆಂಬಷ್ಟ ಪ್ರಕೃತಿಯಿಂ ವಿಕಾರಿಸಿ; ಬುದ್ಧಿ, ಸುಖ, ದುಃಖ, ರಾಗ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ, ಭಾವ ನೆಯೆಂಬ ನವಗುಣಗಳಿಂ ವ್ಯವಹರಿಸಿ; ಅಸುರವಾಸನೆ, ದೈವವಾಸನೆ, ಲೋಕ ವಾಸನೆ, ದೇಹವಾಸನೆ, ಶಾಸ್ತ್ರವಾಸನೆಯೆಬಿವು ಮೊದಲಾದನೇಕ ವಾಸನೆ ಗಳಿಂ ಘಾಸಿಯಾಗಿ; ವಿಯದಾದಿಭೂತತನ್ಮಾತ್ರ, ಶ್ರೋತ್ರಾದಿ ಜ್ಞಾನೇಂ ದ್ರಿಯ, ವಾಗಾದಿ ಕರ್ಮೇಂದ್ರಿಯ, ಪ್ರಾಣಾದಿವಾಯು, ಮಾನಸಾದ್ಯಂತಃಕ ರಣ, ಕಾಮ, ಕರ್ಮ, ತಮವೆಂಬಷ್ಟ ಪುರದೊಳು ವಿಕಾರಿಸಿ; ಜ್ಞಾನೇಂದ್ರಿಯ

ಪಂಚಕ, ಕರ್ಮೇಂದ್ರಿಯಪಂಚಕ, ಚಿತ್ತ, ಮನಸ್ಸು, ಅಹಂಕಾರ, ವಿದ್ಯೆ, ವಾಕ್ಕು, ಶಕ್ತಿಗಳೆಂಬ ಷೋಡಶ ಕಲೆಗಳಿಂ ವಿಕಲಮಾಗಿ ; ಜನನ, ಮರಣ, ರಾಗ, ದ್ವೇಷ, ಜರೆ, ರೋಗ, ಮದ, ಮೋಹ, ಸ್ವೇದ, ಭೇದ, ವಿಷಾದ, ನಿದ್ರೆ, ಕಾಂಕ್ಷೆ, ಕ್ಷುಧೆ, ತೃಷೆ, ಭ್ರಮು, ಚಿಂತೆ, ಕ್ಲೇಶವೆಂಬ ಪದಿನೆಂಟು ದೋಷದಿಂ ದೂಷಿತಮಾಗಿ ; ತ್ರೈಗುಣ್ಯಗಳಾದ ದ್ವಂದ್ವ ದುಃಖಂಗಳೊಳು ಸುಖದುಃಖ, ಪೊಳ್ಳಿತಲ್ಲ, ಪುಣ್ಯ ಪಾಪ ಪಹುದಲ್ಲ, ವಿದೆಯಲ್ಲ, ನಾನು ನೀನು, ಆದುದು ಪೋದುದು, ಬಡತನಮೊಡೆಯತನ, ಪಹೋರಾತ್ರ, ಸ್ತ್ರೀಪುರುಷ, ಶುದ್ಧಾಶುದ್ಧ, ಸತ್ಯಾನೃತ, ನಿರುಕ್ತಾನಿರುಕ್ತ, ಚಿಜ್ಜಡವೆಂಬುದು ಮುಂತಾದ ಭೇದಭ್ರಾಂತಿಯಿಂ ಶುದ್ಧಾಖಂಡ ಸಂವಿತ್ಸತ್ತಾಮಾತ್ರ ಶಿವಸ್ವರೂಪವನರಿಯದೆ ಮರುಳುಗೊಂಡು ಕರಣತ್ರಯದೊಳು ಸಿಲುಕಿ ಬಿಡಲಾರದೆ ಸಿಕ್ಕುಗೊಂಡಿರುವನು.

## ನರಹಿತೋಪದೇಶ

ಬಳಿಕೀಭರತವರ್ಷದೊಳಗಿರ್ಪಜನನಂಗಳಿಗೆ ಮುಂದೆ ಕಲಿಪ್ರಾಬಲ್ಯದಿಂ ಸತ್ಸಿದ್ಧಿ ದುರ್ಲಭಮಪ್ಪುದಾಗಿ ಸ್ವಸ್ವಾಧಿಕಾರಕ್ಕರ್ಹಮಪ್ಪಂತೆ ಸುಖರೂಪಮಾದ ದೇವತ್ವವನೀವ ಯಜ್ಞಗಳಂ, ಸಂಪದಂಗಳನೀವ ದಾನಂಗಳಂ, ಬ್ರಹ್ಮಾದಿ ಪದವೀವ ತಪಸ್ಸುಗಳಂ, ಸಕಲೈಶ್ವರ್ಯ ವಿಷ್ಣುತ್ವ ಚಿತ್ತಶುದ್ಧಿ ನಿತ್ಯಸುಖಂಗಳನೀವ ಶಿವಾರ್ಚನೆಗಳಂ, ಮುಕ್ತಿದಾಯಕಮಪ್ಪ ಸಮ್ಯಜ್ಞಾನವಂ, ಚನ್ನಾಗಿ ಪಡೆದಾಚರಿಸಲ್ವೇಳ್ಕುಮೆಂಬುದೇ ಸಾಧುಜನ ಸಹಜಸಲ್ಲಾಪ ಸಿದ್ಧಾಂತಿತಮಕ್ಕುಂ.

## ವಿಚಾರದಿಂದ ಆಸ್ತಿಕ್ಯಸಿದ್ಧಿ

ಬಳಿಕ ಲೋಕದೊಳಗೊಂದರಲ್ಲೊಂದಿಲ್ಲದ ಬಾಲ್ಯ, ಯೌವನ, ವಾರ್ಧಿಕಂಗಳೆಂಬ ನಾನಾವಸ್ಥೆಯನ್ನೈದಿ ದೇಹದೊಳಾತ್ಮ ನೋರ್ವನೇ ಯೆಂಬುದು ಬಾಲ್ಯದೊಳಗನುಭವಿಸಿದರ್ಥಮಂ ವಾರ್ಧಿಕ್ಯದಲ್ಲಿ ಸ್ಮರಿಸುವದರಿಂದನುಭವಿತೃ, ಸ್ಮರ್ತೃವೊಬ್ಬನೇ ಯಕ್ಕುಮದಾಗಿಂತು ಪ್ರತ್ಯಕ್ಷಾದಿಜ್ಞಾನಪ್ರಮಾಣಸಿದ್ಧಮಾಗಿಪ್ಪುದೆಂತೆನೆ ಪೂರ್ವದಲ್ಲಿ ಹೋದ, ಮುಂದೆ ಬರಲುಳ್ಳ ಶರೀರಂಗಳಲ್ಲಿಯೂ, ಆತ್ಮನೊಬ್ಬನೇ ಯೆಂಬುದು ಮುನ್ನಲ್ಲಿತಾಂ ಪುಣ್ಯಾಧಿಕನು, ಮುನ್ನಲ್ಲಿತಾಂ ಪಾಪಿಷ್ಠನೆಂದು ಲೋಕ ಪ್ರಸಿದ್ಧಮಾದ ಸುಖದುಃಖ ತಾರ

ತಮ್ಯದಿಂದರಿಯಲ್ಕಶಕ್ಯದಾಗಿಯುಂ, ಆಗ ಪುಟ್ಟಿದ ಕರು ತಾಯಿ ಮೊಲೆಯುಂಬ ಪೂರ್ವ ಸಂಸ್ಕಾರ ದೃಷ್ಟಮಪ್ಪುದಾಗಿಯುಂ, ತಮ್ಮ ಜನ್ಮಸ್ಮರಣಮಂ ಪೇಳ್ವ ಯೋಗಸಿದ್ಧರುಂಟಾಗಿಯುಂ, ಮೃತನಾಗಿ ಕೂಡಲೇ ಚೇತನಂ ಬಡೆದಪ್ಪ ರೊಳು ಯಮಲೋಕಾದಿಗಳಲ್ಲಿಹ ಬಾಧೆಗಳಂ ತೋರಿದ ಯಮದೂತರ ಯಾತನಾದಿ ತಮ್ಮನುಭವವಂ ಪೇಳಿ ಕುರುಹಂದೋರ್ವರಂ ಕಾಣ್ಬವಾಗಿ ಯುಂ ರತಿಕಾಮ, ಬಲಿಕಾಮ, ಹುತಕಾಮ ನಿಗ್ರಹ ನಿಷ್ಠರುಂ ಮಂತ್ರವಾ ದಿಗಳುಂ ಮಂತ್ರಿಸಿ ನುಡಿಸೆ ಪಿಶಾಚಗ್ರಸ್ತರಾವೇಶಗೊಂಡು ನಾವೀಪ್ರಕಾರ ದವರು, ಈಗಳಿಂತಾದವಿನ್ನು ನಾವಾವಾವ ಪ್ರಕಾರವಪ್ಪೆದವಿಕಿಂತು ಮಾಡ ಲಿಂತಪ್ಪುದೆಂದು ಕರ್ತವ್ಯವಂ ಪೇಳಿ ದೃಷ್ಟಾಂತಗೊಳಿಸಿ ತಮ್ಮ ಪೂರ್ವೋತ್ತರ ಜನ್ಮಕರ್ಮಗತಿಗಳಂ ಪೇಳ್ವ ಬ್ರಹ್ಮರಾಕ್ಷಸ ಭೂತ ಭೇತಾಳಗ್ರಹಾದಿಗಳ ಮಾತುಗಳಂ ಕೇಳಿ ಮನುಜರಿಗಶಕ್ಯವಾದ ಸಾಹಸಗಳಂ ನೋಳ್ಪವಾಗಿ ಯುಂ, ಬಳಿಕೀ ದೇಹೋತ್ಪತ್ತಿಯೆಂಬುದು ಪೂರ್ವ ಜನ್ಮದಲ್ಲಿ ಕರ್ತೃಮಾ ಡಿದ ಕರ್ಮಾಧೀನದಿಂದೀಗಳಾತ್ಮನ ಭೋಗಸಾಧನವಾಗಿಯೇ ಜನಿಸಿತೆಂ ಬುದನೊಡಂಬಡದೆ ತಾನೆಯಾಯಿತೆನೆ ಕಾರಣಮಿಲ್ಲದೆ ಸಕಲ ಕಾರ್ಯವೆಂ ತಾಗಬೇಕೆಂಬ ಅಕೃತಾಭ್ಯಾಗಮ ರೂಪ ಬಾಧೆಯುಂಟಾಗಿಯುಂ, ಬಳಿಕ ಮುಳ್ಳಿಗೆ ಮೊನೆ, ಕೋಗಿಲೆಗೆ ಸುಸ್ವರಂ ನಿಯತಮಾದಂತೆ ಪುರುಷಮಾತ್ರಂ ಗೀದೇಹಮಹುದೇ ಸ್ವಭಾವವೆಂದೊಡೆ, ದಿನದಿನದಲ್ಲಿ ವ್ಯರ್ಥಮಾಗಿ ಪೋಗುವ ವೀರ್ಯದಿಂದೇ ಘಟಿಸದಾಗಿಯುಂ ಬಳಿಕ ಲೋಕದಲ್ಲಿ ಪ್ರಾಯಿಕಮಾಗಿ ಸರ್ವ ಜನರುಂ ಬಹು ಪ್ರಯಾಸದಿಂ ಮಾಳ್ಪಯಜ್ಞದಾನ ವ್ರತೋಪಾಸನಾದಿ ಪುಣ್ಯ ಫಲವಂ ಮೇಲನುಭವಿಸುವಾತನಿಲ್ಲದಿರ್ದೊಡೆ, ಕೃತವಿನಾಶವೆಂಬ ದೋಷ ಮುಂಟಾಗಿಯುಂ, ಬಳಿಕ ದೇಹವೆಂಬುದು ಕಾರ್ಯಮಾಗಿ ಕಾರಣಜನ್ಯ ಮಾಗಿರ್ಪುದದಕೆ ದೃಷ್ಟಾಂತವೇ ಘಟದಂತೆಂಬನುಮಾನಮುಂಟಾಗಿಯುಂ, ಬಳಿಕ ಶಾಸ್ತ್ರೋಕ್ತಮಾದ ತುಲಾಭಾರಮೆಂಬಧಟಾಂಗಿನೀದೀಕ್ಷೆವಡೆದಾತು ಮನಿಗುಂ, ಯೋಗೋಪಾಸಕನಿಗುಂ, ಕರ್ಮವಿಪಾಕಾದಿಯಥೋಕ್ತ ಶಾಂತಿ ಯಂ ತಪ್ಪದೆಮಾಳ್ಪಾತುಮನಿಗುಂ, ದೇವತಾಕ್ಷೇತ್ರ ತೀರ್ಥಾದಿ ಪ್ರಾರ್ಥನ ಸೇವಾದಿಗಳಿಂ ದೈವ ಪ್ರಸಾದಿಯಾದಾತುಮನಿಗುಂ, ಪಾಪಕ್ಷಯದಿಂ ರೋಗ ವಿಪದ್ವಿಕಾರ ದುಃಖಾದಿ ನಿವೃತ್ತಿಯೆನಿಪ ಸದ್ಯಃ ಪ್ರತ್ಯಕ್ಷಾನುಭವ ಮಿಪ್ಪುದ ರಿಂ, ಚಂದ್ರಸೂರ್ಯ ಗ್ರಹಣಾದಿಗಳಿಂ ಪೇಳ್ವಶಾಸ್ತ್ರಂತಪ್ಪದೆ ಸರಿಬಪ್ಪುದರಿಂ

ಬಳಿಕ ನಿಷ್ಪಕ್ಷಪಾತ ವಿಚಾರದೊಳು ತಾನಾಗಿ ಪರ್ಯಾಲೋಚಿಸಲು ದೈನಂ ದಿನಮಾದ ಭಿನ್ನಭಿನ್ನಾವಸ್ಥೆಯಿಂ, ತಾನೀದೇಹದಿಂ ವಿಲಕ್ಷಣ ನಾಗಿರ್ಪನೆಂಬ ಭಾವಾನುಭವದಿಂ, ದೇಹಾನ್ಯನಾತ್ಮನೆಂಬಾಗಮ ಪ್ರಮಾಣದಲ್ಲಿ ಪುಸಿತೋರ ದಾಗಿಯುಂ, ದೇಹವಿಲಕ್ಷಣನಾದೋರ್ವಾತ್ಮನುಂಟೆಂಬುದೇ ಸಿದ್ಧಮಕ್ಕುಂ. ಮತ್ತಮಾ ದೇಹಾನ್ಯನಾದಾತ್ಮನಂ ಕೆಲರು ಜ್ಯೋತಿರ್ಮಯನೆಂದು, ಕೆಲರು ಪವನಮಯನೆಂದು, ಕೆಲರಣುವೆಂದು, ಕೆಲರು ಮಹತ್ತೆಂದು, ಕೆಲರು ಸಾಕಾರವೆಂದು, ಕೆಲರು ಪರಿಚ್ಛಿನ್ನನೆಂದು ಸ್ವೇಚ್ಛೆಯಿಂ ವಾದಿಸಲದು ಸಟೆಯಪ್ಪುದೆಂತೆನೆ, ಮೊದಲಾತ್ಮಸಿದ್ಧಿಗೆ ಮೂಲಮಾದ ನಿಗಮಾಗಮ ಶಾಸ್ತ್ರಪ್ರಮಾಣದಲ್ಲಿ, ದೇಹವಿಲಕ್ಷಣನಾದಾತ್ಮನು ನಿತ್ಯವ್ಯಾಪಕ ಚೈತನ್ಯ ರೂಪನಾದೊಡಂ ತನ್ನ ಅಜ್ಞಾನ ಬಲದಿಂ ಕರ್ಮಾಧೀನದಿಂ, ಈಶ್ವರಪ್ರೇರ ಣೆಯಿಂ, ಘಟಾಕಾಶದಂತೆ ಸೂಕ್ಷ್ಮ ಶರೀರದೆಡೆಯಾಟವೇತನ್ನೆಡೆಯಾಟವಾ ಗಿ, ಸಕಲಲೋಕದಲ್ಲಿಹ ಸುಖದುಃಖಗಳಂ ಮುಕ್ತಿಯನುಂ ತಾನನುಭವಿಸು ತ್ತಿರ್ಪಂತೆ ಪ್ರಾತಿಭಾಸಿಕ ತುಲ್ಯಮಾದ ಸರ್ವಲೋಕಾನುಭವವೇ ವ್ಯಾವಹಾ ರಿಕಸತ್ಯಮೆಂದು ಪೇಳುತ್ತಿರಲಾ ನಿಗಮಾಗಮಂಗಳಿಂ ಕರ್ಮಭೋಗವೇ ಸತ್ಯ ವಾಗಿ ತೋರುತಿರ್ಪುದು.

## ಯೋಗಭ್ರಂಶದಿಂ ಕ್ರಮಗತಿ

ಬಳಿಕ ಯೋಗಭ್ರಂಶಮಾಗಲವರು ಪುನರಾವೃತ್ತಿ ಸಂಸಾರಮೋಹ ಕವಿಲ್ಲದ ಜಗದ್ಧಿತಾರ್ಥವೆನಿಸಿ ಉಭಯಕುಲಶುದ್ಧಮಾದ ಶ್ರೀಮಂತರುಗಳ ಗರ್ಭದಲ್ಲಾದರೂ, ಸಂಪ್ರದಾಯಸಿದ್ಧರಾದಾಚಾರ್ಯರ ಕುಲದೊಳಾದೊಡಂ ಜನಿಸಿ ಮೇಲೆ ಜ್ಞಾನಕ್ರಿಯಾ ಸಂಪನ್ನರಾಗಿ ಸಹಜ ಕೈವಲ್ಯಂ ಬಡೆವುದೇ ನಿಶ್ಚಯಮಕ್ಕುಂ.

## ಯೋಗಸಿದ್ಧರ ಗತಿ

ಬಳಿಕ ಯಮ ನಿಯಮಾದ್ಯಷ್ಟಾಂಗ ಯೋಗಸಿದ್ಧರಾದ ಯೋಗೀಶ್ವ ರರ್ಗೆ ರೇಚಕಾದಿ ಸಪ್ತ ಪ್ರಾಣಾಯಾಮ ಬಲದಿಂ ಸುಷುಮ್ನಾ ನಾಡೀಮಾ ರ್ಗದಿಂ ಶಿರೋರಂಧ್ರದಲ್ಲಿ ಪ್ರಾಣಮುತ್ಕ್ರಾಂತಮಾಗೆ ಸಕಾಮದಿಂಸ್ವೇಚ್ಛಾ ಲೋಕಪ್ರಾಪ್ತಿ, ನಿಷ್ಕಾಮದಿಂ ಬ್ರಹ್ಮಲೋಕಾದಿ ವ್ಯವಧಾನ ವಿಲ್ಲದೆ ತತ್ವಾ ತೀತಮಾದ ಶಿವತತ್ವಪ್ರಾಪ್ತಿಯಕ್ಕುಂ.

## ವೇದಾಂತಿ ಸಿದ್ಧಾಂತಿ ಸದ್ಗತಿ

ಬಳಿಕ ವಿಶಿಷ್ಟಜ್ಞಾನದೀಕ್ಷಾ ಸಂಪನ್ನರ್ಗೆ ಜೀವನ್ಮುಕ್ತಿ ಸಿದ್ಧಿಸುತ್ತಾಗಿಯುಂ, ಪೂರ್ಣರೂಪದಲ್ಲಿ ಗಗನದಂತೆ ಗಮನಾಗಮನವಿಲ್ಲಾಗಿಯುಂ ನಾಡೀಮಾರ್ಗ ನಿಯಮವಿಲ್ಲದೆ ಕಾಶಿಯಲ್ಲಾಗಲಿ, ಹೀನಾಶ್ರಯದಲ್ಲಾಗಲಿ, ಅರಿವು ಮರವೆಗಳಿಂದಾಗಲಿ, ಆವಪ್ರಕಾರದಿಂ ಪ್ರಾಣಪ್ರಯಾಣಮಾದರೂ ಮೇಲೆ ಮೋಕ್ಷಮಹುದೆಂಬುದೇ ಸಿದ್ಧಮಕ್ಕುಂ.

## ಪಾಪಿಷ್ಠರ ದುರ್ಗತಿ

ಬಳಿಕ ಕರ್ಮಭಕ್ತಿಯೋಗಜ್ಞಾನಾದಿ ಪುಣ್ಯಹೀನರಾದ ಪಾಪಾತ್ಮರ್ಗೆ ತೃಣಜಳೂಕ ನ್ಯಾಯದಿಂ ಯಾತನಾಶರೀರವಿಡಿದು ಗುದ ಗುಹ್ಯಂಗಳಲ್ಲಿ ಪ್ರಾಣಂ ಪೊರಮಟ್ಟು ಪೋಗೆ ಮೇಲೆ ನೀಲಾದ್ರಿಯಂತೆ ಕಾಣಿಸಲು ಕೆಂಗಣ್ಣ ಕೋರದಾಡೆಯು, ಪಾಶದಂಡ ಕರದ ರಕ್ತವಸ್ತ್ರ, ರಕ್ತಾಭರಣ, ರಕ್ತಚಂದನ, ರಕ್ತಪುಷ್ಪಾದಿಗಳಿಂದಲಂಕೃತರಾದ ಉಗ್ರಕಂಟಕ, ಅತ್ಯುಗ್ರ, ಸುರಕಂಟಕ, ಉಗ್ರಚಂಡ, ಅತ್ಯುಗ್ರ, ಸಮಗ್ರ, ಉದಂಬರಾದಿ ಯಮದೂತರತಿ ಭಯಂಕರಮಾದ ಮಾರ್ಗದೊಳೆಳೆದೊಯ್ದು ದಂಡಧರಸನ್ನಿಧಿಯಲ್ಲಿ ನಿಲ್ಲಿಸಿ, ಚಿತ್ರಗುಪ್ತರಾಣತಿಯಿಂದಾಯಾಪಾಪಾನುಸಾರಮಾದ ಮಹಾಬಾಧೆಗೊಳಿಸಿ ಪೂರ್ವೋಕ್ತ ನರಕಾರ್ಣವದಲ್ಲಿ ಕೆಡಹುತ್ತಿಹರೆಂಬುದೇ ಸತ್ಯಮಕ್ಕುಂ.

## ನಾನಾಮತವಾದಿಗತಿಗಳು

ಮತ್ತಮೀಪ್ರಕಾರದಿಂ ಕೌಳಯಾಮಳಾದಿ ಮತಾಭಿಮಾನಿಗಳಿಗೆ ಪಿಶಾಚಪದಪ್ರಾಪ್ತಿ. ಚಾರ್ವಾಕ ಜ್ಯೋತಿಷ್ಕ ಪೂರ್ವಮೀಮಾಂಸಕರುಗಳಿಗೆ ಸ್ಥೂಲಭೂತಾಂತರಪ್ರಾಪ್ತಿ. ಸ್ಮಾರ್ತರಿಗೆ ತನ್ಮಾತ್ರಪ್ರಾಪ್ತಿ. ಇಂದ್ರಿಯ ಚೇತನಿಕರಿಗೆ ಇಂದ್ರಿಯಪ್ರಾಪ್ತಿ. ಮನಶ್ಚೇತನಿಕರಿಗೆ ಮನಃಪ್ರಾಪ್ತಿ. ಅಹಂಕಾರ ಚೇತನಿಕರಿಗೆಯೂ, ಪ್ರಾಣಚೇತನಿಕರಿಗೆಯೂ, ಅಹಂಕಾರತತ್ವಪ್ರಾಪ್ತಿ. ಬೌದ್ಧನೈಯಾಯಿಕ ವೈಶೇಷಿಕರ್ಗೆ ಬುದ್ಧಿತತ್ವಪ್ರಾಪ್ತಿ. ಅರ್ಹತರಿಗೆ ಸತ್ಯಸಂಭೋಗವಾದಿಗಳಿಗೆಯೂ ಗುಣತತ್ವಪ್ರಾಪ್ತಿ. ಪಾಂಚರಾತ್ರಿಕರಿಗೆ ಪ್ರಕೃತಿತತ್ವಪ್ರಾಪ್ತಿ. ಸಾಂಖ್ಯರ್ಗೆ ಪ್ರಕೃತಿಯ ಮಸ್ತಕದಲ್ಲಿಯ ಭುವನಪ್ರಾಪ್ತಿ. ಅದ್ವೈತಿಗಳಿಗೆ ಅಖಂಡಸಚ್ಚಿದಾನಂದಾದ್ವಿತೀಯ ನಿರಂಜನ ನಿಜಸ್ವರೂಪಮೆನಿಪ ಪುರುಷತತ್ವಪ್ರಾಪ್ತಿ. ಪೌರಾಣಿಕರಿಗೆ ರಾಗತತ್ವಪ್ರಾಪ್ತಿ. ಕಾಪಾಲಿಕರ್ಗೆ

ಕಾಲತತ್ವಪ್ರಾಪ್ತಿ. ಪಾಶುಪತರಿಗುಂ ಉತ್ಪತ್ತಿಸಾಮಾನ್ಯವಾದಿಗಳಿಗೆಯುಂ ಮಾಯಾತತ್ವಪ್ರಾಪ್ತಿ. ಮಹಾವ್ರತರಿಗೆ ರಾಗತತ್ವಪ್ರಾಪ್ತಿ. ಶಿವಪ್ರಯೋಜ್ಯ ಕರ್ತೃತ್ವಾದಿವಾದಿಗಳಿಗೆಯುಂ ಈಶ್ವರೌದಾಸೀನ್ಯಮುಕ್ತಕರ್ತೃತ್ವಾದಿ ವಾದಿಗಳಿಗೆಯುಂ ಈಶ್ವರತತ್ವಪ್ರಾಪ್ತಿ. ಗಾರುಡ ದಕ್ಷಿಣ ವಾಮಭೂತ ತಾಂತ್ರಿಕರಿಗೆ ನಿವೃತ್ತ್ಯಾದಿ ಭುವನಪ್ರಾಪ್ತಿ, ಶೈವರ್ಗೆ ಪರಶಿವಸಮಾನತ್ವಪ್ರಾಪ್ತಿ. ವೇದವೇದಾಂತಾಗಮ ಪುರಾಣಂಗಳಲ್ಲಿ ಸಾರತರ ಮೆನಿಸಿದತಿ ರಹಸ್ಯಾರ್ಥ ಪ್ರತಿಪಾದಕಮಾದ ವೀರಶೈವಮಾರ್ಗದಿಂ ಲಿಂಗಾಂಗಸಂಬಂಧಿಗಳಾದ ಷಟ್‌ಸ್ಥಳಜ್ಞಾನಿಗಳಿಗೆ ಸರ್ವೋತ್ಕರ್ಷಮಾದ ಅವಿರಳ ಶಿವೈಕ್ಯಪ್ರಾಪ್ತಿಯಹುದೆಂದು ವಿವೇಕಿಸಲ್ವೇಳ್ಕುಂ.

## ಸರ್ವಾಶ್ರಯ ಶ್ರೀ ಶಂಭುಲಿಂಗ

ಮತ್ತಮಾ ಚಿಚ್ಛಕ್ತಿಯೆಂಬ ದಿವ್ಯತೇಜೋಮಂಡಲ ಮಧ್ಯದಲ್ಲಿ ಸತ್ಯ ಶುದ್ಧ, ಸ್ವಯಂಪ್ರಕಾಶ, ಚಿನ್ಮಾತ್ರ, ಸುಖಸ್ವರೂಪಮಪ್ಪ ಪೂರ್ಣಾದ್ವಯ ನಿಜಸ್ವರೂಪ ಮೆನಿಪ ಶ್ರೀಗುರುಶಂಭುಲಿಂಗಮಿರ್ಕು ಮಿದುವೆ ಪರತತ್ವ ಮಿದುವೆ ಸಿದ್ಧಾಂತ ಮಿದುವೆ ದೈವತದೈವತ ಮಿದುವೆ ವೇದಾಂತಸಿದ್ಧಾಂತೋಭಯಲಕ್ಷ್ಯ ಮಿದುವೆ ಶಿವಯೋಗಿಗಮ್ಯ ಮಿದುವೆರಹಸ್ಯ ಮಿದುವೆಶರಣವಸತಿ ಇದುವೆಶಂಭುಲಿಂಗ ಮಿದರಸಾನ್ನಿಧ್ಯಬಲದಿಂ ಮುನ್ನಪೇಳ್ದೆಲ್ಲತತ್ತ್ವಂಗಳಿಗುಂ ತತ್ತ್ವಾಶಯಂಗಳಿಗುಂ ತತ್ತ್ವಾಭಿಮಾನಿಗಳಿಗುಂ ಭುವನಂಗಳಿಗುಂ ಭುವನವಾಸಿಗಳಿಗುಂ ಅಧ್ವಂಗಳಿಗುಂ ಅಧ್ವಯಾಯಿಗಳಿಗುಂ ಬ್ರಹ್ಮಾಂಡ ಪಿಂಡಾಂಡಾದಿ ಸಕಲವೈಚಿತ್ರ್ಯಗಳಿಗುಂ ಸರ್ವಮೂರ್ತಿಗಳಿಗುಂ ಸರ್ವದೇವರ್ಕಳಿಗುಂ ಪೇಳ್ದೆಲ್ಲಶಕ್ತಿಗಳಂ ಕೊಡುವುದೀಗುರುಶಂಭುಲಿಂಗವನಾಶ್ರಯಿಸಿ ಸಕಲಮುಂ ತೋರ್ಪುದೆಂತೆನೆ–ಪೇಳ್ದಸಕಲ ದೇಹಾದಿವಿಷಯಂಗಳುಂ ಕಾಲಾಗ್ನಿರುದ್ರ ಭುವನಮೊದಲಾಗಿ ಶಿವಲೋಕಪರ್ಯಂತಮಾದ ಭುವನಂಗಳ ನಾಶ್ರಯಿಸಿರ್ಪುವಾ ಭುವನಂಗಳೆಲ್ಲ ಭೂಮ್ಯಾದಿ ತತ್ವಂಗಳ ನಾಶ್ರಯಿಸಿರ್ಪುವಾ ತತ್ವಂಗಳೆಲ್ಲ ನಿವೃತ್ತ್ಯಾದಿಕಲೆಗಳ ನಾಶ್ರಯಿಸಿರ್ಪುವಾ ಕಲೆಗಳೆಲ್ಲ ಬಿಂದುವ ನಾಶ್ರಯಿಸಿರ್ಪುವಾ ಬಿಂದುವೇ ಚಿಚ್ಛಕ್ತಿಯನಾಶ್ರಯಿಸಿಹುದಾ ಚಿಚ್ಛಕ್ತಿಯೇ ಶ್ರೀಗುರುಶಂಭುಲಿಂಗವ ನಾಶ್ರಯಿಸಿಹುದಾ ಶ್ರೀಗುರುಶಂಭುಲಿಂಗವೇ ಸರ್ವಾಶ್ರಯತಾನಾಗಿ ತಾನೊಂದನು ಮಾಶ್ರಯಿಸದೆ ನಿರ್ವಿಕಾರಸ್ವರೂಪದಿಂ ಸರ್ವಾತ್ಮರಿಗೆ ಸುಖಕರಮಾಗಿ ವಿರಾಜಿಸುತಿರ್ಕುಂ.

## ಶಾಸ್ತ್ರಪ್ರಯೋಜನ

ಬಳಿಕಿಂತರುಪುವ ಸಚ್ಛಾಸ್ತ್ರಾಭ್ಯಾಸಸಂಪಾದಿತ ವಿವೇಕದಿಂದಾಸ್ತಿಕರಾಗಿ ಶಿವಪ್ರಸಾದಮಂ ಪಡೆದವರ್ಗೆ ಆಯುಷ್ಯ ವಾರೋಗ್ಯ ವೈಶ್ವರ್ಯ, ವಿವೇಕ ವಿದ್ಯೆ ಕೀರ್ತಿ ರೂಪ ಯೌವನ ಲಾವಣ್ಯ ಸಲ್ಲಕ್ಷಣ ಸತ್ಕುಲ ಸಾಹಸ ವನಿತಾವಿಲಾಸ ಪುತ್ರ ಪೌತ್ರ ಬಂಧು ಧನ ಧಾನ್ಯ ಬಲ ಪರಾಕ್ರಮ ವಿಜಯ ವೈಭವ ನಯ ವಿನಯ ಧೈರ್ಯ ಸ್ಥೈರ್ಯ ವೀರ್ಯಶೌರ್ಯಗಾಂಭೀರ್ಯ ಔದಾರ್ಯ ಮಹಾತ್ಮ್ಯ ಪ್ರಾಗಲ್ಭ್ಯ ಸಕಲಸೌಭಾಗ್ಯ ಸುಖಭೋಗ ಸಂಪತ್ಸಮಗ್ರತೆಯಿಂದೊಡಗೂಡಿ ಸಪ್ತಸಮುದ್ರ ವಸುಧಾಧಿಪತ್ಯ ಸಾಮ್ರಾಜ್ಯಾನುಭವ ಸಮೇತವಾದ ಯೋಗಕ್ಷೇಮಾಭ್ಯುದಯ ಪರಂಪರೆಗಳನಿಹದೊಳನುಭವಿಸಿ ಮೇಲೆ ಸರ್ವೋತ್ಕರ್ಷವಾದ ಶ್ರೀಗುರುಶಂಭುಲಿಂಗದೊಡಗೂಡಿ ಸರ್ವಜ್ಞತ್ವ ಸರ್ವಕರ್ತೃತ್ವದಿಂ ಸತ್ಯಾನಂದ ಸ್ವರೂಪರಾಗಿರ್ಪರೆಂಬೀ ಭೋಗಮೋಕ್ಷಕ್ರಮವ ನೇಕಾಗ್ರಚಿತ್ತದಿಂ ಕೇಳಿ ತಿಳಿದನುಷ್ಠಿಸುವರ್ಗಾಗಲೆಂದು ಆಶೀರ್ವಾದಲಕ್ಷಣ ಮಂಗಳಾಚರಣದಿಂ ವಿವೇಕಚಿಂತಾಮಣಿಯೆಂಬ ಶಾಸ್ತ್ರವು ಪರಿಪೂರ್ಣಮಕ್ಕುಂ,

---

ಶ್ರೀಗುರು ಶಂಭುಲಿಂಗಾಯ ನಮಃ

## ಮಂಗಳಮಸ್ತು

ಇಂತು ನಿಜಗುಣಯೋಗಿ ಸಂತಸದೊಳೊರೆದಿದನ ।
ನಂತ ಮಹಿಮಾಂಬು, ನಿಧಿಶಂಭುತಾನೊಪ್ಪಿ ।
ಸಂತರಿಂಪಾಡಿಸುತ ಮಿರ್ಕೆ ॥

---

# ಶಬ್ದಾರ್ಥಗಳು ಮತ್ತು ಕತೆಗಳು

ಪುರಾತನರ ತ್ರಿವಿಧಿ—ಪುಟ ೧. ಇಂಗಡಲು=ಹಾಲಿನ ಸಮುದ್ರ. ಮಿಸುನಿ=ಬಂಗಾರ, ಪತಿಕರಿಸಿ=ಅಂಗೀಕರಿಸಿ, ಹರಗಣೆ=ಹೊಲದಲ್ಲಿ ಕುಂಟೆ ಹೊಡೆಯುವದು. ೨. ಅಟ್ಟು=ಅಡಿಗೆಮಾಡಿ, ಅಲರ್=ಪುಷ್ಪ, ಚರವೇಷ=ಜಂಗಮವೇಷ, ಹಸೆಯಿಂದ=ಮದುವೆಗೋಸ್ಕರ ಹಸೆ ಜಗುಲಿಯಮೇಲನಿಂದ, ಸೂಸೆ=ಚೆಲ್ಲಲು, ಧುರ=ಯುದ್ಧ ಸವಣ=ಜೈನ. ೩. ತೋಡತಕ್ಕ ಭಾವಿಯನ್ನು, ಕಂಡು ನಗುವ ಜಿನಸಮಯಿಗಳ=ಅಪಹಾಸ್ಯ ಮಾಡಿದ ಜೈನಮತಸ್ಥರನ್ನು, ಒಗೆಯಲೋಸುಗ=ಧ್ವಂಸಮಾಡುವುದಕ್ಕೋಸ್ಕರ, ನಯನಂಬಡೆದ=ಉರಿಗಣ್ಣನ್ನು ವರವಾಗಿ ಪಡೆದು ಕೊಂಡ, ಉಗಿದು=ಶೆಳೆದು, ಪಂಕ=ಕೆಸರು, ಬತ್ತಲೆಗರು=ದಿಗಂಬರರು, ಯಡಿಯರ=ಐಯಡಿಯರೆಂಬ ದೊರೆಯ, ೪. ಅಗ್ಗವಣಿ=(ಪೂಜಾರ್ಹವಾದ) ನೀರು, ಸೊಡರು=ದೀಪ, ಮೊಳೆವಕ್ಕಿಯಟ್ಟು=ಮೊಳೆಯುವ ಹಸೀ ಅಕ್ಕಿಯನ್ನು ಅಡಿಗೆಮಾಡಿ, ವಾಸವಾದಿಗಳು=ಇಂದ್ರಾದಿ ದೇವತೆಗಳು, ನೊಂದೆಂದ=ನೊಂದು+ಎಂದ, ಶಲದಿ=ಜೇಡಹುಳ, ತೂಪಿರಿದ=ಉಫ್ ಎಂದು ಊದಿದ. ೫. ಒಸಗೆ=ಉತ್ಸಾಹ, ಗಣಿಕೆ=ವೇಶ್ಯೆ, ಜಸ=ಯಶಸ್ಸು, ನೇರಿತಹ=ನೆಟ್ಟಗಿರುವ.

ಕೈವಲ್ಯಪದ್ಧತಿ— ೭,—ಪೊರ್ದಿದರನು=ನಂಬಿದವರನ್ನು ಸಮಯ=ಮತ, ಕಾಲ; ವಿಷಮ=ಪ್ರತಿಕೂಲ, ವ್ಯತ್ಯಾಸವುಳ್ಳ; ಪುಗದ=ಪ್ರವೇಶಿಸದ; ಉಪ್ಪವಡಿದ=ಎಚ್ಚರಗೊಳಿಸುವ.

೮.—ಏಳು ರಸನೆಗಳ=ಏಳು ನಾಲಿಗೆಗಳುಳ್ಳ (ಅಗ್ನಿ); ಏಳುವಾಜಿ=ಏಳು ಕುದುರೆಗಳುಳ್ಳ (ಸೂರ್ಯ); ಇಪ್ಪತ್ತೇಳು ತಾರಾರಮಣ=೨೭ನಕ್ಷತ್ರಗಳ ಒಡೆಯನಾದ ಚಂದ್ರ; ಸೂಡಿದನೆ=ಧರಿಸಿದವನೇ; ಏಳು ತಾರಾಗ್ರದೊಳು=ಏಳು ಚಕ್ರಗಳ ತುದಿಯಲ್ಲಿ; ಅಗಧರ=ವಿಷ್ಣು; ಜಾಯಿಲಂಗಳು=ನಾಯಿಗಳು; ಬೆಂದನುಲಿಯುಂದವಾಗಿ=ಸುಟ್ಟ ಹಗ್ಗದ ಹಾಗೆ; ಕುಂದ=ಮಲ್ಲಿಗೆ; ಹಾರ=ಮುತ್ತಿನಸರ; ಪುಂಡರೀಕ=ಬಿಳೀತಾವರೇ; ಪಾಂಡುಃ+ಅಂಗ=ಬಿಳಿದಾದ ಶರೀರ.

೮. ವಿಷ್ಣುವಿನ ಭಕ್ತಿಯ ಪರೀಕ್ಷೆಯ ಕತೆ.—ವಿಷ್ಣುವು ಪ್ರತಿದಿನವೂ ಸಾವಿರ ಕಮಲಗಳಿಂದ ಶಿವನನ್ನು ಪೂಜಿಸುತ್ತಿದ್ದನು. ಒಂದು

ದಿವಸ ಶಿವನು ಅವನ ನಿಷ್ಠೆಯನ್ನು ನೋಡಬೇಕೆಂದು ಒಂದು ಕಮಲವನ್ನು ಕಡಿಮೆ ಮಾಡಿದನು. ವಿಷ್ಣುವು ಅದಂ ತಿಳಿದು ತನ್ನ ವ್ರತಕ್ಕೆ ಭಂಗ ಬರುವದೆಂದು ಆಲೋಚಿಸಿ ಕಡಿಮೆಯಾದ ಕಮಲದ ಬದಲು ಕಮಲಸದೃಶವಾದ ತನ್ನ ನೇತ್ರವನ್ನು ಅತ್ಯಾನಂದದಿಂದ ಶಿವನ ಪಾದಕ್ಕೆ ಅರ್ಪಿಸಿದ್ದರಿಂತ (ಶಿವನು ಮೆಚ್ಚಿ ಸುದರ್ಶನ ಚಕ್ರವನ್ನು ದಯಪಾಲಿಸಿದನು.) ಶಿವನ ಪಾದವು ಹರಿಯ ನಯನದ ಕುರುಹುವಿಡಿದಿರುವುದು.

೮. **ರಾವಣನ ಗರ್ವ ಹರಣದ ಕತೆ.**—ರಾವಣನು ಶಿವಭಕ್ತಿಯಿಂದ ಶ್ರೇಷ್ಠನಾಗಿದ್ದನು. ಆ ಭಕ್ತಿಯ ಮಹಿಮೆಯಿಂದ ಎಲ್ಲ ದೇವತೆಗಳು ಅವನನ್ನು ಸೇವಿಸುತ್ತಿದ್ದರು. ಅದರಿಂದ ಅವನಿಗೆ ನನ್ನಂಥ ಭಕ್ತರು ಮತ್ತು ಪರಾಕ್ರಮಿಗಳು ಯಾರೂ ಇಲ್ಲವೆಂಬ ಅಹಂಕಾರವುಂಟಾಯಿತು. ಮತ್ತು ನಿತ್ಯವೂ ಕೈಲಾಸಕ್ಕೆ ಹೋಗಿ ಶಿವನನ್ನು ಪೂಜಿಸಿ ಬರುವದರ ಬದಲು ಅವನನ್ನೇ ತನ್ನರಮನೆಯಲ್ಲಿ ತಂದಿರಿಸಬೇಕೆಂದು ಯೋಚಿಸಿ (ಅಥವಾ ಶಿವನನ್ನು ನಿತ್ಯವೂ ಪೂಜಿಸಬೇಕೆಂಬ ತನ್ನ ತಾಯಿಯ ಇಚ್ಛೆಯನ್ನು ಅರಿತು) ಕೈಲಾಸಕ್ಕೆ ಹೋಗಿ ಆ ರಜತಾಚಲವನ್ನೇ ಎತ್ತಲು ಪ್ರಯತ್ನಿಸಿದನು. ಶಿವನು ಅವನ ಇಂಗಿತವನ್ನು ತಿಳಿದು ಗರ್ವಹರಣಕ್ಕಾಗಿ ಪಾದದಿಂ ಒತ್ತಿ ಮೆಟ್ಟಿದನು. ರಾವಣನು ಒದ್ದಾಡಿ ಹಲುಬುತ್ತ ಹಲವು ವಿಧವಾಗಿ ಸ್ತುತಿಸಲು ಶಿವನು ಅಹಂಕಾರವು ಒಳ್ಳೆಯದಲ್ಲವೆಂದು ಹೇಳಿ ಅವನನ್ನು ಸಂತೈಸಿದನು.

೮. **ಅಂಧಕಾಸುರನ ಕತೆ.**—ಅಂಧಕನೆಂಬ ದೈತ್ಯನು ತಪದಿಂ ಬಹು ಪರಾಕ್ರಮವಂ ಪಡೆದು ಯುದ್ಧದಲ್ಲಿ ದೇವತೆಗಳಂ ಜಯಿಸಿ ಮೂರು ಲೋಕಗಳನ್ನು ಬಾಧಿಸುತ್ತಿದ್ದನು. ಆಗ ಬ್ರಹ್ಮಾದಿ ದೇವತೆಗಳು ಅಂಜಿ ಸ್ತ್ರೀವೇಷವಂ ಧರಿಸಿಕೊಂಡು ದಿಕ್ಕು ದಿಕ್ಕುಗಳಿಗೆ ಓಡಹತ್ತಿದರು. ಅಸುರನು ತನ್ನೊಡನೆ ಯುದ್ಧ ಮಾಡುವ ಪುರುಷರು ಯಾರೂ ಇಲ್ಲವೆಂಬುದನ್ನು ಚಾರರ ಮುಖದಿಂ ಕೇಳಿ ಕೈಲಾಸಕ್ಕೆ ಹೋಗಿ ಶಿವನನ್ನು ಯುದ್ಧಕ್ಕೆ ಕರೆದನು. ಶಿವನು ಮದಿಸಿದ ಅಂಧಕಾಸುರನನ್ನು ಕೈಯಲ್ಲಿದ್ದ ತ್ರಿಶೂಲದಿಂದಿರಿದು ಮೇಲಕ್ಕೆತ್ತಲು ಶಿವನ ಮಸ್ತಕ ದರ್ಶದ ಮಾತ್ರದಿಂದ ಅವನು ಸಕಲ ಪಾಪಗಳಿಂ ಮುಕ್ತನಾಗಿ ಬ್ರಹ್ಮನಿಗೆ ಸಹ ಕಾಣದ ಶಿವನ ಶಿರವನ್ನು ನೋಡಿದೆನೆಂದು ಪರಮ ಸಂತುಷ್ಟನಾಗಿ ಸ್ತುತಿಸಿದನು. ಅದಕ್ಕೆ ಶಿವನು ಮೆಚ್ಚಿ ವರವನ್ನು

ಬೇಡೆನಲು ಅಂಧಕನು ಪರಶಿವನೇ ತಮ್ಮ ಪಾದದರ್ಶನ ಸಲುವಾಗಿ ನನ್ನ ಎದೆಯಮೇಲೆ ತಾಂಡವನೃತ್ಯವನ್ನು ಮಾಡಬೇಕೆಂದು ವರವನ್ನು ಕೇಳಿದನು. ಶಿವನು ದೇಹದಲ್ಲಿ ನಾಟಿದ ಶೂಲವನ್ನು ಪಾದದಿಂ ಮೆಟ್ಟಿ ಕಿತ್ತು ಅವನ ವಿಸ್ತಾರವಾದ ಎದೆಯಮೇಲೆ ಭರತ ಶಾಸ್ತ್ರದ ನಿಯಮಕ್ಕನುಸಾರ ನಾಟ್ಯ ವನ್ನಾಡಿದನು.

೮. ಜಲಂಧರನ ಕತೆ.—ಜಲಂಧರನೆಂಬ ರಕ್ಕಸನು ಇಂದ್ರನಂ ಜಯಿಸಿ ಸ್ವರ್ಗವನ್ನು ದೈತರಿಗೆ ಕೊಟ್ಟು ತ್ರಿಲೋಕದಲ್ಲಿ ಪ್ರಸಿದ್ಧಿಯನ್ನು ಹೊಂದಿದ್ದನು. ಬಳಿಕ ದೇವತೆಗಳು ಭಯಪಟ್ಟು ಕೈಲಾಸಕ್ಕೆ ಹೋಗಿ ಜಲಂ ಧರನ ವೃತ್ತಾಂತವನ್ನರುಹಿ ಈಗ ಅವನು ತಮ್ಮೊಡನೆ ಯುದ್ಧಕ್ಕೆ ಬರುವ ನೆಂದು ಹೇಳಿದರು. ಆಗ ಶಿವನು ಬ್ರಾಹ್ಮಣನ ವೇಷವಂ ಧರಿಸಿ ರಕ್ಕಸನ ಸಮೀಪಕ್ಕೆ ಬಂದು ನೀನು ಯಾರು? ಎಲ್ಲಿಗೆ ಹೋಗುವೆಯೆಂದು ಕೇಳಿದನು. ಅವನು ಸರ್ವದೇವತೆಗಳಂಜಯಿಸಿ ಶಂಕರನನ್ನು ಜಯಿಸಲು ಬಂದಿರುವೆನೆಂದು ಹೇಳಿದನು. ಬ್ರಾಹ್ಮಣನು—ಶಂಕರನನ್ನು ಯಾರೂ ಜಯಿಸಲಾರರು, ನಿನ್ನಲ್ಲಿ ಅಂಥ ಶಕ್ತಿಯಿದ್ದರೆ ನನಗೆ ಮೊದಲು ತೋರಿಸಬಹುದೆಂದು ಪೇಳಿ ತನ್ನ ಪಾದದ ಬೆರಳಿನಿಂದ ಭೂಮಿಯಲ್ಲಿ ಚಕ್ರವಂ ಬರೆದು ಇದನ್ನು ನೀನು ತಲೆಯ ವರೆಗೆ ಎತ್ತಿದರೆ ಶಂಕರನ್ನು ಜಯಿಸುವೆಯೆಂದು ಹೇಳಿದನು. ಜಲಂಧರನು ಬ್ರಹ್ಮಾದಿಗಳನ್ನು ಜಯಿಸಿದ ನನಗೆ ಇದೇನು ಭಾರವೆಂದು ಹಸ್ತಗಳಿಂದೆತ್ತಿ ತಲೆಯವರೆಗೆ ಒಯ್ಯಲು ಆ ಚಕ್ರವು ಆತನ ಮೇಲೆ ಬಿದ್ದು ಅವನ ಶಿರವು ಎರಡು ಭಾಗವಾಗಿ ಪ್ರಾಣಬಿಟ್ಟನು.

೯. ತ್ರಿಪುರದಹನದ ಕತೆ.—ತಾರಕಾಸುರನ ಮಕ್ಕಳಾದತಾರಕಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿಯೆಂಬ ಮೂವರು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ ಅವನಿಂದ ತಮ್ಮಮೂರು ಪುರಗಳು ಅಂತರಿಕ್ಷದಲ್ಲಿತಿರುಗುತ್ತಿರಬೇಕು; ದೇವತೆಗಳ ದಿವ್ಯ ಸಹಸ್ರವರ್ಷಕ್ಕೊಮ್ಮೆ ಅವು ನಿಂತಾಗ್ಗೆ ಮಹಾತ್ಮನಾದ ಪುರುಷನಿಂದ ಒಂದೇ ಬಾಣದಿಂದ ನಾಶವಾಗಬೇಕಲ್ಲದೆ ಮತ್ತೆ ಯಾವ ಉಪಾಯದಿಂದಲೂ ನಾಶವಾಗದಂತೆ ವರವನ್ನು ಪಡೆದು ಆ ಬಲದಿಂದ ದೇವತೆಗಳನ್ನು ಪೀಡಿಸಹತ್ತಿದರು. ಅದಕ್ಕೋಸ್ಕರ ದೇವತೆಗಳ ಪ್ರಾರ್ಥ ನಾನುಸಾರ ಶಿವನು ಭೂಮಿಯೇ ರಥ, ಮೇರುಪರ್ವತವೇ ಬಿಲ್ಲು, ವಿಷ್ಣುವೇ

ಬಾಣ, ಬ್ರಹ್ಮನೇ ಸಾರಥಿಯನ್ನಾಗಿ ಮಾಡಿಕೊಂಡು ಸಹಸ್ರವರ್ಷ ಯುದ್ಧ ಮಾಡಿದರೂ ಸತ್ಕರ್ಮನಿಷ್ಠರಾದ ರಕ್ಕಸರು ಸೋಲಲಿಲ್ಲ. ಹಾಗೂ ರಕ್ಕಸರು ಮೃತಪಟ್ಟರೂ ಅವರ ಸ್ತ್ರೀಯರ ಪಾತಿವ್ರತ್ಯ ಪ್ರಭಾವದಿಂದ ಪುನಃ ಸಜೀವ ರಾಗುತ್ತಿದ್ದರು. ಆದುದರಿಂದ ವಿಷ್ಣುವು ಬೌದ್ಧರೂಪವನ್ನು ಧರಿಸಿ ರಾಕ್ಷಸರಿಗೆ ದುರ್ಬೋಧನೆಯನ್ನು ಮಾಡಿದನು. ಹಾಗು ಅವರ ಸ್ತ್ರೀಯರು ಜಲಕ್ರೀಡೆಯ ಸಮಯದಲ್ಲಿ ತನ್ನ ಸುಂದರ ರೂಪವನ್ನು ನೋಡಿ ಮೋಹಿಸುವಂತೆ ಮಾಡಿದನು. ಆದರಿಂದ ಅವರ ಪಾತಿವ್ರತ್ಯ ನಾಶವಾಯಿತು. ನಂತರ ಆ ಪುರಗಳು ನಿಲ್ಲುವ ಸಮಯವನ್ನು ಸಾಧಿಸಿ ಬಾಣವಂ ಬಿಟ್ಟು ನಿಮಿಷಾರ್ಧದಲ್ಲಿ ತ್ರಿಪುರಗಳನ್ನು ದಹಿಸಿದನು.

೮. **ಹರಿಯಜರುಗಳ ಗರ್ವಭಂಗ ಕತೆ:**—ಒಮ್ಮೆ ಹರಿಯಜರು ಸಂರಕ್ಷಣ ಕರ್ತನಾದ ನಾನೇ ಅಧಿಕ, ಸೃಷ್ಟಿಕರ್ತನಾದ ನಾನೇ ಅಧಿಕನೆಂದು ಸಹಸ್ರ ವರ್ಷಗಳವರೆಗೆ ಕಾದಿ ನಿರ್ವಿಣ್ಣರಾದರು. ಶಿವನು ಅದಂ ತಿಳಿದು ದಯೆಯಿಂದ ಅವರ ಗರ್ವಭಂಗಕ್ಕಾಗಿ ಅವರ ಮಧ್ಯದಲ್ಲಿ ಶಿವಲಿಂಗ ರೂಪದಿಂದವತರಿಸಿ ತನ್ನ ಪಾದ ಮಸ್ತಕವನ್ನು ನೋಡಿ ಯಾರು ಮುಂಚಿತ ಬರುವರೋ ಅವರೇ ಅಧಿಕರೆಂದು ನಿರ್ಣಯಿಸಿದನು. ಹರಿಯು ಪಾದವನ್ನು ನೋಡುವದರ ಸಲುವಾಗಿ ವರಾಹರೂಪತಾಳಿ ಸಪ್ತಪಾತಾಳವನ್ನು ಅಗಿಯುತ್ತ ಹೋದರೂ ಕಾಣದೆ ತಿರುಗಿ ಬಂದನು. ಬ್ರಹ್ಮನು ಶಿರವನ್ನು ನೋಡುವದರ ಸಲುವಾಗಿ ಹಂಸವಾಹನನಾಗಿ ಸಹಸ್ರ ವರ್ಷಪರ್ಯಂತ ಯತ್ನಿಸಿದರೂ ಕಾಣದೆ ಸುಳ್ಳು ಸಾಕ್ಷಿಯನ್ನು ಕೊಟ್ಟು ಶಿರವಂ ನೋಡಿದೆನೆಂದು ಹೇಳಿದ್ದರಿಂದ ಅಸತ್ಯ ಭಾಷಣಕ್ಕಾಗಿ ತನ್ನ ಪೂಜೆಯನ್ನೇ ಕಳೆದುಕೊಂಡನು. ಕಡೆಯಲ್ಲಿ ಹರಿಯಜರ ಗರ್ವಭಂಗವಾಗಿ ಶಿವನೇಪರಿಪೂರ್ಣವಾದ ತಮ್ಮಪಾದ ಮಸ್ತಕವನ್ನು ಯಾರಿಂದ ನೋಡುವದಾದೀತು? ರಕ್ಷಿಸುರಕ್ಷಿಸೆಂದು ಬೇಡಿಕೊಂಡದ್ದರಿಂದ ಮೆಚ್ಚಿ ಅವರಿಗೆ ವರಪ್ರದಾನ ಮಾಡಿದನು.

೮. **ವೇದಗಳನ್ನು ಶುನಿಎನಿಸಿದ ಕತೆ:**—ಅರ್ಜುನನು ಕೌರವರ ನಾಶಕ್ಕೋಸುಗ ದಿವ್ಯಾಸ್ತ್ರಸಂಪಾದನೆಗಾಗಿ ಶಿವನನ್ನು ಕುರಿತು ಇಂದ್ರಕೀಲ ಪರ್ವತವಲ್ಲಿ ತಪಸ್ಸು ಮಾಡುತ್ತಿದ್ದನು. ಅವನ ಸತ್ವವನ್ನು ಪರೀಕ್ಷಿಸಿ ಅವನ ಬೆನ್ನನ್ನು ಪಾರ್ವತಿಗೆ ತೋರಿಸುವುದರ ಸಲುವಾಗಿ

ತಾನು ಕಿರಾತಕನಾಗಿಯೂ ಪಾರ್ವತಿಯನ್ನು ಕಿರಾತಿನಿಯನ್ನಾಗಿಯೂ ವೇದಗಳನ್ನು ನಾಯಿಗಳನ್ನಾಗಿಯೂ ಗಣಾಧೀಶ್ವರರನ್ನು ತನ್ನ ಸೇವಕರನ್ನಾಗಿಯೂ ಮಾಡಿಕೊಂಡು ಇಂದ್ರಕೀಲ ಪರ್ವತಕ್ಕೆ ಹೋಗಿ ಮೂಕದಾನವನೆಂಬ ರಕ್ಕಸನನ್ನು ಹಂದಿಯನ್ನಾಗಿ ಮೊದಲಟ್ಟಿ ಅದನ್ನು ಬಾಣದಿಂದ ಹೊಡೆಯಲು ಅದಂ ತಾಗಿದಬಾಣ ಸಹಿತ ಅರ್ಜುನನ ಸಮೀಪಕ್ಕೆ ಹೋಯಿತು. ಅರ್ಜುನನು ಅದಂ ನೋಡಿ ಇದು ತಪಸ್ವಿಗಳಿಗೆ ಕೇಡುಮಾಡುವದೆಂದು ತಿಳಿದು ಬಾಣದಿಂದ ಹೊಡೆದನು. ಆ ಹಂದಿಯು ನನ್ನ ಬಾಣದಿಂದ ಬಿತ್ತು ನನ್ನ ಬಾಣದಿಂದ ಬಿತ್ತು ಎಂದು ಆ ವಿಷಯದಲ್ಲಿ ಈರ್ವರಿಗೂ ಯುದ್ಧವಾಗಿ ಅರ್ಜುನನು ಹೊಡೆದ ಎಲ್ಲ ಬಾಣಗಳನ್ನು ಶಿವನು ಕಿತ್ತುಕೊಂಡನು. ಅರ್ಜುನನು ಶಿವಪೂಜೆಯು ತಪ್ಪಿದ್ದರಿಂದ ಈ ಸ್ಥಿತಿಯು ಪ್ರಾಪ್ತಿಯಾಯಿತೆಂದು ಪಶ್ಚಾತ್ತಾಪಪಟ್ಟು ಶಿವಲಿಂಗವನ್ನು ಪೂಜಿಸಿ ನಿಷ್ಠೆಯಿಂದ ಪುನಃ ಯುದ್ಧಕ್ಕೆ ನಿಲ್ಲಲು ಶಿವಲಿಂಗದ ಮೇಲೆ ಏರಿಸಿದ ಪುಷ್ಪಗಳು ಕಿರಾತನ ತಲೆಯಮೇಲೆ ಕಾಣಲು ಈತನೇ ಶಿವನೆಂದು ನಮಿಸಿದನು. ಬಿಲ್ಲಿನಿಂದ ಹೊಡಿಸಿಕೊಂಡ ಶಿವನು ಮೆಚ್ಚಿ ಅವನಿಗೆ ದಿವ್ಯಾಸ್ತ್ರಗಳಂ ಕೊಟ್ಟನು.

೮. **ಮನ್ಮಥದಹನ ಕತೆ:**—ತಾರಕಾಸುರನು ಸಪ್ತದಿವಸದ ಶಿಶುವಿನ ಹೊರತು ಪಂಚಮುಖದವರಿಂದಲೂ ಮರಣವಾಗದ ವರವನ್ನು ಪಡೆದು ಉದ್ಧತನಾಗಿ ದೇವತೆಗಳನ್ನು ಪೀಡಿಸಹತ್ತಿದನು. ದೇವತೆಗಳೆಲ್ಲರೂ ಒಟ್ಟುಗೂಡಿ ಪರಶಿವನ ತಪಸ್ಸನ್ನು ಕೆಡಿಸಿ ಗಿರಿಜೆಯೊಡನೆ ಕೂಡುವಂತೆ ಮಾಡಿದರೆ ಆಗ ಹುಟ್ಟಿದ ಮಗನು ತಾರಕಾಸುರನನ್ನು ಕೊಲ್ಲುವನೆಂದು ನಿಶ್ಚಯಿಸಿ ಶಿವನ ತಪಸ್ಸನ್ನು ಕೆಡಿಸಲು ಮನ್ಮಥನೇ ಸಮರ್ಥನೆಂದು ಬಹುಪರಿಯಿಂದ ಅವನನ್ನು ಒಡಂಬಡಿಸಿ ಕಳುಹಿಸಿದರು. ಆತನು ಪುಷ್ಪ ಬಾಣವನ್ನು ಬಿಟ್ಟು ಶಿವನನ್ನು ಬಹಿರ್ಮುಖನನ್ನಾಗಿ ಮಾಡಿದನು. ಶಿವನು ತನ್ನ ಸಮಾಧಿಗೆ ವಿಘ್ನವಾದ ಕೂಡಲೆ ಅಗ್ನಿನೇತ್ರವನ್ನು ಬಿಡಲು ಮುಂದೆ ನಿಂತಿದ್ದ ಮನ್ಮಥನು ದಹಿಸಿ ಹೋದನು.

೯. :—ಗಹನ=ಅರಣ್ಯ; ತಣುಮಿನ ತಾಣ=ತೃಪ್ತಿಯ ಸ್ಥಾನ; ಹವಣಿಸಬಾರದ=ಗಣನೆಗೆ ಬಾರದ; ಓತು=ಪ್ರೀತಿಯಿಂದ, ಚೆನ್ನಾಗಿ.

೧೦. :—ಶರ್ವ=( ಪಾಪಗಳನ್ನು ) ಸಂಹಾರಮಾಡುವವನು. ನಿರಾ

ತಂಕ=ಅಡ್ಡಿಯಿಲ್ಲದವನು; ವಾಸವ=ಇಂದ್ರ; ವೈಶ್ರವಣ=ಕುಬೇರ; ಭರ್ಗ =ಅಧಿಕ ತೇಜಸ್ಸುಳ್ಳವ; ಮೇರುಕಾರ್ಮುಕ=ಮೇರು ಪರ್ವತವನ್ನೇ ಧನಸ್ಸು ಮಾಡಿಕೊಂಡವನು; ಕಪರ್ದಿ=ಜಡೆಮುಡಿಯುಳ್ಳವ; ನಿರಾಮಯ =ರೋಗರಹಿತನು; ಮಂದಾಕಿನೀಧರ=ದೇವಗಂಗೆಯನ್ನು ಧರಿಸಿದವ.

೧೦. ಸಾನಂದ ಋಷಿಯಕತೆ—ಪೂರ್ಣವಿತ್ತನ ಮಗನಾದ ಸಾನಂದನು ಗರುಡ ಪುರಾಣದಲ್ಲಿಯ ನರಕ ಯಾತನೆಯ ವರ್ಣನೆಯನ್ನು ಕೇಳಿ ವ್ಯಸನವುಳ್ಳವನಾಗಿ ನಾರಕಿಗಳ ನಿವೃತ್ತಿಗೋಸುಗ ಯಮನ ಪಟ್ಟಣಕ್ಕೆ ಹೋದನು—ಯಮನು ಅರ್ಘ್ಯಪಾದ್ಯಾದಿ ಉಪಚಾರಗಳಿಂದ ಅವರಂ ಸತ್ಕರಿಸಿ ತಮ್ಮ ಆಗಮನದ ಉದ್ದೇಶವೇನೆಂದು ಕೇಳಿದನು—ಸಾನಂದನು ಯಮನೇ! ನಾರಕಿಗಳನ್ನು ನೋಡುವ ನಿಮಿತ್ತವಾಗಿ ಬಂದಿರುವೆ ತೋರಿಸಬೇಕೆನಲ್ಃ ಯಮನು—ಸ್ವಾಮಿ ತಾವು ನೋಡಬಾರದೆಂದು ಎಷ್ಟೋ ವಿನಯದಿಂದ ಹೇಳಿ ದರೂ ಕೇಳದೆ ಆಗ್ರಹಪಡಿಸಲು ನಿರುಪಾಯನಾಗಿ ತೋರಿಸುತ್ತಾ ಬರಹತ್ತಿ ದನು. ಸಾನಂದನು ಮಹಾ ಯಾತನೆಯನ್ನು ಹೊಂದುತ್ತಿರುವ ನಾರಕಿಗಳಂ ನೋಡಿ ದಯೆಹುಟ್ಟಿ ಅಲ್ಲಿದ್ದ ನಾರಕಿಗಳಿಗೆಲ್ಲಾ ಕೇಳುವಂತೆ ಶಿವಪಂಚಾಕ್ಷರಿ ಮಂತ್ರವನ್ನು ನುಡಿಯಲು ಅವರೆಲ್ಲರೂ ಕೇಳಿ ತಾವೂ ನುಡಿಯುತ್ತಾ ನರಕ ದಿಂದ ನಿವೃತ್ತರಾದರು.

೧೧. ನಿರಪಾಯ=ಅಪಾಯವಿಲ್ಲದವನು. ಸದಾಗತಿ ಹಂಸ=ಯಾವಾ ಗಲೂ ಮುಕ್ತ ಸ್ವರೂಪನು. ಗಾಂಗೇಯಪಿತ=ಷಣ್ಮುಖನ ತಂದೆ. ಪಿನಾಕಿ= ಪಿನಾಕವೆಂಬ ಧನುವನ್ನು ಧರಿಸಿದವನು. ಐಂಕಿಲಾಮಾಲಿನಿ=ಅಹಂಕಾ ರದಿಂದ ಕೂಡಿದ ರಾಕ್ಷಸರ ರುಂಡವನ್ನು ಮಾಲೆಯಾಗಿ ಧರಿಸಿದವಳು. ಮಾ ತಂಗಿ=ಗಜ ಚರ್ಮ ಧರಿಸಿದವಳು. ಕ್ಲೀಂಕಲೆ=ಕ್ಲೀಂ ಆದಿ ಮಂತ್ರಜ್ಞಾನ ವುಳ್ಳವಳು. ಕ್ರೌಂಕವಚ=ಶ್ರೇಷ್ಠವಾದ ಮಂತ್ರ ಕವಚವುಳ್ಳವಳು. ಶ್ರೀಂಕಿಲಾ ಕಾರೆ=ಐಶ್ವರ್ಯವನ್ನು ಕೊಡುವವಳು. ಗೌರಿ=ಎಂಟು ವರ್ಷದವಳು. ಗು ಹಜನನಿ=ಷಣ್ಮುಖನ ತಾಯಿ. ವಿರಜೆ=ರಜೋಗುಣ (ರಜಸ್ಸು) ಇಲ್ಲದವಳು ಕುಟಿಲೆ=ದುಷ್ಟರಿಗೆ ವಕ್ರಳು. ಚಂಡಕರ=ಬಲವನ್ನುಂಟುಮಾಡುವವಳು. ಕರಾಳೆ=ಅಗ್ನಿ ನಾಲಿಗೆಯುಳ್ಳವಳು.

೧೨. ಉಮಾ=ಪ್ರಣವ ಸ್ವರೂಪಳು. ನಿರಾಕುಲ=ಉಪಾಧಿರಹಿತ

ಅಂಬು ನಿತಂಬಿನಿ=ಗಂಗೆಯೆಂಬ ಸ್ತ್ರೀಯಳನ್ನು. ಕರ್ಣಾಕಲಿತನೆ=ಕಿವಿಯಲ್ಲಿಟ್ಟುಕೊಂಡು ಶೋಭಿಸಿದವನೇ. ಕಂತುಕದಂಬಕ=ಅನೇಕ ಮನ್ಮಥರು ಒಟ್ಟುಗೂಡಿದ. ರೋಲಂಬ=ಭ್ರಮರ. ಗಂಧವಹನೇ=ಮೂಗುಳ್ಳವನೇ. ಬಿಸ=ವಿಷ. ಪೇರುರನೆ=ಅಗಲವಾದ ಎದೆಯುಳ್ಳವನೆ.

೧೨. ಅಶ್ವತ ಕಂಬಲರೆಂಬ ಸಾಮವೇದದ ಶಾಖೆಗಳು ಸರ್ಪರೂಪಗಳಾಗಿ ಶಿವನ ಕಿವಿಗಳಲ್ಲಿ ಕುಂಡಲಾಭರಣ ರೂಪದಿಂದಿದ್ದು ಗಾನಮಾಡುತ್ತಾ ಗಾನಲೋಲನಾದ ಶಿವನನ್ನು ಆನಂದಪಡಿಸುತ್ತಿರುವವು.

೧೪. ಗರುವನೆ=ಹಿರಿಯನ್ನೆ, ಶ್ರೇಷ್ಠನೆ. ಓಪನೆ=ಪತಿಯೇ.

**ದೇವತೆಗಳ ಅಹಂಕಾರ ನಿರಸನ ಕತೆ:—**ಅಗ್ನಿ ವಾಯು ವರುಣ ಮೊದಲಾದ ದೇವತೆಗಳಿಗೆ ತಾವು ಸಮರ್ಥರೆಂಬ ಗರ್ವ ಉಂಟಾಗಿತ್ತು. ಆ ಗರ್ವಹರಣದ ಸಲುವಾಗಿ ಶಿವನು ಒಬ್ಬ ಯಕ್ಷನ ರೂಪವನ್ನು ಧರಿಸಿ ದೇವತೆಗಳ ಮಧ್ಯದಲ್ಲಿ ಪ್ರಕಟನಾದನು. ದೇವತೆಗಳು ಎಲೋ ಯಕ್ಷನೇ, ನೀನು ನಮ್ಮ ಸಾಮರ್ಥ್ಯವನ್ನು ತಿಳಿಯದೆ ಏನು ಕಾರಣ ಬಂದಿರುವಿ? ಎನ್ನಲು ಯಕ್ಷನು ಒಬ್ಬೊಬ್ಬರನ್ನು ಕುರಿತು ನೀನು ಯಾರು ನಿನ್ನಸಾಮರ್ಥ್ಯವೇನೆಂದು ಕೇಳಿದನು. ನಾನು ಅಗ್ನಿ ಸರ್ವವನ್ನೂ ದಹಿಸಿ ಬಿಡುವೆನು. ನಾನು ವಾಯುವು ಸರ್ವವನ್ನೂ ಹಾರಿಸಿಬಿಡುವೆನು. ನಾನು ವರುಣ ಸರ್ವವನ್ನೂ ಮುಳುಗಿಸಿ ಬಿಡುವೆನು. ಹೀಗೆ ಎಲ್ಲಾ ದೇವತೆಗಳೂ ಹೇಳಿದರು. ಆಗ ಯಕ್ಷನು ಒಂದು ಹುಲ್ಲುಕಡ್ಡಿಯನ್ನು ಅವರ ಮಧ್ಯದಲ್ಲಿಟ್ಟು ನಿಮ್ಮ ನಿಮ್ಮ ಶಕ್ತಿಯನ್ನು ತೋರಿಸಿರೆಂದು ಹೇಳಿ ಸರ್ವರ ಶಕ್ತಿಗೂ ಆಧಾರರೂಪನಾದ ಶಿವನು ಅವರಲ್ಲಿರುವ ತನ್ನ ಶಕ್ತಿಯನ್ನು ಶೆಳೆದುಕೊಂಡನು. ದೇವತೆಗಳು ಸ್ವಸಾಮರ್ಥ್ಯವಿಲ್ಲದೆ ಹುಲ್ಲುಕಡ್ಡಿಯನ್ನೂ ಸಹಾ ಏನೂ ಮಾಡಲಿಕ್ಕೆ ಸಾಮರ್ಥ್ಯವಿಲ್ಲದವರಾಗಿ ತಲೆಯನ್ನು ಬಾಗಿದರು.

೧೫. ಪೊಪ್ಪುಮಾಡಿ=ಸಮಾಧಾನಪಡಿಸಿ. ಹೆಂದದ=ಸ್ಥಿರವಾದ. ಎಳೆವರೆಯದ=ಎಳೇಪ್ರಾಯದ. ೧೬. ಮನೋಜ+ದಂಡಧರ ವಿಜಿತ=ಮನ್ಮಥನನ್ನೂ ಯಮನನ್ನೂ ಗೆದ್ದವನು. ಇಮ್ಮೈಗಾಣಲು=ಇಬ್ಭಾಗವಾಗಲು. ಶಿವದಿಡುವೆನು=ಶಿವನೇ ಎಂದು ಮೊರೆಯಿಡುವೆನು. ಅನುಗೆಡುವೆನು=ನಾಶಹೊಂದುವೆನು, ರೀತಿಗೆಟ್ಟವನಾಗುವೆನು. ೧೭. ಗಾರು=ಶ್ರಮ. ೧೮. ಅಂಡ

ಲೆವ=ಕಷ್ಟಪಡಿಸುವ. ತೊಣೆಯದ=ಚದಲದ. ಉಕ್ಕನು=ಉತ್ಸಾಹ ವನ್ನು. ತರಹರಿಪನೆಲೆ=ಸ್ಥೈರಣೆಯಸ್ಥಾನ.

೧೮. ದಕ್ಷಬ್ರಹ್ಮನಕತೆ:—ದಕ್ಷಬ್ರಹ್ಮನು ತನ್ನ ಅಳಿಯನಾದ ಪರ ಮೇಶ್ವರನ ಮನೆಗೆ ಹೋದಾಗ ತನಗೆ ಸತ್ಕಾರವಾಗದಿರಲು ಕೋಪಗೊಂಡು ಹಿಂತಿರುಗಿ ಬಂದು ಒಂದು ಯಜ್ಞದಮೂಲಕ ಶಿವನಿಗೆ ಹವಿರ್ಭಾಗವನ್ನು ಕೊಡದೆ ಅವಮಾನಿಸಲು ನಿಶ್ಚಯಿಸಿ ಯಜ್ಞವನ್ನಾರಂಭಿಸಿದನು. ದಾಕ್ಷಾ ಯಣಿಯು ಆಗ್ರಹಪೂರ್ವಕವಾಗಿ ಪತಿಯಾಜ್ಞೆಯಂ ಪಡೆದು ತಂದೆಯ ಯಜ್ಞಕ್ಕೆ ಹೋದಳು. ಅಲ್ಲಿ ಆಕೆಗೆ ಸತ್ಕಾರವಾಗಲಿಲ್ಲ. ಹಾಗೂ ಪತಿಗೆ ಹವಿರ್ಭಾಗ ದೊರೆಯಲಿಲ್ಲ. ಅದಕ್ಕಾಗಿ ಯಜ್ಞಕುಂಡದಲ್ಲಿ ತನ್ನ ದೇಹವನ್ನು ಪತಿ ಪ್ರೀತ್ಯರ್ಥ ಅರ್ಪಿಸಿದಳು. ಈ ಸಂಗತಿಯನ್ನು ಶಿವನು ತಿಳಿದು ತನ್ನ ಜಟೆಯನ್ನಪ್ಪಳಿಸಲು ವೀರಭದ್ರನು ಜನಿಸಿ ತಂದೆಯಾಜ್ಞೆಯಂತೆ ದಕ್ಷನ ಯಜ್ಞ ಮಂಟಪದಲ್ಲಿದ್ದವರನ್ನೆಲ್ಲಾ ಅಂಗ ಹೀನರನ್ನಾಗಿ ಮಾಡಿ ದಕ್ಷನ ತಲೆ ಯನ್ನು ಕಡಿದು ಅಗ್ನಿಯಲ್ಲಿ ಹಾಕಿ ಹೋಮಮಾಡಿದನು. ಶಂಕರನು ದಕ್ಷನಿಗೆ ಮುದಿಹೋತನ ತಲೆಯನ್ನಿಡಿಸಿ ಪ್ರಾಣದಾನವನ್ನು ಮಾಡಿದನು.

೧೯. ಋಷಿಪತ್ನಿಯರನ್ನು ಲಜ್ಜಿಸಿದ ಕತೆ:—ದಾರುಕವನದ ಋಷಿಗಳು ಶಿವಭಕ್ತಿ ವಿಹೀನರಾಗಿ ಕರ್ಮದಿಂದಲೇ ಭೋಗಮೋಕ್ಷವೆಂಬ ಕುತ್ಸಿತ ಮಾರ್ಗವಂ ಕಲ್ಪಿಸಿಕೊಂಡು ತಪವನ್ನಾಚರಿಸುತ್ತಿದ್ದರು. ಶಿವನು ಈ ಸಂಗತಿಯಂ ಬ್ರಹ್ಮಾದಿ ದೇವತೆಗಳಿಂದ ಕೇಳಿ ವಿಷ್ಣುವೇ ನೀನು ಮೋಹಿನೀ ರೂಪವನ್ನು ಧರಿಸಿ ನನ್ನಲ್ಲಿ ಉದಾಸೀನರಾದ ಋಷಿಗಳಿಗೆ ಮೋಹವಂ ಹುಟ್ಟಿ ಸೆಂದು ಹೇಳಿ ತಾನು ಕಂದರ್ಪ ಸದೃಶನಾಗಿ ಶಿವಕೀರ್ತನ ಗಾನಾದಿಗಳೊ ಡನೆ ಲೀಲೆಯಿಂದ ಭಿಕ್ಷಾಟನವನ್ನು ಮಾಡುತ್ತಾ ಋಷಿಗಳ ಆಶ್ರಮಕ್ಕೆ ಹೋದನು. ಆ ಸಮಯದಲ್ಲಿ ಋಷಿಪತ್ನಿಯರು ಯೌವನಪುರುಷನಾಗಿ ಅತಿ ಸೌಂದರ್ಯವಂತನಾದ ಶಿವನನ್ನು ನೋಡಿ ಕಾಮವಶದಿಂದ ಮೋಹಿತರಾಗಿ ಭಿಕ್ಷೆಯನ್ನೀಯುವ ನೆಪದಿಂದ ಆತನ ಸಮೀಪಕ್ಕೆ ಬರಲು ಕೂಡಲೇ ಗರ್ಭ ಗಳಂ ಧರಿಸಿ ಪುತ್ರರಂ ಪಡೆದರು.

೨೦+೨೧. ದೇವ ನೀನು ದಯೆದೋರದ ಒಂದು ನಿಮಿಷವೇ ಅನೇಕ ವರ್ಷವು. ನಾನು ಹೇಗೆ ಉಳಿಯುವೆನು? (ಉಳಿಯಲಾರೆನು) ರಕ್ಷಿಸು.

॥ಪ॥ ಜ್ಞಾನವಿರೋಧಿಯಾದ ಮಾಯಾವಿಕಾರದ ಬಹುಧಾನ್ಯಗಳೇ ಪುರುಷರ ವೀರ್ಯವಾಗಲು, ಆ ವೀರ್ಯದಿಂದಲೇ ಈ ಎಲ್ಲ ಪ್ರಜೆಗಳ ಹುಟ್ಟುವಿಕೆಯನ್ನು ಮಾಡುತ್ತಿರುವೆ ಸರ್ವೇಶ್ವರ॥೧॥ ಸಿಟ್ಟಾಗಿ ಕಾಮನ ಪರಾಕ್ರಮವನ್ನು ಗೆದ್ದು ಮೂರು ಪುರಗಳ ದುಷ್ಟರಾದ ರಾಕ್ಷಸರನ್ನು ಸಂಹರಿಸಿ ನಳರಾಜನೇ ಮೊದಲಾದ ಐಶ್ವರ್ಯವುಳ್ಳ ಸಜ್ಜನರಿಗೆ ಮನೋಹರವಾದ ಆನಂದವನ್ನುಂಟುಮಾಡುವ ಅಧಿಕನೆ ॥೨॥ವಿಚಾರಿಸಲು ಜನನಾದಿ ನಾಶಕಡೆಯಾದವರ ಮನಸ್ಸಿನವಿಕಾರತ್ವವಿಲ್ಲದಂಥ (ಷಡ್ಭಾವವಿಕಾರರಹಿತ) ಜೀವರನ್ನು ದುಃಖ ಸಮುದ್ರದಿಂದ ದಾಟಿಸಲು ನಾವೆಯಾದಂಥ ಮಹತ್ವದ ವೈಭವವುಳ್ಳ ಶಂಭುಲಿಂಗವೇ ॥೩॥ ಪ್ಲವ=ನಾವೆ. ಪುಟ ೨೧. ಕಮಲ ಮುಖಿಯಾದ ಜ್ಞಾನಶಕ್ತಿಯೇ ಬ್ರಹ್ಮನ ಐದು ಮುಖವುಳ್ಳ ಸ್ಥಿತಿಯನ್ನು (ಇರುವಿಕೆಯನ್ನು) ನಾಲ್ಕು ಮುಖವುಳ್ಳವನನ್ನಾಗಿ ಮಾಡಿದವನನ್ನು ತಂದು ತೋರಿಸೆ ॥ಪ॥ ಪರ್ವತರಾಜನ ಮಗಳಿಗೆ (ಪಾರ್ವತಿಗೆ) ಮೆಚ್ಚಿ, ಲೋಭಿಯೆನಿಸದೆ ಭೂಜನರಿಗೆ ದಯವಿತ್ತು ಭೂಮಿಯನ್ನು ಸಾವಿರ ಹೆಡೆಗಳಲ್ಲಿ ಧರಿಸಿದವ (ಆದಿಶೇಷ)ನನ್ನು ಆಭರಣವನ್ನಾಗಿ ಧರಿಸಿ ಸೂರ್ಯನ ಮಗ (ಯಮ) ನನ್ನು ತಿವಿದು ಮೀರಿದವನ ॥೧॥ ಮೋಡದ ವೈರಿಯ (ವಾಯುವನ್ನು) ಸೇವಿಸುವ ಹಾವಿಗೆ (ರಾಹು) ವೈರಿಯಾದ ಚಂದ್ರನ ಅಳಿಯನಾದ ಕಾಮನಿಗೆ ವೈರಿಯಾಗಿಯೂ, ಇಂದ್ರನ ಮಗ (ಅರ್ಜುನ) ನೊಡನೆ ವೈರಿಯಹಾಗೆ ಯುದ್ಧಮಾಡಿ, ದೇವಗಂಗೆ ಮತ್ತು ಚಂದ್ರನನ್ನು ಧರಿಸಿ ಮನೋಹರನಾದವನನ್ನು ॥೨॥ ಲಕ್ಷ್ಮಿಯ ಒಡೆಯನಾದ ವಿಷ್ಣುವು ಕಡಿಮೆಯಾಗದ ಸಾವಿರ ಕಮಲಗಳನ್ನು (ಏರಿಸುತ್ತಿರಲು) ಒಂದು ಕಾಲದಲ್ಲಿ ಕಡಿಮೆಯಾದ ಕಮಲಕ್ಕೆ ಬದಲು ಕಮಲಸದೃಶವಾದ ನೇತ್ರವನ್ನು ಹೃದಯವೆಂಬ ಕಮಲ ಅರಳಲು ಸಂತೋಷದಿಂದ ಕರಕಮಲದಿಂದ ತೆಗೆದು ಚರಣಕಮಲಕ್ಕೆ ಏರಿಸಲು (ವಿಷ್ಣುವಿಗೆ) ಮೆಚ್ಚಿದ ಶಂಭುಲಿಂಗನನ್ನು ॥೩॥

೨೧. ಮನೋಹರವಾದ (ಆಕಾಶದಲ್ಲಿರುವ) ದೇವಗಂಗೆ ಚಂದ್ರರನ್ನು ತಲೆಯಲ್ಲಿ ಉಳ್ಳವನೇ (ಭೂಜನರಿಗೆ ಸಂತೋಷವನ್ನುಂಟುಮಾಡುವ ವರದ ಕರನೇ) ಸಾರಂಗ ಮೃಗವನ್ನು ಕೈಯಲ್ಲಿ ಉಳ್ಳವನೇ ॥ಪ॥ ಸುಂದರವಾದ ಮನ್ಮಥನನ್ನು ಅಗ್ನಿ ನೇತ್ರದಿಂದ ಸುಟ್ಟವನೇ। ನರಸಿಂಹರೂಪದ ವಿಷ್ಣುವನ್ನು ಲಯಪಡಿಸಿ ಕೊಂದ ಧೈರ್ಯವುಳ್ಳವನೇ। ಯಮನೆದೆಯನ್ನು ತೀಕ್ಷ್ಣವಾದ

ಶೂಲದಿಂದ ತಿವಿದವನೇ। ವಿಷ್ಣುವಿನಿಂದ ನಮಸ್ಕರಿಸಿಕೊಂಡಪಾದವುಳ್ಳವನಾಗಿ ನರಸಿಂಹ ಚರ್ಮವನ್ನು ಧರಿಸಿದವನೆ ॥೧॥ ಪಾರ್ವತಿಯಿಂದ ಕೂಡಿದ ಎಡದೊಡೆಯುಳ್ಳ ಚಂದ್ರನಂತೆ ಪ್ರಕಾಶವುಳ್ಳವನೇ। ಕುಬೇರನಗೆಳೆಯನೆ, ಯೋಗಿಗಳಿಗೆ ಕಲ್ಪವೃಕ್ಷನೇ। ಸೋಮನೆಂಬ ಹೆಸರುಳ್ಳವನೇ, ಜಗತ್ತಿಗೆ ಸುಖವನ್ನುಂಟು ಮಾಡುವ ಸ್ವಭಾವದವನೆ। ಚಂದ್ರಕಲೆಗೆ (ಹದಿನಾರುಕಲೆಗೆ) ಮೀರಿದವನೆ· ಮುಕ್ತಿಯ ಕೊಡತಕ್ಕವನೆ ॥೨॥ ಶ್ರೇಷ್ಠವಾದ ಸದ್ಗುಣಗಳ ಮಾಲೆಯಲ್ಲಿ ಪೋಣಿಸಲ್ಪಟ್ಟ ದಾರವುಳ್ಳವನೆ। ಶ್ರೇಷ್ಠವಾದ ಭಕ್ತರ ಸಂಸಾರ ಸಮುದ್ರಕ್ಕೆ ಹಡಗಿನಂತಿರುವನೆ । ಸರಸ್ವತಿಯ ಒಡೆಯನಾದ ಬ್ರಹ್ಮನ ಮನೋಹರ ಸ್ತುತಿಗೆ ಯೋಗ್ಯನೆ। ಜ್ಞಾನಿಗೆ ಪ್ರಾಪ್ತಿಯಾಗುವ ಆನಂದವೆಂಬ ವನಕ್ಕೆ ಚೈತ್ರಮಾಸದಂತಿರುವನೆ ॥೩॥

೨೨. ಪರಪುಟ್ಟ=ಬೇರೆಯವರಿಂದ ಪುಟ್ಟಿದವನು ಅಥವಾ ರಕ್ಷಿಸಲ್ಪಟ್ಟ.

೨೩. ಜನನಮರಣಕ್ಕೆ ಆರು+ಎನೆ; ಪೇಸುತಿಹ ಪೇಯವನು= ಅಸಹ್ಯಪಡುತಿರುವ ಹೇಯವನ್ನು.

೨೪. ಅಡಸಿತೀರದ=ತುಂಬಿಕೊಂಡು ಮುಗಿಯದ.

೨೬. ಮರಸಿಜನರು ನೋವುವೆಡೆಯೊಳು=ಜನರು ಮೋಸಮಾಡಿ ಘಾಸಿಪಡಿಸಿ ಸಂಕಟಪಡಿಸುವಾಗ, ಜೆಗುಳೆ=ಜಗ್ಗಲು. ಹೀರಿಕೊಳ್ಳಲು. ಅಳುಪಿ=ಕೆಡಿಸಿ. ಮಿಗಿಲನನುಕರಿಸಿ=ಹೆಚ್ಚಿಗೆಯನ್ನು ಅಂಗೀಕರಿಸಿ.

೨೭. ಕೆಮ್ಮನೆ=ತೀವ್ರವಾಗಿ; ಮುಡಿಯ ನವಿರನು=ತುರುಬಿನ ಕೂದಲುಗಳನ್ನು; ನಿರತವನಾಂತು=ಪ್ರೇಮದಿಂದ ಕೂಡಿ; ಬಿನ್ನಣ= ಬಿಗುಮಾನ, ಗೌರವ; ತವಕ=ಆತುರ.

೨೮. ಒಬ್ಬುಳಿಯುಹ=ಸಮುದಾಯ; ನಿತಂಬ=ಪಿರ್ರೆ; ತೆಳು ವಸುರ=ತೆಳುವಾದ ಹೊಟ್ಟೆ; ಚೊಲ್ಲೆಯದ=ತುರುಬಿನ ತುದಿ; ಕಂಬುಗ್ರೀವದ=ಶಂಖದಂತೆ ಕಂಠವುಳ್ಳ; ವೊಗರನುಗುವ=ಪ್ರಕಾಶವನ್ನುಂಟುಮಾಡುವ; ಅಸಿಯಳ=ಸ್ತ್ರೀಯಳ; ಅಳ್ಳಿರಿವುದು=ಕಳವಳಗೊಳಿಸುವುದು.

೨೯. ಗೆಲವು=ಆರೋಗ್ಯ; ಬೀಸುಹೂರಿಗೆ=ಒಂದುತರದ ಕಜ್ಜಾಯ.

೩೦. ತವಿಸಿ=ಶಾಂತಿಪಡಿಸಿ; ಅವಗಡಿಸಿ=ಆವರಿಸಿ; ಲವಲವಿಸಿ= ಹರ್ಷಿಸಿ,

೩೧. ಸಂಕ್ರಮಣ=ಕೂಡುವಿಕೆ; ಆರಡಿತನ=ದುರ್ವಾರ್ತೆಯು, ಅಪಕೀರ್ತಿಯು. ಹೇಯುವೆಂಬ ಮತಿದೊರೆದು=ತಿರಸ್ಕಾರ ಬುದ್ಧಿಯುಂಟಾಗಿ.

೩೧+೩೨ **ಗಣಿತವಿದನು:**—ಮುಂದೆ ಹೇಳುವ ಲೆಕ್ಕವನ್ನು ಅಧ್ಯಾರೋಪಮಾಡಿ (ಕೂಡಿ) ಅಪವಾದ ಮಾಡಬಲ್ಲಾತನೇ ತತ್ವವಿಚಾರ ಮಾಳ್ಪವರಲ್ಲಿ ಶ್ರೇಷ್ಠನೆನಿಸುವನು ॥ಪ॥ ಪ್ರಕೃತಿಯೊಂದನ್ನು ಮೂರು ಅಹಂಕಾರದಿಂದ ಹೆಚ್ಚುಮಾಡುತ್ತ, ವೈಕಾರಿಕ ಅಹಂಕಾರದಿಂದ ಅಂತಃಕರಣ ಪಂಚಕವನ್ನು ಜ್ಞಾನೇಂದ್ರಿಯ ಪಂಚಕವನ್ನೂ, ತೈಜಸ ಅಹಂಕಾರದಿಂದ ಕರ್ಮೇಂದ್ರಿಯ ಪಂಚಕವನ್ನು ಪ್ರಾಣಪಂಚಕವನ್ನೂ, ಭೂತಾದಿ ಅಹಂಕಾರದಿಂದ ಪಂಚ ಮಹಾಭೂತಗಳನ್ನೂ ಮಾಡುತ್ತಾ ಆ ಪಂಚ ಮಹಾಭೂತಗಳನ್ನು ಪುನಃ ಒಂದೊಂದರಲ್ಲಿ ಐದೈದು ಭಾಗ ಮಾಡಿ ಕೂಡಿಸಲು ವ್ಯಷ್ಟಿಸಮಷ್ಟಿರೂಪ ಸ್ಥೂಲಶರೀರವಾಯಿತು ॥೧॥ ಬ್ರಹ್ಮಾಂಡ ಒಂದರಲ್ಲಿ ಹದಿನಾಲ್ಕು ಲೋಕಗಳು ತೋರಲು ಆ ಲೋಕಗಳ ಮಧ್ಯದ ಭೂಲೋಕ ಒಂದರಲ್ಲಿ ಅಷ್ಟದಿಗ್ಗಜಗಳು ಕಾಣಿಸಿಕೊಳ್ಳಲು, ಸಪ್ತದ್ವೀಪಗಳು ತೋರಲು ಮತ್ತೆ ಸೂರ್ಯ ಚಂದ್ರ ಅಗ್ನಿ ಮೂರುತೋರಲು, ಇಪ್ಪತ್ತೇಳು ನಕ್ಷತ್ರಗಳಕ ತೋರಲು ಅಥವಾ ನವಗ್ರಹಗಳ ಒಂದೊಂದು ಮೂರುಮೂರು ನಕ್ಷತ್ರಗಳಿಂ ಕೂಡಿ ಚಮತ್ಕಾರದಿಂ ಇಪ್ಪತ್ತೇಳನೊಳಕೊಂಡು ಇರುವದಾಗಲು ಕಡೆಯಲ್ಲಿ ॥೨॥ ಅದ್ವಿತೀಯ ಸ್ವರೂಪ ವ್ಯಾಪಕ ಚೈತನ್ಯದಲ್ಲಿ ಐಕ್ಯವಾಗುತ್ತ ಸತ್ಯಾದಿ ಐದುಲಕ್ಷಣಹೊಂದಿ ಒಂದಾದ ಶಂಭಲಿಂಗ ಸ್ವರೂಪದಲ್ಲಿ ಜ್ಞಾನಿಗಳು ಐಕ್ಯವಾಗುತ್ತ ಲೆಕ್ಕವ ಮಾಡಿದ್ದಾದರೆ ಜಗತ್ತಿನ ಅತ್ಯಂತಾಭಾವಕ್ಕೆ ಅಧಿಷ್ಠಾನವಾದ ತಾನೊಬ್ಬನೇ ಉಳಿದನೇ ಹೊರತು ಬೋರೊಂದು ಶೂನವೇನೂ ಉಳಿಯಲಿಲ್ಲ ॥೩॥

೩೨. ಪಳುವಿನ ಪೊನಲಕಾಲುವೆ=ಕಾಡಿನ ಪ್ರವಾಹದ ಕಾಲುವೆ, ಕರಗಿದೆರಕವು=ಕರಗಿಸಿದ (ಲೋಹ) ರಸವ ಅಚ್ಚಿಗೆ ಹೊಯ್ಯುವದು; ರಸಪಾಕ ಪರಿಣತೆ=ರಸದ್ರವ್ಯಗಳ ಅಡಿಗೆಯು ಪರಿಣಾಮು.

೩೩. ನನೆಗೋಲು=ಪುಷ್ಪಬಾಣ.

೩೪. ಉನ್ನಿಪುದಂ=ನಿಶ್ಚಯಿಸತಕ್ಕದ್ದು; ಅಭ್ರ=ಆಕಾಶ; ಸೌರಭದ=ಸಂವಾಸನೆಯು; ಗಾಡಿ=ಕೀರ್ತಿ,

೩೬. ಹೊರಜೆ=ಹೂಡುವ ಮಿಣಿಯು; ಆಲಂಬರಹಿತ =ಆಶ್ರಯವಿಲ್ಲದ.

೩೭. ಊಣೆ=ಕೊರತೆ; ಉರದೇರುವನು=ಎದೆಯ ಗಾಯವನ್ನು.

೩೮. **ಹರಿಗಾದ ಹಾನಿ:**—ದೇವಾಸುರರಿಗೆ ಕಲಹವಾಗಿ ವಿಷ್ಣುವು ರಾಕ್ಷಸರನ್ನು ಸಂಹರಿಸುತ್ತಿರಲು ಕೆಲಬರು ರಾಕ್ಷಸರು ಭೃಗು ಆಶ್ರಮಕ್ಕೆ ಹೋಗಿ ಭೃಗುಪತ್ನಿಯುಂ ಮರೆಹೊಕ್ಕರು. ವಿಷ್ಣುವು ಅಲ್ಲಿಗೂ ಬರಲು ಆ ಭೃಗುಪತ್ನಿಯು—ಮುನೀಶ್ವರರು ಆಶ್ರಮದಲ್ಲಿಲ್ಲದ್ದರಿಂದ ನೀನು ಇಲ್ಲಿ ಬರಬಾರದು ಮತ್ತು ನನ್ನನ್ನು ಮರೆಹೊಕ್ಕಿರುವ ರಕ್ಕಸರನ್ನು ಕೊಲ್ಲಬಾರದೆಂದು ಹೇಳಿದರೂ ಕೇಳದೆ ವಿಷ್ಣುವು ರಾಕ್ಷಸರನ್ನೂ ಆಕೆಯನ್ನೂ ಚಕ್ರದಿಂ ಸಂಹರಿಸಿ ಹೋದನು. ಮುನಿಯು ಬಂದು ಜ್ಞಾನದೃಷ್ಟಿಯಿಂದ ಎಲ್ಲವನ್ನು ತಿಳಿದು ಕೋಪದಿಂದ ಹೇ ಪಾತಕಾಗ್ರಣಿ! ನಿರಪರಾಧಿಯಾದ ನನ್ನ ಪತ್ನಿಯ ಶಿರಸ್ಸನ್ನು ಕತ್ತರಿಸಿದೆಯಾದ್ದರಿಂದ ಮತ್ಸ್ಯಾದಿ ಹತ್ತು ಅವತಾರ ಧರಿಸೆಂದ ಶಪಿಸಿದ್ದರಿಂದ ವಿಷ್ಣುವು ಶಾಪಗ್ರಸ್ತನಾಗಿ ಹಾನಿಹೊಂದಿದನು.

೩೧. **ಅಜನಿಗಾದೆಡರು:** (ಸರಸಿಜೋದ್ಭವನ ನಡುದಲೆಯೊಂದನಳಿದ) ಬ್ರಹ್ಮ-ಒಮ್ಮೆ ಬ್ರಹ್ಮನು ಜಗತ್ಕರ್ತನಾದ ತಾನೇ ಅಧಿಕನೆಂಬ ಗರ್ವದಿಂದ ಗಹಗಹಿಸಿ ನಗುತ್ತ, ಪರಿಹಾಸೋಕ್ತಿಯಿಂದ ಸಭೆಯಲ್ಲಿ ಶಿವನಿಗೆ ನಮಸ್ಕರಿಸದೆ ದೇವತೆಗಳ ಮುಂದೆ ಶಿವನನ್ನು ನಾನಾವಿಧದಿಂ ತಿರಸ್ಕರಿಸಿ ಈ ಮರುಳನಿಗೆ ಪಂಚಮುಖಗಳಿರುವದರಿಂದ ಇವನಿಷ್ಟು ಶ್ರೇಷ್ಠನಾಗಿರುವನು. ನಾನೂ ಸಹ ಮತ್ತೊಂದು ಮಸ್ತಕವನ್ನು ಧರಿಸುವೆನೆಂದು ತನ್ನ ಮಹಿಮೆಯಿಂದ ಐದನೆಯಶಿರವನ್ನು ತಾಳಿ ತದ್ವದನದಿಂದ ನಿನ್ನಂತೆ ನಾನು ಜಗದಾಧಾರನು, ಶ್ರುತಿ ನಿತ್ಯನು, ಪರಬ್ರಹ್ಮನು (ಎಂದು ಬಾಹ್ಯದಲ್ಲಿ ಅದ್ವೈತವನು ಬಳಸಿ) ನೀನು ನನ್ನಂ ಮರೆಹೊಕ್ಕೆಯಾದರೆ ಉತ್ತಮ ಪದವಿಯನ್ನು ಕೊಟ್ಟುರಕ್ಷಿಪೆನು ಇಲ್ಲದಿದ್ದರೆ ಹಾನಿಹೊಂದುವೆ ಎಂದು ಕಠಿಣೋಕ್ತಿಗಳನಾಡಲು ಶಿವನು ಸಹಿಸದೆ ಕಿಡಿಗಣ್ಣುಳ್ಳವನಾಗಿ ಕೋಪೋದ್ರೇಕದಿಂದ ತಕ್ಷಣವೇ ಬ್ರಹ್ಮನ ತಲೆಯನ್ನು ಕತ್ತರಿಸಿದನು. ನಂತರ ಗರ್ವನಾಶನಾಗಿ ಬ್ರಹ್ಮನು ಶಿವನಿಗೆ ಮರೆಹೊಕ್ಕು ಸ್ತುತಿಸಿ ವಿಜ್ಞಾಪನೆ ಮಾಡಿಕೊಂಡಿದ್ದರಿಂದ ಅವನ ಕಪಾಲವಂ ಭಿಕ್ಷಾಟನಗೋಸುಗ ಕೈಯಲ್ಲಿ ಧರಿಸಿ ಅವನಂ ಸಂತೈಸಿದನು.

೩೭, **ಸುರಪತಿಗಾದ ಲಜ್ಜೆ :**—ಅಹಲ್ಯೆಯ ರೂಪಲಾವಣ್ಯಗಳಿಗೆ ಮರುಳಾದ ಇಂದ್ರನು ಕಾಮಾತುರನಾಗಿ ಗೌತಮರು ಹೊರಗೆ ಹೋಗುವಂತೆ ಕೋಳಿ ರೂಪವನ್ನು ಧರಿಸಿ ನಡುರಾತ್ರಿಯಲ್ಲಿ ಕೂಗಿದನು. ಗೌತಮರು ಬ್ರಾಹ್ಮೀ ಮುಹೂರ್ತವೆಂದು ತಿಳಿದು ಆಹ್ನಿಕಕ್ಕಾಗಿ ನದಿಗೆ ಹೋದರು· ಇತ್ತ ಇಂದ್ರನು ಅಹಲ್ಯೆಯ ಮನಸ್ಸನ್ನು ಒಪ್ಪಿಸಿ ತನ್ನ ಇಷ್ಟಾರ್ಥವನ್ನು ನೆರ ವೇರಿಸಿಕೊಂಡನು. ಅತ್ತ ಗೌತಮರು ಸ್ನಾನದ ಹೊತ್ತಲ್ಲವೆಂದು ತಿಳಿದು ಮನೆಗೆ ಹಿಂತಿರುಗಿ ಗೌತಮರ ವೇಷದಿಂದಿದ್ದ ಇಂದ್ರನನ್ನು ಕಂಡು ಎಲ್ಲಾ ವಿಷಯವನ್ನು ಅರಿತವರಾಗಿ ವೃಷಣ ಹೀನನಾಗೆಂದು ಇಂದ್ರನಿಗೂ, ಶಿಲೆಯಾ ಗೆಂದು ಅಹಲ್ಯೆಗೂ ಶಾಪವನ್ನು ಕೊಟ್ಟು ತಪಸ್ಸಿಗೆ ತೆರಳಿದರು. ಕಾಮಾಂಧ ತೆಯಿಂದ ಇಂದ್ರನು ಶಾಪವನ್ನು ಪಡೆದು ಲಜ್ಜಿತನಾದನು.

೩೭. **ಇಂದುವಿಗಾದ ಕುಂದು:**—ಬೃಹಸ್ಪತಿಯಲ್ಲಿ ವಿದ್ಯಾರ್ಥಿಯಾ ಗಿದ್ದ ಚಂದ್ರನು ಬೃಹಸ್ಪತಿಯ ಪತ್ನಿಯಲ್ಲಿ ಆಕೆಯ ಇಚ್ಛೆಗೆ ವಶಪಟ್ಟು ಭೋಗಿಸಿ ಬೃಹಸ್ಪತಿಯಿಂ ಶಾಪಗ್ರಸ್ತನಾಗಿ ತೇಜೋಮಯವಾದ ತನ್ನ ಕಳೆಗಳನ್ನು ಕುಂದಿಸಿಕೊಂಡನು.

೩೭. **ವರುಣನಿಗಾದೂಣೆ:**—ಒಮ್ಮೆ ಸ್ವರ್ಗಲೋಕದಲ್ಲಿ ಇಂದ್ರಾದಿ ದೇವತೆಗಳೂ ಅಗಸ್ತ್ಯಾದಿ ಮುನಿಗಳೂ ನಾರದರಿಂದ ಭಸ್ಮಧಾರಣ ಮಹಾ ತ್ಮ್ಯವಂ ಕೇಳುತ್ತಿರುವ ಸಮಯದಲ್ಲಿ ವರುಣನು ಬಂದು ಅಮರಾವತಿಗೆ ದೈತ್ಯ ರ ದಾಳಿ ಬರುವದೆಂದು ಇಂದ್ರನಿಗೆ ತಿಳಿಸಿದನು. ಏಕಾಗ್ರ ಚಿತ್ತದಿಂದ ಭಸ್ಮ ಧಾರಣ ಮಹಿಮೆಯನ್ನು ಕೇಳುವುದಕ್ಕೆ ವಿಘ್ನವಾಗಿ ನೀನು ವಿಷಯಾಂತರ ವನ್ನು ಪ್ರಾಪ್ತಿಸಿದೆಯಾದಕಾರಣ ದೈತ್ಯನಾಗಿ ಪೋಗೆಂದು ಅಗಸ್ತ್ಯರು ವರು ಣನಿಗೆ ಶಾಪವಿತ್ತರು. ಆಗ ವರುಣನು ನಿಶ್ಶಾಪವೆಂದಿಗೆ ಎಂದು ಪ್ರಾರ್ಥಿಸಿ ಕೊಳ್ಳಲು ಮೃಡಭಕ್ತರಾದವರ ಕರದಲ್ಲಿನ ಭಸಿತವನ್ನು ಕಂಡಡೆ ನಿವೃತ್ತಿಯೆ ನಲು ದೇವತೆಯಾದ ವರುಣನು ರಕ್ಕಸನಾಗಿ ಕೊರತೆ ಹೊಂದಿದನು— (ಪ್ರೌ—ಕಾವ್ಯ)

೩೭. **ರವಿಗಾದ ಭವಣೆ :**—ಸೂರ್ಯನು ಜೀವನ್ಮುಕ್ತನಾದರೂ ಅಂತರ್ಯಾಮಿ ಪರಮಾತ್ಮನಿಂದ ಪ್ರೇರಿಸಲ್ಪಟ್ಟ ಪ್ರಾರಬ್ಧವುಳ್ಳವನಾಗಿ ಜಗತ್ಪ್ರಕಾಶವನ್ನು ಮಾಡುವಂಥವನಾದನು.

೩೭. ಹವ್ಯವಾಹನನಿಗಾದನುಗೇಡು :—ಹವಿಸ್ಸುಗಳನ್ನು ದೇವತೆಗಳಿಗೆ ಒಯ್ದು ಮುಟ್ಟಿಸುವಂಥ ಅಗ್ನಿಯು ದಕ್ಷಬ್ರಹ್ಮನಯಜ್ಞದಲ್ಲಿ ಹವಿರ್ಭಾಗವನ್ನು ಮೊದಲು ಶಿವನಿಗೆ ಮುಟ್ಟಿಸದೆ ಇದ್ದುದರಿಂದ ವೀರಭದ್ರನು ಶಿವದ್ರೋಹಿಯ ಮನೆಯಲ್ಲಿ ನೀನು ಉಣ್ಣುವದಕ್ಕೆ ಬಂದೆಯಾ—ಎಂದು ಅವನ ಏಳು ನಾಲಗೆಗಳನ್ನು ಕಿತ್ತು ಕೈಗಳನ್ನು ಖಂಡಿಸಿದನು. (ಆದಿತ್ಯನ ಕಣ್ಣುಗಳನ್ನು ಕಿತ್ತನು, ಕಪೋಲವಂತಾಡಿಸಿ ದಂತಗಳನ್ನು ಭಗ್ನಂಗೈದನು)

೩೭. ಮುನಿವಶಿಷ್ಠನಿಗಾದ ಶೋಕ:–ದುಷ್ಟಮೃಗಗಳ ಬಾಧೆಯಪರಿಹಾರಾರ್ಥವಾಗಿ ಬೇಟೆಗೆ ಹೊರಟ ವಿಶ್ವಾಮಿತ್ರನು ದಾರಿಯಲ್ಲಿ ವಶಿಷ್ಠಾಶ್ರಮದಲ್ಲಿ ವಶಿಷ್ಠರಿಂದ ಕಾಮಧೇನು ಮುಖಾಂತರ ಆತಿಥ್ಯವನ್ನು ಪಡೆದು ಕಾಮಧೇನುವಿನ ಸಾಮರ್ಥ್ಯವನ್ನೂ, ಉಪಯೋಗವನ್ನೂ, ನೋಡಿ ಆಶ್ಚರ್ಯಗೊಂಡು ಅದನ್ನು ಕೊಡಬೇಕೆಂದು ವಶಿಷ್ಠರನ್ನು ಕೇಳಿದನು. ಅದು ದೇವಲೋಕದ ಕಾಮಧೇನುವು, ಅದು ತಮ್ಮೊಡನೆ ಬರುವುದಾದರೆ ತಾವೇ ಕರೆದುಕೊಂಡು ಹೋಗಬಹುದೆಂದು ವಶಿಷ್ಠರು ಹೇಳಿದರು. ಆ ಧೇನುವನ್ನು ಕರೆದುಕೊಂಡು ಹೋಗಲು ಪ್ರಯತ್ನಿಸಿ ಸಫಲವಾಗದೆ ಕಡೆಗೆ ಆ ಧೇನುವಿನಿಂದುತ್ಪನ್ನವಾದ ಶೂರರಿಂದ ತಾನು ತನ್ನ ಸೇನೆಯೊಡನೆ ಪರಾಜಯಹೊಂದಿ ಬ್ರಹ್ಮರ್ಷಿಗಳ ತೇಜಸ್ಸಿನ ಶ್ರೇಷ್ಠತೆಯನ್ನು ತಿಳಿದು ವಶಿಷ್ಠನಂತೆ ತಾನೂ ಬ್ರಹ್ಮರ್ಷಿಯಾಗಬೇಕೆಂದು ಘೋರವಾದ ತಪಸ್ಸುಮಾಡಿ ದೇವತೆಗಳಿಂದ ಬ್ರಹ್ಮರ್ಷಿಯೆಂದು ಕರೆಸಿಕೊಂಡನು. ಅಲ್ಲಿಗೂ ವಶಿಷ್ಠರು ವಿಶ್ವಾಮಿತ್ರನಿಗೆ ಬ್ರಹ್ಮರ್ಷಿಯೆಂದು ಹೇಳದ್ದರಿಂದ ವಿಶ್ವಾಮಿತ್ರನ ಶಾಪಕ್ಕೆ ಗುರಿಯಾಗಿ ಮಕ್ಕಳನ್ನು ಕಳೆದುಕೊಂಡು ದುಃಖಪಟ್ಟರು.

೩೭. ಸನತ್ಕುಮಾರನ ಕಥೆ :—ಸನಕಾನುಜನಾದ ಸನತ್ಕುಮಾರನು ಕಾಶೀಪಟ್ಟಣದೊಳಗೆ ಅನೇಕ ತಪಸ್ವಿಗಳೊಡನೆ ತಾನು ತಪಸ್ಸು ಮಾಡುತ್ತಿದ್ದನು. ಒಮ್ಮೆ ಪಾರ್ವತಿಯು ಪರಮಾತ್ಮನೇ ಈ ತಪಸ್ವಿಗಳಲ್ಲಿ ನಿಜಭಕ್ತನಾರು ಎಂದು ಕೇಳಲು ಬೇಡದಿರುವನೇ ಭಕ್ತನೆಂಬಂತೆ ಈ ಸನತ್ಕುಮಾರನು ಏನನ್ನೂ ಬೇಡುವದಿಲ್ಲ ಯಾರಿಗೂ ವಂದಿಸುವದಿಲ್ಲ. ಈತನೇ ನಿಜಭಕ್ತನೆಂದು ಪರಮಾತ್ಮನು ನುಡಿದನು. ಪಾರ್ವತಿಯು ಅವನಿಂದ ನಮಸ್ಕರಿಸಿಕೊಳ್ಳುವೆನೆಂದು ಹಠ ಹಿಡಿದು, ಆ ತಪಸ್ವಿಗಳ ಮಧ್ಯದಲ್ಲಿ ಹೋಗಲು ಎಲ್ಲರೂ ನಮ

ಸ್ಕರಿಸಿದರೂ ಸನತ್ಕುಮಾರನು ನಮಿಸಲಿಲ್ಲ, ಪಾರ್ವತಿಯು ಎಲೋ ಸನತ್ಕುಮಾರನೆ, ನಾನು ಜಗದಂಬೆಯು ನಮಿಸಬೇಕೆಂದು ನುಡಿದರೂ ಲಕ್ಷ್ಯಕ್ಕೆ ತಾರದೆ ಪರಮಾತ್ಮನ ಸ್ವರೂಪದಲ್ಲಿ ಮಗ್ನನಾಗಿರಲು ಪಾರ್ವತಿಯು ಕೋಪಗೊಂಡು ಈತನು ಅಹಂಕಾರಿ ಇರುವನೆಂದು ತಿಳಿದು ಒಂಟೆಯ ಜನ್ಮವು ಪ್ರಾಪ್ತಿಯಾಗಲೆಂದು ಶಾಪವಿತ್ತಳು. ಆದರಿಂದ ಒಂಟೆಯ ಜನ್ಮವು ಪ್ರಾಪ್ತವಾಯಿತು.

೩೭. **ವ್ಯಾಸನಿಗಾದ ಬಾಹುಬಂಧ :**–ವ್ಯಾಸನು ಈಶ್ವರನಂ ಪೂಜಿಸಿ ಸರ್ವ ವಿದ್ಯಾಸಂಪನ್ನನಾಗಿ ವೇದವಂ ವಿಭಜಿಸಿ ಸೂತ್ರಾದಿಗಳಂ ರಚಿಸಿ ಅಷ್ಟಾದಶಪುರಾಣಗಳನ್ನೂ ಸಂಹಿತೆ ಇತಿಹಾಸ ಮುಂತಾದುವುಗಳನ್ನೂ ರಚಿಸಿ ಶ್ರೇಷ್ಠನಾದ ಋಷಿ ಎನಿಸಿಕೊಂಡಿದ್ದರೂ, ವಿಷ್ಣುಶಿವರಲ್ಲಿ ಭೇದವಂ ಎಣಿಸಿ ವಿಷ್ಣುವೇ ಸರ್ವೋತ್ತಮನೆಂದು ಶಿಷ್ಯರಿಗೆ ಬೋಧಿಸುತ್ತಿದ್ದನು. ಆಗ ಶಿಷ್ಯರು ಈ ಮಾತು ಸತ್ಯವಾಗಿದ್ದರೆ ಕಾಶೀಪಟ್ಟಣದಲ್ಲಿ ಶ್ರೀ ವಿಶ್ವೇಶ್ವರನ ಮುಂದೆನಿಂತು ಭುಜಗಳಂ ಮೇಲಕ್ಕೆತ್ತಿ ಹೇಳಿದೆಯಾದೊಡೆ ನಿನ್ನ ವಚನವು ಪ್ರಮಾಣವಾಗುವುದೆನಲು ವ್ಯಾಸರು ಒಪ್ಪಿ ಕಾಶೀಪಟ್ಟಣದಲ್ಲಿ ವಿಶ್ವೇಶ್ವರನ ಸನ್ನಿಧಿಯಲ್ಲಿ ಕೈಗಳಂ ಮೇಲಕ್ಕೆತ್ತಿ ನಾರಾಯಣನೆ ಪರಬ್ರಹ್ಮನೆಂದು ಸಾರಿ ನಾರಾಯಣನ ಶ್ರೇಷ್ಠತೆಯನ್ನೂ ಶಿವನ ಕನಿಷ್ಠತ್ವವನ್ನೂ ಸೂಚಿಸಿದ್ದರಿಂದ ಆತನ ಭುಜಗಳು ಕತ್ತರಿಸಿಹೋದವು.

೩೮. **ಮಾರ್ಕಂಡೇಯನ ಕಥೆ:**—ಮೃಕಂಡು ಋಷಿಯು ಶಿವನನ್ನು ಕುರಿತು ಸಂತಾನಾರ್ಥವಾಗಿ ತಪಸ್ಸುಮಾಡಿ ಅವನಿಂದ ೧೬ ವರ್ಷ ವಯಸ್ಸುಳ್ಳ ಜ್ಞಾನವಂತ ಮಗನು ಬೇಕೆಂದು ವರವನ್ನು ಹೊಂದಿ ಮಾರ್ಕಂಡೇಯನನ್ನು ಪಡೆದನು. ಹದಿನಾರುವಯಸ್ಸು ತೀರುವ ಸಮಯದಲ್ಲಿ ತನಗೆ ಮರಣವಾಗುವದೆಂಬ ಸಂಗತಿಯನ್ನು ಮಾರ್ಕಂಡೇಯನು ತಂದೆತಾಯಿಗಳಿಂದ ತಿಳಿದು ಅದಂ ತಪ್ಪಿಸಲು ಶಿವಾಲಯಕ್ಕೆ ಹೋಗಿ ಶಿವಲಿಂಗವಂ ಪೂಜಿಸುತ್ತಾ ಧ್ಯಾನಮಗ್ನನಾಗಿ ಕುಳಿತನು. ಆ ಕಾಲಕ್ಕೆ ಯಮನು ಬಂದು ಮಾರ್ಕಂಡೇಯನಿಗೆ ದೂರದಿಂದ ಪಾಶವನ್ನು ಒಗೆಯಲು ಮಾರ್ಕಂಡೇಯನು ಶಿವಲಿಂಗವಂ ತಬ್ಬಿಕೊಂಡನು. ಆ ಪಾಶವು ಶಿವಮಾರ್ಕಂಡೇಯರಿಬ್ಬರಿಗೂ ಬಿದ್ದುದಂ ಕಂಡು ಶಿವನು ಯಮನನ್ನು ದಂಡಿಸಿ ತನ್ನ ಭಕ್ತನಾದ ಮಾರ್ಕಂಡೇಯನಿಗೆ

ನನ್ನ ೧೬ ವರ್ಷದ ಆಯುಷ್ಯವನ್ನು ಕೊಟ್ಟಿರುವೆನೆಂದು ಹೇಳಿ ಇನ್ನು ಮುಂದೆ ನನ್ನ ಭಕ್ತರ ಸಮೀಪಕ್ಕೆ ಹೋಗಕೂಡದೆಂದು ಯಮನಿಗೆ ಅಜ್ಞಾಪಿಸಿದನು.

೩೮. **ವಿದಳನ ಕತೆ :**—ತ್ರೇತಾಯುಗದಲ್ಲಿ ರಾಜನಾದ ವಿದಳನು ಶೂರನಾಗಿ ತಂದೆಯ ರಾಜ್ಯವನ್ನನುಭವಿಸುತ್ತಾ, ವೃದ್ಧಮಂತ್ರಿಗಳ ಮಾತನ್ನು ಬಗೆಯದೆ ದುಷ್ಟಮಂತ್ರಿಯನ್ನು ಸಮೀಪದಲ್ಲಿರಿಸಿಕೊಂಡು ಅನ್ಯಾಯಾಚರಣೆಯಿಂದ ಅಖಿಲರಾಜ್ಯಗಳನ್ನು ಕಳೆದುಕೊಂಡು, ಸುರಾಪನೆಂಬ ತನ್ನಮಂತ್ರಿಯೊಡನೆ ಅರಣ್ಯವನ್ನು ಸೇರಿ, ಹಾದಿಕಾರರನ್ನು ಕೊಂದು ಅವರ ದ್ರವ್ಯದಿಂದ ಉಪಜೀವಿಸುತ್ತಾ, ಅನೇಕ ಪ್ರಾಣಿಗಳ ಮಾಂಸವನ್ನು ತಿಂದು ಪುರಗಳಲ್ಲಿರುವ ಸುಂದರ ಸ್ತ್ರೀಯರನ್ನು ದುರುಳತನದಿಂದ ಹಿಡಿತಂದು ಅವರೊಡನೆ ಕ್ರೀಡಿಸಿ, ಅವರನ್ನೇ ಕೊಂದು ಅವರ ಮಾಂಸವನ್ನು ತಿನ್ನುತ್ತಾ, ಕೋಟ್ಯಾನುಕೋಟಿ ಪಾಪವಂ ಮಾಡಿದನು. ಮುಪ್ಪಿನಲ್ಲಿ ಅತ್ಯಂತ ರೋಗದಿಂದ ಪೀಡಿತನಾಗಲು ಮರಣಾವಸ್ಥೆಯಲ್ಲಿಯೂ ತನ್ನ ಮಂತ್ರಿಗೆ ಆಹರ (ಹರಣಮಾಡು=ಅಪಹರಿಸು) ಪ್ರಹರ (ಚನ್ನಾಗಿ ಬಡಿ) ಎನ್ನುತ್ತಾ ಸತ್ತನು. ಮರಣ ಕಾಲದಲ್ಲಿ ಹರಹರ ಎಂಬ ಶಬ್ದದಿಂ ಪ್ರಾಣಬಿಟ್ಟಿದ್ದರಿಂದ ಅರಳೆಯ ರಾಶಿಯಲ್ಲಿ ಒಂದು ಕಿಡಿ ಬೆಂಕಿ ಬೀಳಲು ಸರ್ವವೂ ಸುಟ್ಟು ಹೋಗುವಂತೆ ಅವನ ಪಾಪಗಳೆಲ್ಲಾ ನಾಶವಾಗಿ ಗಣಪದವಿ ಹೊಂದಿದನು.

೩೮. **ಭೃಂಗಿಯ ಕತೆ:**—ಶಿವಸಭೆಯೊಳಗೆ ಪಾರ್ವತಿಯು ಶಿವನ ತೊಡೆಯ ಮೇಲೆ ಕುಳಿತಿರಲು ಭೃಂಗಿಯು ನಾಟ್ಯವಂ ಮಾಡುವ ಸಮಯದಲ್ಲಿ ನಮಿಸಲು ಪಾರ್ವತಿಯು ಈ ನಮಸ್ಕಾರವು ಯಾರಿಗೆ ಎಂದು ಕೇಳಿದಳು ? ಭೃಂಗಿಯು ನೀನು ಮಾಯೆ ನಿನಗೆ ವಂದಿಸಲಿಲ್ಲ. ಶಿವನಿಗೆ ವಂದಿಸಿದೆನೆಂದನು. ಪಾರ್ವತಿಯು ಕೋಪಿಸಿ ತನ್ನಂಶವನ್ನು ಬೇಡಲು ಭೃಂಗಿಯು ರಕ್ತಮಾಂಸ ಚರ್ಮಗಳನ್ನು ಬಿಸುಟುಬಿಟ್ಟನು. ನಂತರ ಪಾರ್ವತಿಯು ಬಿರುಗಾಳಿಯಿಂದ ಹಾರಿಸಲು ಭೃಂಗಿಯ ಸ್ತೋತ್ರದಿಂದ ಶಿವನು ಮೂರನೆಯದೊಂದು ಕಾಲನ್ನೂ ಜ್ಞಾನವನ್ನೂ ಕೊಡಲು ಗಾಳಿಯ ಆಟ ನಡಿಯಲಿಲ್ಲ—ಅಂದಿನಿಂದ ಮುಕ್ಕಾಲ ಭೃಂಗಿಯೆಂಬ ನಾಮ ಉಂಟಾಯಿತು.

೩೮. **ಸುರಾಭಾಂಡಲಿಂಗ :**—ಓರ್ವ ಜಾರ ವಿಪ್ರನು ಕಾಶಿಯಲ್ಲಿ ಶರೆಯನ್ನು ಮಾರುತ್ತಿರುವ ಒಬ್ಬ ಪುರುಷನ ಪತ್ನಿಯಲ್ಲಿ ಆಸಕ್ತನಾಗಿ ಪತಿಯಿ

ಲ್ಲದ ವೇಳೆಯಲ್ಲಿ ಆಕೆಯೊಡನೆ ರಮಿಸುತ್ತಿದ್ದನು. ಒಂದು ದಿವಸ ಆ ವಿಪ್ರನು ಆಕೆಯ ಮನೆಯಲ್ಲಿ ರಹಸ್ಯವಾಗಿರುವ ಸಮಯದಲ್ಲಿ ಆಕೆಯ ಪತಿಯು ಹೊರಗಿನಿಂದ ಒಳಕ್ಕೆ ಬರುತ್ತಿರಲು ಆಕೆಯು ಭಯಪಟ್ಟು ಆ ವಿಟನನ್ನು ಸುರಾಭಾಂಡದೊಳಗೆ ಅಡಗಿಸಿದಳು. ಆತನು ಅಲ್ಲಿಯೇ ಉಸುರು ಕಟ್ಟಿ ಸಾಯಲು ಕಾಶಿಯಲ್ಲಿ ಮೃತಪಟ್ಟವರಿಗೆ ಮೋಕ್ಷವಾಗುವದೆಂಬ ಸ್ಮೃತಿಯಂತೆ ಸುರಾಭಾಂಡಲಿಂಗವೆಂಬ ಪೆಸರಿನಿಂದ ಪೂಜೆ ಹೊಂದುತ್ತಿರುವನು.

೩೮. **ಸುಕುಮಾರನ ಕತೆ :**—ಸಿಂಧು ನದೀ ತೀರದಲ್ಲಿರುವ ಕುಬ್ಜಕ ವೆಂಬ ಪಟ್ಟಣದ ದೊರೆಯಾದ ಪರ ಪುರಂಜನನ ಬ್ರಾಹ್ಮಣ ಮಂತ್ರಿಯ ಮಗನಾದ ಸುಕುಮಾರನು ತನ್ನ ನೀಚ ಕೃತ್ಯಗಳಿಂದ ರಾಜನ ಮುಖಾಂತರ ಪರದೇಶಕ್ಕೆ ಓಡಿಸಲ್ಪಟ್ಟವನಾದನು. ಸುಕುಮಾರನು ಅಲ್ಲಿಯೂ ಪರಸ್ತ್ರೀ ಗಮನಾದಿ ನೀಚ ಕೃತ್ಯಗಳನ್ನು ಮಾಡುತ್ತ ಕಡೆಗೆ ರೂಪವತಿಯಾದ ಒಬ್ಬ ಹೊಲತಿಯನ್ನು ಮೋಹಿಸಿ ಆಕೆಯ ಹೊಟ್ಟೆಯಲ್ಲಿ ಹುಟ್ಟಿದ ಐದು ಮಂದಿ ಹೆಣ್ಣು ಮಕ್ಕಳೊಡನೆಯೂ ಆ ಹೊಲತಿಯ ಮರಣಾನಂತರ ಕ್ರೀಡಿ ಸುತ್ತಾ ಕಳ್ಳತನ ಮೊದಲಾದವುಗಳಿಂದ ಹೊಟ್ಟೆ ಹೊರೆದುಕೊಳ್ಳುತ್ತಿದ್ದನು. ಒಂದು ದಿನ ಅವರೊಡನೆ ಭೋಗಿಸಿ ಸುರಾಪಾನಾದಿಗಳಂ ಮಾಡಿ ಸ್ತ್ರೀಯರಿಗೆ ಹೂಗಳನ್ನು ತರುವುದಕ್ಕೋಸ್ಕರ ತೋಟಕ್ಕೆ ಹೋಗುತ್ತಿರಲು ಆ ದಿವಸ ಶಿವ ರಾತ್ರಿಯಾಗಿದ್ದದ್ದರಿಂದ ಅನೇಕ ಜನರು ಕೂಡಿ ಶಿವಲಿಂಗವನ್ನು ಪೂಜಿಸು ತ್ತಿರುವದನ್ನೂ ನೋಡಿ ಸಂತೋಷಿಸುತ್ತಾ ಹಿಂದಿರುಗಿ ಕಾಣದೆ ನದಿಯಲ್ಲಿ ಬಿದ್ದು ಪ್ರಾಣ ಬಿಟ್ಟನು. ಶಿವರಾತ್ರಿಯ ದಿವಸ ಶಿವಲಿಂಗ ದರ್ಶನ ಮಾತ್ರ ದಿಂದ ದಿವ್ಯ ವಿಮಾನದೊಳು ಕುಳಿತು ಶಿವಲೋಕಕ್ಕೆ ಹೋಗಿಗಣ ಪದ ವಿಯಂ ಹೊಂದಿದನು.

೩೮. **ಭಸ್ಮಮಹಾತ್ಮ್ಯ ಕತೆ :**—ಒಬ್ಬ ಕಡುಪಾಪಿ ಶಬರನು ಅಡವಿ ಯಲ್ಲಿ ಬಿದ್ದು ಸತ್ತನು. ಅದೇ ಸಮಯದಲ್ಲಿ ಒಂದು ನಾಯಿಯು ಸುಡು ಗಾಡಿನೊಳಗಿನಿಂದ ಹಾಯ್ದು ಓಡಿಹೋಗುತ್ತಿರುವಾಗ ಅವನ ಹಣೆಯ ಮೇಲೆ ಹೆಜ್ಜೆಯನ್ನಿಟ್ಟು ಹೋಗಲು ಅದರ ಕಾಲಿಗೆ ಹತ್ತಿದ್ದ ಬೂದಿಯು ಅವನ ಹಣೆಗೆ ಹತ್ತಿತ್ತು. ಆ ಕಾಲಕ್ಕನುಸರಿಸಿ ಯಮದೂತರು ಬರಲು ಶಿವಚಿಹ್ನ ವಾದ ವಿಭೂತಿಯಂ ನೋಡಿ ಅವನಂ ಮುಟ್ಟದೆ ಹೊರಟು ಹೋದರು; ಅನಂ

ತರ ಶಿವದೂತರು ಬಂದು ಶಿವನ ಅಪ್ಪಣೆ ಪ್ರಕಾರ ಕೈಲಾಸಕ್ಕೆ ಒಯ್ದರು. ಅವನು ಪ್ರಥಮ ಗಣಗಳಲ್ಲಿ ಒಬ್ಬನಾದನು. ಮರಣ ಕಾಲದಲ್ಲಿ ಶಿವ ಚಿಹ್ನೆವಾದ ಲಿಂಗ, ವಿಭೂತಿ, ರುದ್ರಾಕ್ಷಿಗಳಿದ್ದವರಿಗೆ ನಿಶ್ಚಯವಾಗಿ ಶಿವಲೋಕ ಪ್ರಾಪ್ತಿಯಾಗುವುದು.

೩೯, ಕಳ್ಳನ ಕತೆ:—ಒಬ್ಬ ಕಳ್ಳನು ಶಿವಲಿಂಗದ ಮೇಲಿರುವ ಆಭರಣಗಳನ್ನು ಕದಿಯುವುದಕ್ಕೋಸ್ಕರ ಶಿವಾಲಯದೊಳಗೆ ಹೋದನು. ಆ ಕಾಲಕ್ಕೆ ಶಿವಲಿಂಗದ ಮುಂದಿಟ್ಟಿರುವ ದೀವಿಗೆಯು ನಂದುತ್ತಿರುವುದನ್ನು ಕಂಡು ಎಣ್ಣೆಯಂ ಹಾಕಿ ಬತ್ತಿಯಂ ಮುಂದಕ್ಕೆ ಚಾಚಿ ಶಿವಲಿಂಗದ ಮೇಲೆ ಯಾವ್ಯಾವ ಆಭರಣಗಳಿರುತ್ತವೆಂಬುದನ್ನು ಆ ದೀವಿಗೆಯನ್ನು ತಿರುವುತ್ತಾ ನೋಡುತ್ತಿರುವ ಸಮಯದಲ್ಲಿ ಪೂಜಾರಿಗೆ ಗೊತ್ತಾಗಿ ಆ ಕಳ್ಳನನ್ನು ಹೊಡೆದುಹಾಕಿದನು. ಶಿವನು ತನಗೆ ಈ ಕಳ್ಳನು ದೀಪಾರಾಧನೆಯನ್ನು ಮಾಡಿರುವನೆಂದು ತಿಳಿದು ಅವನಿಗೆ ಗಣಪದವಿಯನ್ನು ಕೊಟ್ಟನು.

೩೦. ಒಬ್ಬ ಗೃಹಸ್ಥನ ಕತೆ:—ಒಬ್ಬ ಗೃಹಸ್ಥನು ಮರಣೋನ್ಮುಖನಾಗುವ ಸಮಯದಲ್ಲಿ ಅವನ ಮಕ್ಕಳು ಅವನ ಹತ್ತಿರಕ್ಕೆ ಬಂದು ಅಪ್ಪಾ ನಮಗೇನು ಹೇಳುತ್ತೀರಿ ಎಂದು ಕೇಳಿದರು. ಅದಕ್ಕೆ ಅವನು ಹೊಲನೆಲ್ಲ "ಹರಗಣ, ಹರಗಣ" ಅಂತ ಹೇಳಿ ಪ್ರಾಣ ಬಿಟ್ಟನು. ಅಂತ್ಯ ಸಮಯದಲ್ಲಿ ಹರ ಎಂಬ ತನ್ನ ನಾಮವನುಚ್ಚರಿಸಿರುವನೆಂದು ಶಿವನು ಅವನಿಗೆ ಗಣಪದವಿಯನ್ನು ಕೊಟ್ಟನು.

೩೯. ಶ್ವೇತನ ಕತೆ:—ಶ್ವೇತನೆಂಬುವನು ಶತಕೋಟಿ ಪಾಪಗಳನಾಚರಿಸಿ ಶಿವನಿ ಎಂಬ ವೇಶ್ಯೆಯ ಮುಡಿಗೆ ಹೂಗಳನ್ನು ತರಲೋಸುಗ ಅನ್ಯರ ತೋಟವನ್ನು ಕಳ್ಳತನದಿಂದ ಪ್ರವೇಶಿಸಿ ಹೂವುಗಳನ್ನೆತ್ತಿಕೊಂಡು ಪೌಳಿಯಿಂದಿಳಿದು ಬರುವ ಸಮಯದಲ್ಲಿ ಕಾಲುಜಾರಿದ್ದರಿಂದ ಒಂದು ಹೂವು ನೆಲಕ್ಕೆ ಬೀಳಲು ತನ್ನ ವೇಶ್ಯೆಯಾದ ಶಿವನಿಗೆ ಮುಟ್ಟಲೆಂದನು. ಬಳಿಕ ಪ್ರಾಣ ಹೋಯಿತು. ಅಂತ್ಯಕಾಲದಲ್ಲಿ ಒಂದು ಪುಷ್ಪ ತನಗೆ ಮುಟ್ಟಲೆಂದು ನನ್ನ ನಾಮವನ್ನುಚ್ಚರಿಸಿರುವನೆಂದು ಶಿವನು ಅವನಿಗೆ ಗಣಪದವಿಯನ್ನು ಕೊಟ್ಟನು.

೪೯. ಸಾಖ್ಯತೊಂಡನ ಕತೆ:—ಚೋಳ ದೇಶದ ಒಂದು ಊರೊಳಗೆ

ಬೌದ್ಧಮತದ ಸಾಂಖ್ಯತೊಂಡನೆಂಬ ಒಬ್ಬ ಭಕ್ತನಿದ್ದನು. ಪೂರ್ವ ಜನ್ಮದ ವಾಸನಾ ಬಲದಿಂದ ಅವನಿಗೆ ಒಂದು ಶಿವಲಿಂಗವು ಗೋಚರವಾಗಲು ಶಿವನೇ! ನಿನ್ನ ಪಾದಪೂಜೆಯನ್ನು ಮಾಡಿಕೊಂಡಿರುವುದಕ್ಕೆ ನನಗೆ ಶಕ್ತಿಸಾಲದು. ಪೂಜೆಯನ್ನು ಮಾಡದೆ ಜೀವಿಸಿಕೊಂಡೂ ಇರಲಾರೆನು. ಆದಕಾರಣ ನಾನು ಪ್ರತಿ ನಿತ್ಯವೂ ಮೂರು ಮೂರು ಕಲ್ಲುಗಳಿಂದ ಪೂಜಿಸುತ್ತೇನೆ. ಆ ಪೂಜೆಯನ್ನು ನೀನು ಅರಳಿದ ಕನ್ನೈದಿಲೇ ಹೂವಿನ ಪೂಜೆಯೆಂದು ಸ್ವೀಕರಿಸಬೇಂದು ವಿಜ್ಞಾಪಿಸಿ ಪೂಜಿಸುತ್ತಾ ಈ ಕಡೆ ಬೌದ್ಧರಿಗೆ ಸಂತೋಷವನ್ನುಂಟು ಮಾಡಿಕೊಂಡಿದ್ದನು. ಒಮ್ಮೆ ಮಳೆ ಸುರಿದು ಹೊಳೆ ಕಟ್ಟಿದ್ದರಿಂದ ಮೂರು ದಿವಸ ಸಾಂಖ್ಯತೊಂಡನು ಶಿವಾಲಯಕ್ಕೆ ಹೋಗಲಿಲ್ಲ. ಶಿವಪೂಜೆಯು ನಿಂತಿದ್ದರಿಂದ ಉಪವಾಸ ಮಾಡಿ ಬಳಲಿದ ದೇಹವುಳ್ಳವನಾಗಿ ಹೊಳೆಯು ಇಳಿದು ಹೋದ ಮೇಲೆ ಶಿವಾಲಯಕ್ಕೆ ಹೋಗಿ ಮೂರು ದಿವಸ ಸಮರ್ಪಿಸುವುದಕ್ಕೆ ಯೋಗ್ಯವಾದ ಕಲ್ಲಿನಷ್ಟು ಭಾರವುಳ್ಳ ಒಂದು ಕಲ್ಲನ್ನು ತೆಗೆದುಕೊಂಡು ಲಿಂಗದ ತಲೆಯ ಮೇಲೆ ಹಾಕಲು, ಅದು ಅವನ ಭಕ್ತಿಯಿಂದ ಶಿವನಿಗೆ ಹೂಗೊಂಚಲಾಯಿತು. ಶಿವನು ಆತನ ಪೂಜೆಗೆ ಮೆಚ್ಚಿ ಪ್ರತ್ಯಕ್ಷನಾಗಿ ಸಂತೋಷದಲ್ಲಿರಿಸಿದನು.

೩೯. **ದೋಸೆಯ ಪಿಟ್ಟವ್ವೆಯ ಕತೆ:**—ಕರಿಕಾಲನೆಂಬ ರಾಜನು ಕಾವೇರಿ ನದಿಗೆ ಕಟ್ಟೆಯನ್ನು ಕಟ್ಟಿಸುವಾಗ ಎಲ್ಲರನ್ನೂ ಬಿಟ್ಟಿ ಹಿಡಿಯುತ್ತಿದ್ದನು. ಅದೇ ಪಟ್ಟಣದಲ್ಲಿರುವ ಪಿಟ್ಟವ್ವೆಯೆಂಬ ಶಿವ ಭಕ್ತಳು ನಿತ್ಯದಲ್ಲಿ ದೋಸೆಯನ್ನು ಮಾಡಿ ಮೊದಲನೆಯದನ್ನು ಶಿವನಿಗಾಗಿ ತೆಗೆದಿಟ್ಟು ಉಳಿದವುಗಳನ್ನು ಜಂಗಮರ ತೃಪ್ತಿಗಾಗಿ ಉಪಯೋಗಿಸುತ್ತಿದ್ದಳು. ಒಂದು ದಿನ ಆಕೆಗೆ ಬಿಟ್ಟಿಯ ಬಾರಿಯು ಬರಲು ತನ್ನಲ್ಲಿ ಶಕ್ತಿಯಿಲ್ಲದ್ದರಿಂದಲೂ ಬಿಟ್ಟಿಗೆ ಹೋದರೆ ಜಂಗಮರ ಸೇವೆಯು ತಪ್ಪುವದೆಂದೂ ಚಿಂತಿಸಿ ಶಿವನನ್ನು ಧ್ಯಾನಿಸಿದಳು. ಶಿವನು ಜಂಗಮನಾಗಿ ಬಂದು ಆಕೆಯ ವ್ಯಸನದ ಕಾರಣವನ್ನು ತಿಳಿದು ಸಾಕಷ್ಟು ದೋಸೆಯನ್ನು ಕೊಟ್ಟರೆ ನಿನ್ನ ಬಿಟ್ಟಿ ಕೆಲಸವನ್ನು ಮಾಡುಪೆನೆಂಬ ಕರಾರಿನಿಂದ ಆಕೆಯ ಬಿಟ್ಟಿ ಕೆಲಸವನ್ನು ಮಾಡಿ ಆಕೆಯ ದೋಸೆಯನ್ನೆಲ್ಲ ತಿಂದು ಅವಳ ಭಕ್ತಿಗೆ ಮೆಚ್ಚಿ ಕಡೆಗೆ ಆಕೆಗೆ ಗಣಪದವಿಯನ್ನು ಕೊಟ್ಟನು.

೩೯. ಕಲ್ಲಿನಿಂದ ಹೊಡೆದ ಸಾಂಖ್ಯತೊಂಡನನ್ನೂ, ಕಾಲಿನಿಂದ ಒದೆದ

ಕನ್ನಪ್ಪನನ್ನೂ, ಬಿಲ್ಲಿನಿಂದ ಹೊಡೆದ ಅರ್ಜುನನನ್ನೂ, ಬಿಟ್ಟಿಯ ಕೆಲಸವನ್ನು ಮಾಡಿಸಿಕೊಂಡ ಪಿಟ್ಟವ್ವೆಯನ್ನೂ ಶಿವನು ಆನಂದದಲ್ಲಿ ಇರಿಸಿದನು. ಶಿವನು ಬಾಹ್ಯ ಕ್ರಿಯೆಗಳನ್ನು ನೋಡದೆ ಅಂತರಂಗದ ಭಾವಕ್ಕೆ ಮಾತ್ರ ಒಲಿಯು ವನು. ಆದುದರಿಂದ ಶಿವನೊಲುಮೆಗೆ ಭಾವವೇ ಮುಖ್ಯ ಕಾರಣವು.

೩೯. ಅಡವಿಯೊಳಗೆ ಒಂದು ಸರೋವರದ ಹತ್ತಿರ ಒಂದು ಶಿವಲಿಂಗ ವಿತ್ತು.

ಶಲಭ—ಜೇಡರ ಹುಳುವು ಆ ಲಿಂಗಕ್ಕೆ ನಿತ್ಯ ಎಳೆಗಳಂ ಸುತ್ತುತ್ತಿತ್ತು.

ಆನೆಯು—ಆ ಲಿಂಗದ ಮೇಲೆ ನೀರನ್ನು ಊದಿ ಕಮಲವ ತೂರುತ್ತಿತ್ತು.

ಹಕ್ಕಿ—ನೀರಲ್ಲಿ ಮುಳುಗಿ ಹಾರುವಾಗ ರೆಕ್ಕೆಗಳಂ ಝಾಡಿಸಲು ಆ ಶಿವ ಲಿಂಗದ ಮೇಲೆ ನೀರು ಸಿಡಿದವು. ಸಿಂಹದ ಘರ್ಜನೆಯಿಂದ ಹಂದಿ, ನಾಯಿ, ಮೊಲಗಳು ಒಂದನ್ನೊಂದು ಬೆನ್ನಟ್ಟಿ ಪ್ರಾಣದಾಸೆಯಿಂದ ಆ ಲಿಂಗವಂ ಸುತ್ತರಿದವು.

ಇರುವೆ—ಸಕ್ಕರೆ ಕಣಗಳಂ ತೆಗೆದುಕೊಂಡು ಲಿಂಗದ ಮೇಲೆ ಇಡುತ್ತಿತ್ತು.

ಹದ್ದು—ತನ್ನ ಆಹಾರವನ್ನು ಆ ಲಿಂಗದಮೇಲಿಟ್ಟು ಕುಕ್ಕಿ ತಿನ್ನುತ್ತಿತ್ತು. ಹೀಗೆ ಇವೆಲ್ಲವುಗಳು ಸ್ವಾರ್ಥಕ್ಕೋಸ್ಕರ ವ್ಯವಹರಿಸುತ್ತಿದ್ದರೂ ಶಿವನು ವಸ್ತ್ರ, ಅಭಿಷೇಕ, ಪುಷ್ಪ, ದಕ್ಷಿಣೆ, ನೈವೇದ್ಯಗಳಿಂದ ತನ್ನನ್ನು ಆರಾಧಿಸಿದವೆಂದು ತಿಳಿದು ಅವುಗಳಿಗೆ ದೇವತೆಗಳಿಗಿಂತ ಹೆಚ್ಚಿನ ಪದವಿಯನ್ನು ಕೊಟ್ಟನು.

೪೦. ಲೌಕಿಕ=ನಾನು ನನ್ನದೆಂದು ಸ್ವಾರ್ಥಕ್ಕೆ ವ್ಯವಹರಿಸುವದು. ಪರಮಾರ್ಥ=ಸರ್ವವೂ ಶಿವನೆಂದು ಅವನ ಸಲುವಾಗಿ ವ್ಯವಹರಿಸುವದು.

೪೨.ತಪ=ಶರೀರವಾಣಿ ಮನಗಳಿಂದ ಪರಮಾತ್ಮನ ಭಜನೆ, ನುತಿ, ಧ್ಯಾನ ವನ್ನು ಮಾಡುವದು: ಹರನಪೂಜಾ=ಪರಮಾತ್ಮನ ಪ್ರೇಮ ಸಂಪಾದಿಸುವದು ಅಥವಾ ತೃಪ್ತಿಪಡಿಸುವದು; ಸಾತ್ವಿಕಗಳೆಂಟು=೧. ಸ್ತಂಭ (ಏನೂ ತಿಳಿಯದೆ ನಿಲ್ಲುವದು). ೨.ಸ್ವೇದ=ಬೆವರು; ೩.ರೋಮಾಂಚ; ೪.ಸ್ವರಭೇದ ೫.ವಿವರ್ಣ (ಮುಖ ಬಾಡುವದು) ೬.ಕಂಪನ; ೭.ಅಶ್ರು; ೮.ಪ್ರಲಯ (ಶರೀರ ಬೀಳುವದು. ೪೪, ಐರಣಿ=ಕೊಡ; ತೊಂಡಿಲು=ಬಾಸಿಂಗ. ೪೫. ಸಸಿವಣಗೆ=ಚಂದ್ರಕಾಂತ ಮಣಿ ; ಜೊನ್ನ=ಬೆಳದಿಂಗಳು ; ಅವಲೋಹ=ಕನಿಷ್ಠವಾದ ಕಬ್ಬಿಣ. ೪೫. ತಿರೋಹತಿ=ಆವರಣ; ದರುಶನ=ಸಾಂಖ್ಯ, ಯೋಗ, ನ್ಯಾಯ ವೈಶೇ

ಷಿಕ, ಪೂರ್ವಮೀಮಾಂಸ, ಉತ್ತರಮೀಮಾಂಸ; ಅಧ್ವ=ವರ್ಣಾಧ್ವ, ಪದಾಧ್ವ, ಮಂತ್ರಾಧ್ವ, ಭುವನಾಧ್ವ, ಕಲಾಧ್ವ, ತತ್ವಾಧ್ವ, ಅಧ್ವ=ಮಾರ್ಗ; ವಾಗೀಶ್ವರಿ =ಶುದ್ಧ ಮಾಯೆ. ೫೭. ನೀವಾರ ಕಂಟಕ=ಒಂದು ಪ್ರಾಕಾರದಹುಲ್ಲಿನಸುಂಕು; ೬೨. ಕೂರ್ಚ, ಗೋತ್ರ=ಆಗ್ನೇಯ, ಬ್ರಹ್ಮರಂಧ್ರ; ಪೊತ್ತ ಜಾಲ ಶಿಖಾ= ಪಶ್ಚಿಮಚಕ್ರ. ೬೬. ಆದೊಡೆ ಅಳಿದೊಡೆ=ಹುಟ್ಟಿದರೂ, ನಾಶವಾದರೂ. ೬೯. ಕರ್ಮೋಪರತಿ=ಬಾಹ್ಯಕರ್ಮಗಳಲ್ಲಿ ಬೇಸರಿಕೆ. ೭೦. ಪರಿಭವಘನ ಚಂಡ ಮರುತ=ಸಂಸಾರವೆಂಬ ಮೇಘಕ್ಕೆ ಪ್ರಚಂಡವಾಯು; ಅನಾಹತನಾದ= ಕೇಡಿಲ್ಲದ ಆನಂದಸ್ವರೂಪ. ೭೪. ಕಣ್ದೆರಪಾಗಿ=ಎಚ್ಚರವಾಗಿ; ದೂರು= ತೂಂದರೆ, ಅಪವಾದ; ದೃಶಿ=ಚಿನ್ಮಾತ್ರ; ಜೋಕೆಗುಂದದೆ=ಎಚ್ಚರಸ್ಥಿತಿಯು ತಪ್ಪದೆ. ೭೮. ಆಶ್ಚರ್ಯವೆನಿಸಿದ ದೇಹವೇ (ಅನ್ನಮಯಕೋಶವೇ) ಆತ್ಮ ನೆಂಬುವದು ನಿಜವೋ । ದೇಹದೊಳಗಣ ಕರ್ಮೇಂದ್ರಿಯ ಜ್ಞಾನೇಂದ್ರಿಯ ಗಳೆ ಆತ್ಮನೆಂಬುವದು ನಿಜವೋ । ದೇಹ ಇಂದ್ರಿಯಗಳಿಗಾಧಾರವಾದ ಪ್ರಾ ಣವೇ ನಿಜವೋ ॥ ದೇಹ ನಾನು ನನ್ನದೆಂಬ ಅಭಿಮಾನವುಳ್ಳ ಮನವೆ ನಿಜವೋ। ಬಾಹ್ಯವಿಷಯಗಳನು ಎಡೆಬಿಡದೆ ಅರಿಯುವ ಬುದ್ಧಿಯೇ ನಿಜವೋ ॥ ಅಹಂ ಕಾರವು ಅಡಗಿದ ಆನಂದಮಯಕೋಶವು ನಿಜವೋ । ಆನಂದವು ಅವಿದ್ಯೆ ಯನ್ನು ಹಿಡಿದು ತೋರುವುದರಿಂದ ಆ ಅವಿದ್ಯೆಯೇ ನಿಜವೋ ॥ ಆನಂದವೆಂಬು ವದಡಗಿದ ಶೂನ್ಯವೇ ನಿಜವೋ । ವಿರಾಟ್‌ಸ್ವರೂಪವೇ ತನ್ನ ಯಥಾರ್ಥ ಸ್ವರೂಪವೆಂಬುವದು ನಿಜವೋ । ಸಗುಣ ನಿರ್ಗುಣ ಸ್ವರೂಪದ ಹಿರಣ್ಯಗರ್ಭನೆ ನಿಜವೋ । ಸಗುಣ ನಿರ್ಗುಣವನ್ನು ಚನ್ನಾಗಿ ನಾಶಿಸಿದ ಅಂತರ್ಯಾಮಿಯೇ ನಿಜವೋ ॥ ಸಗುಣ ನಿರ್ಗುಣಗಳನ್ನು ಮುಟ್ಟದಿರುವ ತತ್ವದ ಸಾಕ್ಷಿಯೇ ನಿಜ ವೋ । ಮನಸ್ಸಿನಿಂದ ಗುರ್ತಿಸಿದ ನಾದಬಿಂದುಕಲೆಗಳೇ ನಿಜವೋ ॥ ಮನಸ್ಸಿನ ಗುರ್ತಿಗೆ (ತಿಳುವಳಿಕೆಗೆ) ಬಾರದಿರುವದೇ ನಿಜವೋ । ಜಗತ್ತಿನ ಅನೇಕ ತತ್ವ ದೊಡನೆ ಅಗಲದಿರುವ ವ್ಯಾಪಕ ಚೈತನ್ಯವೇ ನಿಜವೋ ॥ ಜಗತ್ತಿಗೆ ಅನ್ಯವಾದ ಅನೂನಸಾಕ್ಷಿಯೇ ನಿಜವೋ । ಅನೇಕ ಭೇದಾಭಿಪ್ರಾಯದ ವಾದವನು ಬಿಟ್ಟು ಸಂಶಯದ ಸಮಾಚಾರ (ರೀತಿ) ವೇ ಇಲ್ಲದೆ ನಾನು ನೀನು ಎಂಬ ಭೇದಭಾವ ನಾಶವಾಗಿ ಕಟ್ಟಳೆ ಮೇರೆಗಳೇನೂ ತೋರದೆ ಶಂಭುಲಿಂಗವಾದ ಅಧಿಷ್ಠಾನ ದರಿವು ಮಾತ್ರ ನಿನ್ನಸ್ವರೂಪವೆಂದು ತಿಳಿಯಿರೈ. ೮೦. ಕೂರ್ಮಕುಂತಳ=ಆಮೆಯ ಕೂಧಲು. ೮೧. ಉನ್ನಿಸು=ನಿಶ್ಚಯಿಸು, ತಿಳಿ. ೮೨. ಜಿನುಗಿನ=ಸೂಕ್ಷ್ಮವಾದ,

ಉಮ್ಮಳ=ಕಷ್ಟ; ಅನಿಲ ಶಿಖಿಹೃದಯ=ಮೂಲಾಧಾರ, ನಾಭಿ, ಹೃದಯ ಸ್ಥಾನ, (ಮನಸ್ಸು, ಬುದ್ಧಿ, ಅಹಂಕಾರ). ೮೯. ಪುಳಿನಸೇತು=ಮರಳಿನಕಟ್ಟೆ. ೯೦. ವೀಚಿ=ತರಂಗ. ೯೩. ನಿರಿಗೆ=ಕೂಡುವಿಕೆ, ಭಾವ. ೯೪. ಪರಮುಕ್ತ=ವಿದೇಹಮುಕ್ತ; ಮಾಯಾ ಕಾಳಿಕ=ಮಾಯೆಯೆಂಬ ಕಾಡಿಗೆ.

ಪರಮಾನುಭವ ಬೋಧೆ :—೯೭. ಅನ್ವಿತನು=ಕೂಡಿದವನು. ಕೋಡಿವರಿದ=ಉಕ್ಕಿಬರುವ. ಆಲಾಪದ=ಸಂಭಾಷಣದ. ನಿರಾಭಾರಿ=ವೈರಾಗ್ಯಜ್ಞಾನ ಸಂಪನ್ನನು. ಅವನತನಾಗಿ=ನಮಸ್ಕಾರಮಾಡಿ. ಒಯ್ಯಾರ ದಿಂದ=ಒಳ್ಳೆ ಚಂದದಿಂದ.

೯೭. ಮಂಡನೆ=ಅಲಂಕಾರ. ಸನ್ಯಾಸಿಯವಿಧಿ=ಸರ್ವಕರ್ಮತ್ಯಾಗ ವೆಂಬ ಕರ್ಮಗಳ ಲೇಪವಿಲ್ಲದ ನಿಸ್ಸಂಗ ಸ್ಥಿತಿಯು.

ಎಮಗೆಮ್ಮ ಮತವೇ ಸಾಲ್ಗೆನುತ=ಯಾರು ಗೃಹಸ್ಥಾಶ್ರಮದಲ್ಲೇ ಇದ್ದುಕೊಂಡು ತಮ್ಮ ವರ್ಣಾಶ್ರಮಧರ್ಮಗಳನ್ನು ಬಿಡದೆ ನಿಷ್ಕಾಮದಿಂದ ಅನುಷ್ಠಿಸುತ್ತಾ ಪರಿಶುದ್ಧಾಂತಃಕರಣರಾಗಿ ಈ ಪರಮಾನುಭವ ಬೋಧೆ ಎಂಬ ಗ್ರಂಥವನ್ನು ಏಕಾಗ್ರಚಿತ್ತದಿಂದ ಕೇಳುವರೋ ಅಂಥ ಪರಿಶುದ್ಧಾತ್ಮರಿಗೆ ಲೌಕಿಕಸಂಬಂಧವಾದ ಸತಿ ಪುತ್ರ ಮೊದಲಾದುವುಗಳನ್ನು ಸಂಪೂರ್ಣವಾಗಿ ತ್ಯಾಜ್ಯಮಾಡಿ ಸಂನ್ಯಾಸಾಶ್ರಮವಂ ಧರಿಸಿ ವೇದಾಂತ ಶ್ರವಣಾದಿಗಳಂ ಮಾಡು ವವನಿಗೆ ಯಾವ ಮೋಕ್ಷವು ಲಭಿಸುವದೋ ಅದೇ ಮೋಕ್ಷವು ಪ್ರಾಪ್ತವಾಗು ವದು. ಆದ್ದರಿಂದ ಈ ಗ್ರಂಥವು ಸನ್ಯಾಸಿ, ಗೃಹಸ್ಥ, ಸ್ತ್ರೀ ಪುರುಷರಾದಿಯಾಗಿ ಸರ್ವ ವರ್ಣದವರಿಂದಲೂ ಸೇವಿಸಲಿಕ್ಕೆ ಯೋಗ್ಯವಾಗಿರುವುದು.

೯೮. ಮೈತ್ರೇಯಿ :—ಈಕೆಯು ಜನಕ ಮಹಾರಾಜನ ಆಸ್ಥಾನ ದಲ್ಲಿದ್ದ ಶೂರ ಸರದಾರನಾದ ಮೈತ್ರನ ಮಗಳು. ಈಕೆಯು ವಯಸ್ಸಿಗೆ ಬಂದ ನಂತರ ತಂದೆಯು ವರನನ್ನು ಹುಡುಕಲು ಯತ್ನಿಸಿದನು. ಈಕೆಯು ಪೂರ್ವ ಸಂಸ್ಕಾರದಿಂದ ಬ್ರಹ್ಮಜ್ಞಾನಿಯು ದೊರೆತರೆ ಲಗ್ನವಾಗಬಹುದು. ಇಲ್ಲವೆ ಬ್ರಹ್ಮಜ್ಞಾನಿಯುಂಹೊಂದಿ ತತ್ಪೋಪದೇಶದಿಂದಮುಕ್ತಿಯನ್ನುಹೊಂದಬೇಕೆಂಬ ತನ್ನ ಮನೋಗತವನ್ನು ತಂದೆಗೆ ತಿಳಿಸಿದಳು. ಕೆಲವು ದಿನಗಳ ನಂತರ ಜನಕ ಮಹಾರಾಜನ ಆಸ್ಥಾನದಲ್ಲಿ ಶ್ರೀ ಯಾಜ್ಞವಲ್ಕ್ಯರು ಅತ್ಯುತ್ತಮ ಜ್ಞಾನಿಗ ಳೆಂದು ನಿರ್ಣಯಿಸಲ್ಪಟ್ಟುದನ್ನು ಕೇಳಿದ ನಂತರ ಶ್ರೀ ಯಾಜ್ಞವಲ್ಕ್ಯರನ್ನೇ ಲಗ್ನ ಮಾಡಿಕೊಳ್ಳಬೇಕು; ಇಲ್ಲವೆ ಅವರಿಂದ ಬ್ರಹ್ಮಜ್ಞಾನವನ್ನು ಹೊಂದ

ಬೇಕೆಂದು ದೃಢನಿಶ್ಚಯಮಾಡಿದಳು. ಒಮ್ಮೆ ಯಾಜ್ಞವಲ್ಕ್ಯರು ಅರಣ್ಯ ದಲ್ಲಿ ಬ್ರಹ್ಮಸ್ವರೂಪದಲ್ಲಿ ಮಗ್ನರಾಗಿ ಕುಳಿತಾಗ್ಗೆ ಒಂದು ಹುಲಿಯು ಅವರನ್ನು ಹೊಂಚು ಹಾಕುತ್ತಿತ್ತು. ಅದೇ ಸಮಯದಲ್ಲಿ ಬೇಟೆಗೆ ಬಂದ ಮಿತ್ರನು ಅದನ್ನು ನೋಡಿ ಹುಲಿಯನ್ನು ಕೊಂದನು. ಅಂದಿನಿಂದ ಯಾಜ್ಞವಲ್ಕ್ಯರ ಪತ್ನಿಯು ಮಿತ್ರನ ಗೆಳೆಯನಾದ ಕಾತ್ಯನ ಮಗಳೂ ಆದ ಕಾತ್ಯಾಯನಿಗೂ ಮೈತ್ರೇಯಿಗೂ ಅತಿ ಮಿತ್ರತ್ವವುಂಟಾಯಿತು. ಕಡೆಯಲ್ಲಿ ಕಾತ್ಯಾಯನಿಯು ಮುಂಖಾತರ ಯಾಜ್ಞವಲ್ಕ್ಯರಿಗೂ ಮೈತ್ರೇಯಿಗೂ ವಿವಾಹವಾಯಿತು. ಯಾಜ್ಞವಲ್ಕ್ಯರು ವಾನಪ್ರಸ್ಥಾಶ್ರಮಕ್ಕೆ ತೆರಳಲು ಮೈತ್ರೇಯಿಯೂ ಅವರ ಸಂಗಡ ಹೋದಳು. ಅಲ್ಲಿ ಅವರ ಸೇವೆಯಂ ಚನ್ನಾಗಿ ಮಾಡಿ ಅವರ ಕೃಪೆಗೆ ಪಾತ್ರಳಾಗಿ ಅದ್ವೈತ ತತ್ವವನ್ನು ಕೇಳಿಕೊಂಡು ಪತಿಯೊಡನೆ ಪರ ಮಾನಂದವನ್ನು ಹೊಂದಿದಳು.

೯೯. ಭ್ರಾಂತಿರಭ್ರಾಂತಪೂರ್ವಕವೆಂಬ=ಭ್ರಮವು ಅಧಿಷ್ಠಾನ ಸಮೇತ ತೋರುತ್ತದೆಂಬ. ೧೦೦. ಭಲ್ಲಾತಕಿ=ಗೇರು. ಪರಿಪಾಟಿ=ಕ್ರಮ.

ಮಸಗಿ=ಹೆಚ್ಚಾಗಿ. ವಸುಮತಿ=ಭೂಮಿ. ೧೦೭. ಅಂಚೆ ನಡೆಯಳೆ= ಹಂಸಗಮನವುಳ್ಳವಳೇ. ದುಃಖದುರುಬು=ದುಃಖದ ಅಧಿಕ ತಾಪ. ೧೧೦. ಮಕರಿಸುವ=ಚೇಷ್ಟಿಸುವ. ೧೧೧. ಒರಗಿರ್ದ=ಮಲಗಿದ್ದ. ೧೧೨. ಅಖಿಳಗ= ಸರ್ವತ್ರ ಪೂರ್ಣನು. ೧೧೩. ಅಖಿಳಕಾರ್ಯಕ್ಷಮ=ಸರ್ವ ಕಾರ್ಯಮಾಡ ತಕ್ಕ ಸಮರ್ಥನು. ತೊಡರಿ=ಸುತ್ತು ಹಾಕಿಕೊಂಡು. ೧೧೪. ಉತ್ಪಾತ ದಿಂದ=ಮೇಲಿನಿಂದ ಹಾಕುವದರಿಂದ. ೧೧೫. ಜಾಯೆ=ಹೆಂಡತಿ. ೧೧೬. ಪರಿವ=ಹರಿವ. ನಿರೋಧಿಸುವ=ತಡೆಯುವ. ಇಂದು ಸನ್ನಿಭವಕ್ತ್ರೆ= ಚಂದ್ರಸದೃಶ ಮುಖವುಳ್ಳವಳೇ. ಅನಲ=ಅಗ್ನಿ. ಅನಿಲ=ವಾಯು. ವಿಣ್ಮೂತ್ರ=ಮಲ, ಮೂತ್ರ. ೧೧೭. ತೋರಮುಡಿಯಳೆ=ದೊಡ್ಡ ತುರು ಬುಳ್ಳವಳೇ. ಚೋದನೆ=ಪ್ರೇರಣೆ. ೧೧೮. ಊಣೆ=ಕೊರತೆ. ೧೧೯. ಮಕರ ಧ್ವಜಾಸ್ತ್ರಾನುಗುಣನೇತ್ರೆ=ಮನ್ಮಥನ ಬಿಲ್ಲಿನಂತೆ ನೇತ್ರಗಳುಳ್ಳವಳೇ. ಸೋರ್ಮುಡಿ=ಬಿಚ್ಚಿದ ಮುಡಿ. ಷಡೂರ್ಮಿ=ಆರು ತೆರೆಗಳು. ೧೨೦. ಪ್ರ ಮಾದ=ಅಜಾಗರೂಕತೆ. ಕಳಹಂಸ=ಧೂಮ್ರವರ್ಣದ ಕಾಲುಳ್ಳ ಹಂಸಪಕ್ಷಿ. ಪಗೆಗೆಟ್ಟು=ಹಗೆತನ ಕೆಟ್ಟು. ನಿಗಳಬಂಧನ=ಕೈಕಾಲುಗಳಿಗೆ ಹಾಕಿದ ಬೇಡಿ. ೧೨೩. ಶಬಲ=ಸಗುಣ. ಬೋಧ್ಯವು=ತಿಳಿದುಕೊಳ್ಳಲು ಯೋಗ್ಯ

ವಾದದ್ದು. ದುಂದುಭಿ=ನಗಾರಿ. ಸೂರ್ಪ=ಮೊರ. ಮುಸುಲ=ಒನಕೆ. ಪೀವರ=ಎತ್ತರ. ನಿಮ್ನ=ತಗ್ಗು.

೧೨೪. ಬೆಜವಾಡ ನ್ಯಾಯ :—ಬೆಜವಾಡ ದೇಶದಲ್ಲಿ ಒಬ್ಬ ಬ್ರಾಹ್ಮಣನ ಹೆಂಡತಿಯನ್ನು ಕುರಿತು ಒಬ್ಬ ಬ್ರಹ್ಮ ರಾಕ್ಷಸನು ಆ ಬ್ರಾಹ್ಮಣನ ರೂಪದಿಂದ ಬಂದು ತನ್ನ ಹೆಂಡತಿಯೆಂದೇ ವ್ಯವಹಾರಮಾಡುತ್ತಿರಲು ಪರಸ್ಥಳದಿಂದ ಹಿಂತಿರುಗಿದ ಬ್ರಾಹ್ಮಣನೆನು ಈ ವಿಷಯವನ್ನು ನ್ಯಾಯಾಧೀಶರಿಗೆ ಹೇಳಿಕೊಂಡನು. ನ್ಯಾಯಾಧೀಶರು ಇವರೀರ್ವರ ನಡೆ ನುಡಿ ಆಕಾರ ಮೊದಲಾದವುಗಳು ಒಂದೇ ರೀತಿಯಾಗಿರುವದನ್ನು ಕಂಡು ಇವರಿಬ್ಬರಲ್ಲಿ ಒಬ್ಬನು ವೇಷಧಾರಿ ಇರಬಹುದೆಂದು ಊಹಿಸಿ ವಿಚಾರದೊಡನೆ ಯುಕ್ತಿಯಿಂದ ಒಂದು ಕೊಡದಲ್ಲಿ ರಾಕ್ಷಸನನ್ನು ಪ್ರವೇಶಿಸುವಂತೆ ಮಾಡಿ ಅವನು ನಿಜವಾದ ಬ್ರಾಹ್ಮಣನಲ್ಲ, ಬಾಹ್ಮಣನಂತೆ ತೋರಿದ ರಾಕ್ಷಸನೆಂದು ಸಿದ್ಧ ಮಾಡಿದನು. ಹಾಗೆ ಅವಿಚಾರ ಕಾಲದಲ್ಲಿ ಕಲ್ಪಿತ ಪುರುಷನು ಪರಮಾತ್ಮನಂತೆ ತೋರಿ ವಿಚಾರದಿಂದ ಬಾಧಿಸಿಕೊಳ್ಳುವನು.

೧೨೫. ಸೋಮಶರ್ಮ ಜನಕನ ಕತೆ:—ಒಬ್ಬ ದರಿದ್ರ ಬ್ರಹ್ಮಚಾರಿಯು ದುರ್ಭಿಕ್ಷಕಾಲದಲ್ಲಿ ಭಿಕ್ಷೆಯನ್ನು ಬೇಡಿ ಸ್ವಲ್ಪ ಅರಳಿಟ್ಟನ್ನು ಸಂಪಾದಿಸಿ ಪಕ್ಕದಲ್ಲಿಟ್ಟುಕೊಂಡು ಮಲಗಿ ಈ ಪ್ರಕಾರವಾದ ನಾನಾ ಕಲ್ಪನೆಗಳನ್ನು ಮಾಡಿದನು. ಈ ಹಿಟ್ಟನ್ನು ಮಾರಿ ಅದರಿಂದ ಪ್ರಾಪ್ತವಾದ ದುಡ್ಡಿನಿಂದ ವ್ಯಾಪಾರದ ಮೂಲಕ ಐಶ್ವರ್ಯವನ್ನು ಸಂಪಾದಿಸಿ ರಾಜ ಕನ್ನಿಕೆಯನ್ನು ಮದುವೆಯಾಗಿ ಮಗನನ್ನು ಪಡೆದು ಮಗನಿಗೆ ಸೋಮಶರ್ಮನೆಂಬದಾಗಿ ಹೆಸರಿಡುತ್ತೇನೆ. ಮಗುವು ಅಳುವಾಗ ನನ್ನ ಹೆಂಡತಿಯು ಮಗನನ್ನು ಎತ್ತಿಕೊಳ್ಳದಿದ್ದರೆ ಆಕೆಯನ್ನು ಹೀಗೆ ಒದೆಯುತ್ತೇನೆಂದು ಕಾಲನ್ನು ಝಾಡಿಸಿ ಅರಳಿಟ್ಟನ್ನು ಕಳೆದುಕೊಂಡನು. ಹೀಗೆ ಬಗೆಯಿಂದ ಕಲ್ಪಿತ ಪುರುಷನಾಗಿ ಬಗೆಯಿಂದ ಅಖಿಳ ವಸ್ತುಗಳನ್ನು ಉಳ್ಳಂತೆ ಬಗೆದು ತಿಳಿವಿನ ಮೂಲಕ ಅಹಂ, ಇದಂ ಎಂಬ ಎಲ್ಲಾ ಬಗೆಗಳಳಿದು ಮೊದಲಿಂತೆ ತಾನೇ ತಾನಾಗಿರುವನು.

೧೨೮. ಅನುಭೂತ=ಸತ್ ಖ್ಯಾತಿ ಅನುಭವಿಸಲ್ಪಟ್ಟದ್ದು, ಭ್ರಾಂತಿಯು ಅನುಭೂತವಾಗಿದ್ದರೆ ಆತ್ಮನಲ್ಲಿ ನಾಶವಾಗದೆ ಸದಾ ಪ್ರತ್ಯಕ್ಷವಾಗಿ ತೋರಬೇಕಾಗಿತ್ತು. ಅಧಿಷ್ಠಾನವಾದ ಆತ್ಮನ ಜ್ಞಾನದಿಂದ ತೋರುವುದಿಲ್ಲ. ಆದ ಕಾರಣ ಅನುಭೂತವಲ್ಲ.

ಅನನುಭೂತ=ಅಸತ್ ಖ್ಯಾತಿ. ಅನುಭವಿಸಲ್ಪಡದೆ ಇರುವುದು, ಗೊತ್ತಾಗದ್ದು. ಭ್ರಾಂತಿಯು ಅನನುಭೂತವಾಗಿದ್ದರೆ ಎಂದೂ ಕಾಣದ ವಂಧ್ಯಾಪುತ್ರನಂತೆ ತೋರಿಕೆಯೇ ಆಗಬಾರದಾಗಿತ್ತು, ಪರಂತು ತೋರುತ್ತದೆ. ಆದ್ದರಿಂದ ಅನನುಭೂತವಲ್ಲ. ಸದೃಶ=ಅನ್ಯಥಾ ಖ್ಯಾತಿ, ಸದೃಶವೆಂದರೆ ಸಜಾತೀಯವು. ಅಸದೃಶ=ಅಖ್ಯಾತಿ. ಅಸದೃಶವೆಂದರೆ ವಿಜಾತೀಯವು. ಆತ್ಮನಲ್ಲಿ ಭ್ರಾಂತಿಯು ಸಜಾತೀಯವಾಗಲಿ, ವಿಜಾತೀಯವಾಗಲಿ ಆಗಿದ್ದರೆ, "ಏಕಮೇವಾದ್ವಿತೀಯಮ್" ಎಂಬ ಶ್ರುತಿಗೆ ವಿರೋಧವಾಗುವದು, ಮತ್ತು ಹಗ್ಗದಲ್ಲಿ ತೋರಿದ ಹಾವಿನಂತೆ ಮಿಥ್ಯವಾದದ್ದರಿಂದ ಭ್ರಾಂತಿಯು ಸದೃಶವೂ ಅಲ್ಲ, ಅಸದೃಶವೂ ಅಲ್ಲ.

೧೩೪. ಮಿಥ್ಯಾಧ್ಯಾಸ=ರಜ್ಜುವಿನ ಅಜ್ಞಾನದಿಂದ ತೋರಿದ ಸರ್ಪವು ರಜ್ಜುಜ್ಞಾನದಿಂದ ಪುನಃ ತೋರದೆ ಹೇಗೆ ಸುಳ್ಳಾಗುವದೋ ಹಾಗೆ ಆತ್ಮನ ಅಜ್ಞಾನದಿಂದ ತೋರಿದ ಶರೀರವೇ ತಾನೆಂಬ ಮತಿಯು ಆತ್ಮ ಜ್ಞಾನದಿಂದ ತೋರದೆ ಸುಳ್ಳಾಗುವದರಿಂದ ಮಿಥ್ಯಾಧ್ಯಾಸವು. ಸತ್ಯಾಧ್ಯಾಸ=ಬ್ರಾಹ್ಮಣನು ನಾಶವಾದರೂ ಬ್ರಾಹ್ಮಣತ್ವವು ನಾಶವಾಗದಂತೆ ಶರೀರವು ತಾನೆಂಬುವದು ಹೋದರೂ ಶರೀರ ಧರ್ಮಗಳು (ಷಡ್ಭಾವ ವಿಕಾರಗಳು) ತನ್ನನ್ನು ಬಿಡದಿರುವುದರಿಂದ ಶರೀರದ ಧರ್ಮ ಸತ್ಯಾಧ್ಯಾಸವು.

ಇತರೇತರಾಧ್ಯಾಸ=ಚಂದ್ರಕಾಂತದ ಚಲನಾದಿಗಳ ಧರ್ಮ ಪ್ರತಿಬಿಂಬದಲ್ಲಿಯು ಪ್ರತಿಬಿಂಬದ ಪ್ರಕಾಶ ಧರ್ಮ ಚಂದ್ರಕಾಂತದಲ್ಲಿಯು ತೋರುವಂತೆ ಅಹಂಕಾರದಲ್ಲಿ ತೋರುವುದರಿಂದ ಅಹಂಕಾರ (ಅಂತಃಕರಣ)ವು ಇತರೇತರಾಧ್ಯಾಸವು. ಉದಾ. ನಾನು ಇಚ್ಛಿಸುತ್ತೇನೆ, ಇತ್ಯಾದಿ. ಇತರಾಧ್ಯಾಸ=ಪ್ರಕಾಶದಲ್ಲಿ ಅನೇಕ ರತ್ನಗಳು ಬರಲು ಅನೇಕರತ್ನದ ಬಣ್ಣಗಳು ಆ ಪ್ರಕಾಶದಲ್ಲಿ ತೋರುವಂತೆ ದಶೇಂದ್ರಿಯಗಳ ಧರ್ಮಗಳು ಆತ್ಮನಲ್ಲಿ ತೋರುವದು (ಉ. ಇಂದ್ರಿಯಗಳಿಂದ ವಿಷಯಗ್ರಹಣ ಮಾಡುವ ಕಾಲಕ್ಕೆ ಆ ಇಂದ್ರಿಯಗಳೇ ನಾನೆಂದು ಅಭಿಮಾನಿಸುವನು.)

೧೩೫. ಅಭಾವ=ಇಲ್ಲವೆಂಬುವ ಜ್ಞಾನದ ವಿಷಯವೇ ಅಭಾವವು ಅನ್ಯೋನ್ಯಾಭಾವ=ಪರಸ್ಪರ ಅಭೇದವು ಇಲ್ಲವೆನ್ನುವದೇ ಅನ್ಯೋನ್ಯಾಭಾವವು; (ಘಟವು ಪಟವಲ್ಲ=ಪಟವು ಘಟವಲ್ಲ ಪದದ ಅನ್ವಯವು=

(೧) ಘಟವು ಘಟದಂತೆ ತೋರ್ಕೆಗೆ ಮೊದಲು ಇಲ್ಲ. (೨) ಇಂತು ಘಟವಾಗಿ ಕೆಟ್ಟ ಬಳಿಕ ಅದು ಇಲ್ಲ. (೩) ಘಟವು ಅದು ಮೃತ್ತಿಕೆಗೆ ಬೇರೆ (೪) ತಾನೊಂದು ಘಟವಿಲ್ಲವು. ಇಲ್ಲವು (೧) ಕೊಡವು ಕೊಡದಹಾಗೆ ತೋರುವ ದಕ್ಕಿಂತ ಮೊದಲು ಮಣ್ಣಿನಲ್ಲಿಲ್ಲ. (೨) ಹೀಗೆ ಕೊಡವಾಗಿ ನಾಶವಾದ ನಂತರವೂ ಮಣ್ಣಿನ ಸ್ವರೂಪವಾದ ಹೆಂಚಿನಲ್ಲಿಲ್ಲ, (೩) ಕೊಡವು ಕಲ್ಪಿತ ವಸ್ತು ಸ್ವರೂಪವಲ್ಲದೆ ದ್ರವ್ಯರೂಪವಲ್ಲ. ಆದ್ದರಿಂದ ಕೊಡವು ಮಣ್ಣಿಗಿಂತ ಭಿನ್ನ ಅಂದರೆ ಮಣ್ಣು ಕೊಡವಲ್ಲ, ಕೊಡವು ಮಣ್ಣಲ್ಲ. (೪) ತಾನೊಂದು ಘಟವು ಇಲ್ಲವೇ ಇಲ್ಲ. (ಘಟವು ಮೃತ್ತಿಕೆಯ ಅವಿಚಾರ ಕಾಲದಲ್ಲಿ ನಾಮ ಮಾತ್ರವಾಗಿರುವದಲ್ಲದೆ ಮೃತ್ತಿಕೆಯ ಹೊರತು ಘಟವು ಸ್ವರೂಪತಃ ಇರುವ ದಿಲ್ಲವಾದ್ದರಿಂದ ಮೃತ್ತಿಕೆಯಲ್ಲಿ ಕೊಡವು ಎಂದೂ ಇಲ್ಲ.)

(೧) ಇದು ಜಗವು ಬ್ರಹ್ಮವಿವರ್ತವೆಂದೆನಿಸದು, ಬ್ರಹ್ಮದಲ್ಲಿ ಅನ್ಯಾ ಕಾರ ಪ್ರತೀತಿಯೂ, ಅನ್ಯವಸ್ತುವಿನ ಪ್ರತೀತಿಯೂ ಇಲ್ಲ. ಬ್ರಹ್ಮವು ಅವ ಸ್ಥಾಂತರವನ್ನು ಹೊಂದದು; ಯಾಕೆಂದರೆ. ಭ್ರಾಂತನ ಪ್ರತೀತಿಯು ತಿರಸ್ಕಾರ ಮಾಡಲ್ಪಟ್ಟಿದೆ. ಪ್ರತೀತಿ ಸತ್ಯವಾದರೆ ಆತ್ಮನಂತೆ ಸತ್ಯವಾಗಿ ದ್ವೈತಾಪತ್ತಿ ಪ್ರಾಪ್ತಿಯಾಗುತ್ತಿತ್ತು. ಕಾರಣ ಬ್ರಹ್ಮವಿವರ್ತವಲ್ಲ.

ಒಂದುಕಡೆ ಬಹ್ಮವಿವರ್ತಂವೆದು ಹೇಳಿರುವದಕ್ಕೆ ಕಾರಣ–ಕಲ್ಪಿತ ವಸ್ತುವು ಅಧಿಷ್ಠಾನಕ್ಕೆ ಅನ್ಯವಲ್ಲವೆಂಬುದನ್ನು ತೋರಿಸಿ ಮಧ್ಯಮಾಧಿಕಾ ರಿಯ ಬುದ್ಧಿಯನ್ನು ಅದ್ವೈತ ಚೈತನ್ಯದಲ್ಲಿ ಪ್ರವೇಶಿಸುವದಕ್ಕೋಸ್ಕರ ಜಗ ತ್ತನ್ನು ಆರೋಪಮಾಡಿ ಅನಂತರ ನಿಷೇಧಿಸುವದಕ್ಕೋಸ್ಕರ ಹೇಳಿದೆ. ಹೀಗೆ ತಿಳಿದರೆ ದ್ವೈತವೇನೂ ಸಿದ್ಧಿಸದೆ ಅಖಂಡಾದ್ವೈತಸ್ವರೂಪ ಬ್ರಹ್ಮವೇ ನಾನೆಂಬ ನಿಶ್ಚಯ ಜ್ಞಾನವಾಗುತ್ತದೆ.

(೨) ಬ್ರಹ್ಮದ ಕಾರ್ಯವಲ್ಲ = ಬ್ರಹ್ಮಕ್ಕೆ ಕಾರಣವೂ ಇಲ್ಲ, ಕಾರ್ಯವೂ ಇಲ್ಲ; ಬ್ರಹ್ಮವೇ ಉಪಾದಾನ ಕಾರಣವೆಂದು ಹೇಳಿದರೆ ವಿಕಾರವುಳ್ಳದ್ದಾಗಿ ಅನಿತ್ಯವಾಗಬೇಕಾದೀತು: ಕುಲಾಲನಂತೆ ನಿಮಿತ್ತ ಕಾರಣವಾದರೂ ನಾಶ ಹೊಂದಬೇಕಾಗುವುದು. ಆದ್ದರಿಂವ ಬ್ರಹ್ಮವು ಕಾರಣವಲ್ಲ, ಜಗವು ಕಾರ್ಯ ವಲ್ಲ.

ಜಗತ್ತಿನ ಉಪಾದಾನಕಾರಣವಾದ ಅಜ್ಞಾನಕ್ಕೆ ಬ್ರಹ್ಮವು ಆಶ್ರಯವಾ ದ್ದರಿಂದ ಬ್ರಹ್ಮಕ್ಕೆ ಔಪಚಾರಿಕವಾಗಿ ಕಾರಣ ಹೇಳಲ್ಪಟ್ಟಿದೆ. ಯಥಾರ್ಥ

ದಿಂದ ಹೇಳಿರುವದಿಲ್ಲ. ಅದನ್ನಾದರೂ ಮಂದಾಧಿಕಾರಿಗಳನ್ನು ಕುರಿತು ಲೋಕ ದಲ್ಲಿ ಕಾರ್ಯಕಾರಣಗಳಿಗೆ ಅಭೇದವು ಪ್ರಸಿದ್ಧವಾಗಿದ್ದು ಬ್ರಹ್ಮವು ಜಗತ್ತಿಗೆ ಕಾರಣವೆಂದು ಹೇಳಿದರೆ ಸುಲಭವಾಗಿ ಬ್ರಹ್ಮದಲ್ಲಿ ಬುದ್ಧಿಯು ಪ್ರವೇಶವಾಗು ವದೆಂಬ ಪ್ರಯೋಜನಕ್ಕೋಸ್ಕರ ಹೇಳಿದೆ.

(೩) ಬ್ರಹ್ಮದ ವಿಲಕ್ಷಣವೆನಲಿಲ್ಲ=ಜಗವು ಬ್ರಹ್ಮದ ವಿಲಕ್ಷಣವಾಗಿದ್ದರೆ ಅದು ಸ್ವಗತವೋ? ಸಜಾತೀಯವೋ? ವಿಜಾತೀಯವೋ? ಎಂಬ ಪ್ರಶ್ನೆ ಬರುವದು. ಆ ಮೂರು ಭೇದವೂ ಶ್ರುತಿಯಿಂದ ಖಂಡಿಸಲ್ಪಟ್ಟಿದೆ. ಆದಕಾರಣ ವಿಲಕ್ಷಣವಲ್ಲ.

(೪) ಬ್ರಹ್ಮಸ್ಥವೆನಿಸದು=ಬ್ರಹ್ಮವು ಅವಿರಳವಾಗಿ ಪರಿಪೂರ್ಣವಿರುವದ ರಿಂದ ಒಂದುವಸ್ತು ಒಂದು ಸ್ಥಾನದಲ್ಲಿರುವ ಪರ್ಯಂತ ಮತ್ತೊಂದು ಸತ್ಯವ ಸ್ತುವು ಆ ಸ್ಥಾನದಲ್ಲಿ ಬರಲರಿಯದೆಂಬ ಸಿದ್ಧಾಂತದಂತೆ ಜಗವು ಬ್ರಹ್ಮದಲ್ಲಿರ ಲಾರದು, ಇದೆ-ಅಂದರೆ ಕನ್ನಡಿಯಲ್ಲಿ ತೋರಿದ ವಸ್ತುವಿನಂತೆ ಸುಳ್ಳು ತೋರಿಕೆ. ೧೩೭. ನಿನ್ನ ಚಿದ್ಭ್ರಮೆ= ತಿಳುವಿಕೆಯ ಭ್ರಾಂತಿ. ಶರೀರಾದಿಗಳೇ ತಾನೆಂಬ ತಿಳುವಳಿಕೆಯ ಭ್ರಾಂತಿ ಮರೆವಿಗೂ, ಪರಮನೆ ನಾನೆಂಬ ತಿಳುವಳಿ ಕೆಯ ಭ್ರಾಂತಿ ಅರಿವೆಗೂ ಕಾರಣವು. ಪೊರೆಯೆ=ಕೂಡಲಾರೆ. ೧೪೦. ಮರೆ=ಕಾಡಾಕಳು. ೧೪೧] ಅಧಿಗತ ಪರಮಾತ್ಮ=ಪರಮಾತ್ಮನನ್ನು ಸಾಕ್ಷಾತ್ಕರಿಸಿದವನು. ಗುರುಪಯೋಧರೆ=ದೊಡ್ಡಸ್ತನಗಳುಳ್ಳವಳು, ೧೪೨. ವನಜಸನ್ನಿಭವಕ್ತ್ರೆ=ತಾವರೆಗೆ ಸದೃಶವಾದ ಮುಖವುಳ್ಳವಳೇ. ಅವಗತಿ= ಜ್ಞಾನ. ಕರೆಮರೆ=ಅಜ್ಞಾನ ಆವರಣ ೧೪೩.ಅಣೆಯರದಿಂದೆ=ನಿಶ್ಚಯದಿಂದ. ಶ್ರವಣದೋಷ=ಕೇಳಿದ್ದರಲ್ಲಿ ತಪ್ಪು ತಿಳಿಯುವಿಕೆ. ೧೪೫. ನಿರವಿಸುವೆನು= ಆಚ್ಛಾದಿಸುವೆನು, ಕದಂಬ=ಸಮೂಹ. ೧೪೬. ನಿರಿಗುರುಳಬಲೆ=ಗುಂಗುರು ಕೂದಲುಳ್ಳವಳೇ!ಸಸಿನ=ಸೊಗಸು, ಸತ್ಯ. ತಟಸ್ಥ=ದಡದಲ್ಲಿರುವುದು. ೧೪೭. ಸಂಫುಲ್ಲಪಂಕರುಹ ಸನ್ನಿಭ=ಪ್ರಫುಲ್ಲಿತಕಮಲ ಸದೃಶವಾದ. ಪಡಿ=ಸಮಾನ. ಪಟ್ಟಾಂತರ=ಆಧಿಕ್ಯ. ೧೪೮. ಹರಿಮುರಿ=ಉದ್ದಡೊಂಕು, ೧೪೯. ಸೊಲ್ಲಿಡೆ =ಮಾತನಾಡಲು, ಬಿಸರುಹದಳ=ಕಮಲಪತ್ರ. ತನುಮಧ್ಯೆ=ತೆಳುವಾದ ನಡುವುಳ್ಳವಳು. ೧೫೦. ತಜ್ಞರೋಳ್=ತತ್ವಜ್ಞರಲ್ಲಿ. ಯುಗಪಲ್ಲಯ= ಒಂದೇಕಾಲಕ್ಕೆಲಯ. ಪೃಥಗ್‌ಪ್ರಕೃತಿಲಯ=ಬೇರೇರೀತಿಯಾಗಿ ಪ್ರಕೃ ಳಯವು. ೧೫೧. ಸಾಧ್ವಸ=ಭಯ,

ಗಾಂಪ=ಮೂರ್ಖ. ಘನಜಾಲ=ಮೇಘಸಮೂಹ, ಬೆರಲಿತ್ತು= ಭಾಷೆಕೊಟ್ಟು. ತೊಳ್ತು=ಕಿಂಕರ. ೧೫೩. ಕುಡುತೆಗಣ್ಣು=ಶಾರೆ, ಅಥವಾ ಬೊಗಸೆಯಂತಿರುವಕಣ್ಣು. ೧೫೪. ಬ್ರಹ್ಮಣೆಸ್ವಾಹೇತಿ=ಬ್ರಹ್ಮದಲ್ಲಿ ಅರ್ಪಿತವಾಗಲಿ. ಜಾತಕರ್ಮ=ಹುಟ್ಟಿದಾಗ ಮಾಡುವ ಕರ್ಮ. ೧೫೫. ನಿಪತಿತ= ಬಿದ್ದವನು, ನಾಕ=ಸ್ವರ್ಗ. ೧೫೮. ಕೈರವಾಯತನೇತ್ರ=ಬಿಳಿನೈದಿಲೆಯಂತೆ ವಿಸ್ತಾರವಾದ ಕಣ್ಣುಳ್ಳವಳು. ಸುಪತಿ=ಸುಪ್ತಿ. ನೂಪುರಾಂಚಿತ ಪಾದೆ=ಪೈಜಣದಿಂದ ಕೂಡಿದ ಕಾಲುಳ್ಳವಳು. ೧೬೨. ಕೃಚ್ಛ್ರ=ಮೂರು ದಿನ ಬರೀ ಹಗಲೂಟ, ಮೂರು ದಿನ ಬರೀ ರಾತ್ರಿ ಊಟ. ಮೂರು ದಿನ ತಾನಾಗಿ ದೊರತ ಊಟ. ಮೂರು ದಿನ ಊಟವೇ ಇಲ್ಲ : ಇದು ಹನ್ನೆರಡು ದಿನಗಳ ಕೃಚ್ಛ್ರ. ಹೀಗೆ ಉಪವಾಸ ಪ್ರಧಾನವಾಗಿ ನಾನಾವಿಧ ಕೃಚ್ಛ್ರಗಳು. ಚಾಂದ್ರಾಯಣ=ಶುಕ್ಲಪಕ್ಷದಲ್ಲಿ ಪಾಡ್ಯದಿಂದ ಒಂದೊಂದು ತುತ್ತಾಗಿ ಹೆಚ್ಚಿಸುತ್ತಾ ಕೃಷ್ಣಪಕ್ಷದಲ್ಲಿ ಪಾಡ್ಯದಿಂದ ಒಂದೊಂದು ತುತ್ತು ಇಳಿಸುತ್ತಾ ಶರೀರವನ್ನು ಕ್ಷೀಣಿಸುವದು. ೧೬೩. ಅರ್ಘ್ಯ=ಪೂಜೆಯ ನೀರು. ಪಾದ್ಯ=ಪಾದ ಪೂಜೆ. ಆಚಮನೀಯ=ಬಾಯಲ್ಲಿ ನೀರನ್ನು ತೆಗೆದುಕೊಳ್ಳುವುದು. ಉಪವೀತ=ಜನಿವಾರ. ಅನುಲೇಪನ=ಗಂಧಾದಿಗಳನ್ನು ಪೂಸುವುದು. ಆವೃತ್ತಿ=ಪ್ರದಕ್ಷಿಣೆ. ವಿಸರ್ಜನ= ಪೂಜೆ ಮುಗಿಸುವುದು. ಓರಂತೆ=ಚೆನ್ನಾಗಿ ೧೬೪. ರದನಚ್ಛದಂಗಳು=ತುಟಿಗಳು. ಸ್ವಾಧ್ಯಾಯ=ವೇದಾಧ್ಯಯನ.

ಗಾಯತ್ರಿ=ಓಂ ಭೂರ್ಭುವಸ್ವಃ ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯಧೀಮಹಿ ಧಿಯೋಯೋ ನಃ ಪ್ರಚೋದಯಾತ್, ಇದಕ್ಕೆ ಅರ್ಥ ಓಂ=ಪರಮಾತ್ಮ, ಭೂಃ=ಭೂಲೋಕ, ಭುವಃ=ಅಂತರಿಕ್ಷ, ಸ್ವಃ= ಸ್ವರ್ಗಲೋಕ, ತತ್=ಪರಮಾತ್ಮ, ಸವಿತುಃ=ಈಶ್ವರ, (ಸೂರ್ಯ), ವರೇಣ್ಯಂ=ಪೂಜೆಗೆ ಅರ್ಹವಾದ, ಭರ್ಗಃ=ಪಾಪನಾಶಕ, ದೇವಸ್ಯ= ಜ್ಞಾನಸ್ವರೂಪ, ಧೀಮಹಿ=ನಾನು ಧ್ಯಾನಿಸುತ್ತೇನೆ. ಧಿಯೋ=ಬುದ್ಧಿ, ಯೋ=ಯಾವ, ನಃ=ನಮ್ಮ, ಪ್ರಚೋದಯಾತ್=ಜ್ಞಾನಪ್ರಕಾಶವಾಗಲಿ, ಅಜಪ=ಪ್ರಯತ್ನವಿಲ್ಲದೆ ತನಗೆ ತಾನೇ ಶ್ವಾಸೋಚ್ಛ್ವಾಸ ಮೂಲಕ ನಡೆಯುತ್ತಿರುವ ಸೋಹಂ ಎಂಬ ಮಂತ್ರ. ಹುತಿ=ಹವಿರ್ಭಾಗ.

೧೬೬. ತುಂಡ=ಮುಖ, ಪ್ರಕೃತಿಗಳೆಂಟು=ಅ, ಕ, ಚ, ಟ, ತ, ಪ, ಯ, ಶ, . . .

೧೯೯. ವೃತ್ತರೂಪ=ಅಂಡಾಕಾರ; ಸುಷಿರ=ಪೊಳ್ಳು; ೧೭೨. ಯುಗಮಾತ್ರದರ್ಶಿ=ಸಮಾಹಿತೆ ಉತ್ಥಾನ ಈ ಎರಡನ್ನು ಮಾತ್ರ ನೋಡುವವ. ೧೭೩. ಓಸರಿಸದೆ=ಬೇಸರಿಯದೆ. ೧೭೪. ಅತ್ಯರ್ಥವಾಗಿ=ವಿಶೇಷವಾಗಿ. ೧೭೫. ಉದ್ಧತನಾದ=ಗರ್ವಿಷ್ಠನಾದ. ಪ್ರತ್ಯಕ್ಷರಾಗ್ಭೇದ=ಅಂತರಬಾಹ್ಯಭೇದ. ೧೭೬. ಮುದ್ರೆ=ಕ್ಲೇಶಾದಿಗಳನ್ನು ಮುದ್ರಿ (ನಾಶಿ) ಸುವದರಿಂದ ಮುದ್ರೆಯೆನಿಸುವದು. ತಾರೆ=ಕಣ್ಣೊಳಗಿನ ಸೂಕ್ಷ್ಮವಾದ ಕಪ್ಪು. ೧೭೮. ಸಂಯಮಿಗಳು=ಮನೋನಿಗ್ರಹಮಾಡಿದ ಯತಿಗಳು. ಸೂರಿಗಳು.=ವಿದ್ವಾನುಗಳು. ಗೋಷ್ಠ=ದನಗಳು ನಿಲ್ಲುವ ಸ್ಥಾನ. ಮುಹೂರ್ತ=ಎರಡು ಘಳಿಗೆಯ ಕಾಲ. ೧೭೮. ತರಹರ=ತಾಳ್ಮೆ, ಸೈರಣೆ. ಹವಿ=ಹೋಮ ದ್ರವ್ಯ. ಆಜ್ಯ=ತುಪ್ಪ. ಪಿಣ್ಯಾಕ=ಚಟ್ನಿ. ೧೭೯. ದಾರುಪಾತ್ರೆ=ಕಟ್ಟಿಗೆಯ ಪಾತ್ರೆ. ೧೮೦. ಭಾಜನ=ಪಾತ್ರ. ೧೮೧. ರಸಾರ್ದ್ರ=ರಸದಿಂತೊಯ್ದ. ೧೮೨. ಪರಿಣಾಮ=ಸಂತೋಷ. ಊರ್ಜಿತ=ಸ್ಥಿರ. ಓವರಿ=ಸಮಾನತ್ವ. ೧೮೩. ಪಿಸುಣನು=ಚಾಡಿಕಾರನು. ರತಿಕರ=ಭೋಗಾಸಕ್ತ. ಕ್ಷುದ್ರ=ಮತ್ಸರ. ಧೂರ್ತ=ಮೋಸಗಾರ. ನಿರಸ=ಆನಂದರಹಿತನು. ನಿಷ್ಠುರಾಲಾಪನು=ನಿಷ್ಠುರ ಮಾತನಾಡುವವನು. ೧೮೪. ವದಿಸದೆ=ಬಯಸದೆ. ೧೮೭. ಮದಿರ=ಹೆಂಡ-ಸಾರಾಯಿ. ೧೯೧. ನಿರವಿಸಲು=ವಿಧಿಸಲು. ವರಸೇತುಬಂಧದೆಡೆಯೊಳುಂಟೆಗತಿ=ಸಮುದ್ರದೊಳಗೆ ದೋಣಿ ಹಡಗುಗಳಿಂದ ಹೋಗುವವರಿಗೆ ಮಾತ್ರ ಗಂಡಾಂತರ ಪ್ರಸಂಗದಲ್ಲಿ ನಿಯಮ ಹೇಳಬಹುದು. ಈಚೆಯ ತೀರದಿಂದ ಆಚೆಯ ತೀರದವರೆಗೆ ಶ್ರೇಷ್ಠವಾದ ಸೇತುವೆ ಕಟ್ಟಿದಲ್ಲಿ ಹೀಗೆ ಹೋಗಬೇಕೆಂಬ ನಿಯಮವು ಹೇಗಿಲ್ಲವೋ(ನಿರ್ಭೀತಿಯಾಗಿರುವುದೋ) ಹಾಗೆ ಆತನು ಪರಿಪೂರ್ಣನಾಗಿರುವದರಿಂದ ಅವನಿಗೆ ಏನೊಂದನ್ನೂ ಆಜ್ಞಾಪಿಸುವಂತಿಲ್ಲ. ೧೯೩. ಪೊರತೆಂದು=ಇಲ್ಲವೆಂದು. ೧೯೪. ನಿಸ್ತತ್ವ=ತತ್ವವಿಲ್ಲದ. ೧೯೫. ಮಾಣವಕನು=ಬ್ರಹ್ಮಚಾರಿ. ಪ್ರತಿಪತ್ತಿ=ಪರಸ್ಪರ ವಿರುದ್ಧಾರ್ಥ ಪ್ರತಿಪಾದಕ ವಾದಿಗಳ ಅನೇಕ ವಚನಗಳು. ಇವುಗಳಿಂದ ಸಂಶಯವುಂಟಾಗುವದು. ೧೯೭. ಸ್ವಸ್ತಿ=ಜಗತ್ತಿಗೆ ಕಲ್ಯಾಣವಾಗಲಿ. ಸಮಸ್ತ ದೇವತೆಗಳ ಸಮೂಹದ ಕಿರೀಟಗಳಲ್ಲಿ ಕೆತ್ತಲ್ಪಟ್ಟ ರತ್ನಗಳ ಸಮೂಹದ ಪ್ರಕಾಶವೆಂಬ ವಿಶೇಷ (ಪ್ರಸಿದ್ಧ)ವಾಗಿ ಹರಿಯುತ್ತಿರುವ ನದಿಯ ದಡದಲ್ಲಿ ಶೋಭಿಸುತ್ತಿರುವ ಎರಡು ಪಾದಕಮಲಗಳುಳ್ಳಂಥಾ ಷಡ್ಗುಣೈಶ್ವರ್ಯಸಂಪನ್ನ

ನಾದ ಶಂಭುಲಿಂಗೇಶ್ವರನ ದಯಾದೃಷ್ಟಿಯೆಂಬ ದಟ್ಟವಾದ ಬೆಳದಿಂಗಳಿಂ ವ್ಯಾಪಿಸಲ್ಪಟ್ಟು, ಸಕಲ ಸಂಸಾರ ದುಃಖವನ್ನು ಕಳೆಯಲ್ಪಟ್ಟ, ಪ್ರಕಟವಾದ ಬ್ರಹ್ಮಾನಂದವನ್ನು ಸ್ವೀಕರಿಸುವುದರಲ್ಲಿ ತತ್ಪರವಾದ ಮನಸ್ಸಿನಿಂದ ಕೂಡಿದ ನಿಜಗುಣನೆಂಬ ಹೆಸರುಳ್ಳ ಶಿವಯೋಗಿ (ಯತಿ) ಯಿಂದ ರಚಿಸಲ್ಪಟ್ಟ ಪರ ಮಾನುಭವಬೋಧೆಯೆಂಬ ಹೆಸರಿನ ಪ್ರಕರಣದಲ್ಲಿ, ತಾತ್ಪರ್ಯ—ಶಂಭು ಲಿಂಗೇಶ್ವರನ ಕೃಪೆಗೆ ಪಾತ್ರರಾಗಿ ಸಕಲ ಸಂಸಾರ ದುಃಖವನ್ನು ನೀಗಿ ಜೀವನ್ಮುಕ್ತಿ ಸುಖವನ್ನು ಅನುಭವಿಸುವಂಥ ಶ್ರೀಮನ್ನಿಜಗುಣಯತೀಶ್ವರ ರಿಂದ ರಚಿಸಲ್ಪಟ್ಟಿರುವದು. ಆದರೆ ಶ್ರೋತ್ರಿಯ ಬ್ರಹ್ಮನಿಷ್ಠರಿಂದ ಈ ಗ್ರಂಥವು ರಚಿಸಲ್ಪಟ್ಟಿರುವದರಿಂದ ಸರ್ವರೂ ಗ್ರಹಿಸಲಿಕ್ಕೆ ಯೋಗ್ಯವಾ ದದ್ದೆಂಬ ಭಾವವು.

**ಪರಮಾರ್ಥ ಗೀತೆ:**—೧೯೮.—ಒದವು=ಪ್ರಾಪ್ತಿಯು; ಅನರ್ಘ್ಯ= ಬೆಲೆಯಿಲ್ಲದಂಥ. ವಿಚಾರಿಸೆ=ಗುರುಮುಖದಿಂದ ವಿಚಾರಮಾಡಲು. ೧೯೯. ಸುಶ್ರಾವ್ಯಂ=ಶ್ರವಣಮಾಡಲು ಯೋಗ್ಯವಾದದ್ದು. ಐಯುವರ= ಪ್ರಾಪ್ತಿಸುವಂಥವರನ್ನು.

೨೦೦. **ದ್ರವಿಡಮುಂಡಕನ್ಯಾಯ:**—ಯಾವದೊಂದುಕಾರ್ಯಸಿದ್ಧಿಯು ಅನಾಯಾಸವಾಗಿ ಆಗುವ ಮತವಂಬಿಟ್ಟು ಅನ್ಯಮತದಿಂ ಬಹುಕಷ್ಟಪಟ್ಟು ಪುನಃ ಅದೇ ಮತವನ್ನು ಸ್ವೀಕರಿಸುವದು. (a) ದ್ರವಿಡದೇಶದಲ್ಲಿ ಮುಂಡಕನೆಂಬ ಅರಸನು ತನ್ನ ರೈತರಿಗೆ ತಲೆಸುತ್ತಿ ತುತ್ತು ತೆಗೆದು ಕೊಳ್ಳುವದನನ್ನು ಕಟ್ಟು ಮಾಡಿದಂತೆ. (b) ರೈತರು ತಮ್ಮ ಹತ್ತಿರ ಹಣವಿದ್ದರೂ ವಾಯಿದೆಗೆ ಸರಿ ಯಾಗಿ ಕಂದಾಯವನ್ನು ಕೊಡದೆ ತಡಮಾಡಿ ದಂಡಹೊಂದಿ, ಕಲ್ಲುಹೊರಿಸಿ ಕೊಂಡು ಗುದ್ದಿಸಿಕೊಂಡು ನಂತರ ಕಂದಾಯವನ್ನು ಕೊಡುವಂತೆ. ತಾತ್ಪರ್ಯವೇನೆಂದರೆ;—ಮೊದಲೇ ಒಪ್ಪಿಕೊಂಡು ಕಂದಾಯ (ತೆರಿಗೆ) ವನ್ನು ಸಲ್ಲಿಸಿದರೆ ತಮಗೆ ಯಾವವಿಧವಾದ ದಂಡ ಆಯಾಸಗಳಾಗುವದಿಲ್ಲ. ಇದರಂತೆ ಮುಮುಕ್ಷುಗಳು ಸಿದ್ಧಾರ್ಥ ಭೋಧಕವಾದ ಈ ಗ್ರಂಥವನ್ನು ಮೊದಲೇ ಸ್ವೀಕರಿಸದೆ ಭೇದವಾದಿಗಳ ಗ್ರಂಥಗಳಲ್ಲಿ ಪ್ರವೃತ್ತರಾದ ಪಕ್ಷದಲ್ಲಿ ತಮಗೆ ಇಚ್ಛಿತವಾದ ಮೋಕ್ಷವನ್ನು ಹೊಂದದೆ ಜನನ ಮರಣಾದಿ ದುಃಖಗ ಗಳ್ನು ಅನುಭವಿಸಿ, ದುಃಖನಿವೃತ್ತಿಗಾಗಿ ಕಡೆಗೆ ಅಭೇದವನ್ನು ಬೋಧಿಸುವ ಈ ಗ್ರಂಥಕ್ಕೆ ಶರಣಾಗತರಾಗಬೇಕಾಗುವದು.

ಬಿನ್ನಣವುಳ್ಳ=ವೈರಬುದ್ಧಿಯುಳ್ಳವನ, ಎಗ್ಗಂ=ಮೂರ್ಖ;ಅನುಸರಣದಿಂ=ಅನುಭವರೀತಿಯಿಂದ; ಉನ್ನಿಸುವದು=ಅನುಮಾನ ಮಾಡುವದು; ಅದುಕಾರಣದಿಂ=ತನ್ನ ಜ್ಞಾನದಿಂದ ಎಲ್ಲದರಜ್ಞಾನವಾಗುವುದರಿಂದ; ನನ್ನಿಯನು=ನಿಶ್ಚಯವಾಗಿ. ೨೦೧. ಅನುವಿಂದ=ಯುಕ್ತಿಯಿಂದ; ವಶ್ಯಮಿದು=ನಿತ್ಯ ಪ್ರಾಪ್ತವಾದದ್ದೆಂದು; ಜಾನಿಸಿ=ಅರಿದು;ಅಜೆ=ಹುಟ್ಟದ್ದರಿಂದ ಅನಾದಿ; ನೆಮ್ಮಿಹುದು=ಆಶ್ರಯಿಸಿಕೊಂಡಿರುವದು ; ಸ್ಪಂದಾಸ್ಪಂದ=ಚೇತನಾಚೇತನ; ಭಾವದ—ಸದ್ರೂಪವಸ್ತುವಿನ; ಕಲೆಗಳನು=ಕಾರ್ಯಗಳನ್ನು ; ಭಾನುಕಳಾನಿಭ=ಸೂರ್ಯಕಿರಣಗಳಿಗೆ ಸಮಾನಗಳಾದ. ೨೩೨. ಭೋಂಕನೆ=ತೀವ್ರವಾಗಿ ; ಮಿಕ್ಕಿನಲ್ಲಿ=ಶ್ರೇಷ್ಠತ್ವದಲ್ಲಿ ; ಮಹಿಮಾಲಂಬನ=ಇಂಥಾ ಮಹಿಮೆಗೆ ಆಶ್ರಯನಾದವನೇ (ಶಿಷ್ಯನೇ) ; ಓಲೈಸಿ=ಹೊಗಳಿಸಿ ; ಕ್ಷುದ್ರದ=ತುಚ್ಛವಾದ ; ಮಾಣದೆ=ಬಿಡದೆ ; ಯೋಗ=ಚಿತ್ತೈಕಾಗ್ರತೆ ; ಮನೋನ್ಮನಿ=ಮನಸ್ಸನ್ನು ಅಂತರ್ಮುಖ ಮಾಡುವಶಕ್ತಿ, ಕುಂಡಲಿ=ಇಹಪರ ಭೋಗವನ್ನುಂಟುಮಾಡುವ ಶಕ್ತಿ ; ಗೋಷ್ಠಿ=ಮಾತು ; ಕುಡಿಯಿಡುವ=ಕೊನೆಯನ್ನು ಚಾಚುವ ; ಓಲಗ=ಸಭೆ ; ಪರಿಚರ್ಯ=ಸೇವೆ ; ಅಷ್ಟೈಶ್ವರ್ಯಂ=ಅಣಿಮಾದಿ ಎಂಟು ವಿಭೂತಿಗಳು ; ಗುಣವಾರು=(a) ಸಮಸ್ತವನ್ನು ಪ್ರಕಾಶಿಸುವಂಥಾದ್ದು ಜ್ಞಾನ ; (b) ಸ್ವತಂತ್ರವಾದುದೇ ಐಶ್ವರ್ಯ ; (c) ಆ ಐಶ್ವರ್ಯವನ್ನು ರಕ್ಷಿಸುವ ಸಾಮರ್ಥ್ಯವೇ ಶಕ್ತಿ ; (d) ನಾನಾ ಸಹಾಯಗಳಿಂದ ಕೂಡಿರುವದೇ ಬಲ ; (e) ಶೌರ್ಯತ್ವವೇ ವೀರ್ಯವು ; (f) ಕಳೆ ಹೀನವಾಗದೆ ಧೀರತನದಿಂದಿರುವದೇ ತೇಜಸ್ಸು ; ಆರಂಗ=ಸದಾತುಷ್ಟಿ, ತ್ರಿಕಾಲಜ್ಞಾನ ಸದಾ ತನ್ನನ್ನು ಮರೆಯದಿಹುದೇ ನಿತ್ಯ ಸುಬೋಧವು, ಸ್ವತಂತ್ರ, ತನ್ನ ವಶವಾಗಿ ಎಲ್ಲವನ್ನು ಮಾಡಿಕೊಳ್ಳುವದೆ ನಿತ್ಯ ಶಕ್ತಿಯು, ಇಂಥಾ ಶಕ್ತಿ ಸಮೂಹದಿಂ ಕೂಡಿರುವದೇ ಅನಂತ ಶಕ್ತಿಯು. ಅನುಭೂತಿ=ಅನುಭವ ಮಾಡುವಂಥಾದ್ದು ೨೦೩. ನಿರೂಪಣ=ಪ್ರತಿಪಾದನೆ, ವಾಯುಸಖ=ಬೆಂಕಿ. ೨೦೪. ಧರೆಕಳೆ=ಭೂಮಿಯ ಅಂಶ, ಜಲಕಳೆ=ನೀರಿನ ಅಂಶ. ಕಳೆವೆತ್ತಿಹರೂಪು=ತಿಳಿಯುವ ತನವು, ಮಿಗಿಲಹವು=ಶ್ರೇಷ್ಠವಾಗಿರುವವು, ಭೋರನೆ=ಬೇಗನೆ, ಸುರಭಿಗೆ=ಗಂಧಕ್ಕೆ. ೨೦೫. ಯುಕ್+ಶ್ರೇಣಿ=ಸೇರಿದ ಸಾಲು. ಜ್ಞತ್ವ=ಜ್ಞಾತೃ. ೨೦೬. ಚೋದಿತ=ಉಪಯೋಗಿಸಲ್ಪಟ್ಟ, ಪೆಸರಿಂದ=

ಪ್ರಣವದಿಂದ, ಚೋದನ=ಪ್ರೇರಣೆ. ೨೦೭. ಮಿತ್ರಂ=ಅಗ್ನಿ, ಮೃಗ ಧರನು=ಚಂದ್ರನು. ೨೦೮. ಪೊಳವು=ಚಲನೆ, ಸಮಕಟ್ಟು=ಕಾರಣ. ೨೦೯. ಹೃಷೀಕ=ಇಂದ್ರಿಯ, ಗುಲ್ಮ=ಕಂಟಿ, ಯೂಕ=ಹೇನು, ಮಶಕ=ನೊರಜು. ೨೧೦. ಯೋಚಿಸಿ=ಸಂಬಂಧಿಸಿ, ನವಿರು=ಕೂದಲಂ ಕುಳಿ=ಛಿದ್ರ, ಸಾರ್ವಂ=ಉಂಟಾಗುವದು. ೨೧೧. ಕೂರ್ಚ=ಭ್ರೂ ಮಧ್ಯ, ಖಂ=ಹಣೆಯ ಮುಂಭಾಗ. ೨೧೨. ಹವಣಂ=ರೀತಿಯನ್ನು, ೨೧೩. (ಕೀಳಸುವಿಂದ)+ಉರ=ಎದೆ. ೨೧೪. ದೋಷಂ=ಅಸೂಯೆ. ೨೧೫. ಸರಿತ್+ಅದ್ರಿಗಳು=ನದಿ ಪರ್ವತಗಳು, ಪುದುವಾಳ್ತನ=ಕೂಡಂ ವಿಕೆ, ಸೂಂಟಿಸಿ=ಕುರುಹಿಟ್ಟು. ೨೧೬. ಕಾಲಾಟ=ಓಡಾಟ, ಕೊರ ಚಾಟ=ಹಾಸ್ಯ. ೨೧೭. ಎತ್ತಾನು=ಎಲ್ಲಿಯದು, ಪತಿಕರಿಸಲು=ಅಂಗೀ ಕರಿಸಲು. ೨೧೮. ತವಕಂ=ತೀವ್ರವಾಗಿ, ಬಿಡದೂಡಿಪುದು=ಬಿಡದೆ ಭೋಗ ಕೊಡುವುದು, ಒಡ್ಡಣೆ=ಸಮೂಹ, ಕಾಹುರ=ಆತುರ, ಭಷಕ= ನಾಯಿ. ೨೧೯. ಕುಳವಾಗಿರಲು=ರೂಪವಾಗಿರಲು, ಪಿಷ್ಟವಿಶೇಷಣ= ಹಿಟ್ಟನ್ನು ಬೀಸಿದ, ಬಿಡುವನ್ನ=ಬಿಡುವವರೆಗು, ವಿಷೂಚಿಕೆ=ಮುಳ್ಳಿ ನಂತಿರುವ ಭವಮಾಲೆ, ಚಿರತರವಹ=ದೀರ್ಘವಾದ. ೨೨೨. ಭೃಗುಜ= ಪರಶುರಾಮ. ಯುಕ್ತ್ಯನುಯೋಗ=ಮನನ ನಿದಿಧ್ಯಾಸನ. ೨೨೪. ಸಕಲ ನಿಷ್ಕಳ=ಕಲಂಕು ನಿಷ್ಕಳಂಕು, ಇಂಬಿಂ=ವಿಸ್ತಾರವಾಗಿ. ೨೨೬. ಕೈರವ ಚಂದ್ರ=ಕಪ್ಪು ಕಮಲಕ್ಕೆ ಚಂದ್ರ ಸಮಾನನಾದ, ಹೊಲಬು=ಗುರ್ತು, ೨೨೭. (ಮೂರ್ತಿ ಧ್ಯಾನದ) ಬಳಕೆ=ಗುರ್ತು (ಸಮಾಧಿ) ೨೨೮. ನಿಬದ್ಧಿ= ಯಥಾರ್ಥ, ಓಸರಿಸದ=ದೃಷ್ಟಾಂತವಿಲ್ಲದ. ಬಳಿಸಂದು=ಕ್ರಮವಿಡಿದು ೨೨೯. ಎತ್ತಾನು=ಎಲ್ಲೆಲ್ಲೂ. ೨೩೦. ಅನಪಾಯಿನಿಯಾಗಿ=ನಾಶವಾಗಿ ಅವರ್ಚಿ=ಅಂಗೀಕರಿಸಿ, ಬದಿರ್ಚಿ=ಬಂದು, ಜಾಗೆಯ=ಶ್ರೇಷ್ಠವಾದ, ೨೩೧. ಅಳ್ತಿಯೊಳು=ಸಮಾನವಾಗಿ, ತಾಳುವ=ಉಂಟಾಗುವ, ಸಲೆ ಸಾದು=ಚನ್ನಾಗಿ ಕೂಡಲಿ, ಒಸಗೆ=ಪ್ರೀತಿ.

**ಅನುಭವಸಾರ.** ೨೩೪;—ಪಲ್ಲಟ=ಬದಲಾವಣೆ. ೨೩೫. ನೂರ್ಮ ಡಿಸಿ=ನೂರರಷ್ಟು. ೨೩೬. ಆಧೇಯ=ಆಶ್ರಿತ. ೨೩೭. ಪರಾಗರಸರೋಲಂ ಬ=ಹೂವಿನ ಮಕರಂದಕ್ಕೆ ಭ್ರಮರ. ಕಡುನೇಹ=ಹೆಚ್ಚಾದ ಪ್ರೀತಿ. ೨೩೮. ಲೇವಣ=ಹಗ್ಗ. ದೃಷ್ಟಿ ಸೃಷ್ಟಿ=ಅವಿದ್ಯಾವೃತ್ತಿರೂಪ ಜ್ಞಾನವೇ ಜಗ

ತ್ತಾಗಿರುವದೆಂದು. ೨೫೯. ಫೇನ=ನೊರೆ. ಸದಾಗತಿಯ=ವಾಯುವಿನ. ಪ್ರಸೂನ=ಪುಷ್ಪ. ಅಜ್ಞಾನದಂತೆ=ಸ್ವಪ್ನದೊಳಗಿನ ಜ್ಞಾನದಿಂದ ಜ್ಞೇಯ ವುತೋರಿದಂತೆ. ನೆನಹಿಗೆ=ಬಗೆಗೆ. ೨೬೦. ವಿವರ್ತ=ರೂಪಾಂತರ, ಪೂರ್ವ ರೂಪವನ್ನು ಬಿಡದೆ ಅನ್ಯರೂಪವಾಗಿ ತೋರುವದು. ಭವದಾವ=ಸಂಸಾರ ರೂಪ ಅರಣ್ಯ. ೨೬೨. ದಳವೇರುತಿಹ ಪುಳಕ=ಕೊನೆಯು ಹೆಚ್ಚುತ್ತಿರುವ ರೋಮಾಂಚನ. ತುಂಡವನಧಸ್ಸಾಗಿ=ಕೆಳಮುಖವಾಗಿ; ಕಿಂಜಲ್ಕ=ಸಣ್ಣ ದಳ; ಭೂತಿ=ಐಶ್ವರ್ಯ; ಅಣೆಯರದ=ಹೆಚ್ಚಾದ. ೨೬೬. ಕೇಸರ=ಸಣ್ಣ ದಳ; ವಿವಿಕ್ತಂ=ಸೂಕ್ಷ್ಮವಾಸನಾಮಯವಿಷಯ. ೨೬೫. ನಿದಾನ=ಕಾರಣ. ೨೬೬. ಅವಿನಾಭೂತ=ಅಭೇದರೂಪ; ಆವೃತ್ತಿ=ಮತ್ತಮತ್ತೆ ಪುಟ್ಟುವುದು. ೨೬೭. ನಿಜಾಸ್ಯ=ತನ್ನಮುಖವು; ಅಡಸದು=ಉಂಟಾಗದು. ೨೬೮. ಮಿತ್ರ= ಸೂರ್ಯ; ನೆಗಳ್ದ=ತೋರಿದ; ಪದವಿಟ್ಟೆನು=ಕ್ರಮದಿಂದ ಬೋದಿಸಿದೆನು. ೨೬೯. ಸೂರ್ಯಂಗೆ=ಸೂರ್ಯರೂಪನಿಗೆ; ಆದರಂಬೆತ್ತು=ಭಕ್ತಿಯುಳ್ಳವ ನಾಗಿ. ಭಾಳದೃಗಂ=ಅಗ್ನಿ (ಫಾಲ) ನೇತ್ರ; ತಣಿವಿಚ್ಛೆ=ತೃಪ್ತಿಯ ಇಚ್ಛೆ; ಮಣಿವಿಚ್ಛೆ=ನಮಿಸುವ ಇಚ್ಛೆ; ರತ್ಯಂತ=ರತಿಯಕಡೆಯಲ್ಲಿ. ೨೫೦. ಜೋಕೆ=ಅರ್ಹತೆ. ೨೫೧. ಆವರ್ತಂಗಳು=ಸುಳಿಗಳು; ಕಲ್ಪನಾಗೌರ= ಕಲ್ಪನಾರೂಪ, ಗೌರವದೋಷ.

೨೫೨. ಸೂತ್ರ—೪॥ ಭೇದವೆಂಬುವದು ಘಟಪಟಾದಿಗಳಿಗೆ ಆಗುವದು (ಘಟಪಟಾದಿಗಳಲ್ಲಿರುವದು) ಸತ್ಯವಾದುದಲ್ಲ, ದೋಷಮುಳ್ಳದ್ದರಿಂದ. ಶ್ರೇಷ್ಠ ಮಗನೇ! ಕೇಳು. ಮೇಲೆ ಹೇಳಿದ ಪ್ರಕಾರ ಆತ್ಮನಲ್ಲಿರುವ ಭೇದವು (ಜಡವರ್ಗ ದಿಂದಾಗಿರುವದರಿಂದ) ಯಥಾರ್ಥವಲ್ಲ. ಹೀಗೆ ಹೇಳಿದ್ದೇನೂ ಮಹತ್ವವಲ್ಲ; ಘಟಪಟಾದಿಗಳಲ್ಲಿರುವ ಭೇದವೂ ಮಿಥ್ಯೆಯಾದದ್ದು ॥೧॥ ಭೇದವೆಂಬುದಂ ಘಟಪಟ ಮೊದಲಾದ ಭೇದವುಳ್ಳ ವಸ್ತುಗಳಲ್ಲಿ ಅವುಗಳ ಅಭೇದ ಸ್ವರೂಪ ವಾಗಿರುವದೋ? ಅವುಗಳ ಧರ್ಮವಾಗಿರುವದೋ? ಸತ್ಯವಾದದ್ದೊಂದನ್ನು ಹೇಳು ॥೨॥ ಆ ಘಟಾದಿಗಳಲ್ಲಿ ಭೇದವು ಅಭೇದ ಸ್ವರೂಪವಲ್ಲ. ಘಟಪಟಗಳ ಲ್ಲಿರುವ ಧರ್ಮವು (ಘಟಪಟಾದಿಗಳಲ್ಲಿ ಧರ್ಮರೂಪವಾಗಿರುವದು) ಅಂದರೆ ಧರ್ಮಿಯ (ಸ್ವಾಭಾವಿಕ ಆಗಂತುಕ) ಧರ್ಮಗಳಲ್ಲಿ ನಿನಗೆ ಯಾವದು ಸಮ್ಮ ತವು ? ॥೩॥ ಆಘಟಾದಿ ಧರ್ಮಿಗಿಂತ ಧರ್ಮ ಭೇದವು (ಆಗಂತುಕ ಧರ್ಮವೋ ತಿಳಿಯಲು ಅಭೇದ (ಸ್ವಭಾವಿಕ) ಧರ್ಮವೋ) ಎಂದೆನಲ್ಲು, ಧರ್ಮಿಗಿಂತ

(ಆಗಂತುಕ) ಧರ್ಮವು ಭೇದವೆಂದರೆ ಕೇಳು ॥೪॥ ನೀರಿನಲ್ಲಿರುವ ರಸ ಧರ್ಮವು ಸ್ವಾಭಾವಿಕವಾದದ್ದು, ಭೇದಪಡುವದಿಲ್ಲ. ಅಗ್ನಿಯ ಸಂಪರ್ಕದಿಂದ ಉಂಟಾದ ಉಷ್ಣಧರ್ಮವು ಆಗಂತುಕವಾದದ್ದು, ಅದು ಸ್ವಲ್ಪ ಹೊತ್ತಿನಲ್ಲಿ ಇಲ್ಲದ್ದಾಗುವದು. ಆಗಂತುಕ ಧರ್ಮವನ್ನು ಭಿನ್ನಪಡಿಸಲು ಅದು ಸ್ಪಷ್ಟ ತೋರಬೇಕು, ಹಾಗೆ ತೋರುವದಿಲ್ಲ. ಧರ್ಮವು ಸ್ವತಃ ಸಿದ್ಧವಾಗಿರದೆ ಒಂದನ್ನು ಆಶ್ರಯ ಮಾಡಿಕೊಂಡೇ ಇರಬೇಕಾಗುವದು. ಭೇದವಾದರೆ ಏನನ್ನು ಆಶ್ರಯಿಸಿಕೊಂಡು ಇರುವದು? ತನ್ನನ್ನೇ ಆಶ್ರಯಿಸಿ (ಭೇದವು ಭೇದವನ್ನೇ ಆಶ್ರಯಿಸಿ) ಇರುವದೆಂದರೆ ಆತ್ಮಾಶ್ರಯ ದೋಷವು ಬರುವದು. ॥೫॥ ಅನ್ಯ ಧರ್ಮವನ್ನು ಆಶ್ರಯಿಸಿದೆ; ಅಂದರೆ ಆಧರ್ಮವು ಏನನ್ನು ಆಶ್ರಯಿಸಿದೆ? ಅಂದರೆ ಮೊದಲಿನ ಧರ್ಮವನ್ನು, ಹೀಗೆ ಹೇಳಿದರೆ ಅನ್ಯೋನ್ಯಾಶ್ರಯ ದೋಷ ಉಂಟಾಗುವದು. ಈ ದೋಷ ನಿವೃತ್ತಿಗೋಸ್ಕರ ಮೂರನೇ ಧರ್ಮವನ್ನು ಅಂಗೀಕರಿಸಿದರೆ ಚಕ್ರಿಕಾಶ್ರಯ ದೋಷ ಉಂಟಾಗುವದು. ಮುಂದೆ ಯಾವ ಧರ್ಮವನ್ನು ಹೇಳಿದರೂ ಯೋಗ್ಯವಲ್ಲ. ಹೇಳುವದು ಮುಗಿಯುವದಿಲ್ಲ; ಈ ನಾಲ್ಕು ದೋಷ ಪ್ರಾಪ್ತಿಯಾಗುವದರಿಂದ ಆಗಂತುಕ ಧರ್ಮ ಭೇದವು ಸಿದ್ಧಿಸುವುದಿಲ್ಲ ॥೬॥ ಭೇದವು ಘಟಪಟಾದಿಗಳ ಸ್ವರೂಪವಾಗಿದೆಯೆಂದರೆ– ಭೇದದಿಂದ ತೋರ್ಪಘಟದಲ್ಲಿ ಪ್ರತಿಯೋಗಿಯಾದ ಭೇದವನ್ನು ಇಚ್ಛಾಮಾಡದೆ ಇರಬೇಕು. ಮಾಧುರ್ಯವು ಹಾಲಿನಸ್ವರೂಪವಾಗಿದ್ದಂತೆ ಭೇದವು ಘಟಪಟಾದಿಗಳ ಸ್ವರೂಪವಾಗಿದ್ದರೆ ಹಾಲನ್ನು ಬಿಟ್ಟು ಮಾಧುರ್ಯವನ್ನು ಇಚ್ಛಿಸದಂತೆ ಘಟಪಟಗಳನ್ನು ಬಿಟ್ಟು ಭೇದದಮಾತನ್ನೇ ತೆಗೆಯಬಾರದಾಗುವದು. ಮತ್ತು ಭೇದವನ್ನು ಇಚ್ಛಾಮಾಡುವಿಯೆಂದರೆ ಭೇದವು ಸ್ವರೂಪವಾಗಿಲ್ಲವೆಂದು ಸಿದ್ಧಿಸುವದು. ಮತ್ತು ಧರ್ಮಿಯಾದ ಘಟಾದಿಗಳು ಪ್ರತ್ಯಕ್ಷವಾದಂತೆ ಅದರಲ್ಲಿ ಸ್ವರೂಪವಾಗಿರುವ ಭೇದವು ಸಂಶಯಬರದೆ ಪ್ರತ್ಯಕ್ಷವಾಗಿ ಕಂಡುಬರುವುದಿಲ್ಲ. ಆದಕಾರಣ ಭೇದವು ಸಿದ್ಧಿಸುವದಿಲ್ಲ, ಮತ್ತು ಭೇದವು ಸರ್ವವಸ್ತುಗಳ ಸ್ವರೂಪವಾಗಿದೆ; ಎಂದರೂ ಅದ್ವೈತವೇಸಿದ್ಧಿಯಾಗಿ ಭೇದ ಸಿದ್ಧಿಸುವದಿಲ್ಲ. ॥೮॥ ಘಟದ ರೂಪವೇ ಸ್ವರೂಪ ಭೇದವೆಂದರೆ ರೂಪವನ್ನು ಬೇರೆಮಾಡಲು ವಸ್ತುವೇ ಉಳಿಯುವದಿಲ್ಲ–ಹೀಗೆ ಎಲ್ಲಾ ವಸ್ತುಗಳ ರೂಪವು ನಾಶವಾಗಲು ಶೂನ್ಯವಾದವೇ ಸಿದ್ಧಿಸಿ, ಅದರಿಂದಲೂ ಭೇದಸಿದ್ಧಿಸುವದಿಲ್ಲ; ತನ್ನನ್ನ ತಾನೇ ಭೇದಿಸಿದ ದೋಷವು ಪ್ರಾಪ್ತಿಯಾಗುವದು. ಆದ್ದ

ರಿಂದ ಘಟಪಟಾದಿಗಳಲ್ಲಿ ಧರ್ಮದಿಂದಾಗಲಿ, ಸ್ವರೂಪದಿಂದಾಗಲಿ ಭೇದವು ಸಿದ್ಧಿಸುವದಿಲ್ಲ. ದೇಹಾದಿ ಭೇದವಿದನು ಊಹೆಮಾಡಿದರೂ ಮಹತ್ತಾದ ಅಜ್ಞಾನ ಸ್ವರೂಪದ ಕಲ್ಪನಾಮಾತ್ರವಷ್ಟೆ. ಶೇಖಮಹಮ್ಮದನ ಕಲ್ಪನೆಯಿಂದಾದ ಹೆಂಡತಿಯ ದೇಹಕ್ಕೂ, ಮಗನ ದೇಹಕ್ಕೂ ಮತ್ತು, ರತ್ನಾದಿಗಳಿಗೂ ಭೇದವಿಲ್ಲದಂತೆ. ಆದಕಾರಣ ಭೇದವು ಕೇವಲ ಅಜ್ಞಾನ (ಭಾವನಾ) ಸ್ವರೂಪವು, ಆದ್ದರಿಂದ ಭೇದವು ದ್ವೈತ, ಭಿನ್ನ, ಭ್ರಾಂತಿ, ಅಧ್ಯಾಸ, ಮಿಥ್ಯೆ; ಎಂಬದಾಗಿ ತಿಳಿಯಬೇಕು. ಭೇದವು, ಕಾಲ್ಪನಿಕ ವಸ್ತುವು, ಸತ್ಯವಾದದ್ದಲ್ಲ; ಭೇದವೆಂಬುದಾಗಿ ಕಂಡುಬರುವ ಘಟಪಟಗಳಲ್ಲಿಯೇ ಇಲ್ಲದಿರಲು ಅಭೇದಸ್ವರೂಪನಾದ ಆತ್ಮನಲ್ಲಿ ಪದವಿಡದು.

**ದಾಷ್ಟಾಂತ**:—ಭೇದರೂಪ ಮಾಯೆಯು ಪರಮಾತ್ಮನಲ್ಲಿ ಅಭೇದ ಸ್ವರೂಪವಾಗಿದೆಯೇ? ಧರ್ಮವಾಗಿದೆಯೇ? ಎಂಬುದಾಗಿ ನಿಶ್ಚಯಿಸಲು ಭೇದಸಿದ್ಧಿಸುವುದಿಲ್ಲ. ಭೇದಕ್ಕೆ ಆಶ್ರಯವಿಲ್ಲದ್ದರಿಂದ ಮಿಥ್ಯೆ.

೨೫೫. ವಾರಿ=ನೀರು ; ಬೊಬ್ಬುಳಿಕೆ=ಗುರುಳೆ; ವಾಕ್ಕು+ಕರ; ಮಾಣು=ಬಿಡು; ಪ್ರಾಚುರ್ಯ=ಮುಖ್ಯ. ೨೫೬. ನಿರುಗೆ=ಸಮೂಹ; ಅಣಿಯರದೆ=ಕ್ರಮವಾಗಿ ; ತಣಿಯದು=ತೃಪ್ತಿಹೊಂದದು. ೨೫೭. ಕುಟಿ=ಡೇರೆ ; ವಿಡಾಯ=ಸ್ವರೂಪ. ೨೫೮. ತಜ್ಞ=ತತ್ವವನ್ನು ಬಲ್ಲವ. ಸಂವಿತ್ತು=ಜ್ಞಾನ. ೨೫೯. ನೆನಹು ಇದು+ಅರ್ಥಾಪತ್ತಿ= ಸ್ಮರಣೆ ಇರುವದರಿಂದ ಅನುಭವವನ್ನು ಕಲ್ಪಿಸಬೇಕಾಗುವದು, ಇದೇ ಅರ್ಥಾಪತ್ತಿ.

**ಸೂತ್ರ**:—ನಿದ್ರೆಯಲ್ಲಿ ಅರಿವಿನ ಅಭಾವವನ್ನು ತಿಳಿಯುವದು ಸಂಭವಿಸುವದಿಲ್ಲವಾದ್ದರಿಂದ ನಿದ್ರೆಯಲ್ಲಿ ಅರಿವುಂಟೆಂಬುದೇ ಸಿದ್ಧವು.

(೧) ಹುಡುಗನೇ ಕೇಳು! (ನಿದ್ರೆಯಲ್ಲಿ ಸಂದೇಹವಿಲ್ಲದೆ ಆನಂದಸ್ವರೂಪ ಅರಿವು ತನ್ನಿಂದ ತಾನೇ ಪ್ರಕಾಶಿಸುತ್ತದೆ) ಆ ರೀತಿಯಾಗಿ ಹೇಳಿದ ಮಾತನ್ನು ಒಪ್ಪದಿರೆ ದ್ರಷ್ಟಾ, ಆತ್ಮನ ಸಾಮಾನ್ಯ ಜ್ಞಾನದ ಅಭಾವವು ಅದು ನಿನಗೆ ನಿದ್ರೆಯಲ್ಲಿ ತಿಳಿಯಿತು; ಎನಲು ಈ ಪ್ರಕಾರ ಪ್ರಶ್ನೆ ಮಾಡುವೆನು. (೨) ನಿದ್ರೆಯಲ್ಲಿ ಕರುಣಾದಿಗಳಿಂದ ತೋರಿದ ವಿಶೇಷಜ್ಞಾನದ ಅಭಾವವನ್ನು ಅರಿದೆನೆಂದು ನೀನು ಹೇಳಿದರೆ ಅದು ಹೊಂದಿಕೆಯಾಗುವದಿಲ್ಲವೆಂದು ನಾನು

ಇಲ್ಲಿ ಹೇಳುತ್ತೇನೆ ಕೇಳು ॥೨॥ ಅಭಾವವು ಯಾವುದೋ ಅದನ್ನು ವಿಚಾರ ಮಾಡಿದರೆ ಅದು ಪ್ರತಿಯೋಗಿ ವಸ್ತುವಿನ ಅಭಾವವೇ ಆಗಿರುವುದರಿಂದ ಆ ವಿಶೇಷಣವಾದ ಅಭಾವವು ವಿಶೇಷ್ಯವಾದ ಸ್ಥಾನ (ನಿದ್ರೆ) ದೊಳು ತಿಳಿಸಿ ಕೊಳ್ಳಲ್ಪಡುತ್ತದೆ.

[ಪ್ರತಿಯೋಗಿ=ಅಭಾವವಸ್ತು. ಅನುಯೋಗಿ=ಪ್ರತಿಯೋಗಿಗೆ ಆಶ್ರಯವಾದದ್ದು. ನಿದ್ರೆಯಲ್ಲಿ ಅರಿವಿಲ್ಲ ಎಂಬಲ್ಲಿ ಅಭಾವವು ವಿಶೇಷಣವಾಗಿಯೂ ಸ್ಥಾನವು (ನಿದ್ರೆಯು) ವಿಶೇಷ್ಯವಾಗಿಯೂ ತಿಳಿಯಲ್ಪಡುವದು.]

ಎಲ್ಲ ಅಭಾವ ವಸ್ತುಗಳ ಜ್ಞಾನವು ಅವುಗಳ ಸ್ವರೂಪ ಸ್ಮರಣದೊಡನೆ ಒಂದು ಸ್ಥಾನದಲ್ಲಿ (ಅವುಗಳನ್ನು ಅರಿಯುವುದಕ್ಕೆ ಬೇಕಾದ) ಸಾಧನ ಸಮೂಹಗಳಿಂದ ತಿಳಿಸಿಕೊಳ್ಳಲ್ಪಡಬೇಕು ॥೪॥

ಸಾಧನಗಳು ಯಾವವು ಎಂದರೆ ವಸ್ತುವಿಲ್ಲದ ಸ್ಥಾನ, ಕರಣಾದಿ (ಮನೋನೇತ್ರಾದಿಗಳು; ಆತ್ಮ ಮನಸ್ಸು, ಮನ ನೇತ್ರ, ನೇತ್ರಸ್ಥಾನ ಸಂಯೋಗ) ಆ ವಸ್ತುವಿನ ಸ್ಮರಣೆ ಕೂಡಲು ಇವು ಅಲ್ಲವೇ ॥೫॥

ವಸ್ತುವಿನ ಇರುವಿಕೆಯನ್ನು ವಿವರಿಸಬೇಕಾದರೆ ಯಾವಾವ ಸಾಮಗ್ರಿಗಳು ಬೇಕೋ ಆ ವಸ್ತುವಿನ ಅಭಾವವನ್ನು ಹೇಳುವ ಸಂದರ್ಭದಲ್ಲಿಯೂ ಅವೇ ಸಾಮಗ್ರಿಗಳು ಬೇಕು ॥೬॥

ಆ ನಿದ್ರೆಯಲ್ಲಿ ಅರಿವಿನ ಭಾವವು ಈ ರೀತಿಯಾದಲ್ಲದೆ ತಿಳಿಸಿಕೊಳ್ಳಲ್ಪಡುವದಿಲ್ಲ. (ಅಲ್ಲಿ ತಿಳಿಯುವುದಕ್ಕೆ) ಸಾಮಗ್ರಿಗಳನ್ನು ಹೊಂದಿರುವದಾದರೆ ಅದು ನಿದ್ರೆಯಲ್ಲವು, ಜಾಗರಣವೇ ಆಗುವುದು. ॥೭॥

ನಿದ್ರೆಯಲ್ಲಿ ಅರಿವಿನ ಅಭಾವ ಹೇಳಿದರೆ ಆ ಸುಪ್ತಿಯ ಸಮಕಾಲದಲ್ಲಿ ಬೇರೊಂದವಸ್ಥೆಯಾಗಲಿ ಸ್ಥಳವಾಗಲಿ ಇಲ್ಲದ್ದರಿಂದ ಚಿತ್ತಿನ ಅಭಾವವನ್ನು ಸಿದ್ಧಿಪಡಿಸುವದು ಸಂಭವಿಸುವದಿಲ್ಲ ॥೮॥

ತಿಳಿಯುತ್ತೇನೆಂಬ ಅನುಭವವಿರುವುದರಿಂದ ಅರಿವಿಲ್ಲವೆನಬಾರದು. ತಿಳಿದುಕೊಳ್ಳುವ ಅಹಂಕಾರವಿಲ್ಲದಿರುವ ಅವಸ್ಥೆಯೇ ನಿದ್ರೆಯು; ಅದನ್ನು ಅರಿವು ಸಾಕ್ಷಾತ್ತಾಗಿ ತಿಳಿದುಕೊಳ್ಳುತ್ತದೆ ॥೯॥

ಕರಣಾದಿಗಳಿಂದ ಹುಟ್ಟುವ ವಿಶೇಷ ಜ್ಞಾನವು ನಿದ್ರೆಯಲ್ಲಿನ ಅರಿವು ಆದಿ

ರುತ್ತದೆಂಬ ಭಾವವು (ಅರಿವಿನ ಅಭಾವವು ಅರಿವಿನಿಂದಲೇ ಗ್ರಹಿಸುವದು) ಶಕ್ಯವಲ್ಲ. ತನ್ನ ಕೊರಳು ಕೊಯ್ದುದ್ದನ್ನು ತಾನು ನೋಡನು)

೨೬೧. ರೋಚಿಗಳ=ಅಗ್ನಿಗಳ. ೨೬೩. ಸೂರೆಯೋರ್ವಂಗೆ=ಲೂಟಿ ಯೊಬ್ಬನಿಗೆ. ಅಂತರಿಸದೆ=ತಡಮಾಡದೆ. ೨೬೪. ಅಂಚಿತಮಪ್ಪುದು= ತೋರುತ್ತಿರುವದು, ಪ್ರಸರ ಧರ್ಮಿಣಿ=ವಿಕಾಸವಾದ ವೃತ್ತಿಯುಳ್ಳದ್ದು. ೨೬೫. ಪಳುಕಿನೊಳು=ಸ್ಫಟಿಕದಲ್ಲಿ. ೨೬೬. ಪಿರಿಚುತ=ಬಿಡುತ್ತ. ೨೬೭, ಪದುಳ=ಆನಂದ, ಅಭಿವ್ಯಕ್ತಿಯಹ=ಪ್ರಕಟವಾದ. ೨೬೮. ಉಮ್ಮಳ= ಚಿಂತೆ. ೨೬೯. ಸುದ್ದಿಗೊಳಲುಂಟೆ=ಸುದ್ದಿಗೆ ಆಸ್ಪದವುಂಟೆ? ೨೭೦. ನೆರವೆ=ಸಹಾಯಕನೆ. ೨೭೧. ಗುಣಪನ್ನಗಭಯಂ=ಹಗ್ಗದಲ್ಲಿಯ ಹಾವಿನ ಭಯವು. ೨೭೨. ಬೋಳೈಸಿ=ಮೈಮೇಲೆ ಕೈ ಸವರಿ. ಬಿನದಿ=ಆನಂದ ದಿಂದ, ವಿಕ್ಷಿಪ್ತ=ಚಂಚಲಾತ್ಮಕ, ಗತಾಗತ=ಹೋಗಿ ಬರುವ, ಸಂಶ್ಲಿ ಷ್ಟ=ಕೂಡಿರುವದು, ಸ್ವಲೀನ=ತನ್ನಲ್ಲಿ ಲಯವಾದದ್ದು. ೨೭೩. ನಿಶ್ವಾಸ ಕಾರಿಕೆ=ಮಾಂಡೂಕ್ಯದಲ್ಲಿ ಗೌಡಪಾದಾಚಾರ್ಯರು ಬರೆದಿರುವ ಕಾರಿಕೆ, ಮನೋವೃತ್ತಿಯೈಸುವಂ=ಮನೋವೃತ್ತಿಗಳಷ್ಟನ್ನು, ಅಂಡಲೆ=ಕೊರತೆ. ೨೭೪. ಧೂಮ ಮಾರ್ಗ=ದಕ್ಷಿಣಾಯನ ಮಾರ್ಗ, ಅರ್ಚಿರ ಮಾರ್ಗ= ಉತ್ತರಾಯಣ ಮಾರ್ಗ. ೨೭೫. ಕುಂಭಸಂಭವ=ಅಗಸ್ತ್ಯಋಷಿ.

೨೭೫. **ಉದಂಕನ ಕತೆ** :—ಉದಂಕನೆಂಬ ಬ್ರಾಹ್ಮಣನು ಅಮೃತ ಕ್ಕೋಸ್ಕರ ವಿಷ್ಣುವನ್ನು ಕುರಿತು ತಪಸ್ಸುಮಾಡಿದನು. ಅದಕ್ಕೆ ವಿಷ್ಣುವು ಮೆಚ್ಚಿ ಅಮೃತವನ್ನು ಕೊಟ್ಟು ಬರುವುದಕ್ಕೆ ಇಂದ್ರನನ್ನು ಕಳುಹಿಸಿದನು. ಇಂದ್ರನು ಚಂಡಾಲರೂಪವನ್ನು ಧರಿಸಿ ಹೊಕ್ಕಳಿನ ಕೆಳಭಾಗದಲ್ಲಿ ಅಮೃತ ವನ್ನು ಕಟ್ಟಿಕೊಂಡು ಬಂದು "ಎಲೋ! ಉದಂಕನೇ! ವಿಷ್ಣುವು ನಿನ್ನ ತಪಸ್ಸಿಗೆ ಮೆಚ್ಚಿ ಅಮೃತವನ್ನು ಕೊಟ್ಟು ಬರುವಂತೆ ಹೇಳಿದ್ದಾನೆ ತೆಗೆದುಕೋ" ಎಂದು ಹೇಳಿದನು. ಆತನನ್ನು ನೋಡಿ ಉದಂಕನು ಇವನು ಚಂಡಾಲನೋ? ಇಂದ್ರನೋ? ಇದು ಅಮೃತವೋ? ಅಥವಾ ಮೂತ್ರವೋ? ಎಂಬ ಸಂಶಯ ದಿಂದ ಆ ಅಮೃತವನ್ನು ತೆಗೆದುಕೊಳ್ಳಲಿಲ್ಲ. ಅದಕಾರಣ ಅಮರನಾಗದೆ ಮರಣವನ್ನೇ ಹೊಂದಿದನು.

೨೭೬. ಉಪಹತಿ=ಹೊಡೆತ, ಮಾಣವಕ=ಬ್ರಹ್ಮಚಾರಿ, ಗವಯ

ಪಿಂಡ=ಗೋ ಶರೀರ. ೨೭೭. ವಿಮತಿಗಳ=ಭೇದವಾದಿಗಳ, ರುಮೆಯು ನ್ನೆರದು=ಉಪ್ಪನ್ನು ಕೂಡಿ, ಕ್ಲೇಶಪಂಚಕ ಇತ್ಯಾದಿಗಳ ವಿವರಕ್ಕೆ ಮುನ್ನೂರೈವತ್ತೊಂಭತ್ತನೆ ಪುಟದ ಪದಾರ್ಥಕೋಶವನ್ನು ನೋಡಿರಿ. ೨೭೮. ವೀತರಾಗರ್ಗೆ=ರಾಗರಹಿತರಿಗ.

ವಿವೇಕಚಿಂತಾಮಣಿ ೨೮೦:— ನಿರಾಭಾರಿ=ಜ್ಞಾನ ವೈರಾಗ್ಯ ಸಂಪನ್ನನು. ಪ್ರಣೀತತ್ವದಿಂ=ಉತ್ಪತ್ತಿಯಿಂದ. ಆಮ್ನಾಯ=ವೇದ. ತರವ ರಿತು=ಸಾಂಗೋಪಾಂಗವಾಗಿ, ರೀತಿಯನ್ನು ತಿಳಿದುಕೊಂಡು. ೨೮೧. ಪೃಥು ಬುಧ್ನೋದರ=ಸ್ಥೂಲವಾಗಿ ಉಬ್ಬಿದ ರೂಪದಿಂದಿರುವ ಹೊಟ್ಟೆ. ಪಾರಿಶೇಷ ನ್ಯಾಯ=ಕಳೆದುಳಿದ ನ್ಯಾಯ. ೨೮೨.ಸ್ವಯಂಭು=ಸ್ವಯಮೇವ ಹುಟ್ಟಿದ್ದು. (ಅನಾದಿ)೨೮೩.ತ್ರಿಷ್ಟುಪ್=ತ್ರಿಷ್ಟುಪ್ ಎಂಬ ಹೆಸರಿನಛಂದಸ್ಸು.ಉದಾತ್ತ= ಊಂಚಸ್ವರದಿಂದ ಉಚ್ಚಾರಮಾಡಿದ ವರ್ಣ. ಅನುದಾತ್ತ=ನೀಚಸ್ವರದಿಂದ ಉಚ್ಚಾರಮಾಡಿದ ವರ್ಣ. ಸ್ವರಿತ=ಉದಾತ್ತ ಅನುದಾತ್ತ ಸ್ವರಗಳ ಸಮಾನ ತ್ವದಿಂದ ಉತ್ಪತ್ತಿಯಾದ ವರ್ಣ. ಪ್ರಚಯ=ಶಿಥಿಲನಾಮಗಳ ಸಂಯೋಗ. ನಿರ್ವಚನ=ನಿಶ್ಚಿತ. ಚರು=ಹವ್ಯಾನ್ನ. (ಹೋಮದಲ್ಲಿ ಹಾಕತಕ್ಕ ಪದಾರ್ಥ.) ೨೮೪. ಉಪನಿಷತ್=ಬ್ರಹ್ಮಜ್ಞಾನವನ್ನು ಬೋಧಿಸತಕ್ಕ ಶಾಸ್ತ್ರ. ಪುಂಸವನ= ಗರ್ಭದ ಶಿಶುವನ್ನು ಪುರುಷನನ್ನಾಗಿ ಮಾಡುವ ಸಂಸ್ಕಾರ. ಉತ್ಸರ್ಜನ= ಶೂದ್ರುತ್ವತ್ಯಾಗ. ಸ್ನಾತಕ=ಮಂತ್ರಸ್ನಾನ. ಸ್ಮಾರ್ತಾಗ್ನಿಹೋತ್ರ=ಸ್ಮೃತಿ ಸಂಬಂಧವಾದ ಅಥವಾ ಶ್ರುತಿಸಂಬಂಧವಾದ ಅಗ್ನಿಕರ್ಮ. ಔರ್ಧ್ವದೇಹಿಕ= ಮರಣಾನಂತರ ಮಾಡುವ ಕರ್ಮ. ೨೮೫. ಯಜನ=ಯಜ್ಞಮಾಡುವದು. ಯಾಜನ=ಯಜ್ಞಮಾಡಿಸುವದು. ಅಧ್ಯಯನ=ವೇದಪಾಠವನ್ನು ಮಾಡು ವದು. ಅಧ್ಯಾಪನ=ವೇದ ಪಾಠವನ್ನು ಮಾಡಿಸುವದು. ಪ್ರತಿಗ್ರಹ=ದಾನ ವನ್ನು ತೆಗೆದುಕೊಳ್ಳುವದು. ಉಭಯಮುಖೀ ಗೋದಾನ=ಆಗತಾನೇ ಪ್ರಸ ವಿಸುವ ಕಾಲದಲ್ಲಿ ಗೋದಾನ ಮಾಡುವದು. ಕಾಳಮುಖೀದಾನ=ರುದ್ರಾಕ್ಷಿ ದಾನ. ೨೮೬. ಉಘ್ಘಡನೆಗಳು=ಹೆಚ್ಚು ಗುಣಿಸಿದ ಸಂಖ್ಯೆಗಳು. ಕಷಾಯ= ಮೆಣಸು, ಜೀರಿಗೆ, ಶುಂಠಿ, ಧನಿಯ, ಈ ನಾಲ್ಕರ ಸಾರ.

೨೮೬. ವ್ರತ=ಪುಣ್ಯಸಾಧನೆಗಳನ್ನು ನಿಯಮದಿಂದ ಅನುಷ್ಠಾನ ಮಾಡುವದು. ಸ್ಕಂದಮುಖ=ಷಣ್ಮುಖ. ದರ್ಶನ=ಪೂರ್ವಮಿಮಾಂಸಾ

ಉತ್ತರಮೀಮಾಂಸಾ, ನ್ಯಾಯ, ವೈಶೇಷಿಕ, ಸಾಂಖ್ಯ, ಪಾತಂಜಲ. ಷಣ್ಮತ= ಶೈವ, ವೈಷ್ಣವ, ಶಾಕ್ತೇಯ, ಗಾಣಾಪತ್ಯ, ಸೌರ, ಕಾಪಾಲಿ. ಕ್ರಮುಕ= ಅಡಿಕೆ. ೨೮೭. ತಾಂತ್ರಿಕ=ಪಾಂಚರಾತ್ರ, ಮೊದಲಾದ ವೈಷ್ಣವಾಗಮಗಳು, ವಾತುಲಾದಿಶೈವಾಗಮಗಳಲ್ಲಿ ಹೇಳಲ್ಪಟ್ಟ ಕರ್ಮಗಳು. ಪಂಚಮಲ=ಗುಗ್ಗೆ, ಗೀಜು, ಬೆವರು, ಉಗುರಿನಮಲಮುಂತಾದವು. ೨೮೮. ಪಲಾಂಡು=ನೀರುಳ್ಳಿ ತೀರ್ಥಕರ=ಪೂಜ್ಯರ, ಸ್ಯಾದಸ್ತಿ=ಒಂದುವಸ್ತು ಇದೆ, ಎಂದು ಹೇಳಬಹುದು ಘಟೋಸ್ತಿ ಎಂಬಂತೆ. ಸ್ಯಾನ್ನಾಸ್ತಿ=ಒಂದುವಸ್ತು ಇಲ್ಲವೆಂದು ಹೇಳಬಹುದು. ಮೃತ್ತಿಕಾ ದೃಷ್ಟಿಯಿಂ ಘಟವಿಲ್ಲವೆಂಬಂತೆ, ಜೀವ=ಶುದ್ಧಜೀವ. ಸಜೀವ= ಶರೀರ ಸಂಬಂಧಉಳ್ಳಜೀವ. ನಿರ್ಜೀವ=ಚೇತನವಿಲ್ಲದ್ದು. ನಿರ್ಜರ=ಬಂಧವಿ ಲ್ಲದಿರುವಿಕೆ. ಆಶ್ರವ=ಕರ್ಮಬಂಧ. ಬಂಧ=ಸಂಸಾರ, ಮೋಕ್ಷ=ಸಂಸಾರ ಬಿಡುಗಡೆ. (ಇದು ಜೈನಮತಸಿದ್ಧಾಂತ) ೨೮೯. ಅಭಿಚಾರಕರ್ಮ=ಶೂನ್ಯ ಅಥವಾ ಮಾಟಮಾಡುವದು, ಮುಂತಾದ ನಿಷಿದ್ಧಕ್ರಿಯೆಗಳು. ಗತಿಸ್ತಂಭ= ನಡೆಯನ್ನು ನಿಲ್ಲಿಸುವುದು. ಚತುರ್ವ್ಯೂಹ=ನಾಲ್ಕರ ಸಮೂಹ. ೨೯೦. ಅಕ್ಷ ಪಾದ=ಗೌತಮರು. ಕಣಾದ=ಕಣಭುಕ್, ಕಣಗಳನ್ನು ತಿಂದು ಜೀವಿಸಿದ ಋಷಿ. ೨೯೧. ಪಾರಂಪರ್ಯ=ಮೊದಲಿನಿಂದಲೂ ಒಂದೇ ಸಮನಾಗಿ ನಡೆದು ಬಂದದ್ದು. ದ್ವೈತಾಭಾವೋಪಲಕ್ಷಿತ=ಇಲ್ಲಿ ದ್ವೈತಾಭಾವವು ಉಪಲಕ್ಷಣವು, ಈ ಉಪಲಕ್ಷಣದಿಂದ ಲಕ್ಷಿಸಿಕೊಂಡದ್ದು ಉಪಲಕ್ಷಿತವು. ಉಪಲಕ್ಷಿತವಾದದ್ದೇ ಬ್ರಹ್ಮವು.

೨೯೧. ಭಾಸ್ಕರೀಯ=ಪ್ರಕಾಶಸ್ವರೂಪವಾದ ಚಿಚ್ಛಕ್ತಿಯು ಕುಸುಮಂಗಳೊಳು ಇದ್ದ ಕಂಪಿನಂತೆ ಪರಮಾತ್ಮನಿಗೆ ಅಭಿನ್ನವಾಗಿದ್ದು ಸೃಷ್ಟಿಯ ನಿರ್ಮಾಣಕಾಲದಲ್ಲಿ ನೂಲೇಬಟ್ಟೆಯಾದಂತೆ ತಾನೇ ಜಗದ್ರೂಪವಾಗಿ ಪರಿಣಮಿಸಿ ಪ್ರಳಯಕಾಲದಲ್ಲಿ ಸೃಷ್ಟಿಯನ್ನು ತನ್ನಲ್ಲಿ ಅಡಗಿಸಿಕೊಂಡು ತಾನೂ ಪರಮಾತ್ಮನಲ್ಲಿ ಏಕಾಕಾರವಾಗುವಳೆಂದು ಹೇಳುವದು, 2. ಮಾಯಾವಾದ= ಸುಖಸುಪ್ತನಲ್ಲಿ ಅಕಸ್ಮಾತ್ ತೋರಿವ ಕನಸಿನ ಜೀವತ್ವವು ಅನೇಕ ಸೂಕ್ಷ್ಮ ಸೃಷ್ಟಿಯ ರೂಪಾಗಿರುವಂತೆ ಪರಮಾತ್ಮನಲ್ಲಿ ಒಮ್ಮೆ ಮಾಯೆಯು ಜಗದಾಕಾರವಾಗಿ ತೋರಿ ಅಡಗುವದೆಂದು ಹೇಳುವದು.

೩. ಶಬ್ದಬ್ರಹ್ಮವಾದ=ವಾಚಕ (ಶಬ್ದ) ವಾಚ್ಯ (ಅರ್ಥ)ಗಳ ಅಭೇದ

ದಂತೆ ವಾಚಕರೂಪವಾದ ಓಂಕಾರದಿಂದ ಅಕ್ಷರ, ಅಕ್ಷರದಿಂದ ಶಬ್ದ, ಶಬ್ದ ದಿಂದ ವಾಕ್ಯಾದಿಗಳು ಹುಟ್ಟಿದಂತೆ ಸರ್ವಜಗತ್ತು ಓಂಕಾರದಿಂದ ಹುಟ್ಟಿದ ಕಾರಣ ಪ್ರಣವವು ಜಗನ್ಮಯವು, ಬ್ರಹ್ಮವು ಪ್ರಣವಮಯವು ಜಗನ್ಮಯವೂ ಎಂದು ಹೇಳುವದು.

೪. ಕ್ರೀಡಾಬ್ರಹ್ಮವಾದ=ಜೇಡರಹುಳು ವಿನೋದಕ್ಕಾಗಿ ತನ್ನ-ನೂಲಿ ನಿಂದಲೇ ಬಲೆಯನ್ನು ರಚಿಸಿ, ಕ್ರೀಡಿಸಿ ತನ್ನಲ್ಲಿಯೇ ಲಯಿಸುವಂತೆ ಬ್ರಹ್ಮವು ತನ್ನ ಲೀಲಾಮಾತ್ರವಾಗಿ ಸೃಷ್ಟಿಯನ್ನು ರಚಿಸಿ ಕಡೆಗೆ ಲಯಿಸುವದೆಂದು ಹೇಳುವದು.

೨೯೨. ಚರ್ಯೆ=ವ್ರತಾದಿಕ ಅನುಷ್ಠಾನ. ಷಡಧ್ವ=ಕಲಾಧ್ವ ವರ್ಣಾಧ್ವ, ಮಂತ್ರಾಧ್ವ, ಭುವನಾಧ್ವ, ಪದಾಧ್ವ, ತತ್ವಾಧ್ವ. ೨೯೫, ಶ್ರುತಿಲಿಂಗಾದಿ ಪಾರ ದೌರ್ಬಲ್ಯ ಪೂರ್ವಪ್ರಾಬಲ್ಯಾದಿ ದ್ಯೋತಕತ್ವ=ಶ್ರುತಿ, ಲಿಂಗ, ವಾಕ್ಯ, ಮೊದಲಾದುವುಗಳಲ್ಲಿ ಮುಂದಣದು ದುರ್ಬಲ, ಹಿಂದಣದು ಪ್ರಬಲ. ಇಲ್ಲಿ ಶ್ರುತಿಯೇ ಪ್ರಬಲ.

ವಿಶ್ರುತಾಚಾರ್ಯರು=ವ್ಯಾಸಭಗವಂತರು. ಅಧಿಕರಣ=ಮುಖ್ಯಸೂತ್ರ. ೨೯೬. ಇಹಾಮುತ್ರಾರ್ಥ=ಇಹ+ಅಮುತ್ರ+ಅರ್ಥ=ಈಲೋಕದ, ಸ್ವರ್ಗಾ ದಿಲೋಕದ ವಿಷಯಭೋಗಗಳು. ವೈರಸ್ಯಕಾರಣವಾಗಿ=ಅಸಹ್ಯಕ್ಕೆಕಾರಣ ವಾಗಿ. ಸನ್ನಿಹಿತ=ಕೂಡಿಕೊಂಡು. ಶ್ವವಾಂತಾಶನ=ನಾಯಿಯು ವಾಂತಿಮಾ ಡಿದ ಅನ್ನ. ಪುರೀಷ=ಮಲ. ೨೯೭. ಉರಿಗೊಳಲೊಳಗಿಪ್ಪ=ಉರಿಗೊಳಲ್+ ಒಳಗಿಪ್ಪ=ಬೆಂಕಿಯಿಂದಾವರಿಸಿ ಉರಿಯುತ್ತಿರಲು ಒಳಗಿರುವ. ವಿಧವದಧೀತ =ವಿಧಿವತ್+ಅಧೀತ=ವೇದದಲ್ಲಿ ಹೇಳಿರುವ ವಿಧಿಯಂತೆ ಅಧ್ಯಯನಮಾ ಡಿದ. ೨೯೮, ತಾವನ್ಮಾತ್ರ=ಅಷ್ಟುಮಾತ್ರದಿಂದಲೇ. ೨೯೯. ಶಿಷ್ಯೋಪಸನ್ನತಿ =ಸದ್ಗುರುಗಳಲ್ಲಿ ಶಿಷ್ಯನು ಶರಣಾಗತನಾಗುವಿಕೆ. ಸಮಿದಾದ್ಯುಪಹಾರ= ಸಮಿತ್+ಆದಿ+ಉಪಹಾರ=ಅರಳಿ, ಕಟ್ಟಿಗೆ, ಫಲ, ಪುಷ್ಪ ಮುಂತಾದ ಕಾಣಿಕೆ. ಕೈಮಿಕ್ಕು=ಮಿತಿಮೀರುತ್ತಿರಲು. ಕಾರ್ಪಣ್ಯ=ದೀನತ್ವ. ಕೂರ್ಮೆ =ಪ್ರೀತಿ. ಉಪಸನ್ನ=ಶರಣಾಗತನಾದ. ೩೦೦. ವಿಪ್ರತಿಪತ್ತಿ=ಪರಸ್ಪರ ವಿರುದ್ಧಾರ್ಥ ಪ್ರತಿಪಾದಕವಾದ ವಾದಿಗಳ ಅನೇಕ ವಚನಗಳು. (ಇದರಿಂದ ಸಂಶಯ ಉಂಟಾಗುವುದು) ಐತಿಹ್ಯ=ಇತಿಹಾಸಸಂಬಂಧವಾದ. ಅಗ್ನಿ

ವತ್ತಾಜ್ಞಾನ ಸಂಪಾದಕ=ಅಗ್ನಿವುಳ್ಳದ್ದು ಎಂಬ ಜ್ಞಾನವನ್ನು ಉತ್ಪನ್ನ ಮಾಡತಕ್ಕ. ಧೂಮವತ್ತಾಜ್ಞಾನ=ಧೂಮವುಳ್ಳದ್ದು ಎಂಬ ಜ್ಞಾನವು.

೩೮೦. ಅನುಮಾನ ಪ್ರಮಾಣದಲ್ಲಿ ೧. ಪ್ರತಿಜ್ಞೆ, ೨. ಹೇತು, ೩. ಉದಾಹರಣೆ, ೪. ಉಪನಯನ, ೫. ನಿಗಮನಗಳೆಂಬ, ಐದು ಅವಯುವಗಳು. ೧. ಪ್ರತಿಜ್ಞೆ=ಪರ್ವತವು ಅಗ್ನಿವುಳ್ಳದ್ದೆಂಬ ವಾಕ್ಯವು. ೨. ಹೇತು=ಧೂಮ ವುಳ್ಳದ್ದಿರುವದರಿಂದ. ೩. ಉದಾಹರಣ=ಯಾವಯಾವದು ಧೂಮವು ಳ್ಳದ್ದೋ ಅದದು ಅಗ್ನಿಯುಳ್ಳದ್ದೇ ಇರುವದು, ಮಹಾನಸದಂತೆ. ೪. ಉಪನಯ=ಆದರಂತೆ ಇದು (ಪರ್ವತವು) ಅಗ್ನಿವ್ಯಾಪ್ಯಧೂಮವು ಳ್ಳದ್ದು, ಎಂದು ಹೇಳುವದು. ೫. ನಿಗಮನ=ಆದ್ದರಿಂದ ಇದು ಅಗ್ನಿಯು ಳ್ಳದ್ದು, ಎಂದು ಹೇಳುವದು.

ಪರಾರ್ಥ ಅನುಮಾನ=ಒಂದುಸಮಯದಲ್ಲಿ ಇಬ್ಬರಿಗೆ ವಿವಾದವುಂ ಟಾಗಲು ಅವರಲ್ಲಿ ಒಬ್ಬನು ಈ ಪರ್ವತವು ಅಗ್ನಿಯುಳ್ಳದ್ದೆಂದು ಅನು ಮಾನ ಪ್ರಮಾಣದಿಂದ ನಿರ್ಣಯವಾದದ್ದನ್ನು ಮತ್ತೊಬ್ಬನಿಗೆ ವಾಕ್ಯಗಳಿಂದ ತಿಳಿಸುವದೇ ಪರಾರ್ಥಾನುಮಾನುವು. (ಎರಡನೆಯವರ ಅನುಮಿತಿಜ್ಞಾನಕ್ಕೆ ಕಾರಣವಾದದ್ದು)

ಸಪಕ್ಷ=ಹೇತುಸಾಧ್ಯಗಳ ವ್ಯಾಪ್ತಿನಿಶ್ಚಯುವಾದಸ್ಥಾನವು ಸಪಕ್ಷವೆನಿಸು ವದು. ಉದಾ=ಮಹಾನಸದಂತೆ. ಹೇತ್ವಾಭಾಸ=ಹೇತುವಿನಂತೆ ತೋರಿ ಹೇತುವಾಗದಿರುವದೇ ಹೇತ್ವಾಭಾಸ. ೧, ಸವ್ಯಭಿಚಾರ=ಎಲ್ಲೆಲ್ಲಿ ಹೇತು ವಿರುವದೋ ಅಲ್ಲಲ್ಲಿ ಸಾಧ್ಯವಿರುವದೆಂಬ ನಿಯಮದ ಬಾಧೆಯುಳ್ಳದ್ದೇ ಸವ್ಯಭಿಚಾರ. ೨. ವಿರುದ್ಧ=ಸಾಧ್ಯದ ಅಭಾವದಿಂದ ವ್ಯಾಪ್ತವಾದ ಹೇತುವೇ ವಿರುದ್ಧ. ೩. ಸತ್ಪ್ರತಿಪಕ್ಷ=ಸಾಧ್ಯದ ಅಭಾವವನ್ನು ಸಾಧಿಸುವಂಥ ಭಿನ್ನ ಹೇತುವುಳ್ಳದ್ದು. ೪. ಅಸಿದ್ಧ=ಯಾವ ಹೇತುವು ಪಕ್ಷದಲ್ಲಿ ಎಂದೂ ಇರುವುದಿಲ್ಲವೋ ಅದು ಅಸಿದ್ಧವು. ೫. ಬಾಧಿತ=ಯಾವ ಹೇತುವಿನ ಸಾಧ್ಯದ ಅಭಾವವು ಅನ್ಯಪ್ರಮಾಣದಿಂದ ನಿಶ್ಚಿತವಾಗುವದೋ ಅದು ಬಾಧಿತವೆನಿಸುವದು.

೩೦೧.ತತ್ತದಾಪ್ತರು.ತತ್+ತತ್+ಆಪ್ತರು=ಅವರವರಆಪ್ತರಾಗಿರು ವದರಿಂ. ಆಕಾಂಕ್ಷಾ=ಒಂದು ಪದದ ಅರ್ಥವನ್ನು ತಿಳಿಯುವದಕ್ಕೆ ಬೇರೆಪದದ

ಅನ್ವಯ ಬೋಧೆಯ ಇಚ್ಛೆಯು ಅಥವಾ ಅವಶ್ಯಕತೆಯು. ಯೋಗ್ಯತಾ= ಒಂದು ಪದಾರ್ಥಕ್ಕೆ ಮತ್ತೊಂದು ಪದಾರ್ಥದೊಡನೆ ಇರುವ ಸಂಬಂಧದ ಅರ್ಹತೆಯೇ ಯೋಗ್ಯತೆ ಎನಿಸುವದು ಅಥವಾ ಅರ್ಥಕ್ಕೆ ಬಾಧೆಯಾಗದಿರುವದೇ ಯೋಗ್ಯತೆಯೆನಿಸುವದು. ಸಾಹಚರ್ಯ=ಪದದ ಸಮೀಪತ್ವ (ವಿಳಂಬ ಮಾಡದೇ ಪದವನ್ನುಚ್ಚರಿಸುವದು;) ತಾತ್ಪರ್ಯ=ವಕ್ತೃವಿನ ಇಚ್ಛೆಯೇ ತಾತ್ಪರ್ಯವು. ಪೀನತ್ವ=ಸ್ಥೂಲತನ. ಗವಯ=ಗೋಸದೃಶವಾದ ಕಾಡು ಮೃಗ. ಅನುಪಲಬ್ಧಿ=ಅಭಾವ ಜ್ಞಾನವನ್ನು ಮಾಡತಕ್ಕ ಪ್ರಮಾಣ. ತತ್ತದಧಿಷ್ಠಾನ=ತತ್+ತತ್=ಅವವುಗಳಿಗೆ (ವೃತ್ತ್ಯಾದಿ) ಅಧಿಷ್ಠಾನ=ಮೂಲ ಕಾರಣ. ೩೦೨. ಮರು ಮರೀಚಿಕಾ=ಮರುಭೂಮಿಯಲ್ಲಿ (ನೀರಿನ ಪ್ರವಾಹದಂತೆ) ತೋರುವ ಸೂರ್ಯನ ಕಿರಣಗಳು. ದೃಷ್ಟಾಂತೋಪಪನ್ನಮಾದ= ದೃಷ್ಟಾಂತದಿಂದ ಕೂಡಿದ. ೩೦೩. ಪ್ರಸಕ್ತಿ=ಪ್ರಸಂಗ. ಬ್ರಹ್ಮದತ್ತಣಿಂ= ಬ್ರಹ್ಮದ ದೆಸೆಯಿಂದ. ಅತದ್ವ್ಯಾವೃತ್ತಿ ಲಕ್ಷಣ=ಅತತ್+ವ್ಯಾವೃತ್ತಿ=ತತ್ ಅಲ್ಲದ್ದನ್ನು ಬೇರ್ಪಡಿಸಿ ವಸ್ತುವನ್ನು ತಿಳಿಸುವದು. ತಟಸ್ಥಲಕ್ಷಣ=ತಟ= ದಂಡೆ.ಸ್ಥ=ಇರುವದು. ೩೦೪.ಪ್ರಕೃಷ್ಟ=ವಿಶೇಷ, ಪ್ರಧಾನ. ಸತತೋದಿತ= ನಿರಂತರ ಭಾವದಿಂದಿರುವದು. ಅಭಿವ್ಯಕ್ತಿ=ಪ್ರಕಟತೆ. ೩೦೫. ಸ್ಫುರಣ= ಸ್ಪಷ್ಟತೆ. ತುಷಾರ=ತುಂತುರು. ೩೦೬. ಹಾನ+ಉಪಾದಾನ=ಬಿಡುವುದು, ಹಿಡಿವುದು. (ದ್ವೇಷ-ರಾಗ) ೨೦೭. ತಪ್ತ+ಅಯಃಪಿಂಡ=ಕಾದ ಕಬ್ಬಿಣದ ಗಟ್ಟಿ. ಹಿರಣ್ಯಗರ್ಭ=ತೇಜೋ ರೂಪ. ೩೦೮. ಮಾಯಾವಚ್ಛಿನ್ನ=ಮಾಯೆಯಿಂದ ಮಾಯೆಯಷ್ಟು ಅಳತೆಯುಳ್ಳವ. ವಿರಿಂಚಿ=ಬ್ರಹ್ಮ. ೩೦೩. ಅನ್ಯಥಾ ಕರ್ತೃತ್ವ=ಬೇರೆ ವಿಧವಾಗಿ ಮಾಡುವತನ. ನಿಯಮನ= ನಡಿಸೋಣ, ಪ್ರೇರಿಸುವಿಕೆ. ೩೧೦. ನಿರವದ್ಯ=ನಿರ್+ಅವದ್ಯ=ದೋಷರಹಿತ, ನಿಕೃಷ್ಟವಲ್ಲದ. ನಿರುಪಪ್ಲವ=ನಿರುಪಾಧಿಕಾನಂದ. ವಾಚಾರಂಭಣ=ನುಡಿ ಮಾತ್ರ. ವಿವರ=ಛಿದ್ರ.

೩೧೧.ವಂಶ=ಬಿದಿರು.ಸ್ಫೋಟಕ=ಬೊಬ್ಬೆ,ಗುಳ್ಳೆ.ವಿಯದಾದಿ=ವಿಯತ್=ಆಕಾಶ ಮೊದಲಾದ.೩೧೩. ಮಿಥ್ಯಾತ್ವನಿರುಕ್ತಿ=ನಿರುಕ್ತಿ=ನಿರ್ವಚನ ನಿರ್ಧರ, ನಿಶ್ಚಯ.ವಸ್ತುಗತ್ಯಾ=ಯಥಾರ್ಥ. ೩೧೬. ಇಂದ್ರಿಯಮೂಲಸಮನ್ವಯ=ಇಂದ್ರಿಯಂಗಳಿಗೆ ಕಾರಣವಾದ ಅಧಿದೇವತೆಗಳ ಹೊಂದಿಕೆ. ೩೧೭. ವ್ಯೂಹಕರಣ=ಸಮೂಹಗೊಳಿಸುವಿಕೆ, ಸಂಚರಿಸುವಿಕೆ, ಅನುಷ್ಠಾಶೀತ=

ಅನುಷ್ಣ+ಅಶೀತ=ಉಷ್ಣ ಅಥವಾ ಶೀತಇಲ್ಲದೆ ಸಮಾನವಾದ ಸ್ಪರ್ಶ. ಅಭಾಸ್ವರಶ್ವೇತರೂಪ=ಪ್ರಕಾಶವಿಲ್ಲದ ಬಿಳೀರೂಪ. ಉಚ್ಚಾವಚ=ಹೆಚ್ಚುಕಡಿಮೆ, ತರಹ=ತರಹದ.ಸಂಸೃಷ್ಟ=ಕೂಡಿಕೊಂಡು. ೩೧೮. ಸ್ಫೂರ್ತಿ=ಭಾತಿ, ತೋರಿಕೆ. ಅತಿರೋಹಿತ=ನಿರಾವರಣ, ಆವರಣವಿಲ್ಲದ. ೩೧೯. ವೃತ್ತಿವಾದ. ಪಟಕುಟೀಭಾವ=ಪಟ=ಬಟ್ಟೆಯೇ, ಕುಟೀಭಾವ=ಡೇರೆಯ ಆಕಾರದಿಂತೋರಿದಂತೆ, ಕರ್ಮವೇ ಜಗದಾಕಾರದಿಂ ತೋರುವದೆಂಬುದು ಪೂರ್ವಮೀಮಾಂಸಕರಾದ ಜೈಮಿನಿ ಆಚಾರ್ಯರ ಅಭಿಪ್ರಾಯ. ಆರಂಭವಾದ=ತಂತುಪಟನ್ಯಾಯದಂತೆ, ಅನೇಕ ಕಾರಣರೂಪ ನಿರವಯುವ ಪರಮಾಣುಗಳಿಂದ ಜಗವಾಗುವದೆಂದು ನ್ಯಾಯವೈಶೇಷಿಕರ ಮತ. ಪರಿಣಾಮವಾದ=ಕ್ಷೀರದಧಿನ್ಯಾಯದಂತೆ, ನಿರವಯುವ, ಅಪರಿಚ್ಛಿನ್ನ, ಅಚೇತನ, ನಿತ್ಯವಾದ ಪ್ರಕೃತಿಯೇ ಸಾವಯುವ ಪರಿಚ್ಛಿನ್ನಾತ್ಮಕಜಗದ್ರೂಪ ಪರಿಣಾಮವಾಗುತ್ತದೆಂದು ಸಾಂಖ್ಯರ ಅಭಿಪ್ರಾಯ. ವಿವರ್ತವಾದ=ರಜ್ಜುಸರ್ಪದ ತೋರ್ಕೆಯಂತೆ, ಪೂರ್ವರೂಪವನ್ನು ಬಿಡದೆ ಅನ್ಯರೂಪವಾಗಿ ತೋರುವಿಕೆ. ಚೈತನ್ಯವು ತನ್ನ ಮೊದಲಿನ ರೂಪವನ್ನು ಬಿಡದೆ ಜಗದಾಕಾರವಾಗಿ ತೋರುವಿಕೆ. ಇದು ವೇದಾಂತಿಗಳ ಮತ. ಶಂಖಪೀತಿಮಾ=ಬಳೀ ಶಂಖವು ಹಳದೀ ಬಣ್ಣದಿಂದ ತೋರುವಿಕೆ. ಜಪಾಕುಸುಮ ಸನ್ನಿಹಿತ ಸ್ಫಟಿಕ ಲೌಹಿತ್ಯ=ದಾಸವಾಳ ಹೂವಿನ ಸಮೀಪದ ಸ್ಫಟಿಕ ಮಣಿಯಲ್ಲಿ ತೋರುವ ಕೆಂಪು ಬಣ್ಣವು. ಶರೀರ ಸ್ವಜ್ಞಪ್ತಿ=ಶರೀರವೇ ನಾನೆಂಬ ಬುದ್ಧಿ. ೩೨೨. ಪತಂಗ=ಸೂರ್ಯ. ಭೈತ್ರ=ಹಡಗು, ದೋಣಿ ೩೨೩. ಚರಣಾಯುಧ=ಕೋಳಿ. ನೈಯತ್ಯ=ನಿಯಮ, ಕ್ರಮ, ಕ್ಲುಪ್ತ ೩೨೪. ಅಭಿಸಂಧಿ ಬಲಾನುಗುಣವಾಗಿ=ಅವಸ್ಥೆಗಳ ಕೂಡುವಿಕೆಯ ಬಲಕ್ಕೆ ಅನುಸಾರವಾಗಿ. ೩೨೫. ಲೋಹಕಾಂತಾಂತರ ಕುಂತದಂತೆ=ಸೂಜಿ ಕಲ್ಲಿನ ಸನ್ನಿಧಿಯಲ್ಲಿರುವ ಆಯುಧದಂತೆ. ಕಾಣೋಹಮ್=ನಾನು ಕಣ್ಣಿಲ್ಲದವನು. (ಒಕ್ಕಣ್ಣನು) ಅಹಂಕಾರ್ಯಹಮ್=ಅಹಂಕಾರಿ+ಅಹಮ್=ನಾನು ಅಹಂಕಾರ ಉಳ್ಳವನು. (ಮೂಲಾಹಂಕಾರ) ಪ್ರತ್ಯಭಿಜ್ಞಾ=ಪೂರ್ವಜ್ಞಾನದ ಸಂಸ್ಕಾರ ಮತ್ತು ಇಂದ್ರಿಯಂಗಳ ಸಂಬಂಧದಿಂದ ಉಂಟಾದ ಜ್ಞಾನಕ್ಕೆ ಪ್ರತ್ಯಭಿಜ್ಞಾ ಪ್ರತ್ಯಕ್ಷವೆಂದು ಹೇಳಲ್ಪಡುವದು. ಅಥವಾ ಮೊದಲು ಅನುಭವಿಸಿದ ವಸ್ತುವನ್ನು ಕಾಣುತ್ತಾ ಆ ವಸ್ತುವಿನೊಡನೆ ಹಿಂದಿನ ಅನುಭವವನ್ನು ಸ್ಮರಿಸುವದು, ಉದಾ-ಆತನೇ ಈತನೆಂಬಂತೆ, ೩೨೬, ಸಮಾರಣ=

ವಾಯು. ಉದ್ಘಾಟನ=ತೆರೆಯಲು. ದೇಹಳಿ=ಹೊಸಲು. ೩೨೮. ಉಪಾ ಧೇಯಭಿನ್ನತ್ವ=ಉಪಾಧಿಯ ಸಂಬಂಧದಿಂದ ಭಿನ್ನ ಭಿನ್ನವಾಗಿ. ೩೨೯. ಅನಾದಿಷಟ್ಕ=ಅನಾದಿ, ಉತ್ಪತ್ತಿ (ಆದಿ) ಇಲ್ಲದ್ದು. ೩೩೨. ಶಿವ ಜೀವ ಲಿಂಗಾಂಗ ಸಂಗೋಪಾಧಿ ಭಂಗ=ಶಿವಜೀವರ ಅಥವಾ ಲಿಂಗಾಂಗಉಪಾಧಿ ಭಂಗವಾಗಲು (ಕೈವಲ್ಯರೂಪಚಿನ್ಮಾತ್ರವೇ ಉಳಿಯುವದು.) ವಾಕ್ಯ ಶೇಷ= ಸಂಬಧೀವಾಕ್ಯ. ವಿವೃತ್ತಿ=ವ್ಯಾಖ್ಯಾಸ ವಿವರಣ. ಸಿದ್ಧಪದಸಾನ್ನಿಧ್ಯ= ಒಂದು ಪದದ ಮುಂದೆ ಮತ್ತೊಂದು ಪದವನ್ನು ವಿಳಂಬ ಮಾಡದೆ ಉಚ್ಚರಿ ಸುವದು. ಉದಾ–ಗಾಂ+ಆನಯ=ಗೋವನ್ನು ತೆಗೆದುಕೊಂಡು ಬಾ. ೩೩೩. ಅನುಪಪತ್ತಿ=ಅಸಂಭವ. ಉಪಪನ್ನವಾದ=ಸಂಭವವಾದ, ಅವಿರುದ್ಧ. ಜಹದ್=ಬಿಟ್ಟ. ಅಜಹತ್=ಬಿಡದ. ಜಹದಜಹತ್=ಬಿಟ್ಟು ಬಿಡದ. ಗಂಗಾಯಾಂ ಘೋಷಃ ಪ್ರತಿವಸತಿ=ಗಂಗೆಯಲ್ಲಿ ಗೊಲ್ಲರ ಹಳ್ಳಿ ಇರುತ್ತದೆ. ಕುಂತಾಃ ಪ್ರವಿಶಂತಿ=ಆಯುಧಗಳು ಪ್ರವೇಶಿಸುತ್ತವೆ. ಸೋಯಂ ದೇವ ದತ್ತಃ=ಅವನೇ ಈ ದೇವದತ್ತನು. ೩೩೫. ಆಭಾಸ=ಪ್ರತೀತಿ, ಹೋಲಿಕೆ ಸಮಾನ. ಅರ್ಥವಾದ=ಸ್ತುತಿಪರವಾಕ್ಯ. ಅಪೇಕ್ಷೆಯಂ ಪುಟ್ಟಿಸುವವಾಕ್ಯ. ಔಪಚಾರಿಕ=ಉಪಚಾರ. ಅಯೋಗ್ಯನಲ್ಲಿ ಯೋಗ್ಯತ್ವವಂ ಹೇಳುವದು. ಮಾಣವಕ=ಬ್ರಹ್ಮಚಾರಿ, ಹುಡುಗ. ೩೩೬. ಪದಾರ್ಥಾಂತರ್ಗತಾ ಭೇದಪರ=ಅಂತರ್ಗತವಾದ ಉದರದಲ್ಲಿನ ಕೂಸು ಅಭೇದವಾಗಿದ್ದಂತೆ. ಆಭಾಸಗೊಳಿಸೆ=ವಿಪರೀತಗೊಳಿಸೆ. ೩೩೬. ಸತ್ಯಮದ್ವೈತಂ=ಅದ್ವೈತವೇ ಸತ್ಯವಾಗಿರುವದು. ಅದ್ವೈತಂಪರಮಾರ್ಥತಃ=ಪರಮಾರ್ಥದಿಂದ ಅದ್ವೈ ತವೇ ಇರುವದು. ನಾನಾಪಶ್ಯನ್ ಮೃತ್ಯಂಗಚ್ಛತಿ=ಭೇದದರ್ಶಿಯು ಮರಣ ಹೊಂದುವನು. ವಿಭಕ್ತಿರೇವೈನಯೋರ್ನಸ್ಯಾತ್=ತತ್, ತ್ವಂಪದಾರ್ಥಗ ಳಲ್ಲಿ ನಿಶ್ಚಯವಾಗಿ ಭೇದವಿರುವದಿಲ್ಲ. ಯೋವೈಸ್ವೇತರಂ ಮನುತೇನಸವೇದ= ಯಾವನು ತನ್ನಿಂದನ್ಯವಾಗಿ ಪರಮಾತ್ಮನಿರುವನೆಂದು ಅಂಗೀಕರಿಸುವನೋ ಅವನು ನಿಶ್ಚಯವಾಗಿ ತತ್ವವನ್ನು ತಿಳಿದವನಲ್ಲ. ತದೇಕಂ ನೈವನಾನಾಸ್ತಿ= ಆ ಬ್ರಹ್ಮಚೈತನ್ಯವು ಒಂದೇ ಅದರಿಂದನ್ಯವಾದದ್ದಿರುವದಿಲ್ಲ. ಏಕೋಽಹವೈ= ನಿಶ್ಚಯವಾಗಿ ನಾನು ಒಬ್ಬನೇ. ಏಕೋರುದ್ರಃ=ಒಬ್ಬನೇ ರುದ್ರನು. ಏಕಮೇ ವಾದ್ವಿತೀಯಮ್=ಬ್ರಹ್ಮವು ಒಂದೇ, ಎರಡಲ್ಲದ್ದು. ಏಕತ್ವಮನುಪಶ್ಯತಿ= ಅಭೇದವನ್ನೇ ತಿಳಿಯುತ್ತಾನೆ. ಶಿವಮದ್ವೈತಂ ಚತುರ್ಥಂ=ನಾಲ್ಕನೆಯ

ದಾದ ತುರಿಯವೇ ಮಂಗಳಕರವಾದ ಅದ್ವೈತವು. ಪೂರ್ಣಮದಃ ಪೂರ್ಣಮಿದಂ=ಬ್ರಹ್ಮವು ಸರ್ವತ್ರಪೂರ್ಣವಾದದ್ದು. ಯಥಾಸ್ವಪ್ನ ಸ್ತಥಾ ಮೃಷಾ=ಹೇಗೆ ಸ್ವಪ್ನವು ಸುಳ್ಳೊ ಹಾಗೇ (ಈ ವಿಶ್ವವು) ಸುಳ್ಳು. ೩೩೭. ಸುಳ್ಳೆಂಬ ಮಾತು ದಿಟವಾದರುಂ=ಅವನು ಹೇಳಿದ ಸುಳ್ಳು ದಿಟವಾದದ್ದು; ಎಂಬ ವಾಕ್ಯದಲ್ಲಿ ದಿಟವೆಂಬ ಪದವು ಸುಳ್ಳನ್ನು ದೃಢಪಡಿಸುತ್ತದೆಯೇ ವಿನಹ ಸುಳ್ಳನ್ನು ಸತ್ಯಮಾಡಲಾರದು. ೩೩೮. ಸವಿಶೇಷತ್ವಾಪತ್ತಿ=ಸಗುಣವೇಸಂಭವಿಸುವದು. ನಿಷ್ಕಲ=ಅವಯುವರಹಿತ, ಕಲಾಶೂನ್ಯ. ನಿರಂಜನ=ಮಲರಹಿತ. ಶ್ರುತಿ ವ್ಯಾಕೋಪ=ಶ್ರುತಿ ಬಾಧಿತ. ಅರಿವೆನೆಂದು ಕುರುಹಿಡುವರುಹನೊಳಕೊಂಬರುಹಿಂಗೆ ಸಾಕ್ಷಿಯಾದರುಹು=ಜ್ಞೇಯವನ್ನು ಕುರುಹಿಡುವ ಜ್ಞಾನಸ್ವರೂಪ ಅರಿವನ್ನು ಒಳಕೊಂಡ ಜ್ಞಾತೃರೂಪ ಅರಿವಿಗೆ ಸಾಕ್ಷಯಾದರುಹು. (ತ್ರಿಪುಟಿಗೆ ಸಾಕ್ಷಿಯಾದರುಹು) ಕುಸುರು=ಲೇಪ, ಸಂಬಂಧ.

೩೩೮. ಪುಷ್ಕರ ಪಲಾಶ=ಕಮಲಪತ್ರ. ನಿರ್ದುಷ್ಟ=ದೋಷರಹಿತ. ಜ್ಞಾನಾಜ್ಞಾನಗಳಿಗೆ ಸಮಾನ ವಿಷಯಕತ್ವ=ಸಗುಣಜ್ಞಾನ, ನಿರ್ಗುಣದ ಅಜ್ಞಾನ ಇವೆರಡಕ್ಕೂ ನಿರ್ಗುಣವೇ ಅಧಿಷ್ಠಾನವಾಗುವದು. ಹಾವಿನಜ್ಞಾನ ಹಗ್ಗದ ಅಜ್ಞಾನ ಇವೆರಡಕ್ಕೂ ಹಗ್ಗವೇ ವಿಷಯುವಾದಂತೆ. ಲೋಕನ್ಯಾಯ ಸಹಕೃತಾನುಮಾನ=ಜಗತ್ತಿಗೆ ಕರ್ತನಾಗಿರುವದರಿಂದಲೂ, ಭಕ್ತರ ಅಭೀಷ್ಟವನ್ನೂ ಕೊಡುವುದರಿಂದಲೂ ಬ್ರಹ್ಮವು ಸಗುಣವಾಗಿಯೇ ಇದೆ. ಈ ಜಗತ್ ಕರ್ತೃವಿನಿಂದ ಜನ್ಯವಾದದ್ದು–ಕಾರ್ಯವಾದದ್ದರಿಂದ–ಘಟದಂತೆ. ಇಚ್ಛಾ, ಜ್ಞಾನ, ಪ್ರಯತ್ನಂಗಳಿಂ ಕೂಡಿರುವನೇ ಕರ್ತನಾಗುವದರಿಂದ ಬ್ರಹ್ಮವು ಸಗುಣ. ೩೩೯. ಶಾಸ್ತ್ರಯೋನಿ=ವೇದವೇ ಪ್ರಮಾಣವಾದ ಶಬ್ದೈಕಮೇಯ=ಶಬ್ದ (ವೇದ) ಪ್ರಮಾಣವೊಂದರಿಂದಲೇ ವೇದ್ಯವಾಗಿ. ಅನುಗ್ರಹಿತಮಾಗದಿರೆ. (ವಾದಿಯು) ಒಪ್ಪದಿದ್ದರೆ. ಅಪ್ರಮಾಣವಹುದಾಗಿ=ವೇದಬಾಹಿರವಾಗಲು. ೩೪೦. ಆಲೋಕ=ಪ್ರಕಾಶ, ಅರ್ಥಪ್ರಕಾಶಕ=ವಿಷಯ ಪ್ರಕಾಶಕ.

೩೪೧. ಸ್ಥಿತಸ್ಯಗತಿಶ್ಚಿಂತನೀಯ=ನಿಂತಿರುವವನಿಗೇನೆ ಗಮನವನ್ನೂ ಹಿಸುವಂತೆ, ಇರುವ ಬ್ರಹ್ಮಕ್ಕೇನೆ ಸೃಷ್ಟ್ಯಾದಿಗಳನ್ನು ಪೇಳಲ್ಪಡುವದು. ನಿಮಿತ್ತ=ಕಾರಣ, ಯುಕ್ತಿ=ಬಾಧ್ಯಬಾಧಕಗಳನ್ನು ವಿವೇಕದಿಂ ವಿಚಾರಿ

ಸುವದು. ಸಾಧಕ ಬಾಧಕ ಪ್ರಮಾಣಗಳಿಂದ ನಿರ್ಧರಿಸುವ ಉಪಾಯವೇ ಯುಕ್ತಿ. ಮನನ ಸಾಮಗ್ರಿಯನ್ನು ಯುಕ್ತಿ ಒಂದರಿಂದಲೇ ಮನನಗೊಳಿಸಿದ್ದಾರೆ. ೩೪೨. ವ್ಯಾವೃತ್ತಿ=ಬೇರ್ಪಡಿಸುವಿಕೆ, ಭಿನ್ನತ್ವ. ಆಜಡಕ್ಕೆ=ಜಡ ರೂಪವಾದ ಅವಿದ್ಯೆಗೆ, ಕುಲಿಶಕರ್ಕಶ=ವಜ್ರದಂತೆ ಕಠಿಣವಾದ. ಸ್ವರ್ಗವೇ ಮೂರ್ಧ್ನ=ಶಿರಸ್ಸು. ೩೪೪. ಅಧ್ಯಾಸ ವಿವೇಕಪ್ರಯುಕ್ತ=ಅಧ್ಯಾಸವು ಮಿಥ್ಯೆಯೆಂಬ ವಿವೇಕ ಮೂಲಕ. ೩೪೫. ಅನಾಹಾರ್ಯಾಪ್ರಾಮಾಣ್ಯ ಜ್ಞಾನಾನಾಸ್ಕಂದಿತ ಪಟುತಮ ಸಂಸ್ಕಾರ. ಅನಾಹಾರ್ಯ=ಕೃತ್ರಿಮವಲ್ಲದ, ಆಗಂತುಕವಲ್ಲದ, ಅಪ್ರಾಮಾಣ್ಯ=ಪ್ರಮಾಣದಿಂ ಸಿದ್ಧವಾಗದ, ಜ್ಞಾನಾನಾಸ್ಕಂದಿತ=ಜ್ಞಾನವು ಹೋಗದಿರುವ (ಸಂಶಯ ವಿಪರೀತ ಭಾವನೆಗಳಿಂದರಹಿತ.)

ಅನಾಹಾರ್ಯ=ಚಾರ್ವಾಕಾದಿ ಮತಗಳಿಂದ ಹರಣಮಾಡಲಿಕ್ಕಾಗದ ಅಪ್ರಾಮಾಣ್ಯಜ್ಞಾನ+ಅನಾಸ್ಕಂದಿತ=ಅಪ್ರಾಮಾಣ್ಯಜ್ಞಾನಗಳಿಂದ ಕೂಡದ ಪಟುತಮಸಂಸ್ಕಾರ=ಉತ್ತಮೋತ್ತಮ ಸಂಸ್ಕಾರ. ೩೪೫. ಅಕಿಂಚಿತ್ಕರ= ಸ್ವಲ್ಪವೂ ಇಲ್ಲದ, ಪ್ರಮಾಣಭೂತವಲ್ಲದ ತುಚ್ಛ. ೩೪೬. ಸುಖೇಚ್ಛೆ=ತನ್ನನು ತಾನು ಉದ್ಧರಿಸಿಕೊಳ್ಳಬೇಕೆಂದು ಇಚ್ಛೆಮಾಡುವದು. ವಿಚಾರಣೆ=ಆತ್ಮವಿಚಾರವನ್ನು ಮಾಡುವದು. ತನುಮಾನಸ=ಮನಸ್ಸು ಬಹಿರ್ಮುಖವಾಗದೆ ಅಂತರ್ಮುಖವನ್ನು ಹೊಂದುವದು, ಮನಸ್ಸು ಸೂಕ್ಷ್ಮವಾಗೋಣ. ಮನಸ್ಸನ್ನು ವಿಷಯಕಾರ ಮಾಡಿಸದಿರುವದು. ಸತ್ವಾಪತ್ತಿ=ಶುದ್ಧ ಸತ್ವಗುಣವಾಗಲಿ ಅಥವಾ ಸ್ವರೂಪಸತ್ತೆಯಾಗಲಿ ಚಿತ್ತದಲ್ಲುಂಟಾಗೋಣ. ಸ್ವರೂಪ ಸತ್ವವು (ಶುದ್ಧಸತ್ವಗುಣವು) ಪ್ರಾಪ್ತಿಯಾಗುವಿಕೆ. ಅಸಂಸಕ್ತಿ=ಅನಾತ ದಲ್ಲಿ ಸರ್ವಥಾ ಆಸಕ್ತಿಯಿಲ್ಲದೆ ಇರುವಿಕೆ. ಪದಾರ್ಥಾಭಾವನಿ=ಅನಾತ ಪದಾರ್ಥಗಳು ತೋರದಿರುವಿಕೆ. ಸರ್ವಪದಾರ್ಥಗಳು ಅಧಿಷ್ಠಾನ ಬ್ರಹ್ಮ ರೂಪವಾಗಿ ತೋರೋಣ. ಹಾಗೂ ಆಸರ್ವವೂ ಒಳಗಾಗಲಿ, ಹೊರಗಾಗಲಿ, ಯಾವದೊಂದು ವಿಶೇಷಜ್ಞಾನವೂ ಆಗದಿರುವದು. ತುರ್ಯಗಾ=ತುರೀಯಪದಸ್ಥಿತತ್ವ (ಸಮಾಧಿಯ ಪರಿಪೂರ್ಣ ಸ್ವರೂಪ) ತನ್ನ ಸ್ವರೂಪದಲ್ಲೇ ತಾನು ಎಡೆಬಿಡದೆ ಇರುವದು. ಸದಾಚಾರ=ಒಳ್ಳೇ ಆಚರಣೆ ಪರಮಾತ್ಮ ಸಂಬಂಧವಾದ ಶ್ರವಣಾದಿಗಳ ವಿಚಾರ. ೩೪೭. ನಿಷ್ಪಂದ=ಅಚಲಿತ. ದುಃಖಾಪಸರ್ಪ=ದುಃಖಾತ್ಯಂತಾಭಾವ, ಕಾಮಾಪ್ತಿ=ಪರಮಾನಂ

ದಪ್ರಾಪ್ತಿ. ೩೫೮. ಅತಿಥ್ಯಾಪವಾದಿಗಳಿಂದ=ಸ್ತುತಿನಿಂದಕರಿಂದ. ೩೪೯. ಕೃತ ಪ್ರಾಯ=ಮಾಡಿ ಮುಗಿಯಿತು. ವಿಶಿಷ್ಟಪುಣ್ಯಪರಿಪಾಕ=ತನ್ನ ಅನಂತಜನ್ಮ ಗಳ ಪುಣ್ಯಗಳೆಲ್ಲಾ ಒಟ್ಟುಗೂಡಿ ಫಲಿತವಾಗುವಿಕೆ (ಚಿತ್ತವು ಶುದ್ಧಿಹೊಂದು ವಿಕೆ) ಪ್ರಾಪ್ಯಪ್ರಾಪ್ತಿ=ಸಂಪಾದಿಸಲುಯೋಗ್ಯವಾದುವುಗಳ ಪ್ರಾಪ್ತಿ (ಪಡೆ ಯುವಿಕೆ) ಅನುಭವಸಾಮ್ಯ=ಸಮಾನವಾದ ತಿಳುವಳಿಕೆ.

ಜಡಲೀನ=ಜೀವನ್ಮುಕ್ತನು ನಿದ್ರಾವಶನಾದ ಪುರುಷನಂತೆ ಪ್ರಾಪ್ತ ಹಾಗು ಅಪ್ರಾಪ್ತವಿಷಯಗಳಲ್ಲಿ ಉದಾಸೀನ ಸ್ಥಿತಿಯಲ್ಲಿರುವದರಿಂದ ಆತನ ಮನಸ್ಸು ವಿಷಯಾದಿಗಳಲ್ಲಿ ಜಡವಾಗಿಯೂ, ಸ್ವರೂಪದಲ್ಲಿ ಲೀನವಾಗಿಯೂ ಅನುಸಂಧಾನವಿರುವದು. ಮೃದು ದುರ್ಬಲ=ಜ್ಞಾನಿಯ ಮನಸ್ಸು ಬಾಲಕ ನಂತೆ ಲೌಕೀಕ ವೈದಿಕ ವ್ಯವಹಾರಗಳಲ್ಲಿ ಲೀಲಾಮಾತ್ರವಾಗಿ ಸಾವಕಾಶವಾಗಿ ಚಲಿಸುವದಾಗಿಯೂ, ಸ್ವರೂಪವನ್ನು ಬಿಟ್ಟು ಬಹಿರ್ಮುಖವಾಗಲು ದುರ್ಬ ಲ (ದೃಢವಾದ ಇಚ್ಛೆ ಇಲ್ಲದ) ವಾಗಿಯೂ ಅನುಸಂಧಾನವಿರುವದು.

೩೪೯. ಶಿಥಿಲಾನಾವಶ್ಯಕ=ಜ್ಞಾನಿಯ ವಾಸನೆಯು ಶಿಥಿಲವಾದದ್ದ ರಿಂದ ಲೌಕಿಕ ವೈದಿಕ ವ್ಯವಹಾರಗಳಲ್ಲಿ ಶರೀರವು ನೇಮಕ್ಕೆ ಒಳಗಾಗದ ವಿಧಿ ನಿಷೇಧಗಳ ಅಭಾವವುಳ್ಳದ್ದಾಗಿಯೂ ಮನಸ್ಸು ಹೊರಗೆ ಹೋಗಲು ಅವಶ್ಯ ವಿಲ್ಲದ್ದಾಗಿಯೂ ಅನುಸಂಧಾನವಿರುವದು. ಸ್ವೈರ ನಿರಂಕುಶ=ಜ್ಞಾನಿಯು ಸರ್ವಾತ್ಮಕತ್ವದಿಂದ ಸರ್ವಲೋಕಗಳ ಸಾರ್ವಭೌಮನಾಗಿರುವದರಿಂದ ಯಾರ ಆಜ್ಞೆಯಲ್ಲಿಯೂ ಇರದೆ ಶರೀರವು ಬೇಕಾದಹಾಗೆ ಚಲಿಸುವದಾಗಿಯೂ ಮನಸ್ಸು ಅನ್ಯರ ಅಧಿಕಾರಕ್ಕೊಳಪಡದೆ ಇರುವದಾಗಿಯೂ ಅನುಸಂಧಾನ ವಿರುವದು. ಸಂಸ್ಕಾರ ಕ್ಷಯಾವಧಿ=ವೇಗವು ಮುಗಿಯುವವರೆಗೆ. ೩೫೦ ನಿಯತಾನು ಭಾವ್ಯ=ನಿಶ್ಚಿತವಾದ ಅನುಭವವು. ಸಂಬುಲ್ಲ ಸುಂಕಿನಂತೆ= ಒಂದು ವಿಧವಾದ ಸೂಕ್ಷ್ಮಹುಲ್ಲಿನ ಕಣಗಳು. ಚಣಕ=ಕಡಲೆ. ೩೫೧. ಲೋ ಕಯಾತ್ರೆಗಳನಧಿಕರಿಸಿದ=ಜನ್ಮಾದಿಗಳನೊಪ್ಪಿಕೊಂಡ. ಅಸ್ಮದಾದಿ=ನಾವೇ ಮುಂತಾದ ಅಧಿಕೃತರಾದ=ಅಧಿಕಾರಿಗಳಾದ (ಪ್ರಭು=ಒಡೆಯರು) ವಿಸ್ಮ ಯ=ಆಶ್ಚರ್ಯ. ೩೫೨. ಅದರತ್ತಣಂ=ಅದರ ದೆಸೆಯಿಂದ. ೩೫೩. ಪ್ರಾಯಿ ಕವಾಗಿ=ಬಹುಶಃ, ವಿಶೇಷವಾಗಿ ೩೫೪. ಯತ್ನ ಪುರಸ್ಸರ=ಯತ್ನಪೂರ್ವ ಕ. ಅತಿರೋಹಿತ=ಆವರಣ ರಹಿತ. ಗಚ್ಛನ್, ತಿಷ್ಠನ್, ಸ್ವಪನ್, ಜಿಘ್ರ

ನ್=ಆತ್ಮ ಸಾಕ್ಷಾತ್ಕಾರ ಮಾಡಿಕೊಂಡಿರುವ ಆತ್ಮಜ್ಞಾನಿಯು ನಡೆಯು ತ್ತಿದ್ದರೂ, ನಿಲ್ಲುತ್ತಿದ್ದರೂ, ಮಲಗುತ್ತಿದ್ದರೂ, ಮೂಸಿ ನೋಡುತ್ತಿದ್ದರೂ, ಇಂದ್ರಿಗಳೇ ವಿಷಯಗಳಲ್ಲಿ ಪ್ರವರ್ತಿಸುವವು. ತಾನು ಅಕರ್ತಾ ಅಸಂಗ ನಾಗಿರುವನು. ಪರಮುಕ್ತನಂತೆ=ವಿದೇಹಿಯಂತೆ. ರುಜು=ಸರಳ, ನೆಟ್ಟಗೆ. ಕುಟಿಲ=ಡೊಂಕ. ೩೫೫. ಕ್ಷಿಪ್ರಾನಿವಾರ್ಯವಾಗಿ=ಬೇಗನೆ ನಿವಾರಿಸಲಶಕ್ಯವಾಗಿ. ವಿಧ್ವಸ್ತದ್ವೈತ ಬಂಧರು=ದ್ವೈತ ಬಂಧವನ್ನು ನಾಶ ಮಾಡಿದವರು. ವ್ರಾತ್ಯ=ಮುಂಜೀ ಬಂಧನ ಸಂಸ್ಕಾರವಿಲ್ಲದವನು. ಶ್ರೋತ್ರಿ ಯ=ವೇದಾಧ್ಯಯನ ಮಾಡಿದವನು. ೩೫೬. ಭೃಗುಪತನ=ಪರ್ವತಾಗ್ರ ದಿಂ ಬೀಳುವಿಕೆ. ಪರಾಗತೆಯಕ್ಕು=ಅನ್ಯಾನುರಾಗತೆ, ಅನ್ಯಾಸಕ್ತಿ. ಪ್ರಸ್ತುತವ ನರಿಯದ=ಸಮಯೋಚಿತವನ್ನು ತಿಳಿಯದ. ಅನುಚಿತವಕ್ತ=ಜಲ್ಪ ಭಾಷಣ, ಬಾಯಿಗೆ ಬಂದಂತೆ ಮಾತನಾಡುವುದು.

೩೫೭. ಅನಭಿದೇಯ ವಿಷಯನಕ್ಕು=ಇಂತೆಂಬ ನಾಮಕ್ಕೆ ವಿಷಯನಲ್ಲ ವಿವರ:—ಅತಿಕಾಮಾಸಕ್ತನು ರತಿ ಕ್ರೀಡೆಯ ಅಂತ್ಯದಲ್ಲಿ ಮೈಥುನವಾಕ್ಯಗಳ ನ್ನಾಡಿದರೂ ಹೇಗೆ ವ್ಯರ್ಥಾಲಾಪವೆನಿಸುವದೋ ಹಾಗೆ ಜೀವನ್ಮುಕ್ತನು ಉನ್ಮತ್ತನಂತೆ ಉಚಿತವಲ್ಲದ ಮಾತುಗಳನ್ನಾಡುತ್ತಿದ್ದರೂ ಇಂತೆಂದು ಹೇಳುವ ದಕ್ಕೆ ವಿಷಯನಾಗುವದಿಲ್ಲ. ೩೫೭. ಕ್ಷೇತ್ರದಾಹಕಾಗ್ನಿಯಂತೆ=ಭೂಮಿ ತೋಟ ಮೊಲಾದುವುಗಳನ್ನು ದಹಿಸಿದ ಅಗ್ನಿಯಂತೆ (ಅಂದರೆ ದಹಿಸಲ್ಪಟ್ಟ ಭೂಮಿಯು ಹೇಗೆ ಫಲವೆತ್ತಿಗೆ ಕಾರಣವಹುದೋ) ೩೫೮. ಚರಮ ಕಡೆಯ ಶರೀರವುಳ್ಳ. ಸಕಲ ಶಾಸ್ತ್ರಪರ್ಯವಸಾನಮಪ್ಪ=ಎಲ್ಲಾ ಶಾಸ್ತ್ರಗಳ ಮುಗಿ ಯುವಿಕೆ, ವಿಶ್ರಾಂತಿಸ್ಥಾನವಾದ.

———

## ಶುದ್ಧಾಶುದ್ಧ ಪತ್ರಿಕೆ

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೪ | ೫ | ಸಖ | ಸುಖ |
| ೪ | ೨೩ | ಯೆನಿಸನ | ಯೆನಿಸೆನ್ನ |
| ೮ | ೬ | ಳೇಳಾ | ಳಾ |
| ೮ | ೨೨ | ವೆರೆದುದ | ಮೆರೆದುದು |
| ೧೧ | ೧೦ | ನದಕಾರ | ನುದತಾರ |
| ೫೦ | ೮ | ನಾವ | ನಾಮ |
| ೫೪ | ೩ | ಯೋಗಿಯೆನಿಸದೆ | ಭೋಗಿಯೆನಿಸದೆ |
| ೫೫ | ೧೪ | ಸನಿಧಿ | ಸನ್ನಿಧಿ |
| ೭೦ | ೧೦ | ಸಹ ವೆನಿಪ | ಸಹಜವೆನಿಪ |
| ೭೬ | ೬ | ಪರಿಕರದೂ | ಪರಿಕರದೊ |
| ೯೩ | ೨೧ | ಜಲಳು | ಜಲದೊಳು |
| ೧೦೫ | ೧೪ | ಬೀ ಮುಮಾದ | ಬೀಜಮುಮಾದ |
| ೧೦೬ | ೩ | ವಪವರೊಳ | ವವರೊಳ |
| ೧೧೪ | ೨೩ | ದನುಭವಿಸಿದ್ಧ | ದನುಭವಸಿದ್ಧ |
| ೧೨೫ | ೭ | ನಖಿಳದಮಿದಜ್ಞಾನ | ನಖಿಳಮಿದಜ್ಞಾನ |
| ೧೩೧ | ೬ | ಗವಿದೆ | ಜಗವಿದೆ |
| ೧೩೩ | ೧೮ | ಂತ್ಮನೊ | ಯಾತ್ಮನೊ |
| ೧೩೬ | ೭ | ತ್ರಿಜಗದ್ವೈತಾ | ತ್ರಿಜಗವದ್ವೈತಾ |
| ೧೩೮ | ೨೨ | ಳೊಂಡುಂಟ್ಟು | ಳುಂಡುಟ್ಟು |
| ೧೪೨ | ೧೦ | ಇವು ವನು | ಇವುತಾವನು |
| ೧೪೨ | ೧೮ | ಮಿಂಶ್ರಪಾಗಿರ್ಪ | ಮಿಶ್ರರೂಪಾಗಿರ್ಪ |
| ೧೪೪ | ೯ | ಪರಿವಿಡಿ | ಪರಿವಿಡಿದೀ |
| ೧೫೩ | ೨೩ | ಚಿನ | ಚಿನ್ಮ |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೧೫೯ | ೨೬ | ಒಡವಿ | ಒದೆವಿ |
| ೧೬೬ | ೨೮ | ವಿಕ್ರವಿಲ್ಲದೆ | ವಕ್ರವಿಲ್ಲದೆ |
| ೧೬೭ | ೬ | ರೇಚಕವೆನಿಪುವು | ರೇಚಕವೆನಿಪುದು |
| ೧೬೭ | ೨೩ | ಯವಾದಿ | ಯಮವಾದಿ |
| ೧೭೧ | ೧೦ | ಸೆವ | ಎಸೆವ |
| ೧೭೪ | ೧೦ | ಪೆಸರಿಂ | ಪೆಸರಿಂದೆ |
| ೧೭೬ | ೧೦ | ದೋಕೆ | ದೋರಿಕೆ |
| ೧೮೦ | ೧೬ | ನೆನಿಸವನು | ನೆನಿಸುವನು |
| ೧೮೧ | ೧೩ | ತತ್ವವವನು | ತತ್ವವನು |
| ೧೮೪ | ೧೩ | ಮಮುಕ್ಷು | ಮುಮುಕ್ಷು |
| ೧೮೪ | ೧೪ | ಬಯಸವದು | ಬಯಸುವುದು |
| ೧೮೪ | ೧೫ | ಸಖವಹದು | ಸುಖವಹುದು |
| ೧೮೮ | ೧೬ | ದಃಖ | ದುಃಖ |
| ೧೮೮ | ೧೮ | ತೆಂಕಲೆದುವನಿಗೆ | ತೆಂಕಲೈದುವನೆಗೆ |
| ೨೦೭ | ೨೫ | ಪುಟ್ಟಿರ್ಕ | ಪುಟ್ಟಿರ್ಕು |
| ೨೦೯ | ೬ | ಇಲ್ಲಹ | ಇಲ್ಲಿಹ |
| ೨೧೩ | ೧೪ | ಪಡಲೊಂದು ಮಿದಿಲ್ಲ | ಕೆಡಲೊಂದು ಮಿದಿಲ್ಲ |
| ೨೧೩ | ೧೬ | ರ್ಕವು | ರ್ಪವು |
| ೨೨೫ | ೨೨ | ವಿರ | ವರ |
| ೨೨೫ | ೨೩ | ವರ | ವಿರ |
| ೨೩೦ | ೧೨ | ಕಳೆದುದನೊದಂ | ಕಳೆದುದನೊಂದಂ |
| ೨೩೬ | ೧೩ | ಮರೆಯುವುದು | ಮೆರೆಯುವುದು |
| ೨೩೯ | ೪ | ರೊಳೇ | ರೊಳು |
| ೨೪೩ | ೨೭ | ಸಜಾ | ಸಚಾ |
| ೨೪೪ | ೨೯ | ನಿತಂ | ನಿತ್ಯಂ |
| ೨೪೫ | ೧೫ | ವಡಿಯ | ಪಡಿಯ |
| ೨೫೮ | ೩ | ಪರಿಯೊಳರಿ | ಪರಯೊಳರಿ |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೨೬೧ | ೧೦ | ॥ ೪ ॥ ಚಿತು | ॥ ೪ ॥ ಚಿತ್ತು |
| ೨೬೧ | ೧೧ | ಮಗುಳೆಯಾನೆನ್ತ | ಮಗುಳೆಯಾನೆನ |
| ೨೬೨ | ೮ | ಸಂಖ | ಸುಖ |
| ೨೬೨ | ೮ | ಕರ್ಮಾತ್ಮಕವ್ಧೆ | ಕರ್ಮಾತ್ಮಕವೆ |
| ೨೬೩ | ೧೨ | ನವಧರಿಸಂ | ನವಧರಿಸು |
| ೨೬೬ | ೨೯ | ದಿರಂತಿರ್ಪ | ದಿರುತಿರ್ಪ |
| ೨೬೯ | ೨೦ | ಬಳಿ–ಕೇನು | ಬಳಿ\|ಕೇನುಂ |
| ೨೭೭ | ೧೪ | ನೆನ್ನೊಳಂ | ನಿಸ್ನೊಳು |
| ೨೯೪ | ೧೦ | ಕಮಾರ್ಥ | ಕರ್ಮಾರ್ಥ |
| ೨೯೭ | ೮ | ವೀದಾಂತ | ವೇದಾಂತ |
| ೩೧೬ | ೮ | ವಂತ್ತಮಾ | ಮತ್ತಮಾ |
| ೩೨೬ | ೫ | ಳಗಡುಗಹುದು | ಳಡಗುತಿಹುದು |
| ೩೨೬ | ೬ | ಕೋಣೆಯವೆಳಗಭಿವ್ಯ | ಕೋಣೆಯವಳಭಿತ್ತಿಯಿ.ಂ |
| ೩೨೭ | ೧೭ | ವಸ್ತುವೆಂತ್ರ | ವಸ್ತುವೆಂತು |
| ೩೨೮ | ೫ | ಪ್ರತಿಫಲಿಸೆರಾ | ಪ್ರತಿಫಲಿಸೆ |
| ೩೨೮ | ೨೬ | ತತ್ತ್ವದಂತಃಕಣಾದಿ | ತತ್ತ್ವದಂತಃಕರಣಾದಿ |
| ೩೩೭ | ೧೬ | ಜಗದೊಳ | ಗಜದೊಳ |
| ೩೫೧ | ೨೭ | ಪುಸಿಯೆಂಮು | ಪುಸಿಯೆಂದು |

## ಸಿದ್ಧವಿಲಾಸ ಗ್ರಂಥಮಾಲಾ

1. ಶ್ರೀ ಸಿದ್ಧಾರೂಢ ಚರಿತ್ರ ಸಂಗ್ರಹಮು, 2) ಶ್ರೀ ಸಿದ್ಧಾರೂಢ ಕಥಾಮೃತ, 3) ಭಾರತ ನೀತಿ ಸಂಗ್ರಹ 4) ಸದ್ಬೋಧಾಮೃತ 5) ಪಕ್ಷಪಾತರಹಿತ ಅನುಭವ ಪ್ರಕಾಶ ೧ನೇ ಭಾಗ ೨ನೇ ಭಾಗ 6) ಶ್ರೀಮದ್ಬೋಧ ಮುಕುಂದ ಮಾಲಾ, 7) ಗೀತಾರ್ಥ ಪ್ರಬೋಧಿನಿ. 8) ನಿಜಗುಣರ ವೇದಾಂತ ಗ್ರಂಥಾವಳಿ, 9) ಶೃತಿ ವಿಚಾರಚಂದ್ರೋದಯ.

## ದೊರೆಯುವ ಗ್ರಂಥಗಳು

| | | | |
|---|---|---|---|
| 1. | ಶ್ರೀ ನಿಜಗುಣಯೋಗಿಗಳ ವೇದಾಂತ ಗ್ರಂಥಾವಳಿ | 4 | 50 |
| 2. | ಶ್ರೀ ಪಕ್ಷಪಾತರಹಿತ ಅನುಭವ ಪ್ರಕಾಶ ೧ನೇಭಾಗ | 2 | 00 |
| 3. | ಶ್ರೀ ಡಿಟೋ ೨ನೇಭಾಗ | 3 | 50 |
| 4. | ಶ್ರೀ ಶೃತಿ ವಿಚಾರ ಚಂದ್ರೋದಯ | 3 | 00 |

## ಗ್ರಂಥಗಳು ದೊರೆಯುವ ಸ್ಥಳ

1, ಶ್ರೀ ಜಾಂತಾನಂದಸ್ವಾಮಿ, ಸಿದ್ಧವಿಲಾ. 6ನೇ ಕ್ರಾಸ್, ಗಾಂಧಿನಗರ ಬೆಂ-೯, 2) ಶ್ರೀ ಶಾಂತಾನಂದಸ್ವಾಮಿ. ಶ್ರೀ ಸಿದ್ಧಾರೂಢಾಶ್ರಮ, G.E.F (Remco ಬಳಿ) ಬೆಂಗಳೂರು-೨೭. 3) ಶ್ರೀ ಓಂಕಾರ ಸ್ವಾಮಿಗಳು, ಶ್ರೀ ಸಿದ್ಧಾರೂಢಸ್ವಾಮಿ ಮಠ, ಹುಬ್ಬಳ್ಳಿ. 4) ಶ್ರೀ ಸಂಗಯ್ಯ, ವೀರಯ್ಯ, ಶ್ರೀ ಷಣ್ಮುಖಾರೂಢಸ್ವಾಮಿ ಮಠ, ಬಿಜಾಪುರ, 5) ಶ್ರೀ ಶಿವನಾಗಪ್ಪ ಅಂಡ್ ಸನ್ಸ್, ದುರ್ಗದ ಬೈಲು ಹುಬ್ಬಳ್ಳಿ. 6) ಶ್ರೀ ರುದ್ರಾಕ್ಷಿ ಮಠ, ಹುಬ್ಬಳ್ಳಿ.

## ಸಿದ್ಧವಿಲಾಸ ಗ್ರಂಥಮಾಲಾ

1. ಶ್ರೀ ಸಿದ್ಧಾರೂಢ ಚರಿತ್ರ ಸಂಗ್ರಹಮು, 2) ಶ್ರೀ ಸಿದ್ಧಾರೂಢ ಕಥಾಮೃತ, 3) ಭಾರತ ನೀತಿ ಸಂಗ್ರಹ 4) ಸದ್ಬೋಧಾಮೃತ 5) ಪಕ್ಷಪಾತರಹಿತ ಅನುಭವ ಪ್ರಕಾಶ ೧ನೇ ಭಾಗ ೨ನೇ ಭಾಗ 6) ಶ್ರೀಮದ್ಬೋಗ ಮುಕುಂದ ಮಾಲಾ, 7) ಗೀತಾರ್ಥ ಪ್ರಬೋಧಿನಿ, 8) ನಿಜಗುಣರ ವೇದಾಂತ ಗ್ರಂಥಾವಳಿ, 9) ಶೃತಿ ವಿಚಾರಚಂದ್ರೋದಯ.

## ದೊರೆಯುವ ಗ್ರಂಥಗಳು

| | | | |
|---|---|---|---|
| 1. | ಶ್ರೀ ನಿಜಗುಣಯೋಗಿಗಳ ವೇದಾಂತ ಗ್ರಂಥಾವಳಿ | 4 | 50 |
| 2, | ಶ್ರೀ ಪಕ್ಷಪಾತರಹಿತ ಅನುಭವ ಪ್ರಕಾಶ ೧ನೇಭಾಗ | 2 | 00 |
| 3. | ಶ್ರೀ ಡಿಟೋ ೨ನೇಭಾಗ | 3 | 50 |
| 4. | ಶ್ರೀ ಶೃತಿ ವಿಚಾರ ಚಂದ್ರೋದಯ | 3 | 00 |

## ಗ್ರಂಥಗಳು ದೊರೆಯುವ ಸ್ಥಳ

1, ಶ್ರೀ ಶಾಂತಾನಂದಸ್ವಾಮಿ ಸಿದ್ಧವಿಲಾ, 6ನೇ ಕ್ರಾಸ್, ಗಾಂಧಿನಗರ ಬೆಂ-೯, 2) ಶ್ರೀ ಶಾಂತಾನಂದಸ್ವಾಮಿ: ಶ್ರೀ ಸಿದ್ಧಾರೂಢಾಶ್ರಮ, G E.F (Remco ಬಳಿ) ಬೆಂಗಳೂರು-೨೬. 3) ಶ್ರೀ ಓಂಕಾರ ಸ್ವಾಮಿಗಳು, ಶ್ರೀ ಸಿದ್ಧಾರೂಢಸ್ವಾಮಿ ಮಠ, ಹುಬ್ಬಳ್ಳಿ. 4) ಶ್ರೀ ಸಂಗಯ್ಯ, ವೀರಯ್ಯ, ಶ್ರೀ ಷಣ್ಮುಖಾರೂಢಸ್ವಾಮಿ ಮಠ, ಬಿಜಾಪುರ, 5) ಶ್ರೀ ಶಿವನಾಗಪ್ಪ ಅಂಡ್ ಸನ್ಸ್, ದುರ್ಗದ ಬೈಲು ಹುಬ್ಬಳ್ಳಿ. 6) ಶ್ರೀ ರುದ್ರಾಕ್ಷಿ ಮಠ, ಹುಬ್ಬಳ್ಳಿ.